ಹೋಗುವುವೋ, (೪) ಯಾವದನ್ನು ತಿಳಿದ ಮಾತ್ರದಲ್ಲಿ ಆನಂದರೂಪವಾದ ಮೋಕ್ಷವು ಸಿದ್ಧಿಸುವುದೋ; (೫) ಯಾವದನ್ನು ತಿಳಿದವನು ಬೇರೊಂದಕ್ಕೂ ಭಯಪಡಲಾರನೋ; (೬) ಯಾವದರಲ್ಲಿ ಪ್ರವೇಶಿಸಿದವನಿಗೆ ಪುನರ್ಜನ್ಮವಿಲ್ಲವೋ; (೭) ಯಾವದನ್ನು ತಿಳಿಯುವುದರಿಂದ ಆವಸ್ತುವಾಗಿಯೇ ಆಗುವನೋ; (೮) ಬ್ರಹ್ಮವೇದಿ ಯಾದವನು ಬ್ರಹ್ಮವೇ ಆಗುತ್ತಾನೆ ||೯|| ಯಾವದನ್ನು ಬಿಟ್ಟರೇ ಮನುಷ್ಯರಿಗೆ ಬೇರೆ ಗತಿಯಿಲ್ಲವೋ, ||೧೦|| ಮೋಕ್ಷಕ್ಕೆ ಇತರವಾದ ಮಾರ್ಗವು ಯಾವದೂ ಇಲ್ಲವು ಅಂಥಾದ್ದು ಯಾವದು ಎಂದು ಮೇಲೆ ಉದಹರಿಸಿರುವ ಪ್ರಮಾಣಾರ್ಥವು.

(ವಿ|| ಭಾ|| ವಾಙ್ಮನಃ ಕಾಯಗಳೆಂಬ ತ್ರಿಕರಣಗಳಿಂದಲೂ ಸಿದ್ಧಿಸುವ ಜಪಧ್ಯಾನ ಅರ್ಚನವೆ ಮೊದಲಾದ ದೇವತಾ ವಶೀಕರಣ ವ್ಯಾಪಾರವನ್ನು ಸಾಧ್ಯಧರ್ಮವೆನ್ನುವರು; ಇದರಲ್ಲಿ ಶ್ರೇಷ್ಠವಾದದ್ದು ಯಾವದೆಂದು ಪ್ರಶ್ನೆ ಮಾಡುತ್ತಾರೆ.

ಮೂ|| ಕೋಧರ್ಮಸ್ಸರ್ವಧರ್ಮಾಣಾಂ ಭವತಃ ಪರಮೋ ಮತಃ । ಕಿಂಜಪನ್ ಮುಚ್ಯತೇಜನ್ತುರ್ಜನ್ಮ ಸಂಸಾರ ಬಂಧನಾತ್ (೩)

ಟೀ|| ಸರ್ವಧರ್ಮಾಣಾಂ (ಮಧ್ಯೇ)—ಸಮಸ್ತಗಳಾದ ಧರ್ಮಗಳ ಮಧ್ಯದಲ್ಲಿ, ಕೋಧರ್ಮಃ—ಯಾವಧರ್ಮವು, ಭವತಃ—ನಿಮ್ಮಿಂದ, ಪರಮಃ—ಶ್ರೇಷ್ಠವಾದದ್ದೆಂಬದಾಗಿ, ಮತಃ-ಸಮ್ಮತಿಸಲ್ಪಟ್ಟಿರುವುದು, ಜಂತುಃ—ಜನ್ಮಗಳನ್ನೆತ್ತಿರುವಂತವನು, ಕಿಂಜಪನ್—ಯಾವದನ್ನು ಜಪಿಸಿದರೆ, ಜನ್ಮಸಂಸಾರ ಬಂಧನಾತ್—ಜನ್ಮವೆಂದು ಹೇಳಲ್ಪಡುವ ಸಂಸಾರ ಕಾರ್ಯವಾದ ಬಂಧದಿಂದ, ಮುಚ್ಯತೆ—ಬಿಡಲ್ಪಡುವನು.

ತಾ|| ಸಕಲವಾದ ಧರ್ಮಗಳಲ್ಲಿಯೂ ಸರ್ವಾಧಿಕ ದರಿದ್ರವಾದ ಶ್ರೇಷ್ಠವಾಗಿರುವ ಧರ್ಮವು ಯಾವದೆಂದು ನೀವು ಸಮ್ಮತಿಸಿರುವುದು?

(ವಿ||ಭಾ) ಇನ್ನು ಮುಂದೆ ಸ್ತೋತ್ರ ಮಂತ್ರ ಶುಭಾಶ್ರಯ (ಶ್ರಿಯಃ ಪತಿಯ ದಿವ್ಯಮಂಗಳ ವಿಗ್ರಹವೇ ಮೊದಲಾದದ್ದು) ಗಂಧ ಪುಷ್ಪಾದ್ಯುಪಕರಣಗಳೊಡನೆ ಮಾಡತಕ್ಕ ಸಾಲಂಬನೋಪಾಯಗಳಲ್ಲಿ ವಾಚಿಕವಾದ ಜಪವೆಂಬೀ ಸಾಲಂಬನೋಪಾಯ ವಿಷಯವಾದ ಪ್ರಶ್ನವನ್ನು ಮಾಡುತ್ತಾರೆ.

ಮಂತ್ರವೇ ಮೊದಲಾದದ್ದನ್ನು ಕೆಲವು ನಿಯಮಗಳೊಡನೆ ಆವರ್ತಿ ಮಾಡುವುದು ಜಪವೆನ್ನಲ್ಪಡುವುದು. ಸಾಲಂಬ ನೋಪಾಯಗಳಲ್ಲಿ ಕಾಯಿಕ ಮಾನಸಗಳಿಗಿಂತಲೂ ವಾಚಿಕವಾದ ಜಪವೇ ಶ್ರೇಷ್ಠವೆಂಬದಾಗಿ (ಮನುಸ್ಮೃತಿ ||೨|| ೮೭) "ಜಪ್ಯೇ ನೈವತು ಸಂಸಿದ್ಧ್ಯೇ

ದ್ಬ್ರಾಹ್ಮಣೋ ನಾತ್ರಸಂಶಯಃ । ಕುರ್ಯಾ ದನ್ಯನ್ನವಾ ಕುರ್ಯಾನ್ಮೈತ್ರೋ ಬ್ರಾಹ್ಮಣ ಉಚ್ಯತೇ ॥ (ಮನುಸ್ಮೃತಿ ॥೨॥ ೮೭ ) ದ್ರವ್ಯಯಜ್ಞಾಜ್ಜ ಪಯಜ್ಞೋ ವಿಶಿಷ್ಟೋ ದಶಭಿರ್ಗುಣೈಃ॥(ಗೀತಾ॥೧೦॥೨೫॥) ಯಜ್ಞಾನಾಂ ಜಪಯಜ್ಞೋಸ್ಮಿ" ಇತ್ಯಾದಿ ಶಾಸ್ತ್ರಗಳು ಹೇಳುವುದರಿಂದ ಇಲ್ಲಿ ಮಾನಸಿಕ ಕಾಯಿಕಗಳು ಕೇಳಲ್ಪಡದೆ ವಾಚಿಕವಾದ ಜಪವೇ ಕೇಳಲ್ಪಟ್ಟಿರುವುದು.

ಇಲ್ಲಿವುದಹರಿಸಿರುವ ಪ್ರಮಾಣಾರ್ಥವು ಬ್ರಾಹ್ಮಣನಾದವನು ಮತ್ತೊಂದನ್ನು ಮಾಡಲಿ, ಮಾಡದೇ ಹೋಗಲಿ, ಜಪಮಾತ್ರದಿಂದ ಸಿದ್ಧಿಯನ್ನು ಹೊಂದುವನು, ಎಂಬದಾಗಿ ಮೈತ್ರ ಬ್ರಾಹ್ಮಣವು ಹೇಳುವುದು. ದ್ರವ್ಯ ಯಜ್ಞಕ್ಕಿಂತಲೂ ಜಪ ರೂಪವಾದ ಯಜ್ಞವು ಹತ್ತು ಭಾಗದಲ್ಲಿ ಅಧಿಕವು ಯಜ್ಞಗಳಲ್ಲಿ ಜಪಯಜ್ಞವಾಗಿರುವೆನು.

ಪರಮಪದವನ್ನು ಸೇರುವುದಕ್ಕೆ ತಡೆಯಾಗಿರುವ (ಜನ್ಮವು) ಜರಾ ಮರಣ ಗರ್ಭವಾಸ ನರಕಯಾತನೆಯೇ ಮೊದಲಾದ ಸಂಸಾರದ ಕಾರ್ಯವರ್ಗವೇನು ; ಅವಿದ್ಯಾಕರ್ಮವಾಸನಾ ರುಚಿ ಪ್ರಕೃತಿ ಸಂಬಂಧ ರೂಪವಾದ ಸಂಸಾರದ ಕಾರಣ ವರ್ಗವೇನು; ಈ ಯೆರಡಿಂದಲೂ; ಲೋಕದಲ್ಲಿ ಹುಟ್ಟಿದವನು ಯಾವದನ್ನು ಜಪಮಾಡಿದರೆ ಇವುಗಳಿಂದ ಬಿಡಲ್ಪಡುವನು? ಎಂದರೆ ಮೋಕ್ಷವನ್ನು ಹೊಂದುವನು. (ಅವಿದ್ಯಾದಿ ಸಂಸಾರ ಕಾರಣದಿಂದಲೂ ಜನ್ಮಾದಿ ಸಂಸಾರ ಕಾರ್ಯರಿಂದಲೂ ಬಿಡಲ್ಪಟ್ಟರೆ ತಾನೇ ಮೋಕ್ಷವನ್ನು ಹೊಂದಬಹುದು.)

(ಈ ಪ್ರಕಾರವಾಗಿ ಪರತತ್ವ ಪರಮ ಪುರುಷಾರ್ಥ ಪ್ರಾಪ್ಯಗಳನ್ನು ಕುರಿತು ಪ್ರಶ್ನೆಮಾಡಿದರೂ ಅವುಗಳಿಗೆ ಸಾಧನವು (ಅವುಗಳನ್ನು ಹೊಂದುವ ಉಪಾಯವು) ತಿಳಿಯದೇ ಹೋದರೆ ಉಪಯೋಗವಿಲ್ಲ ವೆಂದೆಣಿಸಿ ಉಪಾಯ ವಿಷಯವಾದ ಪ್ರಶ್ನವು ಮುಂದೆ ಮಾಡಲ್ಪಡುವುದೆಂದರಿಯಬೇಕು.)

ಇಲ್ಲಿ ಮೋಕ್ಷವನ್ನು ಹೇಳಿರುವುದು ಅದಕ್ಕಿಂತಲೂ ಬೇರೆಯಾದ ಫಲಗಳನ್ನು ಹೇಳಿರುವಂತೆ ತಿಳಿಯಬೇಕು. ಅದು ಹೇಗೆಂದರೆ ? ಜಪವೇ ಮೊದಲಾದವು ಸಕಲಫಲಗಳನ್ನು ಸಾಧಿಸಿಕೊಡುವುದೆಂದು ಮುಂದೆ ಹೇಳಲ್ಪಡುವುದಷ್ಟೆ; ಹೀಗಿರುವಲ್ಲಿ ಹಿಂದೆಯೂ ಅಶೇಷೇಣ-ಅಷ್ಟನ್ನೂ, ಸರ್ವಶಃ-ಸರ್ವ ಪ್ರಕಾರದಿಂದಲೂ, ಎಂಬದಾಗಿ ಉಪಕ್ರಮಿಸಿ (ಲೋಕೇ-ಮಾನವಾಃ ಶುಭಂ-ಲೋಕದಲ್ಲಿ, ಮಾನವರು, ಶುಭವನ್ನು,) ಎಂಬೀರೀತಿ

ಯಾಗಿ ಹೇಳಿರುವುದರಿಂದ. ಇಲ್ಲಿಕಾಲವು, ಅಧಿಕಾರಿ, ಅಂಗವು, ಎಂಬಿವುಗಳಲ್ಲಿ ಶ್ರೇಷ್ಠವಾದದ್ದು ಯಾವದೆಂಬದಾಗಿ ಕೇಳಲ್ಪಟ್ಟಿರುವಂತೆ ಸೂಚಿತವಾಗುವುದು ||೩||

ಮೂ|| ಶ್ರೀಭೀಷ್ಮಉವಾಚ|| ಜಗತ್ಪ್ರಭುಂದೇವದೇವ ಮನಂತಂ ಪುರುಷೋತ್ತಮಂ | ಸ್ತುವನ್ನಾಮ ಸಹಸ್ರೇಣಪುರುಷ ಸ್ಸತತೋತ್ಥಿತಃ ||೪||

ಟೀ|| ಜಗತ್ಪ್ರಭುಂ—ಸಮಸ್ತ ಜಗತ್ಪ್ರಭುವಾಗಿಯೂ, ದೇವದೇವಂ—ದೇವತೆಗಳಿಗೂ ದೇವನಾಗಿಯೂ, ಅನಂತಂ—ಕಾಲದೇಶ ವಸ್ತುಗಳೆಂಬ ತ್ರಿವಿಧಪರಿಚ್ಛೇದರಹಿತನಾಗಿಯೂ, ಅಥವಾ ಅಳಿವಿಡಲಶಕ್ಯನಾಗಿಯೂ ಇರುವ, ಪುರುಷೋತ್ತಮಂ—ಪುರುಷಶ್ರೇಷ್ಠನಾದ ಶ್ರೀವಾಸುದೇವನನ್ನು, ಪುರುಷಃ—ಪುರುಷನು, ಸತತೋತ್ಥಿತಃ—ಸದಾಜಾಗರೂಕನಾಗಿ, ನಾಮಸಹಸ್ರೇಣ—ಸಹಸ್ರ ಸಂಖ್ಯಾಕಗಳಾದ ನಾಮಗಳಿಂದ, ಸ್ತುವನ್—ಸ್ತೋತ್ರ ಮಾಡುವುದರಿಂದ, ಸರ್ವದುಃಖಾತಿಗಃ—ಸಮಸ್ತದುಃಖಗಳನ್ನು ಕಳಕೊಂಡವನಾಗಿ, ಭವೇತ್—ಆಗುವನು.

ವಿ|| ಭಾ|| ಹಿಂದೆಪ್ರಸಕ್ತವಾಗಿರುವ; (೧) ಪರತತ್ವರೂಪವಾದ ಉಪೇಯ ಪ್ರಶ್ನವೇನು (೨) ಪರಮಪ್ರಾಪ್ಯರೂಪವಾದ ಉಪೇಯಪ್ರಶ್ನವೇನು, (೩) ಲಘೂಪಾಯ ಸಾಧ್ಯವಾದಸಿದ್ಧೋಪಾಯ ಪ್ರಶ್ನವೇನು (೪) ಗುರೂಪಾಯಸಾಧ್ಯವಾದ ಸಿದ್ಧೋಪಾಯ ಪ್ರಶ್ನವೇನು (೫)ಪರಮಸಾಧ್ಯೋಪಾಯ ಪ್ರಶ್ನವೇನು, (೬) ವಾಚಿಕ ಜಪಾಲಂಬನ ಪ್ರಶ್ನವೆಂಬೀರೀತಿಯಾದ ("(೧) ಕಿಮೇಕಂ ದೈವತಂಲೋಕೇ (೨) ಕಿಂವಾಪ್ಯೇಕಂ ಪರಾಯಣಂ (೩) ಸ್ತುವಂತಃ ಕಂ (೪) ಕಮರ್ಚಂತಃ ಪ್ರಾಪ್ನುಯು ರ್ಮಾನವಾಶ್ಶುಭಂ (೫) ಕೋಧರ್ಮ ಸ್ಸರ್ವಧರ್ಮಾಣಾಂ ಭವತಃ ಪರಮೋಮತಃ (೬) ಕಿಂಜಪನ್ಮುಚ್ಯ ತೇಜನ್ತು ರ್ಜನ್ಮಸಂಸಾರ ಬಂಧನಾತ್") ಆರು ಪ್ರಶ್ನೆಗಳಿಗೂ ಪ್ರತ್ಯುತ್ತರವನ್ನು ಶ್ರೀಭೀಷ್ಮರು ಹೇಳಲು ಪಕ್ರಮಿಸುತ್ತಾರೆ. ಇಲ್ಲಿ ಉಪಾಯದಿಂದ (ಸಾಧನದಿಂದ) ಉಪೇಯವನ್ನು (ಸಾಧ್ಯವಾದ ಫಲವನ್ನು) ಹೊಂದಬೇಕಾಗಿರುವುದರಿಂದ ಮೊದಲು ಉಪಾಯ ವಿಷಯವಾದ ಪ್ರಶ್ನಕ್ಕೆ ಪ್ರತ್ಯುತ್ತರವನ್ನು ಹೇಳುವುದಾಗಿ ಉದ್ದೇಶಿಸಿ, ಅದರಲ್ಲಿ (೬)ನೇದಾದ ಜಪಾಲಂಬ ನೋಪಾಯ ಪ್ರಶ್ನವು ಪ್ರತಿವಚನಾವಸರದಲ್ಲಿ

ಸ್ವಪಿತಾಪ್ತಸ್ಥವಾಗಿರುವುದರಿಂದಲೂ, ತನಿಗೆ ಅದರಲ್ಲಿರುವ ಆದರಾತಿಶಯದಿಂದಲೂ, ಮೊದಲು; (೬)ನೇ ಪ್ರಶ್ನಕ್ಕೆ ಪ್ರತ್ಯುತ್ತರವನ್ನು ಹೇಳುತ್ತಾನೆ. ಐಶ್ವರ್ಯದಿಂದಲೂ ಭಗವತ್ಪರಿಚರ್ಯೆಯಿಂದಲೂ, (ಪರಿಚರ್ಯಾ—ಶುಶ್ರೂಷಾ,) ದೇವತೆಗಳು ಹೇಗಾದರೆ ಮನುಷ್ಯರಿಗಿಂತಲೂ ಅಧಿಕರೋ ಅಪರಂತೆ ಆ ದೇವತೆಗಳೆಲ್ಲರಿಗೂ "ತಂದೈವತಾನಾಂ ಪರಮಂಚ ದೈವತಂ" ಎಂಬಂತೆ ಅಧಿಕನಾದ ಪರದೇವತೆಯಾಗಿಯೂ, ಯಾವ ವಿಧದಲ್ಲಿಯೂ ಅಳವಿಡಲಶಕ್ಯವಾದ ವೈಭವಶಾಲಿಯಾಗಿಯೂ ಪರಮೋದಾರನಾಗಿಯೂ ಇರುವ; ಸ್ಥಾವರ ಜಂಗಮಾತ್ಮಕವಾದ ಜಗತ್ತುಗಳಿಗೆ ಈಶನಾದ ಸ್ವಾಮಿಯನ್ನು ಅವನ ನಾಮಸಹಸ್ರಗಳಿಂದ ನಿರಂತರೋದ್ಯುಕ್ತನಾಗಿ ಸ್ತುತಿಸಿದರೆ (ಅವನ ಸಹಸ್ರನಾಮವನ್ನು ಜಪಾಲಂಬನವನ್ನಾಗಿ ಮಾಡಿಕೊಂಡರೆ) ಚೇತನನು ಸಕಲವಾದ ದುಃಖಗಳನ್ನು ಅತಿಕ್ರಮಿಸುವಂತವನಾಗುತ್ತಾನೆ. ಶ್ರೀ ಪರಮಾತ್ಮನನ್ನು ಧ್ಯಾನಿಸಿದರೂ ಸ್ತುತಿಸಿದರೂ ಅದು ವಿಚ್ಛೇದರಹಿತವಾಗಿದ್ದರೆ ಅತ್ಯಂತ ಪ್ರಿಯವಾಗಿಯೂ ಹಿತವಾಗಿಯೂ ಇರುವುದೆಂತಲೂ, ಅದು ವಿಚ್ಛಿನ್ನವಾದರೆ ಪರಮದುಃಖವಾಗಿರುವುದೆಂತಲೂ; (೧) "ಯದಾಹ್ಯೇವೈಷ ಏತಸ್ಮಿನ್ನದೃಶ್ಯೇ ನಾತ್ಮ್ಯೇನಿಲಯನೆ ಅಭಯಂ ಪ್ರತಿಷ್ಠಾಂ ವಿಂದತೆ, ಅಥಸೋಽಭಯಂಗತೋ ಭವತಿ" (೨) ಯದಾ ಹ್ಯೇವೈಷ ಏತಸ್ಮಿನ್ನುದರಮಂತರಂ ಕುರುತೆ ಅಥತಸ್ಯಭಯಂ ಭವತಿ" (೩) ಯನ್ಮುಹೂರ್ತಂ ಕ್ಷಣಂವಾಪಿ ವಾಸುದೇವೋ ನಚಿಂತ್ಯತೆ | ಸಾಹಾನಿಸ್ತನ್ಮಹಚ್ಛಿದ್ರಂ ಸಾಭ್ರಾಂತಿಸ್ಸಾಚವಿಕ್ರಿಯಾ ‖ (೪) ವರಂ ಹುತವಹಜ್ವಾಲಾ ಪಂಜರಾಂತರ್ವ್ಯವಸ್ಥಿತಿಃ | ನಶೌರಿಚಿಂತಾ ವಿಮುಖ ಜನಸಂವಾಸವೈಶಸಂ ‖ (೫) ಏಕಸ್ಮಿನ್ನಪ್ಯತಿಕ್ರಾಂತೆ ಮುಹೂರ್ತೇ ಧ್ಯಾನವರ್ಜಿತೆ | ದಸ್ಯುಭಿರ್ಮುಷಿತೇನೇವ ಯುಕ್ತಮಾಕ್ರಂದಿತುಂ ಭೃಶಂ" ಇತ್ಯಾದಿ ಶ್ರುತಿ ಸ್ಮೃತಿಗಳು ಹೇಳುವುವು.

ಇವುಗಳ ತಾತ್ಪರ್ಯವು. (೧) ಈ ಜೀವನು ಯಾವಾಗಲಾದರೆ ಕಾಣಲಸಾಧ್ಯನಾಗಿಯೂ ಪ್ರಾಕೃತ ಶರೀರವಿಲ್ಲದವನಾಗಿಯೂ ಜಾತಿ ಗುಣ ಕ್ರಿಯಾದಿಗಳಿಂದ ನಿರೂಪಣಾನರ್ಹನಾಗಿಯೂ ಆಧಾರಹಿತನಾಗಿಯೂ ಇರುವ ಈ ಪರಮಾತ್ಮನಲ್ಲಿ ಭಯರಹಿತವಾದ ಸ್ಥಿತಿಗೋಸ್ಕರ ಅಥವಾ ಭಯವಿಲ್ಲದೇ ಇರುವಿಕೆಗೆ ಸಾಧನವಾದ ನಿರಂತರಧ್ಯಾನವೆಂಬ ಸ್ಥಿತಿಯನ್ನು ಹೊಂದುವನೋ ಅಂತವನು ಭಯರಾಹಿತ್ಯವನ್ನು ಹೊಂದಿದವನಾಗುತ್ತಾನೆ.

(೨) ಈ ಜೀವನು ಯಾವಾಗಲಾದರೆ ಈ ಪರಮಾತ್ಮನ ಈ ಪೂರ್ವೋಕ್ತವಾದ ಧ್ಯಾನದಲ್ಲಿ ಸ್ವಲ್ಪವಾದ ವಿಚ್ಛೇದವನ್ನು ಮಾಡುತ್ತಾನೆಯೋ ಅನಂತರದಲ್ಲಿ ಅವನಿಗೆ ಭಯವುಂಟಾಗುವುದು. (೩) ವಾಸುದೇವನನ್ನು ಒಂದು ಮುಹೂರ್ತವು ಅಥವಾ ಒಂದು ಕ್ಷಣವಾದರೂ ಚಿಂತಿಸದೆ ಇರುವಂತವನಾದರೆ ಅದೇ ಇವನಿಗೆ ಹಾನಿಯು, ಅದೇ ಇವನಿಗೆ ಮಹತ್ತಾದ ಆಪತ್ತುಗಳುಂಟಾಗುವುದಕ್ಕೆ ಕಾರಣವಾದ ರಂಧ್ರವು, ಅದೇ ಬುದ್ಧಿವಿಭ್ರಾಂತಿಯು, ಅದೇತಾನೆ ಮಹಾವಿಪದ್ದಶೆಯು. (೪) ಅಗ್ನಿಜ್ವಾಲಾಪೂರ್ಣವಾದ ಪಂಜರದಲ್ಲಿ ವಾಸಮಾಡುವುದಾದರೂ ಸುಖವೇ, ಶ್ರೀಕೃಷ್ಣಧ್ಯಾನ ವಿಮುಖರಾದ ಜನರೊಡನೆ ವಾಸಮಾಡುವುದೆಂಬ ವಧವು ಸಹಿಸಲಶಕ್ಯವು (೫) ಭಗವದ್ಧ್ಯಾನವಿಲ್ಲದೇ ಒಂದು ಮುಹೂರ್ತವು ಅತಿಕ್ರಮಿಸಿದರೂ ವ್ಯರ್ಥವಾಗಿ ಕಳೆದು ಹೋದ ಈ ಮುಹೂರ್ತಕಾಲದ ವಿಷಯದಲ್ಲಿ ಕಳ್ಳರು ಮನೆಯನ್ನು ನುಗ್ಗಿ ತನ್ನ ಸರ್ವಸ್ವವನ್ನು ಅಪಹರಿಸಿದರೆ ಯಾವರೀತಿಯಲ್ಲಿ ಮನಸ್ಸಿನಲ್ಲಿ ಅತ್ಯಂತ ವ್ಯಾಕುಲವನ್ನು ಹೊಂದಿ ಘಟ್ಟಿಯಾಗಿ ಅಳುತ್ತಾನೆಯೋ ಆಪ್ರಕಾರವಾಗಿ ಅಳಬೇಕಾಗಿರುವುದು ಅತ್ಯಂತ ಯುಕ್ತವೆಂದು ಈ ಪ್ರಮಾಣತಾತ್ಪರ್ಯಗಳು.

ಈ ಪ್ರಕಾರವಾಗಿ ಚೇತನನಿಂದ ಮಾಡತಕ್ಕ ಉಪಾಯಗಳಲ್ಲಿ ಜಪವೆಂಬ ಸಾಲಂಬನೋಪಾಯವು ಹೇಳಲ್ಪಟ್ಟಿತು. (ಇದು "ಕಿಂಜಪನ್ಮುಚ್ಯತೆ" ಎಂಬ ೬ನೇ ಪ್ರಶ್ನಕ್ಕೆ ಪ್ರತ್ಯುತ್ತರವು.) ‖೪‖

(ಶಂ‖ ಭಾ) ಸರ್ವಶತ್ರುಗಳಿಗೂ ಭಯೋತ್ಪಾದಕರಾಗಿಯೂ ಮೋಕ್ಷಧರ್ಮಗಳನ್ನು ಬೋಧಿಸುವಂತವರಾಗಿಯೂ ಸರ್ವಜ್ಞರೂ ಆದ ಭೀಷ್ಮಾಚಾರ್ಯರು; ಶ್ರೀಧರ್ಮಪುತ್ರರು ಮಾಡಿರುವ ಆರು ಪ್ರಶ್ನೆಗಳಿಗೂ ಸಮಾಧಾನವನ್ನು ಹೇಳಲುಪಕ್ರಮಿಸಿ ಮೊದಲು "ಕಿಂಜಪನ್ಮುಚ್ಯತೆ" ಎಂಬ ಜಾಪ್ಯವಾದ ಪ್ರಶ್ನಕ್ಕೆ ಸಮಾಧಾನವನ್ನು ಹೇಳುತ್ತಾರೆ. ಎಲೈ ಧರ್ಮರಾಜನೆ? ಸ್ಥಾವರ ಜಂಗಮಾತ್ಮಕವಾದ ಸಕಲ ಪ್ರಪಂಚಗಳಿಗೂ ಪ್ರಭುವಾಗಿಯೂ ಬ್ರಹ್ಮಾದಿ ದೇವತೆಗಳಿಗೂ ದೇವನಾಗಿಯೂ ದೇಶಕಾಲವಸ್ತುಗಳೆಂಬ ತ್ರಿವಿಧ ಪರಿಚ್ಛೇದಶೂನ್ಯನಾಗಿಯೂ, (ಇಲ್ಲಿರುವವನು ಅಲ್ಲಿಲ್ಲವು ಎಂಬುವುದು ದೇಶಪರಿಚ್ಛೇದವು, ಈ ಕಾಲದಲ್ಲಿರುವವನು ಆಕಾಲದಲ್ಲಿರುವುದಿಲ್ಲವೆಂಬುವುದು ಕಾಲಪರಿಚ್ಛೇದವು, ಈ ವಸ್ತುವಿನಲ್ಲಿರುವವನು ಆ ವಸ್ತುವಿನಲ್ಲಿ ಇಲ್ಲವೆಂಬುವುದು ವಸ್ತುಪರಿಚ್ಛೇದವು, ಸರ್ವದೇಶ ಸರ್ವಕಾಲ ಸರ್ವವಸ್ತು ಪರಿಪೂರ್ಣನಾದ ಪ್ರಯುಕ್ತವಾಗಿ ಪರಮಾತ್ಮನು ಇಂತಹ ತ್ರಿವಿಧ ಪರಿಚ್ಛೇದರಹಿತನು,) ಕ್ಷರಾಕ್ಷರಕ್ಕಿಂತಲೂ ಕಾರ್ಯಕಾರಣಕ್ಕಿಂತಲೂ

ಶ್ರೀಕೃಷ್ಣನೂ ಆದ ನಾರಾಯಣನ ಗುಣಗಳನ್ನು ಸಹಸ್ರನಾಮಗಳಿಂದ ಸ್ತೋತ್ರವನ್ನು ಮಾಡುವಂತವನೂ ಸರ್ವಕಾಲದಲ್ಲಿಯೂ ಸ್ತೋತ್ರಮಾಡುವುದಕ್ಕೆ ಪ್ರಯತ್ನವುಳ್ಳವನೂ ಆದ ಪೂರ್ಣನು (ಅಥವಾ) ನವದ್ವಾರ ಪುರವಾದ ಈ ಶರೀರದಲ್ಲಿ ಶಯನವನ್ನು ಮಾಡುವ ಪುರುಷನು ಸಮಸ್ತ ದುಃಖಗಳನ್ನು ಅತಿಕ್ರಮಿಸುವನು. ಯಾವ ದುಃಖವೂ ಇಲ್ಲದವನಾಗುವನೆಂದು ಭಾವವು. ‖೪‖

ಮೂ‖ ತಮೇವಚಾರ್ಚಯನ್ನಿತ್ಯಂಭಕ್ತ್ಯಾಪುರುಷಮವ್ಯಯಂ । ಧ್ಯಾಯಂಸ್ತುವನ್ನಮಸ್ಯಂಶ್ಚ ಯಜಮಾನ ಸ್ತಮೇವಚ ‖೫‖

ಟೀ‖ ಅವ್ಯಯಂ—ನಾಶರಹಿತನಾದ, ತಮೇವ—ಆ ಪರಮಪುರುಷನಾದ ಶ್ರೀವಾಸುದೇವನನ್ನೇ, ನಿತ್ಯಂ—ಯಾವಾಗಲೂ, ಅರ್ಚಯನ್—ಅರ್ಚಿಸುವಂತವನು, ಭಕ್ತ್ಯಾ—ಭಕ್ತಿಯಿಂದ, ಧ್ಯಾಯನ್—ಧ್ಯಾನಿಸಿಯೂ, ಸ್ತುವನ್—ಸ್ತೋತ್ರಮಾಡಿಯೂ, ನಮಸ್ಯನ್—ನಮಸ್ಕರಿಸಿಯೂ, ಯಜಮಾನಃ—ಪೂಜಿಸಿಯೂ, ಸರ್ವದುಃಖಾತಿಗೋಭವೇತ್—ಸರ್ವದುಃಖಗಳನ್ನತಿಕ್ರಮಿಸಿದವನಾಗುವನೆಂದು ಮುಂದಿನಶ್ಲೋಕದೊಡನೆ ಸಂಬಂಧವು ‖೫‖

ವಿ‖ ಭಾ‖ ಅರ್ಚನವು ಸ್ತೋತ್ರವು ಎಂಬಿವೇ ಪರಮಧರ್ಮವೆಂಬದಾಗಿ ಇವರ ಅಭಿಪ್ರಾಯವಾದುದರಿಂದ ಧರ್ಮವಿಷಯವಾದ ಐದನೆ ಪ್ರಶ್ನೆಯನ್ನು ಉಲ್ಲಂಘಿಸಿ ಮೊದಲು ಅಂತಹ ಅರ್ಚನ ವಿಷಯವಾಗಿಯೂ ಸ್ತೋತ್ರವಿಷಯವಾಗಿಯೂ ಇರುವ ನಾಲ್ಕು ಮೂರನೇ ಪ್ರಶ್ನೆಗಳಿಗೆ ಪ್ರತ್ಯುತ್ತರವನ್ನು ಹೇಳುವಂತವರಾಗಿ ಅರ್ಚಿಸುವುದಕ್ಕೆ ಅತ್ಯಂತಾರ್ಹನಾಗಿರುವಂತವನು ಯಾವನೋ ಅವನನ್ನರ್ಚಿಸುವ ಪ್ರಕಾರದೊಡನೆ ಕೂಡ ಉತ್ತರವನ್ನು ಹೇಳುತ್ತಾರೆ.

ಹಿಂದೇ ಹೇಳಿರುವ ಜಪಕ್ಕೆ ಯಾವನು ವಿಷಯನೋ ಅವನೇ ತಾನೆ ಅರ್ಚ್ಯನಾಗಿಯೂ ಇರುವನು; ಈಪ್ರಕಾರವೆ "(ಭಾ‖ಸಭಾಪ‖೩೮‖೨೦) ತಮಿಮಂ ಸರ್ವಸಂಪನ್ನ ಮಾಚಾರ್ಯಂ ಪಿತರಂಗುರುಂ । ಅರ್ಚ್ಯಮರ್ಚಿತುಮಿಚ್ಛಾಮಸ್ಸರ್ವೇ ಸಮ್ಮಂತು ಮರ್ಹಥ‖ ತಸ್ಮಾತ್ಪೂಜ್ಯತಮಂ ನಾನ್ಯ ಮಹಮ್ಮನ್ಯೇ ಜನಾರ್ದನಾತ್ ‖ (ಭಾರ‖ ಮೋಕ್ಷಧ‖ ೩೪೨‖ ೩೬) ಬ್ರಹ್ಮಾಣಂ ಶಿತಿಕಂಠಂಚ ಯಾಶ್ಚಾನ್ಯಾದೇವತಾಸ್ಸ್ಮೃತಾಃ । ಪ್ರತಿಬು

ದ್ಯಾಧನಸೇವಂತೇ ಯುಸ್ಮಾತ್ಪರಿಮಿತಂಫಲಂ (ಗೀ|| ೭|| ೨೩) "ಅಂತವತ್ತು ಫಲಂತೇಷಾಂ ||" ಎಂಬೀ ಪ್ರಮಾಣಗಳು ಹೇಳುವುವು.

(ಇವುಗಳ ತಾತ್ಪರ್ಯ.) ಸಕಲನಾದ ಆಚಾರ್ಯ ಲಕ್ಷಣವೇನು, ಸಮಸ್ತ ಕಲ್ಯಾಣ ಗುಣಗಳೇನು, ಇವುಗಳಿಂದ ಕೂಡಿರುವ, ಆಚಾರ್ಯನಾಗಿಯೂ ತಂದೆಯಾಗಿಯೂ ಗುರುವಾಗಿಯೂ, (ಆಚಾರ್ಯ ಶಬ್ದಕ್ಕೂ ಗುರು ಶಬ್ದಕ್ಕೂ ಪ್ರವೃತ್ತಿ ನಿಮಿತ್ತಗಳು ಭಿನ್ನವಾಗಿರುವುದರಿಂದ ಹೇಳಿದ್ದನ್ನೇ ಹೇಳುವಂತಹ ದೋಷವು ಬರಲಾರದು) ಅರ್ಚಿಸುವುದಕ್ಕೆ ಅರ್ಹನಾಗಿಯೂ ಇರುವ ಶ್ರೀಕೃಷ್ಣನನ್ನು ಅರ್ಚಿಸಲಪೇಕ್ಷಿಸುವೆನು : ನೀವೆಲ್ಲರೂ ಸಮ್ಮತಿಪಡಬೇಕು ಏತಕ್ಕೆಂದರೆ ? ಜನಾರ್ದನನಿಗಿಂತಲೂ ಪೂಜ್ಯತಮವಾದ ವಸ್ತುವು ಬೇರೊಂದಿಲ್ಲವೆಂದೆಣಿಸುವೆನು. ಬ್ರಹ್ಮ ರುದ್ರಾದಿಗಳು ಪೂಜ್ಯರಲ್ಲವೋ ? ಎಂದರೆ ಅವರಿಂದ ಪ್ರಾಪ್ತವಾಗುವ ಫಲವು ಮಿತವಾದದ್ದಾದುದರಿಂದ ಪ್ರತಿಬುದ್ಧರಾದ ಮುಮುಕ್ಷುಗಳು ಚತುರ್ಮುಖನನ್ನೆ ಆಗಲೀ, ವಿಷಕಂಠನಾದ ರುದ್ರನನ್ನಾಗಲೀ ಸಾಮಾನ್ಯರಾದ ಇಂದ್ರಾದಿ ದೇವತೆಗಳನ್ನಾಗಲೀ ಸೇವಿಸಲಾರರು. ಇವರು ಕೊಡುವ ಫಲವು ನಾಶವುಳ್ಳದ್ದಷ್ಟೆ.

ಆದುದರಿಂದ ಪುಂಡರೀಕಾಕ್ಷನಾಗಿಯೂ ಎಷ್ಟು ದಿನಗಳನುಭವಿಸಿದರೂ ನ್ಯೂನವಾಗದೆ ಅನುರೂಪವಾಗಿಯೂ ಅಕ್ಷಯವಾಗಿಯೂ, ವೃದ್ಧಿಹೊಂದುತಲಿರುವ ಕಲ್ಯಾಣಗುಣಗಳಿಂದ ಪೂರ್ಣನಾಗಿಯೂ ಇರುವ ಪರಮಪುರುಷನನ್ನು ಭಕ್ತಿನಿಷ್ಠನಾದವನು "ಮಚ್ಚಿತ್ತಾಮದ್ಗತಪ್ರಾಣಾಃ" (ಗೀ||೧೦||೯) (ನನ್ನಲ್ಲಿ ಮನಸ್ಸುಳ್ಳವರು ನನಗೋಸ್ಕರವಾಗಿಯೇ ಪ್ರಾಣಧಾರಣಮಾಡತಕ್ಕವರು ಎಂದರ್ಥವು) ಎಂಬದಾಗಿ ಅವನು ಅನುಗ್ರಹಿಸಿರುವಂತೆ ಅವನಿಗೆ ಪರಿಚರ್ಯೆಯನ್ನು ಮಾಡದೆಯಿದ್ದರೆ ಕ್ಷಣಮಾತ್ರವೂ ಆತ್ಮಧಾರಣವನ್ನು ಹೊಂದದೆ ಇರುವಂತೆ ತನಗೆ ಸ್ವಾಮಿಯಾದ ಅವನಲ್ಲಿ ವಿಶೇಷಭಕ್ತಿಯೊಡನೆ ಕೂಡಿ ಸ್ವಲ್ಪವು ವಿರಾಮವನ್ನು ಹೊಂದದೆ ವೃದ್ಧಿಹೊಂದುತಲಿರುವ ಅಮೃತಧಾರೆಯಂತೆ ಭೋಗ್ಯವಾಗಿಯೂ ನಿಶ್ಶೇಷವಾಗಿ -ತಾಪತ್ರಯ ನಿವಾರಕವಾಗಿಯೂ ಇರುವ ಅವನ ಗುಣಾನು ಸಂಧಾನಗಳನ್ನು ಮಾಡಿಕೊಂಡು ಅಂತಹಾ ಧ್ಯಾನದಿಂದುಂಟಾದ ಸಂತೋಷಾತಿಶಯದಿಂದ ಶರೀರವೆಲ್ಲಾ ರೋಮಾಂಚಿತವಾಗಿ ಬಾಯಿಯಲ್ಲಿ ಹೇಳುವುದಕ್ಕೆ ಆಗದೆ ಕಂಠಸ್ಥವಾದ ಗದ್ಗದ ಧ್ವನಿಯೊಡನೆ ಅವನ ಗುಣಗಳನ್ನು ಸಂಕೀರ್ತನಮಾಡಿ ಭಕ್ತಿಪರವಶನಾಗಿರುವುದರಿಂದ ಮಮಕಾರ (ನನ್ನದು ಎಂಬ) ವೆಂಬ ದುರಭಿಮಾನವು ಕಳದು ಪ್ರಹ್ವೀಭಾವ ಯುಕ್ತವಾದ ಅಂತಃಕರಣ ಬಹಿಃ ಕರಣಗಳಿಂದಲೂ ; ನನ್ನದೆಂದು ನಾನು ಅಭಿಮಾನಿಸಿದವುಗಳನ್ನೆ

"ಅಪ್ಪಾ ನೀನು ನಿನ್ನ ದಾಗಿಯೇ ಸ್ವೀಕರಿಸಬೇಕೆಂದು ಶರೀರದಿಂದಲೂ ವಾಕ್ಕಿನಿಂದಲೂ ಶ್ರೀಮನ್ನಾರಾಯಣನ ಶ್ರೀಪಾದಾರವಿಂದಗಳಲ್ಲಿ ಅಹಂಕಾರ ದೂಷಿತನಾದ ತನ್ನನ್ನು ಸಮರ್ಪಣೆಮಾಡಿ; (ಇದೇ ಆತ್ಮಾತ್ಮೀಯ ಸಮರ್ಪಣವು) ತನ್ನನ್ನವನು ಸ್ವೀಕರಿಸಿದ ಮಹೋಪಕಾರಕ್ಕೆ ಅನುರೂಪವಾದ ಪ್ರತ್ಯುಪಕಾರವನ್ನು ತಾನು ಕಾಣದೆ ಸಂಭ್ರಮದೊಡನೆ ಅಕೃತ್ರಿಮ (ನಿಜವಾದ) ಭಕ್ತಿಯಿಂದ ಸಂಪಾದಿಸಲ್ಪಟ್ಟ ಅತಿಮನೋಹರವಾದ ಅರ್ಘ್ಯಪುಷ್ಪ ಮಧುಪರ್ಕಾದ್ಯುಪಚಾರಿಕ ವಸ್ತುಗಳಿಂದಲೂ ಸಾಂಸ್ಪರ್ಶಿಕಾಭ್ಯವಹಾರಿಕಗಳಿಂದಲೂ ಅವನ ಭೋಗೋಚಿತಗಳಾದ ಭೋಗೋಪಕರಣಗಳಿಂದಲೂ ಶ್ರಿಯಃಪತಿಗೆ ಅತ್ಯಂತಾದರದೊಡನೆ ತಿರುವಾರಾಧನವನ್ನು ಸಮರ್ಪಿಸಿಕೊಂಡು ಬಂದರೆ ಸಮಸ್ತದುರಿತ (ಪಾಪ) ಗಳಿಂದಲೂ ಬಿಡಲ್ಪಡುವನು.

ಈ ಭಕ್ತಿಯೋಗವೇ ಮೋಕ್ಷಪ್ರಾಪಕವಾದ ರಾಜಮಾರ್ಗವೆಂಬುದಾಗಿ ವೇದಾಂತಗಳಲ್ಲಿ ಹೇಳುವಂತೆ ಕಾಣಲ್ಪಡುವುದು. ಅದು ಹೇಗೆಂದರೆ? ಪರಂಪರಯಾ ಉಪಕಾರಕಗಳಾದ ವರ್ಣಾಶ್ರಮಾಚಾರಗಳಿಂದಲೂ ಅತ್ಯಂತೋಪಕಾರಿಗಳಾದ ಶಮದಮಾದ್ಯಾತ್ಮ ಗುಣಗಳಿಂದಲೂ ಸಿದ್ಧಿಸುವುದಾಗಿಯೂ, "ವೇದನ, ಧ್ಯಾನ, ಧ್ರುವಾನುಸ್ಮೃತಿ" ಯೇ ಮೊದಲಾದ ಶಬ್ದಭೇದಗಳಿಂದ ಹೇಳಲ್ಪಡುವ ಬುದ್ಧಿ ಪರಂಪರೆಗಳಿಂದ ಅವಿಚ್ಛಿನ್ನವಾಗಿ ಯಾವಾಗಲೂ ಪ್ರವಾಹದಂತೆ ಅನವರತವೂ ಮಾಡಲ್ಪಟ್ಟ ಆದರದೊಡನೆ ಕೂಡಿರುವ ಬುದ್ಧಿವಿಶೇಷದಿಂದುಂಟಾದ ಸುಸ್ಕಾರಾತಿಶಯದಿಂದುಂಟಾಗುವ ವಿಲಕ್ಷಣ ಪ್ರತ್ಯಕ್ಷವನ್ನೇ ಅವಧಿಯಾಗಿ ಹೊಂದಿರುವ, "ಸದ್ವಿದ್ಯಾ—ಆನಂದ ವಿದ್ಯಾ—ಪುರುಷವಿದ್ಯಾ—ಉಪಕೋಸಲ ವಿದ್ಯಾ—ವೈಶ್ವಾನರ ವಿದ್ಯಾ—ಪಂಚಾಗ್ನಿ" ವಿದ್ಯೆಯೇ ಮೊದಲಾದ ಪರವಿದ್ಯೆಗಳಲ್ಲಿ ಪ್ರತಿಪಾದಿಸಲ್ಪಟ್ಟ ಗುಣೋಪಸಂಹಾರ ನ್ಯಾಯಸಿದ್ಧವಾಗಿರುವ ಬ್ರಹ್ಮೋಪಾಸನವನ್ನು ಶ್ರೀಬಾದರಾಯಣರು (೧) "ಸರ್ವಾಪೇಕ್ಷಾಚ ಯಜ್ಞಾದಿ ಶ್ರುತೇರಶ್ವವತ್" (೨) "ಶಮದಮಾದ್ಯುಪೇತಸ್ಸ್ಯಾತ್" (೩) ಆವೃತ್ತಿರಸಕೃದುಪದೇಶಾತ್" ಎಂಬೀ ಬ್ರಹ್ಮಸೂತ್ರ ನ್ಯಾಯಗಳಿಂದ (೪) "ತಮೇವಂ ವಿದ್ವಾನ್" (೫) "ಬ್ರಹ್ಮವಿದಾಪ್ನೋತಿಪರಂ" (೬) "ಯಜ್ಞೇನದಾನೇನ ತಪಸಾಽನಾಶಕೇನ ಶಾನ್ತೋದಾನ್ತಃ" ಇತ್ಯಾದಿ

ವೇದಾಂತ ವಾಕ್ಯಗಳನ್ನು ಮಥನಮಾಡಿ ಮೋಕ್ಷಸಾಧನವೆಂಬದಾಗಿ ನಿರ್ಣಯಿಸಿರುತ್ತಾರೆ.

(೧) ಕರ್ಮವುಳ್ಳ ಗೃಹಸ್ಥರಿಗೆ ಬ್ರಹ್ಮವಿದ್ಯೆಯು ಯಜ್ಞಾದಿ ಕರ್ಮಗಳನ್ನು ಅಪೇಕ್ಷಿಸುವುದೋ? ಇಲ್ಲವೋ? ಎಂಬೀ ಸಂಶಯದಲ್ಲಿ ಊರ್ಧ್ವರೇತಸ್ಸುಗಳು ಕರ್ಮನಿರಪೇಕ್ಷರಾದಂತೆ ಗೃಹಸ್ಥರಿಗೂ ಆ ರೀತಿಯಾಗಿಯೆ ಕರ್ಮನಿರಪೇಕ್ಷತ್ವವುಂಟು. ಸ್ವರ್ಗಾದಿ ಸಾಧನವಾದ ಅಗ್ನಿಹೋತ್ರಾದಿಕವು ಪುರುಷಭೇದದಿಂದ ನಾನಾವಿಧ ಧರ್ಮಗಳನ್ನು ಅಂಗತ್ವೇನ ಸ್ವೀಕರಿಸಿರುವಂತೆ ಕಾಣಲ್ಪಡಲಿಲ್ಲವಾದ್ದರಿಂದ ಬ್ರಹ್ಮವಿದ್ಯೆಯೂ ನಾನಾವಿಧಾಶ್ರಮ ಧರ್ಮಾಂಗಕವಾಗಲಾರದು. "ವಿವಿದಿಷಂತಿ" ಎಂಬೀ ಶಬ್ದವೂ ವೇದನೇಚ್ಛೆಯಲ್ಲಿ ಕರ್ಮವನ್ನು ವಿನಿಯೋಗಿಸುವುದರಿಂದ ಬ್ರಹ್ಮವಿದ್ಯೆಯು ಕರ್ಮಗಳನ್ನಪೇಕ್ಷಿಸುವುದಿಲ್ಲವು ಎಂಬ ಪೂರ್ವಪಕ್ಷವನ್ನು ನಿರಾಕರಿಸುತ್ತಾರೆ "ಸರ್ವಾಪೇಕ್ಷಾಚ ಯಜ್ಞಾದಿ ಶ್ರುತೇರಶ್ವವತ್" ಕರ್ಮವಂತರಾದ ಗೃಹಸ್ಥರಲ್ಲಿ ವಿದ್ಯೆಯು ಯಜ್ಞಾದಿ ಸರ್ವಕರ್ಮಗಳನ್ನಪೇಕ್ಷಿಸುವುದು. ಏತಕ್ಕೆಂದರೆ? ಯಜ್ಞಾದಿಶ್ರುತೇಃ—"ತಮೇತಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಷಂತಿ ಯಜ್ಞೇನದಾನೇನ ತಪಸಾನಾಶಕೇನ" ‖ ಇತ್ಯಾದಿ ಶ್ರುತಿಗಳಿಂದ ಯಜ್ಞಾದಿ ಕರ್ಮಗಳು ವಿದ್ಯೆಗೆ ಅಂಗವಾಗಿ ವಿನಿಯುಕ್ತವಾಗಿರುವುದರಿಂದ ವಿವಿದಿಷಂತಿ ಎಂಬ ಕಡೆಯಲ್ಲಿ ಇಚ್ಛೆಯು ಇಷ್ಯಮಾಣವಾದ (ಇಚ್ಛಾವಿಷಯವಾದ) ವೇದನವನ್ನು ಪ್ರಧಾನವಾಗಿವುಳ್ಳದ್ದಾದುದರಿಂದ ಇಷ್ಯಮಾಣವಾದ ವಿದ್ಯೆಯೇ ಅಂಗಿ ಎನ್ನುವುದು ಯುಕ್ತವು. ಅದಕ್ಕೆ ದೃಷ್ಟಾಂತವು ಅಶ್ವವತ್—ಒಂದು ಕುದುರೆಯು ಸಂಚಾರಕ್ಕೆ ಸಾಧನವಾಗಿರುವುದರಿಂದ ಸಂಚಾರಾರ್ಥವಾಗಿ ಕುದರೆಯನ್ನಪೇಕ್ಷಿಸಿದರೆ ಅದಕ್ಕೆ ಬೇಕಾದ ಕಡಿವಾಳವೇ ಮೊದಲಾದ ಪರಿಕರವಿಲ್ಲದೆ ಬರೀ ಕುದುರೆಯಮೇಲೆ ಹತ್ತಿ ಸಂಚಾರಮಾಡುವುದು ಹ್ಯಾಗಾದರೆ ಯುಕ್ತವಲ್ಲವೋ ಅದರಂತೆ ನಾನಾಶ್ರಮ ಧರ್ಮಾಂಗಕವಾದ ವಿದ್ಯೆಯು ಇಲ್ಲಿ ಅಪೇಕ್ಷಿಸಲ್ಪಡುವುದು.

(೨) ಆದರ ಊರ್ಧ್ವತೇಜಸ್ಸುಗಳಿಗೆ ಅಪೇಕ್ಷಿತವಾದ ಶಮದಮಾದ್ಯಾತ್ಮಗುಣಗಳು ಯಜ್ಞಾದ್ಯಾಶ್ರಮ ಕರ್ಮನಿಷ್ಠನಾದ ಗೃಹಸ್ಥನಿಗೆ ಅನುಪಾದೇಯಗಳೋ? ಎಂದರೆ ಯದ್ಯಪಿ ಗೃಹಸ್ಥನಾದವನು ಯಜ್ಞಾದಿ ಕರ್ಮಗಳಲ್ಲಿ ವ್ಯಾಪೃತನಾಗಿದ್ದರೂ ಶಮದಮಾದ್ಯುಪೇತನಾಗಿಯೇ ಇರಬೇಕು. "ತಸ್ಮಾದೇವಂವಿಚ್ಛಾಂತೋದಾಂತ ಉಪರತಸ್ತಿತಿಕ್ಷುಸ್ಸಮಾಹಿತೋಭೂತ್ವಾ ಆತ್ಮನ್ಯೇವಾತ್ಮಾನಂ ಪಶ್ಯೇತ್" ಎಂಬ ಶ್ರುತಿಯಿಂದ ಸಾಮಾನ್ಯವಾಗಿ ಶಮದಮಾದಿಗಳಿಗೂ ವಿದ್ಯಾಂಗತ್ವ ವಿಧಾನವಿರುವುದರಿಂದ ವಿದ್ಯಾನಿಷ್ಪತ್ತಿಗೋಸ್ಕರವಾಗಿ ಅವಶ್ಯಾನುಷ್ಠೇಯಗಳಾಗಿರುವುವು ಚಿತ್ತೈಕಾಗ್ರ್ಯತೆಯಿಂದ ನಿಷ್ಪಾದ್ಯವಾದ ವಿದ್ಯೆಯು ಶಮದಮಾದಿಗಳಿಂದಲೇ ಮುಖ್ಯವಾಗಿ ಸಿದ್ಧಿಸುವುವು. ಯಜ್ಞಾದಿಕರ್ಮಗಳು ಪಾಪಗಳನ್ನು ನಿವೃತ್ತಿಮಾಡಿ ಚಿತ್ತೈಕಾಗ್ರತೆಯನ್ನುಂಟುಮಾಡುವುದೆಂದಭಿಪ್ರಾಯವು.

(೩) ಜ್ಯೋತಿಷ್ಟೋಮಾದಿಗಳಂತೆ ಸಕೃತ್ಕೃತವಾದರೂ ಶಾಸ್ತ್ರಾರ್ಥವು ಸಿದ್ಧಿಸುವುದರಿಂದ ವೇದನವು ಸಕೃದನುಷ್ಠೇಯವೆಂದರೆ ವೇದನ ಶಾಸ್ತ್ರಾರ್ಥದಲ್ಲಿ ಅಸಕೃದಾವೃತ್ತವಾದ ಧ್ಯಾನರೂಪವಾಗಿರುವ ವೇದನವೇ ಮೋಕ್ಷಸಾಧನವೆಂದು ನಿರ್ಣೀತವಾಗಿರುವುದರಿಂದ ಅಸಕೃದಾವೃತ್ತ ಸ್ಮೃತಿ ಸಂತಾನರೂಪವಾಗಿರುವ ನಿರತಿಶಯ ಪ್ರೀತಿರೂಪವಾದ ದರ್ಶನಸಮಾನಾಕಾರವಾಗಿರುವ ವೇದನವೇ ಮುಕ್ತಿಸಾಧನವೆಂದು ಸಿದ್ಧಾಂತವು.

(೪) ಅವನನ್ನು ಈ ರೀತಿಯಾಗಿ ತಿಳಿದವನು. (೫) ಬ್ರಹ್ಮವನ್ನು ತಿಳಿದವನು ಬ್ರಹ್ಮವನ್ನು ಹೊಂದುತ್ತಾನೆ. (೬) ಸ್ವರೂಪನಾಶಕವಲ್ಲದ ಯಜ್ಞದಿಂದಲೂ ದಾನದಿಂದಲೂ ತಪಸ್ಸಿನಿಂದಲೂ ಅಂತಃಕರಣನಿಗ್ರಹವುಳ್ಳವನಾಗಿಯೂ ಬಹಿಃಕರಣನಿಗ್ರಹವುಳ್ಳವನಾಗಿಯೂ ಎಂಬದಾಗಿ ಮೇಲಿನ ಪ್ರಮಾಣಾರ್ಥವು.

ವಾಕ್ಯಕಾರರೂ "ವೇದನಮುಪಾಸನಂಸ್ಯಾತ್ತದ್ವಿಷಯೇ ಶ್ರವಣಾತ್" ಎಂಬದಾಗಿ ಆರೀತಿಯಾಗಿಯೇ ನಿರ್ಣಯಿಸಿರುತ್ತಾರೆ. (ವೇದನವೆಂಬುವುದು ಉಪಾಸನವೆ; ಆ ವಿಷಯದಲ್ಲಿ ಶ್ರುತಿಯು ಇರುವುದರಿಂದ.) ಇಂತಹ ಉಪಾಸನವು ಪರಿಪಕ್ವವಾದರೆ ಭಕ್ತಿ ಎನ್ನಲ್ಪಡುವದು. ಉಪಾಸನಕ್ಕಿಂತಲೂ ಭಕ್ತಿ ಎಂಬುವುದು ಭಿನ್ನವಾದದ್ದಲ್ಲವು. ಏತಕ್ಕೆಂದರೆ? ಸಂಯೋಗವೆಂಬ ವಿಧಿಯು ಯೆರಡಕ್ಕು ಅವಿಶೇಷವಾಗಿರುವುದು. ಉಪಾಸನದಂತೆ ಭಕ್ತಿಗೂ ಮೋಕ್ಷದಾಯಕತ್ವ ಉಂಟೆಂದು ಹೇಳುವುದರಿಂದ ಈ ಯೆರಡಕ್ಕೂ ಮೋಕ್ಷರೂಪವಾದ ಏಕಫಲದೊಡನೆ ಸಂಯೋಗವು ಕಾಣಲ್ಪಡುವುದಷ್ಟೆ. ಇದು ಮಾತ್ರವಲ್ಲದೆ ಶ್ರುತಿಯೂ ಈ ಪ್ರಕಾರವೇ (೧) "ನಸಂದೃಶೇತಿಷ್ಠತಿ ರೂಪಮಸ್ಯ ನಚಕ್ಷುಷಾ ಪಶ್ಯತಿ ಕಶ್ಚನೈನಂ ॥ ಹೃದಾಮನೀಷಾ ಮನಸಾಭಿಕ್ಲೃಪ್ತೋ ಯಏನಂವಿದುರಮೃತಾಸ್ತೆಭವಂತಿ (೨) ನಸಂದೃಶೇತಿಷ್ಠತಿ—ಭಕ್ತ್ಯಾಚ ಧೃತ್ಯಾಚ ಸಮಾಹಿತಾತ್ಮಾಜ್ಞಾನ ಸ್ವರೂಪಂ ಪರಿಪಶ್ಯತೀಹ" ಎಂತಲೂ, (೩) "ಪುರುಷಸ್ಸಪರಃ ಪಾರ್ಥ ಭಕ್ತ್ಯಾ ಲಭ್ಯಸ್ತ್ವನನ್ಯಯಾ ॥ ಭಕ್ತ್ಯಾತ್ವ ನನ್ಯಯಾ ಶಕ್ಯಃ ॥ ಭಕ್ತ್ಯಾಮಾಮಭಿಜಾನಾತಿ" ಎಂಬದಾಗಿ ಭಗವದ್ಗೀತೆಯಲ್ಲಿಯೂ, (೪) "ಭಕ್ತ್ಯಾऽವಿಚ್ಛಿನ್ನಯಾಮುಕ್ತಿಃ" ಎಂಬದಾಗಿ ಆಂಗೀರಸ ಸ್ಮೃತಿಯಲ್ಲಿಯೂ, "ಪರಮಾತ್ಮನಿಗೋವಿಂದೇ ಭಕ್ತಿರವ್ಯಭಿಚಾರಿಣೀ। ಪ್ರಯಚ್ಛತಿ ನೃಣಾಂಮುಕ್ತಿಂ ಮಾತ್ರೇ ಭೂದತ್ರಸಂಶಯಃ" ಎಂಬದಾಗಿ ವೈಷ್ಣವಧರ್ಮದಲ್ಲಿಯೂ, (೬) "ಯೋತ್ವಾಂದೇವಂ

ಧ್ರುವಂ ಭಕ್ತಾಃ ಪುರಾಣಂ ಪುರುಷೋತ್ತಮಂ । ಪ್ರಾಪ್ನುವಂತಿ ಸದಾ ಕಾಮಾನಿಹಲೋಕೇ ಪರತ್ರ ಚ ॥ ಅಮೋಘಾಸ್ತೇ ಭವಿಷ್ಯಂತಿ ಭಕ್ತಿಮಂತಸ್ತು ಯೇ ನರಾಃ " ಎಂಬದಾಗಿ ಶ್ರೀರಾಮಾಯಣದಲ್ಲಿಯೂ. (೭) " ಯೇಷಾಂ ವಿಷ್ಣುಃ ಪ್ರಿಯೋ ನಿತ್ಯಂ ಯೇ ವಿಷ್ಣೋಸ್ಸತತಂ ಪ್ರಿಯಾಃ । ನ ತೇ ಪುನಸ್ಸಂಭವಂತಿ ತದ್ಭಕ್ತಾಸ್ತತ್ಪರಾಯಣಾಃ" ಎಂಬದಾಗಿ ಶ್ರೀವಾಮನ ಪುರಾಣದಲ್ಲಿಯೂ ಹೇಳಲ್ಪಡುವುದು.

ಹಿಂದೇ ವಿವರಿಸಿರುವ ಪ್ರಮಾಣತಾತ್ಪರ್ಯವು ॥ (೧) ಈ ಪರಮಾತ್ಮನ ರೂಪವು ನೋಡುವಿಕೆಗೆ ಆಗುವುದಿಲ್ಲವು ಯಾವನೂ ಈ ಪರಮಾತ್ಮನನ್ನು ಕಣ್ಣಿನಿಂದ ನೋಡುವುದಿಲ್ಲವು. ಭಕ್ತಿಯಿಂದಲೂ ಧೈರ್ಯದಿಂದಲೂ ಮನಸ್ಸಿನಿಂದಲೂ ತಿಳಿಯತಕ್ಕವನು. ಯಾರಾದರೆ ಈ ಪರಮಾತ್ಮನನ್ನು ತಿಳಿಯುವರೋ ಅವರು ಸಂಸಾರವಿಲ್ಲದವರಾಗುತ್ತಾರೆ. (೨) ಹಿಂದಿನ ಅರ್ಥವನ್ನೇ ಮೊದಲಿನಲ್ಲನುಸಂಧಿಸಿ " ಭಕ್ತಿಯಿಂದಲೂ ಧಾರಣೆಯಿಂದಲೂ ಸಮಾಹಿತಮನಸ್ಕನಾದವನು ಜ್ಞಾನಸ್ವರೂಪನಾದ ಪರಮಾತ್ಮನನ್ನು ಇಲ್ಲಿ ಚೆನ್ನಾಗಿ ಕಾಣುವನು. (೩) ಎಲೈ ಅರ್ಜುನನೇ ? ಸರ್ವಸ್ಮಾತ್ಪರನಾದ ಪರಮಪುರುಷನು ದೇವತಾಂತರ ಪ್ರಯೋಜನಾಂತರ ಸಂಬಂಧರಹಿತವಾದ ಭಕ್ತಿಯಿಂದ ಹೊಂದತಕ್ಕವನು. ಅನನ್ಯವಾದ (ಹಿಂದಿನ ಅರ್ಥವೆ) ಭಕ್ತಿಯಿಂದ ಹೊಂದಲ್ಪಡತಕ್ಕವನು. ಭಕ್ತಿಯಿಂದ ನನ್ನನ್ನು ಚನ್ನಾಗಿ ತಿಳಿಯುವನು. (೪) ಅವಿಚ್ಛಿನ್ನವಾದ ಭಕ್ತಿಯಿಂದ ಮೋಕ್ಷವು. (೫) ಪರಮಾತ್ಮನಾದ ಗೋವಿಂದನಲ್ಲಿ ಮಾಡತಕ್ಕ ಅವ್ಯಭಿಚಾರಿತವಾದ ಭಕ್ತಿಯು ಮೋಕ್ಷವನ್ನು ಕೊಡುವುದು. ಈ ವಿಷಯದಲ್ಲಿ ನಿನಗೆ ಸಂಶಯವು ಬೇಡವು. (೬) ಯಾರಾದರೆ ಪುರಾಣಪುರುಷನಾದ ನಿನ್ನಲ್ಲಿ ದೃಢವಾದ ಭಕ್ತಿಯನ್ನು ಮಾಡುವರೋ ಅವರು ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಯಾವಾಗಲೂ ಇಷ್ಟಾರ್ಥಗಳನ್ನು ಹೊಂದುವರು. ಭಕ್ತಿಯುಳ್ಳವರು ಅಮೋಘರಾಗುವರು. (೭) ಯಾರಿಗಾದರೆ ಶ್ರೀ ಮಹಾವಿಷ್ಣುವು ಪ್ರಿಯನೋ ಯಾರಾದರೆ ವಿಷ್ಣುವಿಗೆ ಯಾವಾಗಲೂ ಪ್ರಿಯರಾಗಿರುವರೋ ನನ್ನ ಭಕ್ತರಾಗಿ ನನ್ನನ್ನೇ ಪ್ರಾಪ್ಯಪ್ರಾಪಕನಾಗಿ ಹೊಂದಿರುವ ಅಂತಹ ಅಧಿಕಾರಿಗಳು ಪುನಶ್ಚ ಸಂಸಾರದಲ್ಲಿ ಹುಟ್ಟಲಾರರೆಂದಭಿಪ್ರಾಯವು ಇಲ್ಲಿ ಉದಹರಿಸಿರುವ ಪ್ರಮಾಣಗಳು ಭಕ್ತಿ ಉಪಾಸನಾದಿ ಶಬ್ದಗಳಿಗೆ ಏಕಫಲವುಳ್ಳವಿಕೆಯನ್ನು ಬೋಧಿಸುವುವು.

ಆದ್ದರಿಂದಲೆ "ಉಪಾಸ್ತೇ-ಭಜತಿ" ಎಂಬದಾಗಿ ವಿಧಿಯೂ ಇರುವುದರಿಂದ ಉಪಾಸನ ಭಜನವೆಂಬೀ ಎರಡೂ ಸೇವಾರ್ಥಕವಾಗಿಯೇ ಇರುವುದು. ಆದುದರಿಂದಲೇ ನೈಘಂಟುಕರು " ಸೇವಾ, ಭಕ್ತಿಃ, ಉಪಾಸನಂ " ಎಂಬೀ ಮೂರನ್ನು ಸಮಾನಾರ್ಥಕವಾಗಿ " ಸೇವಾ ಭಕ್ತಿರುಪಾಸ್ತಿಃ " ಎಂದು ಹೇಳಿರುವರು. ಲೈಂಗ ವಾಮನ ಪುರಾಣಗಳು ಈ ಅರ್ಥವನ್ನೇ " ಭಜ ಇತ್ಯೇಷ ಧಾತುರ್ವೈ ಸೇವಾಯಾಂ ಪರಿಕೀರ್ತಿತಃ

ತಸ್ಮಾತ್ಸೇವಾ ಬುಧೈಃಪ್ರೋಕ್ತಾ ಭಕ್ತಿಶಬ್ದೇನ ಭೂಯಸೀ" ಎಂದು ಹೇಳುವುವು. (ಭಜ ಧಾತುವಿಗೆ ಸೇವಾರ್ಥಕತ್ವವಿರುವುದರಿಂದ ಭಕ್ತಿ ಶಬ್ದದಿಂದ ಸೇವೆಯೇ ಹೇಳಲ್ಪಡುವುದೆಂದರ್ಥವು.) ಉಪಾಸ್ಯನಾದ ಪರಮಾತ್ಮನು ನಿರ್ದೋಷವಾದ ಮಹಾಮಂಗಳ ಗುಣಗಳುಳ್ಳವನಾಗಿರುವುದರಿಂದ ಈ ಉಪಾಸನವು ಮಿತಿಮೀರಿದ ಪ್ರೀತಿರೂಪವಾಗಿಯೂ ಅವನು ನಿರ್ವ್ಯಾಜ ಸ್ವಾಮಿಯಾಗಿರುವುದರಿಂದ ಅವನ ದಾಸ್ಯದಲ್ಲಿ ರುಚಿಯುಳ್ಳದ್ದಾಗಿಯೂ ಇರುವುದೆಂದು ವಿವೇಕಿಸಲ್ಪಟ್ಟು ಇದು ಭಕ್ತಿಯೆಂದು ಹೇಳಲ್ಪಟ್ಟಿತು.

ಈ ಪ್ರಕಾರವಾಗಿ ಪ್ರಿಯನಾಗಿರುವಿಕೆಯನ್ನು ತಿಳಿಸಿಕೊಂಡು ತಾನೇ ಉಪಾಸನ ವಿಧಿಯಲ್ಲಿ (೧) "ಪ್ರಿಯೋಹಿಜ್ಞಾನಿನೋತ್ಯರ್ಥಂ॥ ಭಜತಾಂ ಪ್ರೀತಿಪೂರ್ವಕಂ ॥ ತುಷ್ಯಂತಿ ಚರಮಂತಿಚ" (೨) ನಾಥಯೋನಿ ಸಹಸ್ರೇಷು ॥ (೩) ಯಾಪ್ರೀತಿರವಿವೇಕಾನಾಂ ॥ ತತ್ಸ್ಮೃತ್ಯಾಹ್ಲಾದ ಸಂಸ್ಥಿತಃ ॥ (೪) ತನ್ನಾಮ ಸ್ಮರಣೋದ್ಭೂತಪುಲಕೋದಿತಿಪುಂಗವಃ ॥ (೫) ಸೇವಾಭಕ್ತಿಸ್ಸಮಾಖ್ಯಾತಾ ಜ್ಞಾನವಾಸನಯಾಕೃತಾ । ಉತ್ಪನ್ನಾಯಾಂತತಸ್ತಸ್ಯಾಂ ಸ್ನೇಹಭಾವ ಸ್ಸ್ವಯಂಭವೇತ್॥ (೬) ಪರಮಾತ್ಮನಿಯೋರಕ್ತೋ ವಿರಕ್ತೋಽಪರಮಾತ್ಮನಿ । ಸರ್ವೇಷಣಾ ವಿನಿರ್ಮುಕ್ತಸ್ಸಭೈಕ್ಷಂಭೋಕ್ತುಮರ್ಹತಿ ॥ (೭) ಸಪ್ರೋದೇವಶ್ಚುಭಯಾ ಸ್ಮೃತ್ಯಾಸಂಯುನಕ್ತು." ಎಂಬೀ ರೀತಿಯಿಂದ ನಾನಾಪ್ರಮಾಣಗಳುಂಟಾಗಿರುವುವು.

(೧) ಜ್ಞಾನಿಯಾದವನಿಗೆ ಅತ್ಯಂತವಾಗಿ ಪ್ರಿಯನಲ್ಲವೆ; ಪ್ರೀತಿ ಪೂರ್ವಕವಾಗಿ ಭಜನಮಾಡತಕ್ಕವರಿಗೆ; ತಮ್ಮತಮ್ಮಗಳಿಂದ ಅನುಭವಿಸಲ್ಪಟ್ಟ ನನ್ನ ದಿವ್ಯಮಂಗಳ ಗುಣಗಳನ್ನು ಪರಸ್ಪರವಾಗಿ ಬೋಧಿಸಿಕೊಂಡೂ ನನ್ನ ರಮಣೀಯ ದಿವ್ಯ ಚೇಷ್ಟಿತಗಳನ್ನು ಹೇಳಿಕೊಂಡೂ ಸಂತೋಷಿಸುತ್ತಾರೆ. ಇಂತಹ ಗುಣಚೇಷ್ಟಿತಗಳನ್ನು ಅನನ್ಯ ಪ್ರಯೋಜನವಾಗಿ ಅನ್ಯರಿಗೆ ಹೇಳುವುದರಿಂದ ಸಂತೋಷಿಸುತ್ತಾರೆ (೨) ಎಲೈ ಸ್ವಾಮಿಯೇ ಸಾವಿರ ಜನ್ಮಗಳಲ್ಲಿಯೂ, (೩) ಅವಿವೇಕಿಗಳಿಗೆ ಶಬ್ದಾದಿ ವಿಷಯೋಪ ಭೋಗದಲ್ಲಿ ಯಾವಪ್ರೀತಿಯೋ ಅಂತಹ ಪ್ರೀತಿಯು ನಿನ್ನಲ್ಲುಂಟಾಗಲಿ, ಭಗವತ್ಸ್ಮರಣದಿಂದುಂಟಾದ ಸಂತೋಷದಲ್ಲಿರತಕ್ಕವನು. (೪) ಅವನ ನಾಮಸ್ಮರಣದಿಂದುಂಟಾದ ರೋಮಾಂಚವುಳ್ಳ ಅಸುರಶ್ರೇಷ್ಠನು ಜ್ಞಾನವಾಸನೆಯಿಂದ ಮಾಡಲ್ಪಟ್ಟ ಸೇವೆಯು ಭಕ್ತಿ ಎನ್ನಲ್ಪಡುವುದು. ಅದುಂಟಾದಮೇಲೆ ಸ್ವಯವಾಗಿಯೆ ನನ್ನಲ್ಲಿ ಸ್ನೇಹಭಾವವುಂಟಾಗುವುದು (೬) ಪರಮಾತ್ಮನಲ್ಲಿ ಅನುರಾಗವುಳ್ಳುದವನು ಅವನಿಗಿಂತಲೂ ಬೇರೆಯಾದ ವಿಷಯಗಳಲ್ಲಿ ವೈರಾ

ಗ್ಯವುಳ್ಳವನಾಗಿ ಈಷಣತ್ರಯಗಳಿಂದ ಬಿಡಲ್ಪಟ್ಟು ಭಿಕ್ಷಾವೃತ್ತಿಯಿಂದ ಕಾಲವನ್ನು ಕಳೆಯುವಂತವನಾಗುವನು. (೩) ಆ ದೇವನು ನಮ್ಮನ್ನು ಒಳ್ಳೇ ಸ್ಮೃತಿಯಿಂದ ಕೇರಿಸಲಿ ಎಂದು ಮೇಲೆ ಉದಹರಿಸಿರುವ ಪ್ರಮಾಣಾರ್ಥಗಳು.

ಈ ಉಪಾಸನವು ದಾಸ್ಯ ರುಚಿಯುಳ್ಳದ್ದಾಗಿರುವುದೆಂಬುವುದಕ್ಕೆ (೧) "ಮಾಮನುಸ್ಮರ (೨) ಪಾರ್ಥಾನುಚಿಂತಯ (೩) ಕೃಷ್ಣಾನುಸ್ಮರಣಂಪರಂ" ಎಂಬಿದೇ ಮೊದಲಾದ ವಚನಗಳು ಅನೇಕಗಳಿರುವುವು. ಭಕ್ತಿಗೆ ಭಗವನ್ನಾಮ ಸಂಕೀರ್ತನಾದಿಗಳು ಶರೀರ ಸ್ಥಾನವಾಗಿರುವುದೆಂಬುವುದಕ್ಕೆ (೪) ಸತತಂ ಕೀರ್ತಯಂತಃ (೫) ಮನ್ಮನಾಭವ" ಇತ್ಯಾದಿ ವಚನಗಳು ಸ್ಪಷ್ಟವಾಗಿರುವುವು.

(೧) ನನ್ನನ್ನು ಸ್ಮರಣಮಾಡುತಾ, (೨) ಎಲೈ ಅರ್ಜುನನೆ ಚಿಂತಿಸುತಾ (೩) ಶ್ರೀಕೃಷ್ಣನ ಸ್ಮರಣವು ಶ್ರೇಷ್ಠವಾದ ಸರ್ವಪಾಪ ಪ್ರಾಯಶ್ಚಿತ್ತವು. (೪) ಸರ್ವಕಾಲದಲ್ಲಿಯೂ ಕೀರ್ತನ ಮಾಡುತಾ, (೫) ನನ್ನಲ್ಲಿ ಮನಸ್ಸುಳ್ಳವನಾಗು, ಎಂದು ಮೇಲಿನ ಪ್ರಮಾಣಾರ್ಥವು

ಇಂತಹ ಭಕ್ತಿಯೇ ಸಕಲ ಶಾಸ್ತ್ರಾರ್ಥಗಳಲ್ಲಿಯೂ ಸಾರವಾಗಿರುವುದರಿಂದ ಇದು ಪರಮರಹಸ್ಯವೆಂದು (೧) "ಇದಂತು ತೇಗುಹ್ಯತಮಂ" (೨) ಯದ್ಜ್ಞಾತ್ವಾನೇಹಭೂಯೋನ್ಯತ್ (೩) "ಸರ್ವಗುಹ್ಯತಮಂಭೂಯಃ" ಶ್ರೀಭಗವದ್ಗೀತೆಯಲ್ಲಿ ಹೇಳಲ್ಪಟ್ಟಿರುವುದು.

(೧) ನಿನಿಗೆ ಉಪದೇಶಿಸಿರುವ ಈ ಭಕ್ತಿಯು ಅತ್ಯಂತ ರಹಸ್ಯವಾದದ್ದು (೨) ಯಾವ ಭಕ್ತಿ ಸ್ವರೂಪವನ್ನು ತಿಳಿದಮೇಲೆ ಮತ್ತೊಂದೂ ತಿಳಿಯಬೇಕಾದದ್ದಿಲ್ಲವು (೩) ಪುನಶ್ಚ ಸರ್ವರಹಸ್ಯಭೂತವಾದ ವಾಕ್ಯವನ್ನು ನನ್ನಿಂದ ಕೇಳು. ಎಂದು ಪ್ರಮಾಣಾರ್ಥವು

ಇಂತಹ ಭಕ್ತಿಯು "ಬಹೂನಾಂ ಜನ್ಮನಾಮಂತೆ ಜ್ಞಾನವಾನ್ಮಾಂ ಪ್ರಪದ್ಯತೆ ‖ ಜನ್ಮಾಂತರ ಸಹಸ್ರೇಷು"

ಬಹು ಜನ್ಮಗಳು ಕಳದಮೇಲೆ ಜ್ಞಾನವುಳ್ಳವನಾಗಿ ನನ್ನ "ಭಕ್ತಿಯಲ್ಲಿ ದುಷ್ಕರವಾದವು ಸುಲಭಸಾಧ್ಯವಾಗುವುದಕ್ಕಾಗಿ" ಭಕ್ತ್ಯಂಗವಾದ ಶರಣಾಗತಿಯನ್ನು ಮಾಡುತ್ತಾನೆ ಅನೇಕ ಸಹಸ್ರ ಜನ್ಮಾಂತರಗಳು ಕಳದಮೇಲೆ ತಪೋಧ್ಯಾನ ಸಮಾಧಿಗಳ ಅನುಷ್ಠಾನದಿಂದ ಪಾಪಗಳು ಕ್ಷೀಣವಾದಮೇಲೆ ಶ್ರೀಕೃಷ್ಣನಲ್ಲಿ ಭಕ್ತಿಯುಂಟಾಗುವುದು.

ಎಂಬೀ ಶಾಸ್ತ್ರಗಳಲ್ಲಿ ಹೇಳಿರುವಂತೆ ಅನೇಕ ಸಹಸ್ರ ಜನ್ಮಗಳಿಂದ ಸಂಪಾದಿಸಲ್ಪಟ್ಟಿರುವ ಸುಕೃತ ಪರಿಪಾಕದಿಂದ ಸಕಲ ಪಾಪಗಳನ್ನು

ಕಳೆದುಕೊಂಡವರಿಗೆ ಬಹುಕಾಲದವರೆಗೂ ಅವಿಚ್ಛಿನ್ನವಾಗಿ ಸೇವಿಸಿದರೆ ಮಾತ್ರವೇ ಸ್ಥಿರಪ್ರತಿಷ್ಠಿತವಾಗುವುದು; ಆದುದರಿಂದ ಶಾಸ್ತ್ರದಲ್ಲಿ ಹೇಳಿರುವ ಯಾವದೊಂದು ಸಾಧನವನ್ನೂ ಅನುಷ್ಠಿಸಲಶಕ್ತರಾದ ಪ್ರಾಣಿಗಳಿಗೆ ಏನುಗತಿ ಎಂಬ ಭಯವನ್ನು ಹೋಗಲಾಡಿಸುವುದಕ್ಕಾಗಿ ಲಘುವಾದ ಉಪಾಯವನ್ನು ತೋರಿಸುವಂತವರಾಗಿ ಮೂರನೇ ಪ್ರಶ್ನೆಕ್ಕೆ "ತಮೇವ" ಇತ್ಯಾದಿಯಾದ "ಸರ್ವಭೂತಭವೋದ್ಭವಂ" ಎಂಬಿದುವರೆಗಿನ ವಾಕ್ಯಗಳಿಂದ ಪ್ರತ್ಯುತ್ತರವನ್ನು ಹೇಳುತ್ತಾರೆ. ಸರ್ವ ಪ್ರಕಾರದಿಂದಲೂ ಸರ್ವಸ್ಮಾತ್ಪರನಾದ ಶ್ರೀ ಪುರುಷೋತ್ತಮನೇ ಸ್ತೋತ್ರಾರ್ಹನೆಂಬ ಅಭಿಪ್ರಾಯದಿಂದ ಇತರ ದೇವತೆಗಳಿಗಿಂತಲೂ ಇವನಿಗಿರುವ ವೈಲಕ್ಷಣ್ಯಗಳನ್ನು ಇಲ್ಲಿ ತೋರಿಸುತ್ತಾರೆಂದರಿಯಬೇಕು.

ಮೂ|| ಅನಾದಿ ನಿಧನಂ ವಿಷ್ಣುಂ
ಸರ್ವಲೋಕ ಮಹೇಶ್ವರಂ |
ಲೋಕಾಧ್ಯಕ್ಷಂ ಸ್ತುವನ್ನಿತ್ಯಂ
ಸರ್ವದುಃಖಾತಿಗೋ ಭವೇತ್ ||೬||

ಬ್ರಹ್ಮಣ್ಯಂ ಸರ್ವಧರ್ಮಜ್ಞಂ
ಲೋಕಾನಾಂ ಕೀರ್ತಿವರ್ಧನಂ |
ಲೋಕನಾಥಂ ಮಹದ್ಭೂತಂ
ಸರ್ವಭೂತ ಭವೋದ್ಭವಂ ||೭||

ಟೀ|| ಅನಾದಿನಿಧನಂ—ಆದ್ಯಂತರಹಿತನಾಗಿಯೂ, ವಿಷ್ಣುಂ—ವ್ಯಾಪಿಸಿರುವಂತವನಾಗಿಯೂ, ಸರ್ವಲೋಕಮಹೇಶ್ವರಂ—ಸಮಸ್ತಲೋಕಗಳಿಗೂ ಮಹೇಶ್ವರನಾಗಿಯೂ, ಲೋಕಾಧ್ಯಕ್ಷಂ—ಲೋಕವನ್ನು ಪ್ರತ್ಯಕ್ಷದಿಂದ ನೋಡುವಂತವನಾಗಿಯೂ, ಬ್ರಹ್ಮಣ್ಯಂ—ವೇದಪ್ರತಿಪಾದ್ಯನಾಗಿಯೂ, ಸರ್ವಧರ್ಮಜ್ಞಂ—ಸಕಲಧರ್ಮಗಳನ್ನೂ ತಿಳಿದವನಾಗಿಯೂ, ಲೋಕಾನಾಂ—ಜನರಿಗೆ, ಕೀರ್ತಿವರ್ಧನಂ—ಕೀರ್ತಿಯನ್ನು ವೃದ್ಧಿಪಡಿಸುವಂತವನಾಗಿಯೂ, ಲೋಕನಾಥಂ—ಲೋಕಸ್ವಾಮಿಯಾಗಿಯೂ, ಮಹದ್ಭೂತಂ—ನಿರತಿಶಯವಾದ ಮಹತ್ವವುಳ್ಳವನಾಗಿಯೂ, ಸರ್ವಭೂತಭವೋದ್ಭವಂ—ಸರ್ವಪ್ರಾಣಿಗಳ

ಸತ್ತಾಸ್ಥಿತ್ಯಾದಿಗಳಿಗೂ ಕಾರಣನಾಗಿಯೂ ಇರುವ, ತಮೇವ–ಅವನನ್ನೇ, ನಿತ್ಯಂ–ಯಾವಾಗಲೂ, ಸ್ತುವನ್–ಸ್ತೋತ್ರವನ್ನು ಮಾಡಿದರೆ, ಸರ್ವದುಃಖಾತಿಗಃ–ಸಮಸ್ತದುಃಖಗಳನ್ನು ಅತಿಕ್ರಮಿಸಿದವನಾಗಿ, ಭವೇತ್–ಆಗುವನು.

## ಭಕ್ತಿರೂಪವಾದ ಉಪಾಯ ಶೂನ್ಯರಿಗೆ ಧ್ಯಾನಾದಿ ಲಘೂಪಾಯ ಪ್ರದರ್ಶನವು.

(ವಿ॥ ಬಾ॥) ಆದ್ಯಂತವಿಲ್ಲದವನಾಗಿರುವುದರಿಂದ ಕಾಲೋಪಾಧಿ ಇಲ್ಲದವನಾಗಿಯೂ, ಸರ್ವವ್ಯಾಪಕನಾಗಿರುವುದರಿಂದ ದೇಶೋಪಾಧಿಯಿಲ್ಲದವನಾಗಿಯೂ, ಸರ್ವಲೋಕಗಳಿಗೂ ಮಹೇಶ್ವರನಾಗಿರುವುದರಿಂದ ಸ್ತೋತ್ರಮಾಡತಕ್ಕವನ ಮನೋರಥವನ್ನು ಪೂರ್ತಿಮಾಡತಕ್ಕ ಐಶ್ವರ್ಯಮುಳ್ಳವನಾಗಿಯೂ, ಲೋಕವನ್ನು ಪ್ರತ್ಯಕ್ಷವಾಗಿ ನೋಡತಕ್ಕವನಾಗಿರುವುದರಿಂದ ಸ್ತೋತ್ರಮಾಡತಕ್ಕವರಿಗೆ ಹಿತವಾದದ್ದು ಇದೆಂಬುವುದನ್ನು ತಾನಾಗಿಯೇ ಚಿಂತಿಸುವಂತವನಾಗಿಯೂ, ಅನಂತಶಾಖಾವಿಶಿಷ್ಟಗಳಾದ ವೇದಗಳಿಂದ ಪ್ರತಿಪಾದ್ಯನಾಗಿರುವುದರಿಂದ ಸ್ತೋತ್ರಮಾಡುವುದಕ್ಕೆ ಅಪೇಕ್ಷಿತಗಳಾದ ವಿಷಯಗಳುಳ್ಳವನಾಗಿಯೂ, ಸಕಲಧರ್ಮಗಳನ್ನು ತಿಳಿದವನಾಗಿರುವುದರಿಂದ ತನ್ನ ಸ್ತೋತ್ರವನ್ನು ಪರಮಧರ್ಮವೆಂದುತಿಳಿಯುವಂತವನಾಗಿಯೂ, "ಯಂಸ್ತುವನ್ಸ್ತವ್ಯತಾಮೇತಿ" (ಯಾವನನ್ನು ಸ್ತುತಿಸಿದರೆ ಸ್ತುತಿಮಾಡತಕ್ಕವನೂ ಸ್ತೋತ್ರಾರ್ಹನಾಗುತ್ತಾನೆಯೊ;) ಎಂಬದಾಗಿ ಶಾಸ್ತ್ರದಲ್ಲಿ ಹೇಳಿರುವಂತೆ ಯಾವ ಪ್ರಾಣಿಯಾದರೂ ತನ್ನನ್ನು ಸ್ತೋತ್ರಮಾಡಿದರೆ ಅದನ್ನು ತನ್ನಂತೆಯೇ ವೇದಗಳಿಂದಲೂ ಲೋಕದಿಂದಲೂ ಕೊಂಡಾಡಲ್ಪಡುವಂತೆ ಅವುಗಳಿಗೆ ಕೀರ್ತಿವರ್ಧಕನಾಗಿಯೂ, ಸರ್ವಲೋಕಸ್ವಾಮಿಯಾಗಿರುವುದರಿಂದ ಸ್ತೋತ್ರಾದಿ ಸರ್ವ ಪರಿಚರಣಗಳಿಗೂ ಅರ್ಹನಾಗಿಯೂ, "ಅನ್ಯತ್ಪೂರ್ಣಾದಪಾಂ ಕುಂಭಾದನ್ಯತ್ಪಾದಾವನೇಜನಾತ್ । ಅನ್ಯತ್ಕುಶಲಸಂಪ್ರಶ್ನಾನ್ನಚೇಚ್ಛತಿ ಜನಾರ್ದನಃ" ಎಂಬದಾಗಿ ಉದ್ಯೋಗಪರ್ವದಲ್ಲಿ ಹೇಳಿರುವಂತೆ ನಿರತಿಶಯವಾದ ಮಹತ್ವವುಳ್ಳವನಾದುದರಿಂದ ಯಾವದೊಂದು ಪ್ರಯಾಸವೂ ಇಲ್ಲದೆ ಕೇವಲ ಸ್ತೋತ್ರಮಾತ್ರದಿಂದ ಪ್ರಸನ್ನವಾದ ಮನಸ್ಸುಳ್ಳವನಾಗಿಯೂ, ಅಚೇತನಗಳಂತೆ ಆಗದೆ ತಮ್ಮಗಳಿಗಿರುವ ಜ್ಞಾನವುಸಾರ್ಥಕವಾಗುವಂತೆ ಅವನನ್ನು

ಚಿಂತಿಸುವ ಸಕಲರಾದ ಚೇತನರಿಗೂ ಸತ್ತಾಧಾಯಕನಾಗಿರುವುದರಿಂದ ಅಂತವರನ್ನು ಅವಶ್ಯವಾಗಿ ಅನುಗ್ರಹಿಸುವಂತವನಾಗಿಯೂ, ಇರುವ ಪರಮಪುರುಷನನ್ನು ಪರಿಪೂರ್ಣಭಕ್ತಿ ರಹಿತನಾಗಿದ್ದರೂ ಅಲ್ಪವಾದಗುಣ ಸಂಕೀರ್ತನವನ್ನು ಮಾಡತಕ್ಕವನು ತಾಪತ್ರಯವೆಂಬ ದಾವಾಗ್ನಿಯನ್ನು ಅತಿಕ್ರಮಿಸಿ ನಿರತಿಶಯಾನಂದ ಶೀತಲವಾದ ನೀಲಮೇಘದಂತೆ ಪ್ರಕಾಶಿಸುವ ಪರಮಪುರುಷನನ್ನು ಹೊಂದಿ ಸುಖಿಯಾಗುವನು.

ಇಲ್ಲಿ "ಸ್ತುವನ್" ಎಂಬುವುದಕ್ಕೆ ಅಲ್ಪವಾದ ಸ್ತೋತ್ರಮಾಡತಕ್ಕವನೆಂದು ವ್ಯಾಖ್ಯಾನಮಾಡುವುದೇ ಯುಕ್ತವಾಗಿರುವುದು. ಏತಕ್ಕೆಂದರೆ? ಹಿಂದೆ ಒಂದು ಕಡೆಯಲ್ಲಿ "ಸ್ತುವನ್" ಎಂಬುವುದನ್ನು ಧ್ಯಾನಾದಿಗಳೊಡನೆ ಸೇರಿಸಿ ಅದು ಪಠಿತವಾಗಿರುವುದರಿಂದ ಅದನ್ನು ಮಹತ್ತಾದ ಸ್ತೋತ್ರವನ್ನಾಗಿಯೂ ಇದನ್ನು ಅಲ್ಪವಾದ ಸ್ತೋತ್ರವನ್ನಾಗಿಯೂ ತಿಳಿಯಬೇಕು. ಈ ಪ್ರಕಾರವಾಗಿ ಹೇಳದಿದ್ದರೆ ಪುನರುಕ್ತಿ ದೋಷವು ಬರುವುದು. ಮತ್ತು "ಸ್ತುವಂತಃಕಂ" ಎಂದು ಪ್ರತ್ಯೇಕ ಪ್ರಶ್ನವಾಗಿರುವುದರಿಂದಲೂ ಈ ಪ್ರಕಾರವಾಗಿ ಹೇಳುವುದು ಅನೇಕ ಶಾಸ್ತ್ರಾಂತರಗಳಿಗೆ ಅನುಕೂಲವಾಗಿರುವುದರಿಂದಲೂ ಇಲ್ಲಿ ಈ ರೀತಿಯಾಗಿ ಹೇಳುವುದೇ ಉಚಿತವಾಗಿರುವುದೆಂದರಿಯಬೇಕು. ||೪||

(ಶಂ|| ಭಾ) ೫ನೇ ಶ್ಲೋಕದಲ್ಲಿ "ಅರ್ಚಯನ್" ಎಂಬ ಪದದಿಂದ ಬಾಹ್ಯಾಭ್ಯಂತರಗಳೆಂಬ ಯರಡು ಬಗೆಯಾದ ಪೂಜೆಯು ಹೇಳಲ್ಪಟ್ಟಿತೆಂತಲೂ, "ಧ್ಯಾಯನ್–ಸ್ತುವನ್–ನಮಸ್ಯನ್" ಎಂಬೀ ಮೂರು ಪದಗಳಿಂದ ಮನೋವಾಕ್ಕಾಯಿಕಗಳಾದ ಪೂಜೆಗಳು ಹೇಳಲ್ಪಟ್ಟಿತೆಂತಲೂ ತಿಳಿಯಬೇಕು. ||೫||

೬ನೇ ಶ್ಲೋಕ ತಾತ್ಪರ್ಯವು. ಈ ಶ್ಲೋಕದಲ್ಲಿ ಮೂರು ಪಾದಗಳಿಂದ "ಸ್ತುವಂತಃಕಂ" "ಯಾವ ದೇವನ ಗುಣಗಳನ್ನು ಸಂಕೀರ್ತನ ಮಾಡುತ" ಎಂಬ ಧರ್ಮಪುತ್ರರ ಮೂರನೇ ಪ್ರಶ್ನಕ್ಕೆ ಉತ್ತರವನ್ನು ಹೇಳುತ್ತಾರೆ. "ಅಸ್ತಿ – ಜಾಯತೆ – ವರ್ಧತೆ – ವಿಪರಿಣಮತೆ–ಅಪಕ್ಷೀಣೋತಿ–ನಶ್ಯತಿ" ಎಂಬೀ ಷಡ್ಭಾವ ವಿಕಾರಗಳಿಲ್ಲದವನಾಗಿಯೂ, ಸರ್ವವ್ಯಾಪನಶೀಲನಾಗಿಯೂ, ದೃಶ್ಯವರ್ಗವಾದ ಸರ್ವಲೋಕಗಳಿಗೂ ನಿಯಾಮಕರಾದ ಬ್ರಹ್ಮಾದಿ ದೇವತೆಗಳಿಗೂ ಕೂಡ ಈಶ್ವರನಾಗಿಯೂ, ಸಮ

ಸ್ತ, ದೃಶ್ಯವರ್ಗವನ್ನು ಸ್ವಾಭಾವಿಕವಾದ ಜ್ಞಾನದಿಂದ ಪ್ರತ್ಯಕ್ಷವಾಗಿ ನೋಡುವಂತವನಾಗಿಯೂ, ಇರುವ ನಾರಾಯಣನನ್ನು ಸರ್ವಕಾಲದಲ್ಲಿ ಯೂ ಸ್ತೋತ್ರಮಾಡತಕ್ಕವನು ಆಧ್ಯಾತ್ಮಿಕ, ಆಧಿದೈವಿಕ, ಆಧಿಭೌತಿಕ ಗಳೆಂಬ ಸಕಲ ದುಃಖಗಳನ್ನೂ ಅತಿಕ್ರಮಿಸುವನು. ||೬||

೭ನೇ ಶ್ಲೋಕ ತಾತ್ಪರ್ಯವು. ಈ ಶ್ಲೋಕದಿಂದಲೂ ಸ್ತೋತ್ರಾರ್ಹನಾದ ದೇವರ ಗುಣಗಳನ್ನೇ ವರ್ಣಿಸುತ್ತಾರೆ ಸೃಷ್ಟಿಕರ್ತನಾದ ಬ್ರಹ್ಮದೇವರಿಗೆ, ಅಥವಾ, ಬ್ರಾಹ್ಮಣರಿಗೆ, ಯದ್ವಾ, ತಪಸ್ಸಿಗೆ, ಅಥವಾ ವೇದಕ್ಕೆ ಹಿತನಾಗಿಯೂ ಸಕಲ ಧರ್ಮಗಳನ್ನೂ ತಿಳಿದವನಾಗಿಯೂ ಸರ್ವ ಪ್ರಾಣಿಗಳಿಗೂ ಅವರವರಶಕ್ತಿಗೆ ಅನುರೂಪವಾಗಿ ಕೀರ್ತಿಗಳನ್ನು ವೃದ್ಧಿ ಮಾಡತಕ್ಕವನಾಗಿಯೂ, ಲೋಕದಿಂದ ಯಾಚಿಸಲ್ಪಡುವಂತವನಾಗಿ ಯೂ ಅಥವಾ ಲೋಕನಿಯಾಮಕನಾಗಿಯೂ ಬ್ರಹ್ಮರೂಪನಾಗಿಯೂ ವಿಶ್ವೋತ್ಕರ್ಷದಿಂದ ಪ್ರವರ್ತಿಸುವಂತವನೂ ಪರಮಾರ್ಥ ಸತ್ಯಭೂತನೂ ಸ್ವತಸ್ಸಿದ್ಧನೂ ಸರ್ವಭೂತಗಳಿಗೂ ಜನನ ಮರಣಾದಿರೂಪವಾದ ಸಂಸಾ ರವನ್ನುಂಟುಮಾಡತಕ್ಕವನೂ ಆದ ನಾರಾಯಣನನ್ನು ಸ್ತುತಿಸುವಂತ ವನು ಆಧ್ಯಾತ್ಮಿಕಾದಿ ಸಕಲ ದುಃಖಗಳನ್ನು ಅತಿಕ್ರಮಿಸುವನು. || ೭ ||

ಮೂ|| ಏಷಮೇ ಸರ್ವಧರ್ಮಾಣಾಂ
ಧರ್ಮೋಽಧಿಕ ತಮೋಮತಃ |
ಯದ್ಭಕ್ತ್ಯಾ ಪುಂಡರೀಕಾಕ್ಷಂ
ಸ್ತವೈರರ್ಚೇನ್ನರಸ್ಸದಾ ||೮||

ಟೀ|| ಏಷಃ—ಇದು, ಮೇ—ನನಿಗೆ, ಸರ್ವಧರ್ಮಾಣಾಂ (ಮಧ್ಯೇ)—ಸಮಸ್ತ ಧರ್ಮಗಳ ಮಧ್ಯದಲ್ಲಿ, ಅಧಿಕತಮಃ—ಅತ್ಯಂತ ಶ್ರೇಷ್ಠವಾದ, ಧರ್ಮಃ—ಧರ್ಮ (ಶ್ರೇಯಸ್ಸಾಧನ) ವೆಂಬದಾಗಿ, ಮತಃ—ಎಣಿಸಲ್ಪಟ್ಟಿರುವುದು. ಯತ್—ಯಾವದೆಂದರೆ, ಭಕ್ತ್ಯಾ—ಭಕ್ತಿ ಯೊಡನೆ, ಪುಂಡರೀಕಾಕ್ಷಂ—ಕಮಲಾಕ್ಷನಾದ ಸ್ವಾಮಿಯನ್ನು, ನರಃ—ಮನುಷ್ಯನು, ಸ್ತವೈಃ—ಸ್ತೋತ್ರಗಳಿಂದ, ಸದಾ—ಸರ್ವಕಾಲದಲ್ಲಿಯೂ, ಅರ್ಚೇತ್—ಅರ್ಚಿಸುವನೊ.

(ವಿ|| ಭಾ||) ಈ ಶ್ಲೋಕದಿಂದ "ಕೋಧರ್ಮಸ್ಸರ್ವಧರ್ಮಾಣಾಂ ಭವತಃ ಪರಮೋಮತಃ" ಎಂಬದಾಗಿ ಧರ್ಮಪುತ್ರರು ಕೇಳಿದ (೫)ನೇ ಪ್ರಶ್ನೆಗೆ ಪ್ರತ್ಯುತ್ತರವು ಹೇಳಲ್ಪಡುವುದು.

## ಸ್ಮರಣ ಕೀರ್ತನ ಪ್ರಣಾಮಾದಿಗಳಿಗಿಂತಲೂ ಪರಿಚರ್ಯೋತ್ಕರ್ಷವು.

ಧರ್ಮಗಳು ತಾನೆ ಐಹಿಕವಾದ ಪುತ್ರಪಶ್ವನ್ನಾದಿ ಸಾಧಕಗಳೆಂತಲೂ, ಆಮುಷ್ಮಿಕಗಳಾದ ಸ್ವರ್ಗಾದಿ ಸಾಧಕಗಳೆಂತಲೂ, ಫಲದಲ್ಲಿ ಅಪೇಕ್ಷೆಯಿಲ್ಲದೆ ಭಗವದಾರಾಧನ ರೂಪವೆಂಬದಾಗಿ ತಿಳಿದು ಅನುಷ್ಠಿಸಲ್ಪಡುವ ಇಷ್ಟಾಪೂರ್ತಾದಿ ಕರ್ಮಗಳಿಂದ ಪರಿಷ್ಕರಿಸಲ್ಪಟ್ಟ ತತ್ವಜ್ಞಾನ ಸಮಾಧಿರೂಪತ್ವೇನ ಮೋಕ್ಷಸಾಧಕವೆಂತಲೂ, ಪ್ರೀತಿಯೊಡನೆ ಶ್ರಿಯಃಪತಿಯನ್ನು ಸ್ಮರಣಮಾಡುವುದು ಅವನ ಗುಣಗಳನ್ನು ಕೀರ್ತನೆಮಾಡುವುದು ಸಾಷ್ಟಾಂಗ ದಂಡವತ್ಪ್ರಣಾಮಮಾಡುವುದೇ ಮೊದಲಾಗಿರುವ ಅವನಿಗೆ ಮಾತ್ರವೇ ಸಲ್ಲತಕ್ಕ ಕೈಂಕರ್ಯ ಅಥವಾ ದಾಸ್ಯಮಾಡುವಿಕೆಯೆಂತಲೂ, ನಾಲ್ಕು ವಿಧಗಳಾಗಿರುವುವು ಆ ನಾಲ್ಕರಲ್ಲಿ ೧॥ ೨॥ ೩॥ ನೇ ಧರ್ಮಗಳಿಗಿಂತಲೂ ಭಗವದರ್ಚನ ಸ್ತೋತ್ರ ಪ್ರಮಾಣಾದಿ ರೂಪವಾಗಿರುವ ನಾಲ್ಕನೇ ಧರ್ಮಕ್ಕೆ ಅತ್ಯಂತೋತ್ಕರ್ಷವನ್ನು ಹೇಳಿರುವಂತೆ ತಿಳಿಯಬೇಕು. ಅವರವರ ಅಧಿಕಾರಾನುಗುಣವಾಗಿ ಈ ಅರ್ಚನಾದಿಗಳು ಗುರು ಲಘೂಪಾಯಗಳಾಗಿರುವುವು.

ಇದು ತಾನೆ ಸಕಲಧರ್ಮಗಳಿಗಿಂತಲೂ ಶ್ರೇಷ್ಠವೆಂದು ನನ್ನ ನಿಶ್ಚಯವೆಂಬದಾಗಿ ಹೇಳಿದರಲ್ಲವೆ; ಅದು ಯಾವದೆಂದರೆ? ನರನಾದವನು ಭಕ್ತಿಯೊಡನೆ ಶ್ರೀಪುಂಡರೀಕಾಕ್ಷನಾದ ವಾಸುದೇವನನ್ನು ಯಾವಾಗಲೂ ಸ್ತೋತ್ರಗಳಿಂದ ಅರ್ಚಿಸುವುದೆ ಇಲ್ಲಿ ಭಕ್ತಿಯೊಡನೆ ಎಂಬುವುದು ಅನುಷ್ಠಾನ ಸಮಯದಲ್ಲಿಯೂ ಪ್ರೀತಿಯನ್ನು ಒಳಪಡಿಸಿಕೊಂಡಿರುವುದರಿಂದ ಸುಖವಾಗಿ ಅನುಷ್ಠಿಸಲಾಗುವುದೆನ್ನುವುದಕ್ಕಾಗಿ ಎಂದರಿಯಬೇಕು. ಈ ಪ್ರಕಾರವೇ ಗೀತೆಯು (೯॥ ೨॥)ನೇ ಶ್ಲೋಕದಲ್ಲಿ "ಸುಸುಖಂ ಕರ್ತುಂ" ಎಂಬದಾಗಿ ಹೇಳಿರುತ್ತದೆ (ಮಾಡುವುದಕ್ಕೆ ಅತ್ಯಂತ ಸುಖಕರವೆಂದು ಭಾವವು) ಕಿಂಚ ಅತ್ಯಂತ ಪ್ರಿಯನಾದ ನಾಯಕನ ಸ್ಮರಣವು ನಾಯಕಿಯಾದವಳಿಗೆ ಪ್ರಿಯವಾಗಿ ತಾನೆ ಇರುವುದು. ಇದರಿಂದ ಸ್ವಾಮಿಗಳಲ್ಲದ ದೇವತಾಂತರ ಸೇವೆಯು ಕಷಾಯಪಾನದಂತೆ ನೀರಸವಾಗಿ

ದ್ದರೂ ಅದು ಹಿತವೆಂಬ ಬುದ್ಧಿಯೊಡನೆ ಅನುಷ್ಠಿಸಬೇಕೆಂಬ ಪ್ರಯಾಸವು ಇದಕ್ಕೆ ಸ್ವಲ್ಪವೂ ಇಲ್ಲವೆಂದಾಯಿತು.

"ಪುಂಡರೀಕಾಕ್ಷಂ" ಎಂಬುವುದರಿಂದ ಸೇವಿಸಲ್ಪಡುವಂತವನು ಬಹುಸುಂದರ ಅಥವಾ ಅಭಿರೂಪನಾಗಿರುವುದರಿಂದ ವಿಕಾರವಾಗಿಯೂ ಭಯಂಕರವಾಗಿಯೂ ಇರುವ ದೇವತಾಂತರ ಸೇವೆಗಿಂತಲೂ ಇವನ ಸೇವೆಗೆ ಆಧಿಕ್ಯವು ಹೇಳಲ್ಪಟ್ಟಿತು. (ವಿರೂಪಾಕ್ಷನೇ ಮೊದಲಾದವರ ಸೇವೆಗಿಂತಲೂ ಪುಂಡರೀಕಾಕ್ಷನ ಸೇವೆಗೆ ವಿಶೇಷವು ಸರ್ವ ಸಮ್ಮತವಷ್ಟೆ)

"ಸ್ತುವ್ಯೈಃ" ಎಂಬುವುದರಿಂದ ಸ್ತೋತ್ರವೆಂಬುವುದು ವಾಙ್ಮಾತ್ರದಿಂದ ಸಾಧಿಸಬಹುದಾಗಿರುವುದರಿಂದ ವಿಶ್ವಜಿತ್ ಚಾಂದ್ರಾಯಣವೇ ಮೊದಲಾದವುಗಳಂತೆ ಇದಕ್ಕೆ ದ್ರವ್ಯವ್ಯಯವು ಅಧಿಕಾಯಾಸವು ಅನಪೇಕ್ಷಿತವೆಂದು ಹೇಳಿದಂತೆ ತಿಳಿಯಬೇಕು. ಈ ಪ್ರಕಾರವೇ (೧) "ಆರ್ತಾವಿಷಣ್ಣಾ ಶ್ಶಿಥಿಲಾಶ್ಚ ಭೀತಾಘೋರೇಷುಚ ವ್ಯಾಧಿಷು ವರ್ತಮಾನಾಃ| ಸಂಕೀರ್ತ್ಯ ನಾರಾಯಣ ಶಬ್ದಮಾತ್ರಂ ವಿಮುಕ್ತದುಃಖಾಸ್ಸುಖಿನೋಭವಂತಿ" ಎಂಬದಾಗಿ ವ್ಯಾಸರೂ ಹೇಳಿರುವರು ಶ್ರೀವಿಷ್ಣು ಪುರಾಣದಲ್ಲಿ (೨) "ಅವಶೇನಾಪಿ ಯನ್ನಾಮ್ನಿ" ಎಂತಲೂ, ವೈಷ್ಣವಧರ್ಮದಲ್ಲಿ (೩) "ಅಜ್ಞಾನತೋ ಜ್ಞಾನತೋವಾ ವಾಸುದೇವಸ್ಯ ಕೀರ್ತನಾತ್ | ತತ್ಸರ್ವಂ ವಿಲಯಂ ಯಾತಿತೋಯಸ್ಥಂ ಲವಣಂ ಯಥಾ" ಎಂತಲೂ, ವಿಷ್ಣುಧರ್ಮದಲ್ಲಿಯೇ ಸ್ಥಲಾಂತರದಲ್ಲಿ (೪) "ಶಮಾಯಾಲಂ ಜಲಂವಹ್ನೇ ಸ್ತಮಸೊ ಭಾಸ್ಕರೋದಯಃ | ಶಾಂತಿಃಕಲೇ ರಘೌಘಸ್ಯ ನಾಮಸಂಕೀರ್ತನಂಹರೇಃ" ಎಂತಲೂ, ಅಲ್ಲಿಯೇ (೬೬॥ ೭೦) (೫) "ಯನ್ನಾಮ ಸಂಕೀರ್ತನತೋ ವಿಮುಚ್ಯತೆ ॥ ಎಂತಲೂ, ಅಲ್ಲಿಯೇ (೪೩) (೬) "ಯನ್ನಾಮ ಸಂಕೀರ್ತನತೊ ಮಹಾಭಯಾದ್ವಿಮೋಕ್ಷ ಮಾಪ್ನೋತಿ" ಎಂತಲೂ, ಅಲ್ಲಿಯೇ (೪೩॥ ೨೫) (೭) "ಸಕೃದುಚ್ಚರಿತಂ ಯೇನ ಹರಿರಿತ್ಯಕ್ಷರ ದ್ವಯಂ | ಬದ್ಧಃ ಪರಿಕರಸ್ತೇನ ಮೊಕ್ಷಾಯ ಗಮನಂಪ್ರತಿ" ಎಂತಲೂ, (ವಿಷ್ಣುಧ॥ ೭೦ನೆ ಅ) (೮) ಯಸ್ಯನಾಮ್ನಿ ಸ್ಮೃತೆಮರ್ತ್ಯೊ ಸ್ಸಮುತ್ಕ್ರಾಂತೇರನಂತರಂ | ಪ್ರಾಪ್ನೋತಿ ವೈಷ್ಣವಂ ಸ್ಥಾನಂ ಪುನರಾವೃತ್ತಿ ವರ್ಜಿತಂ" ಎಂತಲೂ, ಅಲ್ಲಿಯೇ (೨೯ನೆ ಅ) (೯) "ಅಚ್ಯುತಾನಂತ ಗೋವಿಂದ ನಾಮೊಚ್ಚಾರಣ ಭೇಷಜಾತ್| ನಶ್ಯಂತಿ ಸಕಲಾರೋಗಾ ಸ್ಸತ್ಯಂಸತ್ಯಂವದಾಮ್ಯಹಂ" ಎಂತಲೂ, ಹೇಳಿರುವುದಲ್ಲದೆ ಬೇರೆ ಸ್ಥಲದಲ್ಲಿಯೂ, (೧೦)

"ಸಂಕೀರ್ತಯೇ ಜ್ಜಗನ್ನಾಥಂ ವೇದಂವಾಪಿ ಸವಿಸ್ತರಯೇತ್" ಎಂತಲೂ, (೧೧) "ಅಸ್ಯಜಾನಂತೊ ನಾಮ ಚಿದ್ವಿವಕ್ತನ | ಧ್ರುವಾಸೋ ಅಸ್ಯಕೀರಯೊಜನಾಸಃ" ಎಂಬದಾಗಿ ವಿಷ್ಣುಸೂಕ್ತದಲ್ಲಿಯೂ ಈ ರೀತಿಯಾಗಿಯೇ ಹೇಳಲ್ಪಟ್ಟಿರುವುದು.

(ಈ ಪ್ರಮಾಣಗಳ ಅರ್ಥವು (೧) ಸಂಸಾರದಲ್ಲಿ ಆರ್ತರಾದವರೂ ಮನೋವ್ಯಾಧಿಯುಳ್ಳವರೂ ಮತ್ತು ಪ್ರಯಾಸಪಟ್ಟವರೂ ಭಯಗ್ರಸ್ತರೂ ಘೋರವಾದ ವ್ಯಾಧಿಯಿಂದ ಪೀಡಿತರಾಗಿರುವಂತವರೂ "ನಾರಾಯಣ" ಎಂಬ ಉಕ್ತಿಮಾತ್ರವನ್ನು ಭಕ್ತಿಯಿಂದ ಹೇಳಿದ್ದೇ ಆದರೆ ಸಕಲ ದುಃಖಗಳಿಂದ ಬಿಡಲ್ಪಟ್ಟು ಸುಖಿಗಳಾಗುವರು. (೨) ನಾಮವನ್ನು ಹೇಳಬೇಕೆಂಬ ಉದ್ದೇಶ್ಯವಿಲ್ಲದೆ ಅವಶಾತ್ತಾಗಿ ಅವನ ನಾಮವನ್ನು ಹೇಳಿದರೂ ಪಾಪಗಳಿಂದ ಬಿಡಲ್ಪಡುವನು (೩) ಜ್ಞಾನದಿಂದಲೋ ಅಥವಾ ಅಜ್ಞಾನದಿಂದಲೊ ವಾಸುದೇವನ ನಾಮಕೀರ್ತನದಿಂದ ಸಮಸ್ತ ಪಾಪವು ಜಲದಲ್ಲಿರುವ ಉಪ್ಪಿನಂತೆ ಲಯವಾಗುವುದು (೪) ಅಗ್ನಿಯನ್ನು ಶಮನಮಾಡುವುದಕ್ಕೆ ಜಲವೂ, ಅಂಧಕಾರ ನಿರಾಸಕ್ಕೆ ಸೂರ್ಯೋದಯವೂ, ಕಲಿಯುಗದಲ್ಲಿ ಸಂಪಾದಿಸಲ್ಪಟ್ಟ ಪಾಪ ಸಮೂಹವನ್ನು ಶ್ರೀವಾಸುದೇವನ ನಾಮಕೀರ್ತನವೂ ನಾಶಮಾಡುವುದಕ್ಕೆ ಸಮರ್ಥವಾಗುವುದು. (೫) ಯಾವ ವಾಸುದೇವನ ನಾಮಸಂಕೀರ್ತನ ಮಾಡಿದರೆ ಪಾಪದಿಂದ ಬಿಡಲ್ಪಡುವನೊ. (೬) ಯಾವ ಶ್ರೀವಾಸುದೇವನ ನಾಮಸಂಕೀರ್ತನದಿಂದ ಮಹಾಭಯಕ್ಕೆ ಕಾರಣವಾದ ಪಾಪಗಳಿಂದ ಬಿಡುಗಡೆಯನ್ನು ಹೊಂದುವನೊ. (೭) ಹರಿಃ ಎಂಬುವ ಯರಡು ಅಕ್ಷರಗಳನ್ನು ಯಾವನಾದರೆ ಒಂದು ಕಾಲದಲ್ಲಿ ಉಚ್ಚರಿಸುತ್ತಾನೆಯೊ; ಅವನು ಮೋಕ್ಷಗಮನಕ್ಕೆ ಆಗಬೇಕಾದ ಕೃತ್ಯವನ್ನು ಸಪರಿಕರವಾಗಿ ಅನುಷ್ಠಿಸಿದವನಾಗುತ್ತಾನೆ (೮) ಜೀವಿಸಿರುವ ಕಾಲದಲ್ಲಿ ಯಾವನು ಪರಮಪುರುಷನ ನಾಮವನ್ನು ಸ್ಮರಿಸುತ್ತಾನೆಯೊ, ಅಂತವನು ದೇಹಪಾತಾನಂತರದಲ್ಲಿ ಪುನರ್ಜನ್ಮವಿಲ್ಲದ ವೈಷ್ಣವಸ್ಥಾನವನ್ನು ಹೊಂದುವನು. (೯) "ಅಚ್ಯುತ—ಅನಂತ—ಗೋವಿಂದ" ಎಂಬ ನಾಮೋಚ್ಚಾರಣರೂಪವಾದ ಔಷಧದಿಂದ ಸಮಸ್ತ ರೋಗಗಳೂ ನಾಶವಾಗುವುವು. ಇದು ಸತ್ಯವು ಸತ್ಯವೆಂದು ನಾನು ಹೇಳುವೆನು (೧೦) "ಸಂಕೀರ್ತಯೇಜ್ಜಗನ್ನಾಥಂ" ಜಗನ್ನಾಥನ ನಾಮಕೀರ್ತನವನ್ನಾದರೂ ಮಾಡಬೇಕು. ವೇದವನ್ನಾದರೂ ಹೇಳಬೇಕು. (೧೧) ಇವನ ಯಾವದಾದರೊಂದು ನಾಮವನ್ನು ತಿಳಿದಾಗಲಿ ಶಾಶ್ವತರಾಗಿ ನಿತ್ಯಸೂರಿಗಳೊಡನೆ ಸುಖಪಡುವರು.)

"ಅರ್ಚೇತ್" ಎಂಬುವುದರಿಂದ ಪ್ರತ್ಯಕ್ಷದಲ್ಲಿ ಒಂದು ಪುರುಷ ವಿಶೇಷವನ್ನು ಆರಾಧಿಸುವ ಭಾವನೆಯಾಗಿರುವುದರಿಂದ ಕೇವಲ ಪರೋಕ್ಷದಲ್ಲಿ ಪ್ರಯಾಸಪಟ್ಟಂತೆ ಇರಲಾರದೆಂಬುವುದನ್ನು ಬೋಧಿಸುತ್ತಾರೆ. ಆ ಪ್ರಕಾರವೇ ಗೀತೆಯಲ್ಲಿ (೯|| ೨) "ಪ್ರತ್ಯಕ್ಷಾವಗಮಂ" ಎಂಬದಾಗಿ

ಅನುಗ್ರಹಿಸಿರುತ್ತಾರೆ. (ಪ್ರತ್ಯಕ್ಷವಾಗಿ ಕಾಣಲ್ಪಡತಕ್ಕದ್ದು ಎಂದು ಪ್ರಮಾಣಾರ್ಥವು.)

"ನರಃ" ಎಂಬುವುದರಿಂದ ಸಮಸ್ತ ಚೇತನರಿಗೂ ಅವರವರ ಯೋಗ್ಯತಾನುಸಾರವಾಗಿ ಅರ್ಚನದಲ್ಲಿ ಅಧಿಕಾರವುಂಟೆಂತಲೂ, "ನರಃ" ಎಂಬ ಏಕವಚನದಿಂದ ಮಹಾಯಾಗಾದಿಗಳಂತೆ ಅನೇಕರು ಕೂಡಿ ಮಾಡಬೇಕೆಂಬ ಸಹಾಯಾಪೇಕ್ಷೆಯೂ ಕೂಡ ಇಲ್ಲವೆನ್ನುತ್ತಾರೆ.

"ಜನ್ಮವು, ನಡತೆ, ಗುಣಗಳು" ಇವುಗಳಿಂದ ನಿಂದಾ ಯೋಗ್ಯನಾದವನಿಗೂ ಕೂಡ ಭಕ್ತಿ ಎಂಬ ಅಭಿರುಚಿ ಮಾತ್ರವಿದ್ದರೂ ಪರಮಾತ್ಮನನ್ನು ನಿರ್ಭಯವಾಗಿ ಸೇವಿಸಬಹುದಷ್ಟೆ; ಆ ಪ್ರಕಾರ ಸೇವಿಸುವುದರಿಂದ ತತ್‌ಕ್ಷಣವೇ ಗಂಗಾಪ್ರವಾಹದಿಂದ ಸಮಸ್ತ ಕಲ್ಮಷಗಳೂ ಪರಿಹಾರವಾಗುವಂತೆ ವಿಷಯಾಪೇಕ್ಷೆಗಳು ನ್ಯೂನವಾಗಿ ಪರಮಧಾರ್ಮಿಕನಾಗುತ್ತಾನೆ. ಈ ಪ್ರಕಾರವೇ "ಸಮೋಽಹಂ ಸರ್ವಭೂತೇಷು॥ ಅಪಿಚೇತ್ಸುದುರಾಚಾರಃ ॥ ಮಾಂಹಿ ಪಾರ್ಥವ್ಯಪಾ ಶ್ರಿತ್ಯಯೇಽಪಿಸ್ಯುಃ ಪಾಪಯೋನಯಃ" ಎಂಬದಾಗಿ ಶ್ರೀಗೀತೆಯಲ್ಲಿ ಗುಣಜನ್ಮ ವೃತ್ತಗಳಿಂದ ಹೀನನಾದವನು ಕೂಡ ಭಕ್ತಿಯನ್ನು ಮಾಡಿದರೆ ಶ್ರೇಷ್ಠನಾಗುತ್ತಾನೆಂದು ಹೇಳಿರುತ್ತಾರೆ.

(ಇದರ ಅರ್ಥವು॥ ನಾನು ಸರ್ವಭೂತಗಳಿಗೂ ಸಮನಾದವನು. (ಅತ್ಯಂತ ದುರಾಚಾರವುಳ್ಳವನಾಗಿದ್ದರೂ ಅನನ್ಯಚಿತ್ತನಾಗಿ ನನ್ನನ್ನು ಭಜಿಸುವಂತವನು ಸಾಧುಚರಿತ್ರನೆಂತಲೆ ಭಾವಿಸಲ್ಪಡತಕ್ಕವನು. ನಿನ್ನನ್ನು ಆಶ್ರಯಿಸಿದವರು ನೀಚಜಾತಿಗಳಲ್ಲಿ ಹುಟ್ಟಿದ ಸ್ತ್ರೀ ವೈಶ್ಯ ಶೂದ್ರಾದಿಗಳಾಗಿದ್ದರೂ ಅವರು ಕೂಡ ಉತ್ತಮವಾದ ಗತಿಯನ್ನು ಹೊಂದುವರು)

ಆದರೆ ಈ ಪ್ರಕಾರವಾಗಿ ಹೇಳಿರುತ್ತೇವೆಂದು ದುರಾಚಾರಗಳು ಕೂಡ ಧರ್ಮಗಳಾಗಲೆಂದು ಚಿಂತಿಸಬಾರದು. ಅದು ಪರಮಾತ್ಮನಿಗೆ ಅನಿಷ್ಟವಾಗಿರುವುದರಿಂದ ಅಧರ್ಮವೆಂದು ಹೇಳಲ್ಪಡುವುದೆಂಬದಾಗಿ "ನಾವಿರತೋದುಶ್ಚರಿತಾ ನ್ನಾಶಾಂತೋನಾ ಸಮಾಹಿತಃ ॥ ಅಪ್ರಾಪ್ಯಃ ಕೇಶವೋ ರಾಜನ್ನಿಂದ್ರಿಯೈ ರಜಿತೈರ್ನೃಣಾಂ" ಇತ್ಯಾದಿ ಪ್ರಮಾಣಗಳು ಉದ್ಘೋಷಿಸುವುವು.

(ಇದರ ಅರ್ಥವು॥ ಕೆಟ್ಟನಡತೆಗಳಿಂದ ನಿವೃತ್ತನಾಗದೆ, ಮತ್ತು ಇಂದ್ರಿಯ ಜಯ ವಿಲ್ಲದೆ ಸಮಾಧಿಯಲ್ಲಿ ಸ್ಥಿರಪ್ರತಿಷ್ಠಿತನಾಗದವನು ಇವನನ್ನು ಹೊಂದಲಾರನು. ಜಯಿಸ ಲ್ಪಡದ ಇಂದ್ರಿಯಗಳೊಡನೆಕೂಡಿ ಮನುಷ್ಯರಿಗೆ ಕೇಶವನು ಹೊಂದಲ್ಪಡತಕ್ಕವನಲ್ಲವು.)

ಆದುದರಿಂದಲೇ ಶ್ರೀಗೀತೆಯಲ್ಲಿ "ಅಪಿಚೇತ್ಸು ದುರಾಚಾರಃ" ಇತ್ಯಾದ್ಯರ್ಥಗಳನ್ನು ಹೇಳಿದಮೇಲೆ ತನ್ನಲ್ಲಿ ಭಕ್ತಿಮಾಡುವಂತವನು ದುರಾಚಾರನಾಗಿದ್ದರೆ ಅವನು ಶೀಘ್ರದಲ್ಲಿ ಧಾರ್ಮಿಕನಾಗುವನೆಂದು (೯॥ ೩೧) "ಕ್ಷಿಪ್ರಂಭವತಿ ಧರ್ಮಾತ್ಮಾ" ಎಂದೂ ಹೇಳಿರುವನು. ಭಕ್ತಿಯಲ್ಲಿ ಸರ್ವಾಶ್ರಮಿಗಳಿಗೂ ಅನಾಶ್ರಮಿಗಳಾದ ವಿಧುರಾದಿಗಳಿಗೂ ಅಧಿಕಾರ ವಿರುವ ಅಂಶವು "ಶಮದಮಾದ್ಯುಪೇತಸ್ಸ್ಯಾತ್ ॥ ಅನ್ತರಾಚಾಪಿತುತ ದ್ದೃಷ್ಟೇಃ" (ಬ್ರಹ್ಮಸೂ॥ ೩॥೪॥೨೭॥೩೬॥) ಇತ್ಯಾದಿಗಳಲ್ಲಿ ನಿರ್ಣಯಿ ಸಲ್ಪಟ್ಟಿರುವುದು.

(ಬ್ರಹ್ಮ ಸೂ॥ ೩॥ ೪॥ ೨೭ನೇ ಸೂತ್ರಾರ್ಥವನ್ನು (೩೦)ನೇ ಪುಟದಲ್ಲಿ ನೋಡ ಬಹುದು. ೩೬ನೇ ಸೂತ್ರಾರ್ಥವು. ತು ಶಬ್ದವು ಪೂರ್ವಪಕ್ಷ ನಿರಾಸಕವು ಚ ಶಬ್ದಕ್ಕೆ ಏವಕಾರವು ಅರ್ಥವು ಅಂತರಾಪಿ—ಆಶ್ರಮಾಂತರದಲ್ಲಿರತಕ್ಕವರಿಗೂ ಬ್ರಹ್ಮಚರ್ಯ ಗಾರ್ಹ ಸ್ಥ್ಯವೆಂಬ ಆಶ್ರಮಗಳ ಮಧ್ಯದಲ್ಲಿಯೂ ಸನ್ಯಾಸಾಶ್ರಮ ಮಧ್ಯದಲ್ಲಿಯೂ ಇರತಕ್ಕ ಅನಾಶ್ರಮಿಗಳು ಎಂದರೆ ಬ್ರಹ್ಮಚರ್ಯಾದಿಯಾದ ಯಾವ ಆಶ್ರಮದಲ್ಲಿಯೂ ಇಲ್ಲದವರಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವುಂಟಲ್ಲವೆ ; ಅದು ಹೇಗೆಂದರೆ ? ತದ್ದೃಷ್ಟೇಃ—ಊರ್ಧ್ವ ರೇತಸ್ಸುಗಳಿಗೆ ಹೇಗಾದರೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವೊ ಅದರಂತೆ ಸಮಾಪ್ತ ಬ್ರಹ್ಮ ಚರ್ಯರಾಗಿ ವಿವಾಹಾರ್ಥಿಗಳಾದ ರೈಕ್ವಾದಿಗಳ ಬ್ರಹ್ಮವಿದ್ಯಾಧಿಕಾರವು ಸಂವರ್ಗ ವಿದ್ಯಾದಿ ಗಳಲ್ಲಿ ಕಂಡು ಬರುವುದರಿಂದ ಆಶ್ರಮಾನಿಯತಗಳಾದ ಜಪೋಪವಾಸಾ ರಾಧನಾದಿಗಳಿಂದ ಅನಾಶ್ರಮಿಗಳಿಗೂ ವಿದ್ಯಾನುಗ್ರಹವುಂಟಾಗಬಹುದು. ಇದರಿಂದ ಅನಾಶ್ರಮಿಗಳೂ ಸರ್ವಾಶ್ರಮಿಗಳೂ ಭಕ್ತ್ಯಧಿಕಾರಿಗಳೆಂದು ಹೇಳಿದಂತೆ ಆಯಿತು.)

ಮತ್ತು ಪುರುಷನು ಯಾವದಶೆಯಲ್ಲಿದ್ದರೂ ತಾಯಿಯಂತೆ ಅತ್ಯಂತ ವಾದ ವಾತ್ಸಲ್ಯಮುಳ್ಳವನಾಗಿಯೂ ಸರ್ವಬಂಧುವಾಗಿಯೂ ಇರುವ ಪರ ಮ ಸುಹೃತ್ತಾದ ಪರಮಾತ್ಮನ ನಾಮಗಳನ್ನು ಹೇಳಿಕೊಂಡು ಕೂಗಿಕೊ ಳ್ಳುವುದು ಯುಕ್ತವಾಗಿಯೇ ಇರುವುದು. ಅಷ್ಟುಮಾತ್ರವಲ್ಲದೆ ಈ ವಿಷ ಯವನ್ನು ಗಜೇಂದ್ರ ಜಟಾಯು ಕಾಕ ವಿಭೀಷಣ ಕೋಸಲದೇಶವಾಸಿ ಗಳು ಗೋಪಸ್ತ್ರೀಯರು ಮಾಲಾಕಾರನೇ ಮೊದಲಾದವರಲ್ಲಿಯೂ ಕಂಡಿ ರುವೆವು. ಆದರೆ ಉತ್ತರ ಮೀಮಾಂಸೆಯಲ್ಲಿ ಅಪಶೂದ್ರಾಧಿಕರಣದಲ್ಲಿ

ಬ್ರಹ್ಮ ಕ್ಷತ್ರಿಯ ವೈಶ್ಯರೆಂಬ ತ್ರೈವರ್ಣಿಕರಲ್ಲದ ಅಗ್ನಿ ವಿದ್ಯಾ ವಧಿಕಾರಿಗಳಾದ ಮಿಕ್ಕವರಿಗೆ ಉಪಾಸನೆದಲ್ಲಿ ಅಧಿಕಾರವಿಲ್ಲವೆಂದು ನಿಷೇಧಿಸಲ್ಪಟ್ಟಿರುವುದಿಲ್ಲವೆ? ಎಂದರೆ ಅಲ್ಲಿ ಭಗವತ್ಸಮಾಶ್ರಯಣವು ಇವರಿಗೆ ನಿಷೇಧಿಸಲ್ಪಡಲಿಲ್ಲವು. ಆದರೆ ಅವರಿಗೆ ಉಪನಿಷತ್ತುಗಳಲ್ಲಿ ಹೇಳಿರುವ ಸಂಸ್ಕಾರವಿಲ್ಲದೇ ಇರುವುದರಿಂದ ವೇದಾಂತಗಳಿಂದ ತಿಳಿಯತಕ್ಕ ಪರವಿದ್ಯೆಯನ್ನು ಸಂಪಾದಿಸಿಯೂ ಕಾರ್ಯಕರವಾಗಲಾರದಾದುದರಿಂದ ಅಗ್ನಿ ವಿದ್ಯಾಽನಧಿಕಾರಿಗಳಾದ ಶೂದ್ರಾದಿಗಳಿಗೆ ಅಗ್ನಿ ವಿದ್ಯಾಂಗವಾದ ಪರವಿದ್ಯೆಯಲ್ಲಿ ಅಧಿಕಾರವಿಲ್ಲವೆಂದು ಸಿದ್ಧಾಂತಮಾಡಲ್ಪಟ್ಟಿತು ಉಪಾಸನಾನುಬಂಧಿಯಾದ ಭಗವತ್ಸಮಾಶ್ರಯಣದಲ್ಲಿ ತ್ರೈವರ್ಣಿಕರಿಗೆ ಮಾತ್ರವೇ ಅಧಿಕಾರವಿರುವುದು; ಅವರಿಗೆ ಸತ್ವಗುಣೋದ್ರೇಕ ವುಂಟಾಗಿ ಮುಮುಕ್ಷುತ್ವವೂ ಇರುವುದರಿಂದ ಅವರುಗಳಿಗೆ ಉಪನಿಷತ್ತುಗಳಲ್ಲಿ ಹೇಳಿರುವ ಬ್ರಹ್ಮವಿದ್ಯೆ ಎಂಬ ಮಹಾಪಥದಲ್ಲಿ ಅಧಿಕಾರವು ಪ್ರಸಿದ್ಧವಾಗಿರುವುದು. ಅನ್ಯರಿಗೆ ಭಗವದ್ಭಜನದಲ್ಲಿ ಯಾವದೊಂದು ತಡೆಯೂ ಇರಲಾರದು. ಆದರೆ ಅವರಲ್ಲಿಯೇ ಕೆಲವರಿಗೆ ರಜಸ್ತಮೊಗುಣ ಸಂಬಂಧದಿಂದ ಸತ್ವಗುಣವು ಹೀನಸ್ಥಿತಿಗೆ ಬಂದಿರುವುದರಿಂದ ಅಂತವರಿಗೆ ಫಲ ಕಾಮನಾದಿಗಳುಂಟಾಗಿ ಅದರ ಅನುಭವಕ್ಕಾಗಿ ಸ್ತ್ರೀ ಶೂದ್ರಾದಿ ಶರೀರಗಳುಂಟಾಗಿದ್ದರೂ ಅವರು ಸುಪ್ತ ಪ್ರಬುದ್ಧ ನ್ಯಾಯದಿಂದ (ಸುಪ್ತ ಪ್ರಬುದ್ಧ ನ್ಯಾಯವೆಂದರೆ? ನಿದ್ರೆಯನ್ನು ಮಾಡುವದಕ್ಕೆ ಮೊದಲು ಒಂದು ಕಾರ್ಯವನ್ನು ಮಾಡುವ ಮನುಷ್ಯನಿಗೆ ಅದು ನಿದ್ರಾನುಭವದಲ್ಲಿ ವಿಚ್ಛಿನ್ನವಾದರೂ ನಿದ್ರೆಯನ್ನು ಬಿಟ್ಟು ಜಾಗ್ರದ್ದಶಾಪನ್ನನಾದಮೇಲೆ ಮೊದಲು ತಾನು ಮಾಡುತಲಿದ್ದ ಕಾರ್ಯ ಜ್ಞಾಪಕದಿಂದ ಅದನ್ನೆ ಮಾಡುತಲಿರುವುದೆ.) ಮಧ್ಯೇ ವಿಚ್ಛಿನ್ನವಾದ ಪೂರ್ವಜ್ಞಾನ ವಾಸನೆಯನ್ನು ಸಂಪಾದಿಸಿಕೊಂಡು ಉಪಾಸನ ಪೂರ್ತಿಯನ್ನು ಮಾಡಿಕೊಳ್ಳುವರು. ಆದರೆ ವಿದುರ ಧರ್ಮವ್ಯಾಧರೆ ಮೊದಲಾದ ನಾಲ್ಕನೆ ವರ್ಣದಲ್ಲಿ ಹುಟ್ಟಿದವರಿಗೆ ಇತಿಹಾಸ ಪುರಾಣಾದಿಗಳಲ್ಲಿ ಗುರೂಪಸದನಾ ದ್ಯೌಪನಿಷದ ಬ್ರಹ್ಮವಿದ್ಯೆ ಯಲ್ಲಿ ಅಧಿಕಾರವನ್ನು ಹೇಳಲಿಲ್ಲವೊ? ಎಂದರೆ ಭುಕ್ತ ಶಿಷ್ಟವಾದ ಕರ್ಮಲೇಶದಿಂದ ಜುಗುಪ್ಸಿತವಾದಜಾತಿ ಸಂಸರ್ಗವುಳ್ಳ ಇಂತಹ ಮಹನೀಯರ ವಿಷಯದಲ್ಲಿ ಅವರವರ ವರ್ಣಾಶ್ರಮಗಳಿಗೆ ಯೋಗ್ಯಗಳಾದ ಸಾಮಾನ್ಯ ಧರ್ಮ

ಗಳನ್ನೇ ಅಂಗವಾಗಿ ವುಳ್ಳ ಉಪಾಸನದಲ್ಲಿ ಅಧಿಕಾರವು ಹೇಳಲ್ಪಟ್ಟಿರುವುದು. ಅಲ್ಲದೆ ಇವರಿಗೆ ಈ ಜನ್ಮದಲ್ಲಿಯೇ ಅಗ್ನಿ ವಿದ್ಯಾ ಸಾಪೇಕ್ಷವಾದ ಉಪಾಸನಾರಂಭವು ಇಲ್ಲವು. ಅನು ಮೊದಲೆ ಇವರಿಗೆ ಸಿದ್ಧಿಸಿರುವುದರಿಂದ ಕೇವಲ ಧ್ಯಾನಾದಿ ರೂಪವಾದ ಉಪಾಸನಾವಸಾನವು ಸರ್ವಶರೀರದಲ್ಲಿಯೂ ಆಗಬಹುದು. ಈ ಅರ್ಥವನ್ನು ಮಹರ್ನಿಯಾದ ಶೌನಕರೂ ಶ್ರೀವಿಷ್ಣುಧರ್ಮದ ೧೦೦ನೇ ಅಧ್ಯಾಯದಲ್ಲಿ "ಧರ್ಮವ್ಯಾಧಾದಯೋಪ್ಯನ್ಯೇ ಪೂರ್ವಾಭ್ಯಾಸಾಜ್ಜುಗುಪ್ಸಿತೆ | ವರ್ಣಾವರತ್ವೇ ಸಂಪ್ರಾಪ್ತಾಸ್ಸಂಸಿದ್ಧಿಂ ಶ್ರಮಣೀಯಥಾ" ಎಂದು ಈ ಅರ್ಥವನ್ನು ಹೇಳಿರುತ್ತಾರೆ.

(ಧರ್ಮವ್ಯಾಧರೆ ಮೊದಲಾದ ಇನ್ನೂ ಕೆಲವು ಉಪಾಸಕರು ಪ್ರಾಚೀನ "ಕರ್ಮಶೇಷಗಳಿಂದ' ನಿಹೀನವಾದ ವರ್ಣದಲ್ಲಿ ಹುಟ್ಟಿದರೂ ಪೂರ್ವಾಭ್ಯಾಸ ಬಲದಿಂದ ಹೇಗಾದರೆ ಶಬರಿಯು ಸಿದ್ಧಿಯನ್ನು ಹೊಂದಿದಳೊ ಅದರಂತೆ ಉಪಾಸನ ಸಿದ್ಧಿಯನ್ನು (ಮೋಕ್ಷವನ್ನು) ಹೊಂದಿರುವರೆಂದು ಈ ಶ್ಲೋಕಾರ್ಥವು)

ಸುಪ್ತ ಪ್ರಬುದ್ಧ ನ್ಯಾಯದಿಂದ ಪೂರ್ವಜ್ಞಾನ ವಾಸನೆಯುಳ್ಳ ವಿದುರ ಧರ್ಮ ವ್ಯಾಧಾದಿಗಳ ವಿಷಯದಲ್ಲಿ ಈ ವಿಷಯವೇನೂ ವ್ಯವಸ್ಥಿತವಾಗಿರುವುದು. ಪೂರ್ವ ಜ್ಞಾನೋತ್ಪತ್ತಿ ಯಿಲ್ಲದವರಿಗೂ ಕೂಡ ಕ್ರಮವಾಗಿ ಸಿದ್ಧಿಸುವ ಮುಖ್ಯ ಭಕ್ತಿಯು ಆರಂಭಭೂತವಾದ ಭಗವತ್ಸ್ಮರಣನಾಮ ಸಂಕೀರ್ತನ ಶ್ರವಣಾದಿ ವ್ಯಾಪಾರಗಳು ನಿಷೇಧಿಸಲ್ಪಡಲಿಲ್ಲವು. . ಧರ್ಮ ಪ್ರಣೇತೃಗಳಾದ ಸ್ಮೃತಿಕರ್ತರು ಅಹಿಂಸಾ ಸತ್ಯ ಶೌಚ ಪರೋಪಕಾರ ಮಾತಾಪಿತೃ ಶುಶ್ರೂಷಣಾದಿ ಮೊದಲಾದವುಗಳನ್ನು ಬ್ರಾಹ್ಮಣನೇ ಮೊದಲಾದ ಚಂಡಾಲಪರ್ಯಂತರಾದ ಸರ್ವರಿಗೂ ಸಮಾನವಾದ ಧರ್ಮಗಳೆಂಬದಾಗಿ ನೆನೆಸಿರುವರು.

ಒಂದುಕಾಲದಲ್ಲಿ ಭಗವನ್ನಾಮ ಸಂಕೀರ್ತನವನ್ನು ಮಾಡುವುದಕ್ಕೆ ತಾನು ನಿಷೇಧಿಸಲ್ಪಟ್ಟರೂ ಅಂತಹ ವೇಳೆಯಲ್ಲಿ ಬೇರೆ ಒಬ್ಬರು ಭಗವನ್ನಾಮ ಸಂಕೀರ್ತನವನ್ನು ದೂರದಲ್ಲಿ ಮಾಡುತ್ತಿದ್ದರೂ ಅಂತಹ ನಾಮ ಸಂಕೀರ್ತನವನ್ನು ಕೇಳುವುದರಿಂದಲೂ ಅದರ ಸಂಬಂಧ ಉಂಟಾಗುವುದು. "ಧರ್ಮಶ್ಶ್ರುತೋವಾ ದೃಷ್ಟೋವಾ ಕಥಿತೋವಾ ಕೃತೋಪಿವಾ | ಅನುಮೋದಿತೋವಾ ರಾಜೇಂದ್ರ ಪುನಾತಿ ಪುರುಷಂ

ಸದಾ" ಎಂಬದಾಗಿ ಮಹಾಭಾರತ ಆಶ್ವಮೇಧಿಕ ಪರ್ವದಲ್ಲಿ ೯೪ನೇ ಅಧ್ಯಾಯದಲ್ಲಿ ಈ ಅರ್ಥವು ಹೇಳಲ್ಪಟ್ಟಿರುವುದು.

(ಶ್ರೇಯಸ್ಸಾಧನವಾದ ಧರ್ಮವು ಕಿವಿಯಿಂದ ಕೇಳಲ್ಪಟ್ಟರೂ ಕಣ್ಣಿನಿಂದ ನೋಡಲ್ಪಟ್ಟರೂ ಅನ್ಯರು ಮಾಡಿರುವ ಧರ್ಮವು ಬಾಯಿಯಿಂದ ಹೇಳಲ್ಪಟ್ಟರೂ ತನ್ನಿಂದ ಮಾಡಲ್ಪಟ್ಟರೂ ಅನ್ಯರು ಮಾಡುವುದನ್ನು ಅನುಮೋದಿಸಿದರೂ ಇಂತಹ ಶ್ರವಣಾದ್ಯಾಸಕ್ತನಾದವನನ್ನು ಯಾವಾಗಲೂ ಪಾವನಮಾಡುವುದೆಂದೀ ಶ್ಲೋಕಾರ್ಥವು.)

ವಿಶೇಷವಾಗಿ ಭಗವದ್ಧರ್ಮಕ್ಕೆ ಇಂತಹ ಶಕ್ತಿ ವಿಶೇಷ ಉಂಟೆಂಬುವುದು "(೧) ಉದ್ಘೋಷಿತಃ ಪೂಜಿತೋವಾ ದೃಷ್ಟೋವಾ ನಮಿತೋಪಿವಾ। ಪ್ರಸಹ್ಯ ಹರತೆಪಾಪಂ ಕೋನಸೇವೇದ್ಧರಿಂತತಃ ॥ ಕೀರ್ತಿತ ಸಂಸ್ಮೃತೋಧ್ಯಾತಃ ಪೂಜಿತಸ್ಸತ್ಕೃತಸ್ತಥಾ । ಐಹಿಕಾಮುಷ್ಮಿಕೀಂ ರಕ್ಷಾಂ ಕರೋತಿ ಭಗವಾನ್ಹರಿಃ ॥ ಶೃಣ್ವಂತಿಯೇವೈ ಪಠಸ್ತಥಾನ್ಯೇ ಪಶ್ಯಂತಿ-ಯೇವಾ ಮಿರಯಂತಿ" (ವಿ॥ ಧ॥ ೯೪ನೆ ಅಧ್ಯಾ.) ಇತ್ಯಾದಿಗಳಲ್ಲಿ ಸ್ಫುಟವಾಗುವುದು.

(೧) ಘಟ್ಟಿಯಾಗಿ ಕೂಗಿ ಭಗವನ್ನಾಮಗಳನ್ನು ಹೇಳಿದರೂ ಅಥವಾ ಪರಮಾತ್ಮನು ಪೂಜಿಸಲ್ಪಟ್ಟರೂ ಕಾಣಲ್ಪಟ್ಟರೂ ಸೇವಿಸಲ್ಪಟ್ಟರೂ ಬಲಾತ್ಕಾರವಾಗಿ ತಾನೇ ಇಂತವರ ಪಾಪಗಳನ್ನು ಅಪಹರಿಸುವನು. ಆದಕಾರಣ ಇಂತಹ ಹರಿಯನ್ನು ಯಾರು ತಾನೇ ಸೇವಿಸಲಾರರು.

(೨) ಭಗವನ್ನಾಮವು ಕೀರ್ತನ ಮಾಡಲ್ಪಟ್ಟರೂ ಪರಮಾತ್ಮನು ಸ್ಮರಿಸ (ನೆನೆಯ) ಲ್ಪಟ್ಟರೂ ಸತ್ಕರಿಸಲ್ಪಟ್ಟರೂ ಈ ಪ್ರಕಾರವಾಗಿ ಸ್ಮರಣಾದಿಗಳನ್ನು ಮಾಡತಕ್ಕವರಿಗೆ ಐಹಿಕಾಮುಷ್ಮಿಕರೂಪವಾದ ರಕ್ಷಣವನ್ನು ಆಶ್ರಿತದೋಷಹರನಾದ ಭಗವಂತನು ಮಾಡುವನು.

(೩) ಬಬ್ಬನು ಭಗವನ್ನಾಮಗಳನ್ನು ಪಠನಮಾಡುವಾಗ ಯಾರಾದರೆ ಆದರಿಂದ ಕೇಳುತ್ತಾರೆಯೊ; ಈ ಪ್ರಕಾರವೇ ಯಾರಾದರೆ ಭಗವದ್ದಿವ್ಯಮಂಗಳ ವಿಗ್ರಹವನ್ನು ನೋಡುತ್ತಾರೆಯೊ; ಯಾರಾದರೆ ನನ್ನ ಗುಣಗಳನ್ನ ವರ್ಣಿಸುತ್ತಾರೆಯೊ, ಎಂದು [illegible] ಪ್ರಮಾಣಾರ್ಥಗಳು.)

ಮತ್ತು ಇತಿಹಾಸ ಪುರಾಣಾದಿಗಳಲ್ಲಿ ಚಂಡಾಲಾದಿಗಳಿಗೂ ಕೂಡ ಭಗವದ್ಭಜನದಲ್ಲಿ ಅಧಿಕಾರವು ಹೇಳಲ್ಪಟ್ಟಿರುವುದು. "ನಮಇತ್ಯೇವ ಯೊಬ್ರೂಯಾನ್ಮದ್ಭಕ್ತ ಶ್ರದ್ಧಯಾನ್ವಿತಃ । ತಸ್ಯಾಕ್ಷಯೋ ಭವೇ

ಶ್ಲೋಕಶ್ಶ್ವಪಾಕಸ್ಯಾಪಿನಾರದ" ಎಂಬದಾಗಿ ವೈಷ್ಣವಧರ್ಮದಲ್ಲಿ ಭಗವದ್ಭಜನ ನಿಷ್ಠನಾದ ಸಾಮಾನ್ಯ ಜಾತೀಯನನ್ನು ಕೂಡ ಬಹು ಮಾನಿಸಬಹುದೆಂತಲೂ ಅವನಿಗೆ ಮೋಕ್ಷಪ್ರಾಪ್ತಿ ಯುಂಟೆಂತಲೂ ಹೇಳುವ ವಚನಗಳನ್ನು ಕಾಣಬಹುದು. ಈ ಪ್ರಕಾರವಾಗಿ ಈ ವಿಷ ಯವು ವ್ಯವಸ್ಥಿತವಾಗಿರುವುದರಿಂದ ಶಾಸ್ತ್ರದಲ್ಲಿ ಸ್ವಲ್ಪವೂ ವಿರೋಧ ವಿಲ್ಲವು.

ಇಲ್ಲಿ "ಸದಾ" 'ಸರ್ವಕಾಲದಲ್ಲಿಯೂ, ಎಂಬದಾಗಿ ಹೇಳಿರುವುದ ರಿಂದ ಈ ಕಾಲದಲ್ಲಿ ಈ ದೇಶದಲ್ಲೆಂಬ ಕಾಲದೇಶ ನಿರ್ಬಂಧವು ಭಗವ ದ್ಭಜನಕ್ಕೆ ಇಲ್ಲವೆಂದು ಸೂಚಿತವಾಗುವುದು. ಇದರಿಂದ ಅಯನವು, ಋತು, ಮಾಸ, ಪಕ್ಷ, ನಕ್ಷತ್ರ, ಮುಹೂರ್ತಾದಿಗಳೆಂಬ ಕಾಲ ವಿಶೇಷ ವನ್ನೂ; ಈ ಪ್ರದೇಶದಲ್ಲೆಂಬ ದೇಶ ವಿಶೇಷವನ್ನೂ ಅಪೇಕ್ಷಿಸುವ ಇತರ ಧರ್ಮಗಳಿಗಿಂತಲೂ ಈ ಭಗವದ್ಭಜನ ರೂಪವಾದ ಧರ್ಮಕ್ಕೆ ಆಧಿಕ್ಯವು ಹೇಳಲ್ಪಟ್ಟಿತೆಂದರಿಯಬೇಕು. ಈ ವಿಷಯದಲ್ಲಿಯೂ ಪ್ರಮಾಣಗಳು ಅನೇಕಗಳಿರುವುವು. ಆಚಾರಹೀನನಾಗಿ ಭಜಿಸಿದನೆಂದು ಇವನ ಸಂಸ ರ್ಗದಿಂದ ಪರಮಾತ್ಮನಿಗೆ ಒಂದು ಕೊರತೆಯಾದರೂ, ಇವನ ಶುದ್ಧಿಯೇ ಮೊದಲಾದ ಸಹಾಯವು ನ್ಯೂನವಾಯಿತೆಂದು ಅನುಗ್ರಹಿಸುವುದರಲ್ಲಿ ಅಸಾಮರ್ಥ್ಯವಾದರೂ ಉಂಟಾಗಲಾರದಷ್ಟೆ. ಶರಣ್ಯನು ತನ್ನ ಸಂಬಂ ಧಕ್ಕೆ ಅನರ್ಹನಾದವನಲ್ಲಿಯೂ ಕೂಡ ಅವನನ್ನು ಪರಿಶುದ್ಧನನ್ನಾಗಿ ಮಾಡಿಸಿ ತನ್ನ ಪ್ರಾಪ್ತಿಗೆ ಅರ್ಹನನ್ನಾಗಿ ಮಾಡಿಕೊಂಡು ಸ್ವೀಕರಿ ಸುವ ಸ್ವಭಾವವುಳ್ಳವನಷ್ಟೆ? ಆದುದರಿಂದಲ್ಲವೆ ಅವನನ್ನು ಭಜನಮಾಡು ವುದರಲ್ಲಿ ಅಶಕ್ತ್ಯಾದಿಗಳಿಲ್ಲವೆಂಬಿದೇ ಮೊದಲಾದ "ಚಕ್ರಾಯುಧಸ್ಯ ನಾಮಾನಿ ಸದಾಸರ್ವತ್ರಕೀರ್ತಯೇತ್ | ನಶೌಚಂ ಕೀರ್ತನೇತಸ್ಯ ಪವಿ ತ್ರಂಭಗವಾನ್ಹರಿಃ ‖ ಪ್ರಾತರ್ದೇವೇತಿ ಕೃಷ್ಣೇತಿ ಗೋವಿಂದೇತಿಚ ಜ ಲ್ಪತಾಂ | ಮಧ್ಯಾಹ್ನೇಚಾಪರಾಹ್ಣೇಚ ಕೋವಸಾದಸ್ಸ ಉಚ್ಯತಾಂ" ಇಂತಹ ವಚವಗಳು ಪ್ರವರ್ತಿಸಿದವು.

(ಚಕ್ರಾಯುಧನಾದ ಶ್ರೀಮಹಾವಿಷ್ಣುವಿನ ನಾಮಗಳನ್ನು ಯಾವಾಗಲೂ ಎಲ್ಲೆಲ್ಲಿ ಯೂ ಕೀರ್ತನಮಾಡಬಹುದು. ಈ ರೀತಿಯಾಗಿ ಕೀರ್ತನಮಾಡುವಂತವನಿಗೆ ಅಶುದ್ಧಿ ಇಲ್ಲವು ಸಮಸ್ತ ಪಾಪಗಳನ್ನೂ ಅಪಹರಿಸುವ ಅವನು ಪರಮಪವಿತ್ರನಲ್ಲವೊ,

ಪ್ರಾತಃಕಾಲದಲ್ಲಿ ದೇವನೆಂತಲೂ ಕೃಷ್ಣನೆಂತಲೂ ಗೋವಿಂದನೆಂತಲೂ ಹೇಳು ವಂತವರಿಗೆ ಮಧ್ಯಾಹ್ನದಲ್ಲಿಯೂ ಅಪರಾಹ್ನದಲ್ಲಿಯೂ ಪ್ರಯಾಸವೇನಿರುವುದು ಹೇಳು. ಎಂದೀ ಶ್ಲೋಕಾರ್ಥವು )

ಆದರೆ "ಸತ್-ಅಸತ್" ಎಂಬದಾಗಿ ಅಧಿಕಾರಿಗಳ ತಾರತಮ್ಯವು ಏತಕ್ಕೆ ಉಂಟಾಯಿತು ? ಎಂದರೆ; ಉಚ್ಚ ನೀಚಾಧಿಕಾರಿಗಳಿಗೆ ಪರ ಸ್ಪರ ಸಂಶ್ಲೇಷ ಉಂಟಾಗಿ ಅದರಿಂದ ಧರ್ಮವು ಅತ್ಯಂತವಾಗಿ ನಾಶ ಹೊಂದುವುದಾಗಿರುವುದರಿಂದ ಅದನ್ನು ಕಾಯುವುದಕ್ಕಾಗಿ ಈ ಅಧಿ ಕಾರಭೇದವೆಂದರಿಯಬೇಕು.

ಸಂಕೀರ್ತನವೇ ಮೊದಲಾದದ್ದು ಸ್ವರೂಪತಃ ಅಲ್ಪವಾಗಿದ್ದರೂ ಫಲದಲ್ಲಿ ಅಧಿಕವಾಗಿಯೇ ಇರುವುದು. ಈ ಪ್ರಕಾರವೆ ಶ್ರೀಗೀತೆಯು "ಸ್ವಲ್ಪಮಪ್ಯಸ್ಯಧರ್ಮಸ್ಯ ತ್ರಾಯತೆ ಮಹತೋಭಯಾತ್" ಎಂದು ಹೇಳಿತು.

(ಧರ್ಮ ಸ್ವರೂಪವು ಸ್ವಲ್ಪವಾಗಿದ್ದರೂ ಇದು ಮಹಾಭಯಗಳನ್ನು ನಿವೃತ್ತಿಮಾ ಡುವುದೆಂದೀ ವಚನಾರ್ಥವು

ಇತರ ಧರ್ಮಗಳಂತೆ ಇದನ್ನಾರಂಭಿಸಿ ಕೊನೆಯಲ್ಲಿ ಬಿಟ್ಟುಬಿಡು ವುದರಿಂದ ಯಾವ ಅಪಾಯವೂ ಇಲ್ಲವು. ಈ ವಿಷಯದಲ್ಲಿ "(೧) ನೇ ಹಾಭಿ ಕ್ರಮನಾಶೋಸ್ತಿ ‖ ನಮೇಭಕ್ತಃ ಪ್ರಣಶ್ಯತಿ ‖ (೨) ಯಂಪ್ರ ಣಮ್ಯ ನಸೀದತಿ ‖ (೩) ನವಾಸುದೇವಂ ಪ್ರಣಿಪತ್ಯಸೀದತಿ ‖ (೪) ಜ ನಾರ್ದನಂ ಪ್ರಣಿಪತಿತೋ ನಸೀದತಿ" ಇತ್ಯಾದಿ ಗೀತಾದಿವಾಕ್ಯಗಳುಂ ಟಾಗಿರುವುವು.

(೧) ಭಗವದ್ಧರ್ಮಾನುಷ್ಠಾನವನ್ನು ಆರಂಭಮಾಡಿ ಪೂರ್ತಿಯಾಗದ ಮಾತ್ರದಲ್ಲಿ ಯೇ ಯಾವ ಅಪಾಯವೂ ಇಲ್ಲವು ; ಇದರ ಸ್ವಲ್ಪಾಂಶ ವನುಷ್ಠಿತವಾದರೂ ಮಹಾ ಭಯಗಳಿಂದ ರಕ್ಷಿತನಾಗುವನು. ನನ್ನ ಭಕ್ತನು ನಾಶಹೊಂದಲಾರನು. (೨) ಯಾವ ವಾಸುದೇವನನ್ನು ನಮಸ್ಕರಿಸಿದರೆ ದುಃಖಿಸಲಾರನೊ. (೩) ಶ್ರೀವಾಸುದೇವನನ್ನು ನಮಸ್ಕರಿಸಿದರೆ ಪ್ರಯಾಸವನ್ನು ಹೊಂದಲಾರನು. (೪) ಜನಾರ್ದನನನ್ನು ನಮಸ್ಕ ರಿಸುವಂತವನು ತಾಪತ್ರಯದಲ್ಲಿ ಸಿಕ್ಕಲಾರನು. ಎಂದೀ ಶ್ಲೋಕಾರ್ಥವು.)

ಆದರೆ ಈ ವಚನಗಳೆಲ್ಲವು ಅರ್ಥವಾದವಾಗಿರಬಾರದೊ ? ಎಂದು ಶಂಕಿಸಬಾರದು. ಇದು ಅತಿವಾದವಾಗಿದ್ದರೇ ತಾನೆ ಇಂತಹ ಶಂಕೆಯುಂ ಟಾಗಬಹುದು. ಮತ್ತು ಅರ್ಥವಾದ ಪದಗಳಿಗೂ ಕೂಡ ಪ್ರಬಲ

ಗಳಾದ ಪ್ರಮಾಣಗಳೊಡನೆ ವಿರೋಧವಿಲ್ಲದೇ ಇರುವಾಗ ಸ್ವಯಂಪ್ರಮಾಣವಾದ ಅವುಗಳಿಗೆ ಅರ್ಥವಿಲ್ಲವೆಂದು ಹೇಳುವುದು ಸಾಹಸಮಾತ್ರವಲ್ಲದೇ ಅನ್ಯಾಯವೆಂತಲೂ ಹೇಳಬಹುದು.

ಆದರೆ ಅತ್ಯಂತಮಹತ್ತಾಗಿಯೂ ಮಾಡಲಸಾಧ್ಯವಾಗಿಯೂ ಇರುವ "ತಪಸ್ಸು ‖ ಸಮಾಧಿ" ಎಂದು ಹೇಳಲ್ಪಡುವ ಮಹಾಧರ್ಮಗಳಿಂದ ಸಾಧಿಸಬೇಕಾದ ತತ್ವಜ್ಞಾನವನ್ನು ಕೇವಲ ವಾಗ್ವ್ಯಾಪಾರ ರೂಪವಾದ ಭಗವನ್ನಾಮ ಸಂಕೀರ್ತನ ಮಾತ್ರದಿಂದ ಸಾಧಿಸಬಹುದೆಂದು ಹೇಳುವುದು ಅತಿವಾದವಲ್ಲವೊ? ಇದರಿಂದ ಮಹತ್ತಾದಸಾಧನಗಳನ್ನು ಉಪದೇಶಿಸುವಶಾಸ್ತ್ರಗಳು ನಿರರ್ಥಕಗಳೆಂಬದಾಗಿ ಹೇಳಲ್ಪಡುವುವಲ್ಲದೆ ಶಾಸ್ತ್ರಪ್ರಮಾಣಗಳೊಡನೆಯೂ ವಿರೋಧಿಸಲಾರದೊ? ಎಂಬದಾಗಿ ಒಂದು ಆಕ್ಷೇಪ ವುಂಟಾಗಬಹುದು ಆದರೆ ಇದು ಭಗವತ್ಪ್ರಭಾವವನ್ನು ತಿಳಿಯದೆ ಹೇಳುವ ಆಕ್ಷೇಪವಾಗಿರುವುದರಿಂದ ಆದರಿಸತಕ್ಕದ್ದಲ್ಲವು. ಏತಕ್ಕೆಂದರೆ? ಭಗವನ್ನಾಮ ಸಂಕೀರ್ತನವು ಕೇವಲ ಲಘುವಾದ ವ್ಯಾಪಾರವಾಗಿದ್ದರೂ ಹೊರುವುದಕ್ಕೆ ಅಸಾಧ್ಯವಾದ ಭಾರವನ್ನು ಹೋರುವಂತಹ ಶಕ್ತಿಯುಳ್ಳದ್ದೆಂತಲೇ ತಿಳಿಯಬೇಕು. ಇದರಿಂದ ಗುರೂಪಾಯ ವಿಧಾಯಕ ಶಾಸ್ತ್ರಗಳು ನಿಷ್ಪ್ರಯೋಜನಗಳೆಂತಲೂ ತಿಳಿಯಬಾರದು; ಅವು ಶಕ್ತಿಯುಳ್ಳ ಅಧಿಕಾರಿಗಳ ಅನುಷ್ಠಾನಕ್ಕೆ ಪ್ರಾಪ್ತವಾಗುವುವು. ಭಗವನ್ನಾಮ ಸಂಕೀರ್ತನರೂಪವಾದ ಲಘೂಪಾಯವೊ ಎಂಥರೆ ಶಕ್ತಿಇದ್ದರೂ ಶಕ್ತಿಇಲ್ಲದಿದ್ದರೂ ಭಗವಚ್ಚರಣಾರವಿಂದಗಳಲ್ಲಿ ಅಸಾಧಾರಣವಾದ ರುಚಿಯುಳ್ಳ ಭಾಗ್ಯಾಧಿಕರಿಗೆ ಅನುಷ್ಠೇಯವಾಗಿರುವುದು ಗುರೂಪಾಯಕ್ಕೂ ಭಗವತ್ಪ್ರಸಾದವೇ ಫಲಪ್ರದವಾದರೆ ಲಘೂಪಾಯಕ್ಕೂ ಅದೇ ಫಲ ಹೇತುವಾಗುವುದಕ್ಕೆ ಅಕ್ಷೇಪವೇನಿರುವುದು. ಆದರೆ ಗುರೂಪಾಯದಲ್ಲಿ ಸ್ವರೂಪ ಪರಿಕರಾದಿವ್ಯಾಪಾರಗಳು ಅನೇಕಗಳಾಗಿಯೂ ಅನುಷ್ಠಾನದಲ್ಲಿ ಅತ್ಯಂತ ಶ್ರಮವೂ ಇರುವುದರಿಂದ ಇಂತಹ ಉಪಾಸಕರಿಗೆ ಪರಮಾತ್ಮನು ಫಲಪ್ರದನಾಗುವನೆಂದು ಹೇಳಬಾರದೊ? ಎಂದರೆ ಇದರಲ್ಲಿಯೂ ಹೃದಯವು ಶುದ್ಧವಾಗಿರುವುದೆಂಬ ವಿಶೇಷವನ್ನು ಕಂಡು ಪರಮಪುರುಷನು ಪ್ರಸನ್ನನಾಗುವನು. ಈ ಪ್ರಕಾರವೆ (೧) "ಸಮ್ಯಗ್ವ್ಯವಹಿತೋಹಿಸಃ ‖ ಪತ್ರಂ ಪುಷ್ಪಂ ಫಲಂತೋಯಂ ‖ ಯೇನವಿತ್ತೈರ್ನವಿಭವೈರ್ನ

ವಾಸೋಭಿರ್ನ ಭೂಷಣೈಃ | ತೋಷ್ಯತೇ ಹೃದಯೇನೈವ ಕಸ್ತಮಿಶಂ ನಪೂಜಯೇತ್ " ಇತ್ಯಾದಿ ಭಗವದ್ವಾಕ್ಯಾದಿಗಳೂ; (೨) "ದದ್ಯಾತ್ಪುರುಷಸೂಕ್ತೇನ ಯಃ ಪುಷ್ಪಾಣ್ಯಪಏವವಾ | ಅರ್ಚಿತಂಸ್ಯಾ ಜ್ಜಗದಿದಂ ತೇನ ಸರ್ವಂ ಚರಾಚರಂ" ಎಂಬವ್ಯಾಸ ಸ್ಮೃತಿ ವಚನವೂ; (೩) "ಪೃಥಿವೀಂ ರತ್ನಸಂಪೂರ್ಣಾಂ ಯಃ ಕೃಷ್ಣಾಯ ಪ್ರಯಚ್ಛತಿ | ತಸ್ಯಾಪ್ಯನ್ಯಮನ ಸ್ಕಸ್ಯ ಸುಲಭೋನ ಜನಾರ್ದನಃ " ಎಂಬ ವಿಷ್ಣು ಧರ್ಮವಚನವೂ ಇರುವುದು.

(೧) (ಅವನು ಬಳ್ಳೀ ನಿಶ್ಚಯವುಳ್ಳವನಲ್ಲವೊ. (೨) ಪತ್ರವೊ ಪುಷ್ಪವೊ ಫಲವೊ ಯಾವದನ್ನೂ ಸ್ವೀಕರಿಸುವನು ಯಾವನಾದರೆ ಧನದಿಂದಲಾದರೂ ವಿಭವದಿಂದಲಾದರೂ ಆಭರಣಗಳಿಂದಲಾದರೂ ಸಂತೋಷಿಸದೆ ಕೇವಲ ಹಾರ್ದವಾದ ನಾಮಸ್ಮರಣಾದಿ ರೂಪಗಳಾದ ವ್ಯಾಪಾರಗಳಿಂದಲೆ ಸಂತೋಷಿಸುವನೊ; ಅಂತಹ ಸುಲಭಸೇವ್ಯನಾದ ಸ್ವಾಮಿಯನ್ನು ಯಾರುತಾನೆ ಪೂಜಿಸಲಾರರು.

(೨) ಪುರುಷಸೂಕ್ತದಿಂದ ಯಾವನಾದರೆ ಸ್ವಾಮಿಗೆ ಪುಷ್ಪವನ್ನಾದರೂ ತೀರ್ಥವನ್ನಾದರೂ ಸಮರ್ಪಿಸುವನೊ, ಅಂತವನಿಂದ ಚರಾಚರಾತ್ಮಕವಾದ ಈ ಪ್ರಪಂಚವೆಲ್ಲವೂ ಅರ್ಚಿಸಲ್ಪಟ್ಟಂತೆ ಆಗುವುದು.

(೩) ರತ್ನಸಂಪೂರ್ಣವಾದ ಭೂಮಿಯನ್ನು ಯಾವನು ಶ್ರೀಕೃಷ್ಣನಿಗೆ ಸಮರ್ಪಣೆಮಾಡಿದರೂ ಅಂತವನು ಶ್ರೀಕೃಷ್ಣನಿಗೆ ಸಮಾನವಾಗಿ ದೇವತಾಂತರಗಳನ್ನು ತಿಳಿದು ಅವರಲ್ಲಾಸಕ್ತನಾಗಿದ್ದರೆ ಅಂತವರಿಗೆ ಶ್ರೀಜನಾರ್ದನನು ಸುಲಭಸೇವ್ಯನಾಗಲಾರನು. ಇದರಿಂದ ಭಕ್ತಿಯೊಡನೆ ಪತ್ರ ಪುಷ್ಪಾದಿಗಳನ್ನು ಸಮರ್ಪಿಸಿದವರಿಗೂ ಕೃಷ್ಣನು ಸುಲಭನೆಂತಲೂ ಸಮರ್ಪಿಸುವ ದ್ರವ್ಯವು ಗುರುತರವಾಗಿದ್ದರೂ ಹಾರ್ದವಾದ ಭಕ್ತಿಶೂನ್ಯನ ವಿಷಯದಲ್ಲಿ ಶ್ರೀಶನು ಸುಲಭನಾಗಲಾರನೆಂತಲೂ ಬೋಧಿತವಾಗುವುದು. ಎಂದೀ ಮೇಲ್ಕಂಡ ಪ್ರಮಾಣಾರ್ಥವು.)

ಧರ್ಮಾ ಧರ್ಮಗಳಿಗೆ ಅಭಿಪ್ರಾಯ ಭೇದವು ಕಾರಣವಲ್ಲದೆ ಕ್ರಿಯಾ ವಿಶೇಷವು ಕಾರಣವಾಗಲಾರದು ಈ ಪ್ರಕಾರವೇ (೧) "ಭಾವಶುದ್ಧಿರ್ಮನುಷ್ಯಾಣಾಂ ಪ್ರಮಾಣಂ ಸರ್ವವಸ್ತುಷು | ಅನ್ಯಥಾಽಽಲಿಂಗ್ಯತೆ ಕಾಂತಾ ಸ್ನೇಹೇನ ದುಹಿತಾಽನ್ಯಥಾ ॥ ತಪೋನಕಲ್ಕೋಧ್ಯಯನಂ ನಕಲ್ಕಃ ಸ್ವಾಭಾವಿಕೋ ವೇದವಿಧಿರ್ನ ಕಲ್ಕಃ | ಪ್ರಸಹ್ಯ ಚಿತ್ತಾಹರಣಂ ನಕಲ್ಕಸ್ತಾನ್ಯೇವ ಭಾವೋಪ ಹತಾನಿ ಕಲ್ಕಃ " ಎಂಬದಾಗಿ ಶ್ರೀವಿಷ್ಣುತತ್ವದಲ್ಲಿಯೂ, (೨) " ಗಂಗಾದಿ ತೀರ್ಥೇಷು ವಸಂತಿ ಮತ್ಸ್ಯಾ ದೇವಾಲಯೇ ಪಕ್ಷಿಸಂಘಾಶ್ಚ ನಿತ್ಯಂ | ಭಾವೋಜ್ಝಿತಾಸ್ತೇನಫಲಂ ಲಭಂತೇ ತಿ

ರಾಥನಿ ಪುಣ್ಯಾಯತನಾಶ್ಚ ಮುಖ್ಯಾಃ ॥ " ಎಂಬದಾಗಿ ಸ್ಥಲಾಂತರದಲ್ಲಿಯೂ ಹೇಳಲ್ಪಟ್ಟಿರುವುದು.

(೧) ಮನುಷ್ಯರಿಗೆ ಸಕಲವಸ್ತುಗಳಲ್ಲಿಯೂ ಹೃದಯಶುದ್ಧಿ ಯೊಂದೆ ಪ್ರಮಾಣಭೂತವಾಗಿರುವುದು. ತನ್ನ ಪ್ರಿಯಳಾದ ಪತ್ನಿಯನ್ನು ಒಂದು ವಿಧವಾದ ಸ್ನೇಹದಿಂದ ಆಲಿಂಗಿಸಿಕೊಳ್ಳುವನು ; ಮಗಳನ್ನು ಬೇರೊಂದು ವಿಧವಾದ ಸ್ನೇಹದಿಂದ ಆಲಿಂಗಿಸಿಕೊಳ್ಳುವನು. ತಪೋ ದೋಷಗಳು ದೋಷಗಳಾಗಲಾರವು ; ಅಧ್ಯಯನ ದೋಷವೂ ದೋಷವಾಗಲಾರದು ; ಸ್ವಾಭಾವಿಕವಾದ ವೇದವಿಧಿ ದೋಷಗಳೂ ದೋಷಗಳಾಗಲಾರವು ; ಬಲಾತ್ಕರಿಸಿ ಮನೋನಿಗ್ರಹವನ್ನು ಮಾಡುವಿಕೆಯೂ ದೋಷವಲ್ಲವು ಭಾವೋಪಹತವಾದ (ಅಭಿಪ್ರಾಯ ವೈಷಮ್ಯದಿಂದ ಬಂದ) ದೋಷವೇ ದೋಷವೆನ್ನಲ್ಪಡುವುದು.

(೨) ಗಂಗಾದಿ ತೀರ್ಥಗಳಲ್ಲಿ ಮತ್ಸ್ಯಗಳು ವಾಸಮಾಡುವುವು, ದೇವಸ್ಥಾನಗಳಲ್ಲಿ ಪಕ್ಷಿಸಮೂಹಗಳು ನಿತ್ಯವಾಗಿ ವಾಸಮಾಡುವುವು ; ಅವುಗಳಿಗೆ ಅಭಿಸಂಧಿ ಇಲ್ಲದೇ ಇರುವುದರಿಂದ ಫಲಪ್ರಾಪ್ತಿ ಇಲ್ಲವು ಆದುದರಿಂದ ತೀರ್ಥಗಳೂ ಪುಣ್ಯಕ್ಷೇತ್ರಗಳೇ ಮುಖ್ಯಗಳಲ್ಲವು ಎಂದೀ ಪ್ರಮಾಣಾರ್ಥವು )

ಇಷ್ಟು ಮಾತ್ರವಲ್ಲದೆ ಸರ್ವವನ್ನು ತಿಳಿದವನಾಗಿಯೂ ಅವಾಪ್ತಸಮಸ್ತಕಾಮನಾಗಿರುವುದರಿಂದ ಯಾವದೊಂದನ್ನೂ ಅಪೇಕ್ಷಿಸದವನಾಗಿರುವ ಪರಮಪುರುಷನು ಹೃದಯಶುದ್ಧಿ ಮಾತ್ರದಿಂದ ತೃಪ್ತನಾಗುತ್ತಾನೆಂಬುವುದು ಯುಕ್ತವಾಗಿಯೇ ಇರುವುದಷ್ಟೆ; ದೇಶಕಾಲಾದಿ ಸಹಕಾರಿ ಕಾರಣಗಳು ನ್ಯೂನವಾಗಿದ್ದರೂ ಪರಮಾತ್ಮನು ಸ್ವಲ್ಪಾಂಶವನ್ನು ಕೂಡ ಅಧಿಕವನ್ನಾಗಿ ಸ್ವೀಕರಿಸುವನೆಂಬೀ ವಿಷಯವೂ " ಧ್ಯಾಯನ್ ಕೃತೇಯಜನ್ ಯಜ್ಞೈಃ ತ್ರೇತಾಯಾಂ ದ್ವಾಪರೇಽರ್ಚಯನ್ | ಯದಾಪ್ನೋತಿ ತದಾಪ್ನೋತಿ ಕಲೌ ಸಂಕೀರ್ತ್ಯ ಕೇಶವಂ" ಎಂಬ ಪ್ರಮಾಣದಿಂದ ಸಿದ್ಧವಾಗುವುದು.

(ಕೃತಯುಗದಲ್ಲಿ ಧ್ಯಾನದಿಂದಲೂ, ತ್ರೇತಾಯುಗದಲ್ಲಿ ಯಜ್ಞಾದಿಕರ್ಮಗಳಿಂದಲೂ, ದ್ವಾಪರಯುಗದಲ್ಲಿ ಅರ್ಚನದಿಂದಲೂ ಮನುಷ್ಯನು ಯಾವ ಫಲವನ್ನು ಹೊಂದುವನೊ ಅಂತಹ ಫಲವನ್ನು ಕಲಿಯುಗದಲ್ಲಿ ಕೇಶವನನಾಮ ಸಂಕೀರ್ತನದಿಂದ ಹೊಂದುವನೆಂದು ತಾತ್ಪರ್ಯವು ಗುರೂಪಾಯ ಸಾಧ್ಯವಾದ ಫಲವನ್ನು ನಾಮಸಂಕೀರ್ತನ ರೂಪವಾದ ಲಘೂಪಾಯದಿಂದ ಪರಮಪುರುಷನು ಕೊಡಬೇಕಾದರೆ ಪರಮಾತ್ಮನು ಸ್ವಲ್ಪಾಂಶವನ್ನು ಕೂಡ ಅಧಿಕವನ್ನಾಗಿ ಭಾವಿಸುವಂತಹ ಸ್ವಭಾವವುಳ್ಳವನಾಗಬೇಕಷ್ಟೆ, ಎಂದು ಭಾವವು )

ಮತ್ತು ಒಳ್ಳೇ ಸ್ವಭಾವವುಳ್ಳ ಪ್ರಭುವು ಅತಿಕಷ್ಟದಶೆಯಲ್ಲಿಯೂ ಕೂಡ ನ್ಯಾಯದಿಂದಿರುವ ಮನುಷ್ಯನನ್ನು ಕಂಡರೆ ಪ್ರೀತಿಸು

ವುದೂ ಲೋಕಪ್ರಸಿದ್ಧ ವಷ್ಟೆ. ಆದುದರಿಂದ ಈ ಪ್ರಕಾರವಾಗಿ ಇದು ಅತ್ಯಂತ ಪ್ರಿಯವಾದ ವಿಷಯವಾಗಿರುವುದರಿಂದ ಸುಖದಿಂದ ಅನುಷ್ಠಿಸಲ್ಪಡತಕ್ಕದ್ದಾಗಿಯೂ, ದ್ರವ್ಯವ್ಯಯವೂ ದೇಹಾಯಾಸವೂ ಅನಪೇಕ್ಷಿತವಾಗಿರುವುದರಿಂದ ಸುಲಭವಾಗಿ ಮಾಡಲರ್ಹವಾಗಿಯೂ, ಸ್ವಲ್ಪ ಹಿಂದು ಮುಂದಾಗಿ ತನ್ನ ಸ್ವಾಮಿಯನ್ನು ಪ್ರತ್ಯಕ್ಷವಾಗಿ ನೋಡಿದಂತೆ ಕಂಡು ಅವನನ್ನು ಪ್ರೀತಿಸುವ ಭಾವನೆಯುಳ್ಳದ್ದಾಗಿರುವುದರಿಂದ ಆಕರ್ಷಕವಾಗಿಯೂ ( ಮನಸ್ಸನ್ನು ಎಳೆಯುವಂತಹ ಸ್ವಭಾವವುಳ್ಳದ್ದಾಗಿಯೂ) ಅತ್ಯಂತ ಲಘುವಾದ ಉಪಾಯವಾಗಿದ್ದುಕೊಂಡೆ ಸಹಿಸಲಶಕ್ಯವಾದ ಸಂಸಾರತಾಪವನ್ನು ಪರಿಹರಿಸುವದೆಂಬ ಮಹಾಫಲವುಳ್ಳದ್ದಾಗಿಯೂ, ಸ್ವಲ್ಪವಾದ ಪ್ರತ್ಯವಾಯವೂ ಇಲ್ಲದ್ದಾಗಿಯೂ, ಇದಕ್ಕೆ ಸರ್ವರೂ ಅಧಿಕಾರಿಗಳಾಗಬಹುದಾಗಿರುವುದರಿಂದ ಸಕಲ ಲೋಕಹಿತವಾಗಿಯೂ, ದೇಶಕಾಲಾವಸ್ಥಾದಿಗಳನ್ನು ಅಪೇಕ್ಷಿಸದೇ ಇರುವುದರಿಂದ ವ್ಯಾಜಾವಲಂಬನ ವಿಲ್ಲದೆ ಮಾಡತಕ್ಕದ್ದಾಗಿಯೂ, ವಿಷಯ ಪ್ರಭಾವದಿಂದ ತಡೆಯಿಲ್ಲದೆಯೂ ಇರುವುದೆಂಬೀ ಮೊದಲಾದ ಕಾರಣಗಳಿಂದಲೇನೆ ಶ್ರೀ ಭೀಷ್ಮರು ಇದನ್ನು ಶ್ರೇಷ್ಠವಾದ ಧರ್ಮವೆಂದು ಸಮ್ಮತಿಸಿರುತ್ತಾರೆ. ಈ ಅಭಿಪ್ರಾಯವನ್ನೇ ಇತರ ಮಹರ್ಷಿಗಳೂ "ಸರ್ವೇಷಾಮಪಿ ಧರ್ಮಣಾ ಮುತ್ತಮೊ ವೈಷ್ಣವೊವಿಧಿಃ | ರಕ್ಷತೇ ಭಗವಾನ್ವಿಷ್ಣು ರ್ಭಕ್ತಾನಾತ್ಮ ಶರೀರವತ್|| ಗೋವಿಂದ ಭಕ್ತ್ಯಭ್ಯಧಿಕಂ ಶ್ರೇಯಶ್ಚಾನ್ಯನ್ನ ವಿದ್ಯತೆ" ಇತ್ಯಾದಿಗಳಿಂದ ಸ್ವಮತವನ್ನಾಗಿ ಹೇಳಿರುತ್ತಾರೆ ||೮||

(ಸಮಸ್ತ ಧರ್ಮಗಳಿಗಿಂತಲೂ ವಿಷ್ಣು ಪ್ರೀತಿಕರ ಅಥವಾ ವಿಷ್ಣು ಸಂಬಧವಾದ ಆರಾಧನಾದಿ ರೂಪವಾದ ಧರ್ಮವು ಶ್ರೇಷ್ಠವು. ಇಂತಹ ಭಗವದಾರಾಧನ ರೂಪವಾದ ಭಕ್ತಿಯನ್ನು ಮಾಡತಕ್ಕ ಭಾಗವತರನ್ನು ಪರಮಪುರುಷನು ತನ್ನ ಶರೀರವನ್ನು ಕಾಪಾಡಿಕೊಳ್ಳುವಂತೆ ರಕ್ಷಿಸುವನು. ಗೋವಿಂದನ ವಿಷಯವಾಗಿ ಮಾಡತಕ್ಕ ಭಕ್ತಿಗಿಂತಲೂ ಅಧಿಕವಾದ ಶ್ರೇಯಸ್ಸನ್ನು ಕೊಡುವ ಬೇರೆ ಧರ್ಮವಿಲ್ಲವು. ಎಂದೀ ಪ್ರಮಾಣಾರ್ಥವು-

(ಶಂ||ಭಾ) "ಕೊಧರ್ಮ ಸ್ಸರ್ವಧರ್ಮಾಣಾಂ ಭವತಃ ಪರಮೋಮತಃ" ಎಂಬದಾಗಿ ಧರ್ಮರಾಜರು ಶ್ರೀಭೀಷ್ಮರನ್ನು ಕುರಿತು ಮಾಡಿದ (೫)ನೇ ಪ್ರಶ್ನೆಕ್ಕೆ ಇದರಿಂದ ಸಮಾಧಾನವನ್ನು ಹೇಳುತ್ತಾರೆ ಭಕ್ತಿಯಿಂ ಹೃದಯಕಮಲದಲ್ಲಿ ಪ್ರಕಾಶಿಸುತಲಿರುವ ಶ್ರೀವಾಸುದೇವನಿಗೆ, ಗು

ಸಂಕೀರ್ತನವೆಂಬ ಸ್ತೋತ್ರದಿಂದ ಸರ್ವಕಾಲದಲ್ಲಿಯೂ ಸತ್ಕಾರಪೂರ್ವಕ
ವಾದ ಪೂಜೆಯನ್ನು ನರನಾದವನು ಮಾಡುವುದೆ ಸಕಲವೇದ ಲಕ್ಷಣಗ
ಳಾದ ಧರ್ಮಗಳಲ್ಲಿ ಶ್ರೇಷ್ಠವಾದ ಧರ್ಮವು ಇದೇ ನನ್ನ ಅಭಿಪ್ರಾಯವೆಂದು
ಶ್ರೀ ಭೀಷ್ಮರು ಹೇಳಿದರು. ಆದರೆ ಶ್ರೀವಾಸುದೇವನ ಸ್ತೋತ್ರವೆಂಬ
ಅರ್ಚನವು ಸರ್ವಧರ್ಮಗಳಿಗಿಂತಲೂ ಶ್ರೇಷ್ಠವಾದ ಧರ್ಮವಾಗುವುದಕ್ಕೆ
ಕಾರಣವೇನೆಂದರೆ? ಇದರಲ್ಲಿ "ಹಿಂಸಾ-ಪುರುಷಾಂತರ ಸಹಾಯವು,
ದ್ರವ್ಯಾಪೇಕ್ಷಾ, ದೇಶಕಾಲಾದಿ ನಿಯಮಾಪೇಕ್ಷೇ" ಯ ಮೊದಲಾದವು
ಗಳ ಆವಶ್ಯಕತೆಯು ಇಲ್ಲವಾದುದರಿಂದ ಸಕಲ ಧರ್ಮಗಳಿಗಿಂತಲೂ ಇದು
ಶ್ರೇಷ್ಠವಾದ ಧರ್ಮವಾಯಿತು. ಮತ್ತು "ಧ್ಯಾಯನ್ಕೃತೇ ಯಜನ್
ಯಜ್ಞೈಸ್ತ್ರೇತಾಯಾಂ ದ್ವಾಪರೇಽರ್ಚಯನ್ | ಯದಾಪ್ನೋತಿ ತದಾ
ಪ್ನೋತಿ ಕಲೌ ಸಂಕೀರ್ತ್ಯ ಕೇಶವಂ" ಎಂಬ ವಿಷ್ಣುಪುರಾಣ ವಚನದಲ್ಲಿ
ಕೃತ ತ್ರೇತಾ ದ್ವಾಪರಯುಗಗಳಲ್ಲಿ ಶ್ರೀಮನ್ನಾರಾಯಣನ ಧ್ಯಾನ
ಯಜ್ಞ ಪೂಜೆಗಳಿಂದ ಯಾವ ಮಹಾಫಲಪ್ರಾಪ್ತಿಯುಂಟೊ ಅಂತಹ
ಫಲವು ಕಲಿಯುಗದಲ್ಲಿ ಪರಮಪುರುಷನ ನಾಮಸಂಕೀರ್ತನ ಮಾತ್ರದಿಂದ
ಲಭಿಸುವುದೆಂಬದಾಗಿಯೂ; "ಜಪ್ಯೇನೈವತು ಸಂಶುದ್ಧ್ಯೇತ್ ಬ್ರಾಹ್ಮ
ಣೋ ನಾತ್ರಸಂಶಯಃ| ಕುರ್ಯಾದನ್ಯನ್ನ ವಾ ಕುರ್ಯಾ ನ್ಮೈತ್ರೋ ಬ್ರಾಹ್ಮಣ
ಉಚ್ಯತೆ" ಎಂಬ ಮನುವಚನದಲ್ಲಿ ಈ ಕಲಿಯುಗದಲ್ಲಿ ಜಪದಿಂದಲೆ ನರನು
ಪರಿಶುದ್ಧನಾಗುವನು, ಆದಕಾರಣ ಇತರವಾದ ಯಜ್ಞಾದಿ ಕಾರ್ಯವನ್ನು
ಮಾಡಿದರೂ ಅಥವಾ ಮಾಡದೇ ಹೋದರೂ ಅಂತವನು ಸರ್ವಭೂತ
ಹಿತನೇ ಆಗುವನೆಂದು ಹೇಳಿರುವುದರಿಂದಲೂ; "ಜಪಸ್ತು ಸರ್ವಧರ್ಮೇಭ್ಯಃ
ಪರಮೋಧರ್ಮ ಉಚ್ಯತೆ | ಅಹಿಂಸಯಾಚ ಭೂತಾನಾಂ ಜಪಯಜ್ಞಃ ಪ್ರ
ವರ್ತತೆ" ಎಂಬದಾಗಿ ಶ್ರೀಮಹಾಭಾರತದಲ್ಲಿ ಸಕಲ ಧರ್ಮಗಳಿಗಿಂತಲೂ
ಜಪರೂಪವಾದ ಧರ್ಮವು ಸರ್ವ ಶ್ರೇಷ್ಠವಾದದ್ದೆಂತಲೂ ಭೂತಗಳ ಹಿಂಸೆ
ಯನ್ನು ಮಾಡದೇ ಇರುವುದರಿಂದ ಜಪಯಜ್ಞವು ಪ್ರವರ್ತಿಸುವುದೆಂದು
ಹೇಳಿರುವುದರಿಂದಲೂ "ಯಜ್ಞಾನಾಂ ಜಪಯಜ್ಞೋಽಸ್ಮಿ" ಎಂಬದಾಗಿ
ಶ್ರೀಗೀತೆಯ ವಿಭೂತ್ಯಧ್ಯಾಯದಲ್ಲಿ ಯಜ್ಞಗಳ ಮಧ್ಯದಲ್ಲಿ ಶ್ರೇಷ್ಠ
ವಾದ ಜಪಯಜ್ಞವು ನಾನಾಗಿರುವೆನೆಂದು ಜಪಯಜ್ಞ ಶ್ರೈಷ್ಠ್ಯವು
ಹೇಳಲ್ಪಟ್ಟಿರುವುದೇ ಮೊದಲಾದ ಅನೇಕ ಪ್ರಮಾಣಗಳು ಜಪಯಜ್ಞ

ವನ್ನು ಸರ್ವೋತ್ತಮವೆಂಬದಾಗಿ ಕೊಂಡಾಡುತಲಿರುವುದರಿಂದ ಇದನ್ನು ಸರ್ವೋತ್ತಮಧರ್ಮವನ್ನಾಗಿ ತಾನು ಅಭಿಪ್ರಾಯಪಟ್ಟು ಶ್ರೀಭೀಷ್ಮರು ಧರ್ಮಪುತ್ರರಿಗೂ ಹೇಳಿರುವಂತೆ ತಿಳಿಯಬೇಕು. ॥೮॥

ಇನ್ನು ಮುಂದೆ ನಾಲ್ಕು ಶ್ಲೋಕಗಳಿಂದ ಉಪೇಯ ವಿಷಯವಾ ಪ್ರಶ್ನಕ್ಕೆ ಪ್ರತ್ಯುತ್ತರವನ್ನು ಹೇಳುವಂತವರಾಗಿ ಶ್ರೀಮನ್ನಾಮ ಸಹಸ್ರವನ್ನು ಹೇಳಲುದ್ದೇಶಿಸಿ ಧರ್ಮರಾಜರನ್ನು ಕುರಿತು ಎಲೈ ಧರ್ಮಪುತ್ರನೆ ಮುಂದೇ ಹೇಳಲ್ಪಡುವ ನನ್ನ ಮಾತನ್ನು ಕೇಳೆಂದು ಆಜ್ಞಾಪಿಸುತ್ತಾರೆ. ಅವುಗಳಲ್ಲಿಯೂ (೧೫) ಶ್ಲೋಕದಿಂದ ಯರಡನೆ ಪ್ರಶ್ನಕ್ಕೆ ಪ್ರತ್ಯುತ್ತರ ವನ್ನು ಹೇಳುತ್ತಾರೆ.

ಮೂ॥ ಪರಮಂ ಯೊ ಮಹ ತ್ತೇಜಃ
ಪರಮಂ ಯೊ ಮಹ ತ್ತಪಃ ।
ಪರಮಂ ಯೊ ಮಹದ್ಬ್ರಹ್ಮ
ಪರಮಂ ಯಃ ಪರಾಯಣಂ ॥೯॥
ಪವಿತ್ರಾಣಾಂ ಪವಿತ್ರಂ ಯೊ
ಮಂಗಳಾನಾಂ ಚ ಮಂಗಳಂ ॥೯॥

ಟೀ॥ ಯಃ—ಯಾವ ಪರಮಪುರುಷನು, ಮಹತ್—ದೊಡ್ಡದಾದ, ಪರಮಂ-ಸಮಾಧಿಕ ರಹಿತವಾಗಿರುವ, ತೇಜಃ—ತೇಜಸ್ಸೊ, ಯಃ—ಯಾವನು, ಮಹತ್—ದೊಡ್ಡದಾದ, ಪರಮಂ—ಸಮಾಧಿಕ ದರಿದ್ರನಾದ, ತಪಃ—ತಪಶ್ಶಬ್ದದಿಂದ ಹೇಳಲ್ಪಡುವ ಈಶ್ವರನೊ ? ಯಃ—ಯಾವ ಪುರುಷನು, ಮಹತ್—ದೊಡ್ಡದಾದ, ಪರಮಂ—ಸಮಾಧಿಕರಹಿತವಾದ, ಬ್ರಹ್ಮ—ಸ್ವರೂಪಗುಣ ವಿಭೂತ್ಯಾದಿಗಳಿಂದ ಸರ್ವವಸ್ತುಗಳಿಗಿಂತಲೂ ಮಹತ್ತಾದವನೊ' ಯಃ—ಯಾವ ಪರಮಪುರುಷನು, ಪರಮಂ—ಸಮಾಧಿಕ ದರಿದ್ರನಾದ, ಪರಾಯಣಂ- ಪರಮಪ್ರಾಪ್ಯವೊ, ಎಂದರೆ ಪರಮಪುರುಷಾರ್ಥವೊ. ॥ ೯ ॥ ಯಃ—ಯಾವ ಪರವ ಪುರುಷನು, ಪವಿತ್ರಾಣಾಂ—ಪರಿಶುದ್ಧಿಯನ್ನುಂಟುಮಾಡತಕ್ಕ ವಸ್ತುಗಳಿಗೂ, ಪವಿತ್ರಂ- ಪರಿಶುದ್ಧಿಕರನೊ ? ಮಂಗಳಾನಾಂಚ—ಮಂಗಳ ವಸ್ತುಗಳಿಗೂ, ಮಂಗಳಂ—ಮಂಗಳವೊ ॥ ೯ ॥

(ವಿ॥ ಭಾ) ಇಲ್ಲಿ ಹೇಳಲ್ಪಡುವ ವಿಶೇಷಣಗಳಾರೂ ಭಗವತ್ಸ್ವರೂಪವು ಅತ್ಯಂತ ಸ್ಪೃಹಣೀಯವಾಗಿರುವುದರಿಂದ ಅದನ್ನೇ ಪರಮಪುರುಷಾರ್ಥವನ್ನಾಗಿ ತೋರಿಸುವುದೆಂದರಿಯಬೇಕು.

" (೧) ಪರಂಜ್ಯೋತಿರುಪಸಂಪದ್ಯ ‖ ತಸ್ಯಾದಿತ್ಯೋಭಾ ಮುಪಯು ಜ್ಯಭಾತಿ " ಎಂಬದಾಗಿ ಶ್ರುತಿಯಲ್ಲಿ ಹೇಳಿದಂತೆ ಸ್ವಭಾವದಿಂದಲೆ ಪ್ರಕಾಶಮಾನವಾಗಿರುವಾಗ ಸೂರ್ಯನೇ ಮೊದಲಾದ ತೇಜಸ್ಸುಗಳಿಗೂ ಪ್ರಕಾಶಕವಾಗಿಯೂ, ಇಷ್ಟೆಂದು ಅಳೆವಿಡಲಶಕ್ಯವಾಗಿಯೂ, ತನಿಗೆ ಸಮವು ಅಧಿಕವು ಆದ ಬೇರೊಂದು ವಸ್ತುವಿಲ್ಲದ ಅತ್ಯಂತಶ್ರೇಷ್ಠವಾದ ತೇಜೋರೂಪವಾಗಿಯೂ ಇರುವಂತವನು ಯಾವನೊ; (೨) "ಯೊದೇವೇಭ್ಯ ಆತಪತಿ ‖ ತಮೀಶ್ವರಾಣಾಂ ಪರಮಂ ಮಹೇಶ್ವರಂ ‖ ಏಷಸರ್ವೇಶ್ವರಃ" ಎಂಬದಾಗಿ ಶ್ರುತಿಯಲ್ಲಿಅಧೀತವಾಗಿರುವಂತೆ ಪರಮಮಹತ್ತಾದ ತಪಸ್ಸುಯಾವ ಪರಮಪುರುಷನೊ ; ಎಂದರೆ ಸಕಲವನ್ನು ಆಳುವಂತವನು ಯಾವನೊ;

(ಮೇಲಿನ ಪ್ರಮಾಣಾರ್ಥವು (೧) ಪರಂಜ್ಯೋತಿಸ್ಸಾದ ಪರಮಪುರುಷನನ್ನು ಹೊಂದಿ ಸೂರ್ಯನು ಅವನ ತೇಜಸ್ಸನ್ನು ಹೊಂದಿ ಪ್ರಕಾಶಿಸುತ್ತಾನೆ (೨) ಯಾವನಾದರೆ ದೇವತೆಗಳೆಲ್ಲವನ್ನೂ ಸುತ್ತುಮುತ್ತಲೂ ಸಂತಪಿಸುವನೊ ಈಶ್ವರ ಶಬ್ದದಿಂದ ಹೇಳಲ್ಪಡುವ ಸರ್ವರಿಗೆ ಮಹೇಶ್ವರನಾದ ಅವನನ್ನು ಇವನು ಸರ್ವೇಶ್ವರನು )

ಅನಂತ ಕಲ್ಯಾಣಗುಣ ಸ್ವರೂಪನಾಗಿರುವುದರಿಂದ ಹರ್ಷವುಳ್ಳವನಾಗಿ ಅನಂತ ಶಕ್ತಿಯುಳ್ಳವನಾಗಿರುವುದರಿಂದ ಸಕಲವನ್ನೂ ವೃದ್ಧಿಪಡಿ

## ಭಗವತ್ಸಂಬಂಧಕ್ಕೆ ಚೇತನಾ ಚೇತನಗತವಾದ ದೋಷನಿವಾರಕತ್ವವು.

ಸುವಂತವನು ಯಾವನೊ, ರಜಸ್ತಮೋಗುಣಾತ್ಮಕವಾಗಿ ವಿಕಾರಪಡುವುದೆಂಬ ಅಚೇತನಗತವಾದ ದೋಷವನ್ನೂ; ಅಂತಹ ಅಚೇತನದೊಡನೆ ಕಲೆತಿರುವುದರಿಂದುಂಟಾದ ಅಜ್ಞಾನ ಭಗವದಪರಾಧ ರಾಗದ್ವೇಷವೇ ಮೊದಲಾದ ಚೇತನ ದೋಷವನ್ನೂ; (೧) " ಏತಗ್‌ಹವಾವನತಪತಿ ‖ (೨) ತದ್ಯಥಾ ಪುಷ್ಕರಪಲಾಶ ಆಪೋನಶ್ಲಿಷ್ಯಂತೆ‖ (೩) ತದ್ಯಥೈಷಿಕಾತೂಲಮಗ್ನೌಪ್ರೋತಂ ಪ್ರದೂಯೇತ ‖ (೪) ತತ್ಸುಕೃದುಷ್ಕೃತೆ ಧೂನುತೆ ‖ (೫) ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ ‖ (೬) ಕ್ಷೇತ್ರಜ್ಞಸ್ಯೇಶ್ವರಜ್ಞಾನಾ ದ್ವಿಶುದ್ಧಿಃ ಪರಮಾಮತಾ ‖ (೭) ಧ್ಯಾಯೇ ನ್ನಾರಾಯಣಂ ದೇವಂ ಸ್ನಾನಾದಿಷುಚ ಕರ್ಮಸು| ಪ್ರಾಯಶ್ಚಿತ್ತಿರ್ಹಿ ಸರ್ವಸ್ಯ ದುಷ್ಕೃತಸ್ಯೇತಿ ವೈಶ್ರುತಿಃ ‖ (೮) ಯೊಮಾಮಜಮನಾದಿಂಚ ‖ (೯) ಪಾವನಸ್ಸರ್ವಲೋಕಾನಾಂ ತ್ವಮೇವ ರಘುನಂದನ ‖ (೧೦) ಪ್ರಾಯಶ್ಚಿತ್ತಾನ್ಯಶೇಷಾಣಿ (೧೧) ಯಥಾಗ್ನಿ ರುದ್ಧತಶಿಖಃ ಕಕ್ಷಂ ದಹತಿಸಾನಿಲಃ | ತಥಾ

ಚಿತ್ತಸ್ಥಿತೋ ವಿಷ್ಣುರ್ಯೋಗಿನಾಂ ಸರ್ವಕಿಲ್ಬಿಷಂ " ಎಂದು ಶಾಸ್ತ್ರಗಳು ಉದ್ಘೋಷಿಸುವಂತೆ ಸಮೂಲವಾಗಿ ಕೀಳುವಂತಹ ಪರಮಪಾವನ ಮೂರ್ತಿಯು ಯಾವನೋ; ಮಂಗಳಕರ (ಅಥವಾ ಸ್ವಯಮೇವ ಮಂಗಳ) ವಾಗಿರುವ ವಸ್ತುಗಳಿಗೆಲ್ಲವೂ ಯಾವನಾದರೆ ಮಂಗಳನೋ; ಅವನೇ ಪರಮಪಾಷ್ಯನು ಎಂದರೆ ಅತ್ಯಂತವಾಗಿ ಹೊಂದಲ್ಪಡತಕ್ಕ ಪರಮಪುರುಷಾರ್ಥವು.

(ಮೇಲೆ ಇರುವ ಪ್ರಮಾಣಾರ್ಥಗಳು. (೧) ಇವನನ್ನು, ಯಾವನೂ ಸಂತಪಿಸಲಾರನು. (೨) ಅದು ಹೇಗೆಂದರೆ ? ಪದ್ಮಪತ್ರದಲ್ಲಿ ಜಲವು ಅಂಟದೇ ಇರುವಂತೆ, (೩) ಅದು ಹೇಗೆಂದರೆ ? ಹತ್ತಿಯನ್ನು ಅಗ್ನಿಯಲ್ಲಿ ಹಾಕಿದರೆ ಅದು ಹೇಗೆ ದಹಿಸಿ ಉದುರಿ ಹೋಗುವುದೊ ಅದರಂತೆ ಪುಣ್ಯಪಾಪಗಳು ಉದರಿಹೋಗುವುವು (೪) ಪುಣ್ಯಪಾಪಗಳನ್ನು ಉದರಿಬಿಡುವನು (೫) ಆವಾಗ ಜ್ಞಾನಿಯಾದವನು ಪುಣ್ಯಪಾಪಗಳನ್ನು ತ್ಯಾಗಮಾಡಿ (೬) ಕ್ಷೇತ್ರಜ್ಞನೆಂಬ ಜೀವಾತ್ಮನಿಗೆ ಈಶ್ವರ ಜ್ಞಾನದಿಂದ ಪರಮಶುದ್ಧಿಯುಂಟಾಗುವಂತೆ ಹೇಳಲ್ಪಟ್ಟಿರುವುದು (೭) ಸ್ನಾನವೇ ಮೊದಲಾದ ಕರ್ಮಗಳಲ್ಲಿ ದೇವನಾದ ಶ್ರೀಮನ್ನಾರಾಯಣನನ್ನು ಧ್ಯಾನಿಸಬೇಕು. ಈ ಧ್ಯಾನವೇ ಸಮಸ್ತ ಪಾಪಗಳಿಗೂ ಪ್ರಾಯಶ್ಚಿತ್ತವಾಗಿರುವುದೆಂದು ಶ್ರುತಿಯು ಹೇಳುವುದು. (೮) ಎಲೈ ರಘುಶ್ರೇಷ್ಠನಾದ ರಾಮನೆ ? ಸಮಸ್ತ ಲೋಕಗಳಿಗೂ ಪಾವನಕರನಾದ ಪರಮಪುರುಷನು ನೀನೆ. (೯) ಸಮಸ್ತ ಪ್ರಾಯಶ್ಚಿತ್ತಗಳಲ್ಲಿಯೂ ಶ್ರೀಕೃಷ್ಣಾನುಸ್ಮರಣವು ಶ್ರೇಷ್ಠವಾದ ಪ್ರಾಯಶ್ಚಿತ್ತವು (೧೦) ಜ್ವಾಲಾಮಾಲಾಕುಲವಾದ ಬೆಂಕಿಯು ವಾಯುವಿನೊಡನೆ ಕೂಡಿ ವನವನ್ನು ದಹಿಸುವಂತೆ ಭಕ್ತರಾದ ಯೋಗಿಗಳ ಹೃದಯಗತನಾದ ವಾಸುದೇವನು ಅವರ ಸಮಸ್ತ ಪಾಪಗಳನ್ನು ವಿನಾಶಪಡಿಸುವನು.)

## ಪಾವನಗಳಾದ ತೀರ್ಥಾದಿಗಳಿಗೂ ಭಗವತ್ಸಂಬನ್ಧದಿಂದಲೇ ಪಾವನತ್ವವೆಂಬ ವಿಷಯವು.

ಮೂಲ ಶ್ಲೋಕದಲ್ಲಿರುವ " ಪರಮಂ-ಮಹತ್ " ಎಂಬ ವಿಶೇಷಣದ್ವಯದಿಂದ ತೀರ್ಥವೇ ಮೊದಲಾದ ಪರಿಶುದ್ಧ ವಸ್ತುಗಳಿಗೂ ಕೂಡ ಇವನ ಸಂಬಂಧದಿಂದ ಪಾವನತ್ವವು ತೋರಲ್ಪಡುವುದು. ಆದರೆ ಇವನಿಗಿಂತಲೂ ಅನ್ಯರಾದ ಬೇರೆ ಚೇತನರೂ ಪಾಳಿಯೇ ಮೊದಲಾದ ಅಚೇತಗಳೂ ಇತರ ವಸ್ತುಗಳನ್ನು ಶುದ್ಧಿಮಾಡುವುದಿಲ್ಲವೆ? ಎಂಬ ವಾದವು ಯುಕ್ತಿ ಯುಕ್ತವಲ್ಲವು. ಆದುದರಿಂದಲೆ ಪರಾಶರ ಶೌನಕಾದಿಗಳು ಶುಭವಾದ ಆಶ್ರಯವು ಯಾವದೆಂಬದಾಗಿ ವಿಚಾರಿಸುವಾಗ ಇತರ ಚೇತನರನ್ನು ಕುರಿತು ಮಾತನಾಡಿ " ಅಶುದ್ಧಾಸ್ತೇ ಸಮಸ್ತಾಸ್ತು ದೇವಾದ್ಯಾಃ ಕರ್ಮಯೋನಯಃ ‖ ಆಬ್ರಹ್ಮಸ್ತಂಬ ಪರ್ಯಂತಾ ಜಗದಂತರ್ವ್ಯವ

ಸ್ಥಿತಾಃ | ಪ್ರಾಣಿನಃ ಕರ್ಮಜನಿತ ಸಂಸಾರ ವಶವರ್ತಿನಃ" ಎಂಬದಾಗಿ ದೇವತಾಂತರಗಳನ್ನು ಕರ್ಮಯೋನಿಗಳೆಂತಲೂ ಆದುದರಿಂದಲೆ ಅಶುದ್ಧರೆಂತಲೂ ನಿರಾಕರಿಸಿದರು.

(ಇದರ ಅರ್ಥವು॥ ಕರ್ಮದಿಂದ ಇಂದ್ರಾದಿ ಪದಗಳನ್ನು ಹೊಂದಿರುವುದೇ ಮೊದಲಾದವುಗಳಿಂದ ಕರ್ಮವಶ್ಯರೆನ್ನಲ್ಪಡುವ ಬ್ರಹ್ಮ ರುದ್ರೇಂದ್ರಾದಿ ದೇವತಾಂತರಗಳೆಲ್ಲವೂ ಅಶುದ್ಧರಾಗಿರುವರು ಚತುರ್ಮುಖ ಬ್ರಹ್ಮನೇ ಮೊದಲಾಗಿ ಹುಲ್ಲುಪರ್ಯಂತವಾದ ಪ್ರಪಂಚದಲ್ಲಿರುವ ಸರ್ವ ಪ್ರಾಣಿಗಳೂ ಕರ್ಮದಿಂದುಂಟಾದ ಸಂಸಾರಕ್ಕೆ ವಶಪಟ್ಟವರೆಂದು ತಾತ್ಪರ್ಯವು)

ಆದರೆ ಅವರಲ್ಲಿ ಕೆಲವರು ಪಾರಿಶುದ್ಧ್ಯವನ್ನುಂಟು ಮಾಡತಕ್ಕವರೆಂದು ಹೇಳುವಿಕೆಗೆ ; ಇವರು ಪರಮಪುರುಷನನ್ನು ಉಪಾಸನೆಮಾಡಿಯೂ ಅರ್ಚಿಸಿಯೂ ಅವನ ಶ್ರೀಪಾದ ತೀರ್ಥವನ್ನು ಶಿರಸ್ಸಿನಲ್ಲಿ ಧರಿಸಿಯೂ ಇಷ್ಟುಮಾತ್ರವಲ್ಲದೆ ಇನ್ನೂ ಅನೇಕ ಪ್ರಕಾರವಾಗಿ ಅವನನ್ನು ಸೇವೆಮಾಡಿ ಸಂಪಾದಿಸಿದ ಮಹಾತ್ಮ್ಯದಲ್ಲಿ ತಾತ್ಪರ್ಯವು. ಈ ವಿಷಯವು "ವಿಷ್ಣುವಾಮ ಪದಾಂಗುಷ್ಠ ವಿನಿಸೃತಸ್ಯ ಜಲಸ್ಯೈ ತನ್ಮಾಹಾತ್ಮ್ಯಮ್" ಎಂದು ಪ್ರಸಿದ್ಧವಾಗಿರುವುದು.

(ಶ್ರೀಮಹಾವಿಷ್ಣು ವಾಮ ಪಾದಾಂಗುಷ್ಠಕ್ಕೆ ಚತುರ್ಮುಖ ಬ್ರಹ್ಮನು ತನ್ನ ಕಮಂಡುಲು ತೀರ್ಥದಿಂದ ಅಭಿಷೇಕ ಮಾಡಿದಾಗ ಹೊರಟಿರುವ ಗಂಗಾತೀರ್ಥಕ್ಕೆ ಇಂತಹ ಮಾಹಾತ್ಮ್ಯವೆಂದರ್ಥವು)

ಗಂಗಾದಿ ನದಿಗಳಿಗೂ ಸಾಧಾರಣ ಜಲಕ್ಕೂ ಇತರಗಳಾದ ಪುಣ್ಯಕ್ಷೇತ್ರಗಳಿಗೂ ಶ್ರೀವಿಷ್ಣು ಧರ್ಮದಲ್ಲಿ ಹೇಳಿರುವಂತೆ ಅವನ ಸಂಬಂಧದಿಂದ ಬಂದ ಮಹತ್ತ್ವವಲ್ಲದೆ ಬೇರೆ ಯೇನಿರುವುದು? "ವಿಷ್ಣೋರಾಯತನಂಹ್ಯಾಪ ಸ್ಸಹ್ಯಪಾಂ ಪತಿರುಚ್ಯತೆ" (ವಿಷ್ಣುವಿಗೆ ಜಲವು ವಾಸಸ್ಥಾನವಾಗಿರುವುದರಿಂದಲ್ಲವೆ ಅವನು "ಅಪಾಂಪತಿಃ" ಎನ್ನಲ್ಪಡುವನು.) ಎಂಬ ಪ್ರಮಾಣದಲ್ಲಿ ಭಗವತ್ಸಂಬಂಧದಿಂದ ಜಲಕ್ಕೆ ಅತಿಶಯಿತ ಮಾಹಾತ್ಮ್ಯವೂ; ಅದರಂತೆ ಕಾಲವಿಷಯದಲ್ಲಿಯೂ "ದ್ವಾದಶೀ-ಶ್ರೀಜಯಂತೀ-ಶ್ರವಣನಕ್ಷತ್ರ"ವೇ ಮೊದಲಾದ ದಿವಸಗಳಲ್ಲಿ ಅವನು ಅವತರಿಸಿದನೆಂತಲೂ ಶಯನವನ್ನು ಬಿಟ್ಟು ಯೇಳುವ ದಿನವೆಂತಲೂ, ಅವನು ನನ್ನದೆಂದಭಿಮಾನಿಸಿದ ನಕ್ಷತ್ರವೆಂತಲೂ, ಇರುವ ಸಂಬಂಧ ಪ್ರಯುಕ್ತವಾದ ಕಾರಣದಿಂದಲೇ ಕಾಲಕ್ಕೂ ಶುದ್ಧಿಕರತ್ವವು ಪ್ರಾಪ್ತವಾಯಿತು. ಯಜ್ಞಾ

ದಾನ ತಪಃ ಪ್ರಭೃತಿಕವಾದ ಕ್ರಿಯೆಗಳೂ ಅವನ ಆರಾಧನ ರೂಪಗಳಾಗಿ ರುವುದರಿಂದಲೇ ಶುದ್ಧಿಯನ್ನುಂಟುಮಾಡತಕ್ಕವುಗಳಾದವು. ಬ್ರಾಹ್ಮಣಾದಿ ಜಾತಿಯೂ ಭಗವತ್ಪ್ರತಿಪಾದಕವಾದ ವೇದಾಧ್ಯಯನಾದಿಗಳಿಗೆ ಮುಖ್ಯಾಧಿಕಾರಿಯಾಗಿರುವುದರಿಂದ ಪರಿಶುದ್ಧವೆನ್ನಲ್ಪಡುವುದು. ಇದಕ್ಕೂ "ವಿಷ್ಣುಂಕ್ರಾಂತಂ ವಾಸುದೇವಂ ವಿಜಾನನ್ವಿಪ್ರೋ ವಿಪ್ರತ್ವಂ ಗಚ್ಛತೆ ತತ್ವದರ್ಶೀ" ಎಂಬ ಶ್ರುತಿಯು ಆಧಾರವಾಗಿರುವುದು.

(ಸರ್ವವ್ಯಾಪನಶೀಲನಾದ ಶ್ರೀವಾಸುದೇವನನ್ನು ತಿಳಿದ ವಿಪ್ರನು ತತ್ವದರ್ಶಿಯಾಗಿ ರುವುದರಿಂದ ಬ್ರಾಹ್ಮಣ್ಯವನ್ನು ಹೊಂದಿದವನಾಗುತ್ತಾನೆಂದು ಭಾವವು)

ಶ್ರುತಿ ಸ್ಮೃತ್ಯಾದಿಗಳೂ ಅವನ ವಿಷಯವಾಗಿ ಅವನ ಆಜ್ಞಾರೂಪಗಳಾಗಿರುವುದರಿಂದ ಪರಿಶುದ್ಧಿಯನ್ನುಂಟು ಮಾಡತಕ್ಕವುಗಳಾದವು. ಈ ಅರ್ಥವನ್ನು "ಶ್ರುತಿಸ್ಮೃತಿರ್ಮಮೈವಾಜ್ಞಾ ‖ ನಾರಾಯಣ ಪರಾವೇದಾಃ" ಎಂಬ ಭಗವದುಕ್ತ್ಯಾದಿಗಳು ಆದರಿಸಿರುವುವು.

(ಶ್ರುತಿ ಸ್ಮೃತಿಗಳು ನನ್ನ ಆಜ್ಞಾರೂಪಗಳು ಸಮಸ್ತಗಳಾದ ವೇದಗಳು ಜಗತ್ಕಾರಣನಾದ ಶ್ರೀಮನ್ನಾರಾಯಣನನ್ನೆ ಪ್ರತಿಪಾದಿಸುವುದರಲ್ಲಿ ತತ್ಪರಗಳು ಎಂದೀ ವಚನಗಳ ತಾತ್ಪರ್ಯವು.)

ಶ್ರೀಮಹಾಭಾರತದ ಆರಣ್ಯಪರ್ವ ತೀರ್ಥಯಾತ್ರಾ ಪ್ರಕರಣದಲ್ಲಿ ಅವನ ಸಂಬಂಧದಿಂದ ದೇಶವು ಪಾವನವಾಗುವುದೆಂದು "ಪುಣ್ಯಾ ದ್ವಾರವತೀ" ಎಂಬದಾಗಿ ಉಪಕ್ರಮಿಸಿ "ಆಸ್ತೇಹರಿ ರಚಿಂತ್ಯಾತ್ಮಾ ತತ್ರೈವ ಮಧುಸೂದನಃ| ತತ್ಪುಣ್ಯಂ ತತ್ಪರಂ ಬ್ರಹ್ಮ ತತ್ತೀರ್ಥಂ ತತ್ತಪೋವನಂ‖ ಪವಿತ್ರಾಣಾಂ ಹಿ ಗೋವಿಂದಃ ಪವಿತ್ರಂ ಪರಮುಚ್ಯತೆ| ಪುಣ್ಯಾನಾಮಪಿ ಪುಣ್ಯೋಸೌ" ಎಂಬದಾಗಿ ಸ್ಪಷ್ಟವಾಗಿ ನಿಗಮನಮಾಡಿರುತ್ತಾರೆ. (ನಿಗಮನ–ಪೂರ್ತಿಮಾಡುವಿಕೆ.)

(ಪರಮಪಾವನವಾದದ್ದು ದ್ವಾರಕಾನಗರಿಯು, ಎಂದುಪಕ್ರಮಿಸಿ "ಅಲ್ಲಿಯೇ ಅಚಿಂತ್ಯವೈಭವವುಳ್ಳ ಆಶ್ರಿತದೋಷಹರನಾದ, ಮಧು ಎಂಬ ರಾಕ್ಷಸಾಂತಕನು ಇರುವನು, ಆದಕಾರಣ ಆ ಕ್ಷೇತ್ರವು ಮಹಾಪುಣ್ಯವಾದದ್ದು, ಅದೇ ಪರಬ್ರಹ್ಮವು, ಅದು ತಾನೆ ತೀರ್ಥವು, ಅದೇ ತಪೋವನವು ಪರಿಶುದ್ಧವಾದ ವಸ್ತುಗಳೊಳಗೆ ಅತ್ಯಂತ ಪರಿಶುದ್ಧನೆಂದು ಗೋವಿಂದನು ಹೇಳಲ್ಪಡುವನು. ಪುಣ್ಯವಸ್ತುಗಳಿಗಿಂತಲೂ ಅತ್ಯಂತ ಪುಣ್ಯವಾದವನು. ಎಂದೀ ಪ್ರಮಾಣಾರ್ಥವು)

## ಪುಷ್ಪಮಾಲಾದ್ಯಚೇತನ ವಸ್ತುಗಳಿಗಿಂತಲೂ ಅತಿ ನಿರ್ಮಲವಾದ ಜೀವಾತ್ಮನಿಗಿಂತಲೂ ಭಗವದ್ಗತವಾದ ಸ್ಪೃಹಣೀಯತೆಯು.

ಪ್ರಿಯವಾದ ಪುಷ್ಪಮಾಲೆ, ಚಂದನ, ದೇವತಾಸ್ತ್ರೀ, ಅಮೃತಧಾರಾದಿಗಳಿಗಿಂತಲೂ; ಸಂಸಾರ ಬಂಧವೆಲ್ಲವನ್ನೂ ಕಳೆದುಕೊಂಡು ಅತಿ ನಿರ್ಮಲನಾಗಿ ಅಪರಿಮಿತಾನಂದ ರೂಪನಾಗಿರುವ ಜೀವಾತ್ಮನಿಗಿಂತಲೂ ; ಪರಮಾತ್ಮನು ಅತ್ಯಂತ ಸ್ಪೃಹಣೀಯ (ಆಶೆಪಡತಕ್ಕವ) ನಾಗಿರುವುದರಿಂದ ಅವನನ್ನು ಮಂಗಳಗಳಿಗೆಲ್ಲಾ ಮಂಗಳನೆಂದು ಹೇಳಿತು ||೯೪||

( ಶಂ || ಭಾ ) "ಕಿಂವಾಪ್ಯೇಕಂ ಪರಾಯಣಂ" ಎಂಬ ಯರಡನೆ ಪ್ರಶ್ನೆಕ್ಕೆ ಭೀಷ್ಮರು ಈ ಶ್ಲೋಕದಿಂದ ಪ್ರತ್ಯುತ್ತರವನ್ನು ಹೇಳುತ್ತಾರೆ. (೧) "ಯೇನಸೂರ್ಯ ಸ್ತಪತಿ ತೇಜಸೇದ್ಧಃ-ತಂದೇವಾ ಜ್ಯೋತಿಷಾಂ ಜ್ಯೋತಿಃ || ನತತ್ರ ಸೂರ್ಯೋಭಾತಿ ನಚಂದ್ರತಾರಕಂ ನೇಮಾವಿದ್ಯುತೋ ಭಾಂತಿ ಕುತೋಯ ಮಗ್ನಿಃ" ಎಂಬ ಶ್ರುತಿ ಪ್ರಮಾಣಾನುಸಾರವಾಗಿಯೂ (೨) "ಯದಾದಿತ್ಯಗತಂ ತೇಜೋ ಜಗದ್ಭಾಸ ಯತೇಖಿಲಂ" ಎಂಬ (ಗೀತಾ) ಸ್ಮೃತ್ಯನುಸಾರವಾಗಿಯೂ ಚೈತನ್ಯಲಕ್ಷಣವಾದ ಸರ್ವವನ್ನೂ ಪ್ರಕಾಶಪಡಿಸುವುದಾಗಿರುವ, ಅತ್ಯಂತ ವಿಸ್ತಾರವಾದ ಸರ್ವೋತ್ತಮವಾಗಿರುವ ತೇಜಸ್ಸೇ ಮುಖ್ಯವಾದ ಪ್ರಾಪ್ಯ (ಹೊಂದತಕ್ಕ) ಸ್ಥಾನವಾಗಿರುವುದು.

(ಮೇಲಿನ ಪ್ರಮಾಣಾರ್ಥವು || (೧) ಯಾವ ನಾರಾಯಣನ ತೇಜಸ್ಸಿನಿಂದ ವ್ಯಾಪ್ತನಾಗಿ ಸೂರ್ಯನು ತಪಿಸುತ್ತಾನೆಯೊ ಆ ತೇಜಸ್ಸೆ ಸಕಲವಾದ ತೇಜಸ್ಸುಗಳಿಗೂ ಪ್ರಕಾಶಕವಾಗಿರುವುದು. ಅಂತಹ ತೇಜಸ್ಸಿಗೆ ಸೂರ್ಯಚಂದ್ರ ನಕ್ಷತ್ರಾದಿಗಳು ಪ್ರಕಾಶಕಗಳಾಗಲಾರವು ಮಿಂಚುಗಳು, ಅಗ್ನಿಯೇ ಮೊದಲಾದವುಕೂಡ ಪ್ರಕಾಶಕಗಳಾಗಲಾರವು, ಭಗವತ್ತೇಜಸ್ಸೇ ಸರ್ವ ಪ್ರಕಾಶಕವೆಂದರ್ಥವು.

(೨) ನಾರಾಯಣನ ತೇಜಸ್ಸು ಸೂರ್ಯನಲ್ಲಿ ಪ್ರವೇಶಿಸಿ ಸಮಸ್ತಲೋಕಗಳನ್ನು ಪ್ರಕಾಶಪಡಿಸುವುದು.)

ಮತ್ತು "ಯ ಇಮಂ ಲೋಕಂ ಪರಂಚಲೋಕಂ ಸರ್ವಾಣಿ ಭೂತಾನಿ ಯೊನ್ತರೊ ಯಮ ಯತಿ || ಭೀಷಾಸ್ಮಾ ದ್ವಾತಃ ಪವತೇ ಭೀಷೊ

ದೇತಿ ಸೂರ್ಯಃ | ಭೀಷಾಸ್ಮಾ ದಗ್ನಿಶ್ಚೇಂದ್ರಶ್ಚ ಮೃತ್ಯುರ್ಧಾವತಿ ಪಂಚ ಮ ಇತಿ " ಎಂಬ ಶ್ರುತಿ ಪ್ರಮಾಣಾನುಸಾರವಾಗಿ ನಾರಾಯಣನೇ ಸರ್ವೋತ್ತಮವೂ ವಿಸ್ತಾರವೂ ಆದ ತಪಸ್ಸಾಗಿರುವನು ಎಂದರೆ ಸಕಲ ಲೋಕ ನಿಯಾಮಕನು ನಾರಾಯಣನೆಂದರಿಯಬೇಕು.

(ಯಾವ ಪರಮಪುರುಷನು ಇಹ ಪರಲೋಕಗಳನ್ನೂ ಸಕಲ ಭೂತಗಳನ್ನೂ ಅಂತರ್ಯಾಮಿಯಾಗಿ ನಿಯಮಿಸುತ್ತಾನೆಯೋ; ಯಾವ ಪರಮಪುರುಷನ ದೆಶೆಯಿಂದ ಭಯಪಟ್ಟವನಾಗಿ ವಾಯುವು ಬೀಸುವನೊ, ಸೂರ್ಯನು ಭಯಪಟ್ಟವನಾಗಿ ಉದಯಿಸುತ್ತಾನೆಯೊ, ಅಗ್ನೀಂದ್ರರು ಭಯವುಳ್ಳವರಾಗಿಯೇ ಸ್ವಸ್ವಕಾರ್ಯಗಳನ್ನು ಮಾಡುವರೊ, ಮೃತ್ಯುದೇವನೂ ಕೂಡ ಭಯಯುಕ್ತನಾಗಿಯೇ ತನ್ನ ಕಾರ್ಯವನ್ನು ಮಾಡುವನೊ; ಎಂದರ್ಥವು)

ಅಥವಾ ತಪಸ್ಸೆಂದರೆ ಅಪೇಕ್ಷಿತವಾದದ್ದು (ಯದ್ವಾ) " ಏಷಸರ್ವೇಶ್ವರಃ " ಎಂಬ ಶ್ರುತ್ಯನುಸಾರವಾಗಿ (ಈ ಪರಮಾತ್ಮನೇ ಸಕಲಲೋಕ ನಿಯಾಮಕನೆಂದರ್ಥವು) ದೇಶಕಾಲವಸ್ತುಪರಿಚ್ಛಿನ್ನವಲ್ಲದ ಐಶ್ವರ್ಯವುಳ್ಳವನೆಂತಲಾದರೂ ಹೇಳಬಹುದು. ಮತ್ತು ಸತ್ಯಾದಿ ಲಕ್ಷಣವುಳ್ಳ ಪೂಜ್ಯವಾಗಿರುವುದರಿಂದ ಅತ್ಯಂತ ಮಹತ್ತಾಗಿಯೂ ಇರುವ ಪರಬ್ರಹ್ಮವು ಯಾವ ನಾರಾಯಣನೊ ಅವನೊಬ್ಬನೆ ದೇವನು ಪುನರಾವೃತ್ತಿ ರಹಿತವಾಗಿರುವ ಅತ್ಯಂತಶ್ರೇಷ್ಠವಾದ ಪ್ರಾಪ್ಯಸ್ಥಾನವೇ ಮುಖ್ಯವಾದ (ಪರಮಾತ್ಮನು) ದೇವನೆನ್ನಲ್ಪಡುವನು. ಇಲ್ಲಿನ ಪರಮ ಶಬ್ದದಿಂದ ಅನೀಶ್ವರವಾದ ಆದಿತ್ಯಾದಿಕವು ಹೇಳಲ್ಪಡಲಿಲ್ಲವು. ಇದರಿಂದ "ಯಾವ ದೇವನು ಪರಮ ತೇಜಸ್ಸೊ, ಪರಮ ತಪಸ್ಸೊ, ಯಾವನು ಪರಬ್ರಹ್ಮನೊ, ಯಾವನು ಸರ್ವೋತ್ತಮವಾದ ಪ್ರಾಪ್ಯ (ಹೊಂದತಕ್ಕ) ಸ್ಥಾನವೊ, ಅಂತವನೊಬ್ಬನೆ ಸಕಲ ಭೂತಗಳಿಗೂ ಗಮ್ಯಸ್ಥಾನವೆನ್ನಲ್ಪಡುವನು. ("ಪವಿತ್ರಾಣಾಂ ಪವಿತ್ರಂ " ಎಂಬ ಶ್ಲೋಕಾರ್ಥವು (೧೦)ನೇದಾದ ಮುಂದಿನ ಶ್ಲೋಕದಲ್ಲಿ ವಿವರಿಸಲ್ಪಡುವುದು ) ‖೯‖

ಮೂ‖ ದೈವತಂ ದೇವತಾನಾಂಚ
ಭೂತಾನಾಂ ಯೋಽವ್ಯಯಃ ಪಿತಾ ‖೧೦‖
ಯತ ಸ್ಸರ್ವಾಣಿ ಭೂತಾನಿ
ಭವಂತ್ಯಾ ದಿ ಯುಗಾಗಮೇ |

ಯಸ್ಮಿಂಶ್ಚ ಪ್ರಳಯಂ ಯಾಂತಿ
ಪುನರೇವ ಯುಗಕ್ಷಯೇ ॥೧೧॥

ಟೀ ॥ ಯಃ—ಯಾವನಾದರೆ, ದೇವತಾನಾಂಚ—ದೇವತೆಗಳಿಗೂ, ದೈವತಂ—ದೇವತೆಯಾಗಿರುವನೊ, ಯಃ—ಯಾವನು, ಭೂತಾನಾಂ—ಪ್ರಾಣಿಗಳಿಗೆ, ಅವ್ಯಯಃ—ನಾಶರಹಿತನಾದ, ಪಿತಾ—ತಂದೆಯೊ ; ಯತಃ—ಯಾವ ಪರಮಪುರುಷನಿಂದ, ಸರ್ವಾಣಿಭೂತಾನಿ—ಸರ್ವಪ್ರಾಣಿಗಳೂ, ಆದಿಯುಗಾಗಮೇ—ಪ್ರಥಮ ಸೃಷ್ಟಿಕಾಲದಲ್ಲಿ, ಭವಂತಿ—ಉಂಟಾಗುವುವೊ , ಪುನರೇವ—ತಿರಿಗಿಯೂ, ಯುಗಕ್ಷಯೇ—ಯುಗಾಂತಕಾಲದಲ್ಲಿ, ಪ್ರಳಯಕಾಲದಲ್ಲೆಂದರ್ಥವು ಯಸ್ಮಿನ್ಚ—ಯಾವ ಪರಮಪುರುಷನಲ್ಲಿ, ಪ್ರಳಯಂ—ಲಯವನ್ನು, ಯಾಂತಿ—ಹೊಂದುವುವೊ.

## ಬ್ರಹ್ಮಾದಿ ದೇವತೆಗಳಿಗೂ ಕೂಡ ಪರಬ್ರಹ್ಮನೆ ಕಾರಣನೆಂಬ ವಿಷಯ ವ್ಯವಸ್ಥಾಪನವು.

(ವಿ॥ ಭಾ) ಇನ್ನು ಮುಂದೆ "ಕಿಮೇಕಂ ದೈವತಂ" ಎಂಬ ಮೊದಲನೆ ಪ್ರಶ್ನಕ್ಕೆ ಪ್ರತ್ಯುತ್ತರವನ್ನು " ದೈವತಂ " ಎಂಬ ಅರ್ಧ ಶ್ಲೋಕದಿಂದ ಹೇಳುತ್ತಾರೆ. ಬ್ರಹ್ಮ ರುದ್ರೇಂದ್ರಾದಿ ದೇವತೆಗಳೆಲ್ಲರಿಗೂ ಅವನೇ ಮಹತ್ತಾದ ದೇವತೆಯು ; ಅದು ಹೇಗೆಂದರೆ? ಅಗ್ನೀಂದ್ರಾದಿ ದೇವತೆಗಳಿ ಮೊದಲಾದ ಸರ್ವರಿಗೂ ಅವನೆಯಲ್ಲವೆ "ಪಿತಾ" ಆಗಿರುವನು. ಅದರಲ್ಲಿಯೂ ಸಮಯಕ್ಕೊದಗದೆ ಇರುವ ಔಪಾಧಿಕರಾದ ಲೌಕಿಕ ಪಿತ್ರಾದಿಗಳಂತೆ ಇರದೆ ಸರ್ವಕಾಲದಲ್ಲಿ ಕೈಬಿಡದೆಕಾಯುವ ನಾಶವಿಲ್ಲದ ತಂದೆಯು ಅವನೆಯಲ್ಲವೊ. ॥೧೦॥

ಮುಂದಿನ ಶ್ಲೋಕದಿಂದ ಅವನಿಗುಂಟಾಗಿರುವ ಪಿತೃತ್ವವನ್ನೇ ಸ್ಥಾಪಿಸುತ್ತಾರೆ. ಬ್ರಹ್ಮಾದಿ ಸ್ಥಾವರಾಂತವಾದ ಸಕಲ ಭೂತಗಳೂ ಆದಿ ಸೃಷ್ಟಿಯಲ್ಲಿ ಯಾವ ಪುರುಷನಿಂದ ಉಂಟಾಗಿರುವುವೊ; ಚತುರ್ಮುಖ ಬ್ರಹ್ಮನನ್ನು ಸೃಷ್ಟಿಸಿದ ಬಳಿಕ ಆ ಚತುರ್ಮುಖ ಬ್ರಹ್ಮನ ಮೂಲಕವಾಗಿ ಇತರ ಸೃಷ್ಟಿಗಳನ್ನು ಮಾಡುವುದರಿಂದ ಸರ್ವಸ್ರಷ್ಟಾ ಆದ ಬ್ರಹ್ಮನನ್ನು ತಾನೆ ಸೃಷ್ಟಿಸುತ್ತಾನೆಂದು ಬೋಧಿಸುವುದಕ್ಕಾಗಿ ಇಲ್ಲಿ " ಆದಿ ಯುಗಾಗಮೇ " ಎಂದು ಹೇಳಿತು. ಇದರಿಂದ ಜಗತ್ತಿಗೆ ಪರಮಪುರುಷನು ನಿಮಿತ್ತಕಾರಣನೆಂದು ಹೇಳಿದಂತೆ ತಿಳಿಯಬೇಕು.

## ಪರಬ್ರಹ್ಮಕ್ಕೆ ಉಪಾದಾನ ಸಹಕಾರಿ ಕಾರಣತ್ವವನ್ನು ತೋರಿಸುವ ಪ್ರಕಾರವು.

ಮುಂದಿನ ಅರ್ಧದಿಂದ ಉಪಾದಾನ ಕಾರಣವೂ ಅವನೇ ಎಂದು ಹೇಳಲ್ಪಡುವುದು. ಪುನಶ್ಚ ಯುಗಾಂತದಲ್ಲಿ ಯಾವ ಪರಮಪುರುಷನಲ್ಲಿ ಸಕಲ ಭೂತಗಳೂ ಲಯಿಸುವುವೋ; ಕಾರ್ಯವೆಲ್ಲವೂ ಲಯಿಸಬೇಕಾದರೆ ಉಪಾದಾನ ಕಾರಣದಲ್ಲಿತಾನೆ; ಮೂಲದಲ್ಲಿರುವ "ಚ" ಕಾರಕ್ಕೆ ಸಹಕಾರಿ ಕಾರಣವೂ ಅವನೇ ಯೆಂದರ್ಥವು. ಇಂತಹ ಲಕ್ಷಣವುಳ್ಳವನನ್ನು ತಾನೆ ಪರತತ್ವವೆಂದು "ಯತೋವಾ ಇಮಾನಿ" ತ್ಯಾದಿ ಶ್ರುತಿಯಲ್ಲಿಯೂ "ಜನ್ಮಾದ್ಯಸ್ಯಯತಃ" ಎಂಬ ಸೂತ್ರದಲ್ಲಿಯೂ ನಿರ್ಧರಿಸಿ ಹೇಳಿರುವುದು.

(ಈ ಸರ್ವಭೂತಗಳು ಯಾವ ಪರಮಪುರುಷನಿಂದ ಉಂಟಾಗುವವೋ ; ಈಪ್ರಪಂಚಕ್ಕೆ ಯಾವ ಪರಮಪುರುಷನ ದಶೆಯಿಂದ ಜನ್ಮಾದಿಗಳುಂಟಾಗುವುವೋ ; ಎಂದರ್ಥವು.)

ಬ್ರಹ್ಮವೇ ತ್ರಿವಿಧಕಾರಣವೆಂಬುವುದನ್ನು "ಬ್ರಹ್ಮವನಂ ಬ್ರಹ್ಮ ಸವೃಕ್ಷ ಆಸೀತ್ ॥ ಪ್ರಕೃತಿಶ್ಚ ಪ್ರತಿಜ್ಞಾ ದೃಷ್ಟಾಂತಾನುಪ ರೋಧಾತ್" ಎಂಬಿದೆ ಮೊದಲಾದ ಶ್ರುತಿಸೂತ್ರಗಳಲ್ಲಿ ವಿಚಾರಿಸಿ ನಿರ್ಣಯಿಸಿರುತ್ತಾರೆ.

(ಬ್ರಹ್ಮವೇ ವನವು, ಬ್ರಹ್ಮವೇ ವೃಕ್ಷವೂ ಆಗಿರುವುದು ಪ್ರತಿಜ್ಞೆಗೂ ದೃಷ್ಟಾಂತಕ್ಕೂ ಸಾಂಗತ್ಯ ವಿರುವುದರಿಂದ ಉಪಾದಾನ ಕಾರಣವೂ ಪರಮಪುರುಷನೆ. ಘಟಕ್ಕೆ ಮಣ್ಣು ಉಪಾದಾನ ಕಾರಣವು. ಎಂದೀ ಪ್ರಮಾಣಾರ್ಥವು.)

ಇದರಿಂದ ಪರಮಪುರುಷನು ಉಪಾದಾನ ಕಾರಣನೆಂತಲೂ, ಶಿವನು ನಿಮಿತ್ತಕಾರಣನೆಂತಲೂ, ಹೇಳುವ "ಉಪಾದಾನಂತು ಭಗವಾನ್ಕಾರಣಂ ತು ಮಹೇಶ್ವರಃ" ಎನ್ನುವ ಮತವು ವೇದಮಾರ್ಗ ವಿರುದ್ಧವಾಗಿರುವುದೆಂದರಿಯಬೇಕು. ಆದರೆ ಭಗವಂತನನ್ನು ಜಗತ್ತಿಗೆ ಉಪಾದಾನ ಕಾರಣವನ್ನಾಗಿ ಹೇಳಿದರೆ ಅವನಿಗೆ ವಿಕಾರಾಸ್ಪದತ್ವಾದಿ ಶಂಕೆಗೆ ಅವಕಾಶವಿಲ್ಲವೊ; ಮಣ್ಣಿನ ವಿಕಾರ ತಾನೆ ಘಟವಾಗಿ ಪರಿಣಮಿಸುವುದು. ಆದುದರಿಂದ ಉಪಾದಾನ ಕಾರಣನಾಗಿರುವುದರಿಂದ ವಿಕಾರವೇ ಮೊದಲಾದ ದೋಷಗಳು ಅವಶ್ಯವಾಗಿ ಉಂಟಾಗುವುವೆಂದು ಹೇಳುವುದು ಯುಕ್ತವಲ್ಲವು. ಏತಕ್ಕೆಂದರೆ? ಅವನಿಗೆ ಶರೀರವಾಗಿರುವ ಪ್ರಕೃತ್ಯಾದಿಗಳಿಗುಂಟಾಗಿರುವ ವಿಕಾರದಿಂದ ಅವನಿಗೆ ಉಪಾದಾನ ಕಾರಣತ್ವವನ್ನು

ಹೇಳುವುದರಿಂದ ಈ ಆಕ್ಷೇಪಕ್ಕೆ ಅವಕಾಶವಿಲ್ಲವು. ಈ ಅರ್ಥಕ್ಕೆ (ಊರ್ಣ ನಾಭಿಯನ್ನು-ನೂಲನ್ನು ಮಾಡುವ ಕ್ರಿಮಿಯನ್ನು) ದೃಷ್ಟಾಂತಪಡಿಸಿ ಹೇಳಿರುವ ಶ್ರುತಿಯೇ ಆಧಾರವಾಗಿರುವುದು

ಮೂಲದಲ್ಲಿ "ಸಃ ದೈವತಂ" ಎಂದು ವಿಧಿಸದೆ "ಯಃ ದೈವತಂ" ಎಂದು ಪ್ರಸಿದ್ಧಾರ್ಥದಂತೆ ಹೇಳಿರುವುದಕ್ಕೆ ಸಕಲ ಶಾಸ್ತ್ರಗಳಲ್ಲಿಯೂ ಅವನೆ ಪರತತ್ವವೆಂಬ ಪ್ರಸಿದ್ಧಿ ಪ್ರಾಚುರ್ಯವನ್ನು ಹೇಳುವುದರಲ್ಲಿ ತಾತ್ಪರ್ಯವು.

ಈ ಪ್ರಕಾರವಾಗಿತಾನೆ ಪರತತ್ವ ಲಕ್ಷಣವನ್ನೂ ಅದರ ತತ್ವ ಸ್ಥಿತಿಯನ್ನು ಅದರ ಉಪಾಸನವನ್ನು, ಅದನ್ನು ಸೇರ-ವುದೆಂಬ ತತ್ಪ್ರಾಪ್ತಿಯನ್ನು ಹೇಳುವುಧಕ್ಕಾಗಿ ಪ್ರವರ್ತಿಸಿದ ಉಪನಿಷತ್ತುಗಳಲ್ಲಿಯೂ ಶಾಸ್ತ್ರಗಳಲ್ಲಿಯೂ "ಸತ್-ಅಸತ್-ಅಕ್ಷರಂ" ಎಂಭಿದೇ ಮೊದಲಾದ ಪದ ಗಳನ್ನು ಪ್ರತ್ಯೇಕವಾಗಿಯೂ, 'ಪರಂ' ಎಂಬಿದೇ ಮೊದಲಾದ ಪದಗ ಳೊಡನೆ ಸೇರಿಸಿಯೂ ಸಾಮಾನ್ಯವಾಗಿ ಪರತತ್ವವನ್ನು ಹೇಳಿ ; ಅಂತಹ ಪರತತ್ವವು ; ಚತುರ್ಮುಖ ಬ್ರಹ್ಮನೊ ? ಅಥವಾ ವಿಷ್ಣುವೊ ? ಶಿವನೊ ? ಅಥವಾ ಇತರ ದೇವತೆಯೊ ? ಎಂಬ ಶಂಕೆಯು ಪ್ರಾಪ್ತವಾದಮೇಲೆ ಶ್ರೀ ಮನ್ನಾರಾಯಣವಿಷ್ಣುವೇ ಪರತತ್ವವೆಂದು ಸ್ಫುಟತರವಾಗಿ ಪ್ರತಿಪಾದಿಸುವ ಅನಂ ತಗಳಾದ (೧) "ನಾರಾಯಣ ಪರಂ ಬ್ರಹ್ಮ ತತ್ವಂ ನಾರಾಯಣಃ ಪರಃ ॥ ತದ್ವಿಷ್ಣೋಃ ಪರಮಂ ಪದಮ್ ॥ ಯಸ್ಮಾತ್ಪರಂ ನಾ ಪರಮಸ್ತಿ ಕಿಂಚಿತ್॥ ಪುರುಷಾನ್ನ ಪರಂ ಕಿಂಚಿತ್ ॥ ಮತ್ತಃ ಪರತರಂ ನಾನ್ಯತ್॥ ಉತ್ತಮಃ ಪುರುಷಸ್ತ್ವನ್ಯಃ" ಇತ್ಯಾದಿ ಶ್ರುತಿವಾಕ್ಯಗಳಿಂದಲೂ ಸ್ಪಷ್ಟ ಪ್ರತಿ ಪಾದಕಗಳಾದ ವಾಕ್ಯಗಳ ಗತಿಯನ್ನನುಸರಿಸಿಯೂ ತತ್ವಾರ್ಥವನ್ನೇ ವಿಶದವಾಗಿ ಬೋಧಿಸುವ ಉತ್ತರ ನಾರಾಯಣಾನುವಾಕ ವಿಶಿಷ್ಟವಾದ ಪುರುಷಸೂಕ್ತವೆ ಮೊದಲಾದ ಪ್ರಬಲ ಪ್ರದೇಶಾಂತರ ತಾತ್ಪರ್ಯದಿಂದ ಲೂ, ಕಠವಲ್ಲಿಯೇ ಮೊದಲಾದ ಅನೇಕೋಪನಿಷದುದ್ಘೋಷಗಳಿಂದಲೂ ಸಾತ್ವಿಕಗಳಾದ ಇತಿಹಾಸ ಪುರಾಣಾದ್ಯನೇಕ ವಚನಶತಗಳಿಂದಲೂ, ಪರ ದೇವತಾ ಪಾರಮಾರ್ಥ್ಯವನ್ನು ಯಥಾವತ್ತಾಗಿ ತಿಳಿದ ಪರಾಶರ ವ್ಯಾಸ ವಾಲ್ಮೀಕಿ ಪ್ರಭೃತಿಗಳಾದ ಪರಮರ್ಷಿಗಳು ಇದು ತಾನೇ ವೇದಸಿದ್ಧಾಂ ತವೆಂದು ಇವನನ್ನೇ ಪರತತ್ವವನ್ನಾಗಿ ಹೇಳುವುದರಿಂದಲೂ, 'ರೂಪವು-

ಆಯುಧವು-ವಾಹನವು-ಚರಿತ್ರ' ವೇ ಮೊದಲಾದವುಗಳ ಸಾಮರ್ಥ್ಯ ದಿಂದಲೂ, ಪರಮಪುರುಷನ ನಿರಂಕುಶವಾದ ಐಶ್ವರ್ಯವನ್ನೂ ದೇವತಾಂತರಗಳಿಗುಂಟಾಗಿರುವ ಅಪಕರ್ಷ (ನೈಚ್ಯ) ವನ್ನೂ ವಿವೇಕಿಗಳು ತಾವಾಗಿಯೇ ತಿಳಿದುಕೊಳ್ಳಬಹುದಷ್ಟೆ? ಈ ವಿಷಯವನ್ನು ಉತ್ತರ ಮೀಮಾಂಸೆಯಲ್ಲಿ ದಹರ, ವೈಶ್ವಾನರಾಧಿಕರಣವೇ ಮೊದಲಾದ ಸ್ಥಲಗಳಲ್ಲಿಯೂ, ಸಮನ್ವಯಾಧಿಕರಣದಲ್ಲಿಯೂ ನಮ್ಮಗಳ ಆಚಾರ್ಯರುಗಳು ತೀರ್ಮಾನಿಸಿರುತ್ತಾರಾಗಿ ನಾವು ಈ ವಿಷಯದಲ್ಲಿ ಅಧಿಕವಾಗಿ ವಿವರಿಸಲಾರೆವು.

ಈ ಪ್ರಕಾರವೇ ಶ್ರೀಯಾಮುನಾಚಾರ್ಯರು (೨) "ತ್ವಾಂ ಶೀಲರೂಪ ಚರಿತ್ರೈಃ" ಎಂತಲೂ, "ತತ್ತ್ವಾರ್ಥ ತತ್ಪರ ಪರಶ್ಶತ ವೇದವಾಕ್ಯಸ್ಸಾಮರ್ಥ್ಯ ತಸ್ಸ್ಮೃತಿಭಿರಪ್ಯಧ ತಾದೃಶೀಭಿಃ| ತ್ವಾಮೇವ ತತ್ತ್ವ ಪರ ಸಾತ್ವಿಕ ಸತ್ಪುರಾಣೈ ರ್ದ್ವೈವಜ್ಞಧೀಭಿರಪಿ ನಿಶ್ಚಿನುಮಃ ಪರೇಶಂ || ರೂಪಶ್ರಿಯಾ ಪರಮಯಾ ಪರಮೇಣಧಾಮ್ನಾ ಚಿತ್ರೈಶ್ಚ ಕೈಶ್ಚಿ ದುಚಿತೈರ್ಭಗವತ ಶ್ಚರಿತ್ರೈಃ | ಚಕ್ಷೈ ರನಿಹ್ನವಪದೈ ರಪರೈಶ್ಚ ಕೈಶ್ಚಿನ್ನಿಶ್ಚಿನ್ವತೇ ತ್ವಯಿ ವಿಪಶ್ಚಿತ ಈಶಿತೃತ್ವಂ" ಎಂಬದಾಗಿ ಶ್ರೀಕೂರನಾಥರೂ ಅನುಗ್ರಹಿಸಿರುತ್ತಾರೆ.

(ಪರದೇವತಾ ಪಾರಮಾರ್ಥ್ಯ ಪ್ರಕರಣಸ್ಥಗಳಾದ ಪ್ರಮಾಣ ವಚನಗಳ ಅರ್ಥವು.
(೧) ನಾರಾಯಣನೇ ಪರಬ್ರಹ್ಮವು, ನಾರಾಯಣನೇ ಪರತತ್ತ್ವವು; ವಿಷ್ಣುವಿನ ಶ್ರೇಷ್ಠವಾದ ಪದವು ಅದೇ; ಅದಕ್ಕಿಂತಲೂ ಶ್ರೇಷ್ಠವಾದದ್ದು ಬೇರೊಂದಿಲ್ಲವು, ಪುರುಷನಿಗಿಂತಲೂ ಬೇರೊಂದು ಶ್ರೇಷ್ಠವಾದ ವಸ್ತುವಿಲ್ಲವು. ನನಿಗಿಂತಲೂ ಶ್ರೇಷ್ಠವಾದದ್ದು ಬೇರೊಂದಿಲ್ಲವು ಉತ್ತಮ ಪುರುಷನು ಜೀವನಿಗಿಂತಲೂ ಭಿನ್ನಪಟ್ಟವನು

(೨) ಶೀಲ, ರೂಪ, ಚರಿತ್ರಾದಿಗಳಿಂದ ನಿನ್ನನ್ನು ಸರ್ವಸ್ಮಾತ್ಪರನೆಂದು ಹೇಳುತ್ತಾರೆ ತತ್ತ್ವಾರ್ಥವನ್ನು ಪ್ರತಿಪಾದಿಸುವ ಅನೇಕ ವೇದವಾಕ್ಯಗಳಿಂದಲೂ, ರೂಪಾಯುಧಾದಿ ಸಾಮರ್ಥ್ಯದಿಂದಲೂ, ಅಂತಹ ಸ್ಮೃತಿಗಳಿಂದಲೂ, ತತ್ತ್ವವನ್ನು ಪ್ರತಿಪಾದಿಸುವ ಸಾತ್ವಿಕ ಪುರಾಣಗಳಿಂದಲೂ ಹಿರಿಯರ ಸಿದ್ಧಾಂತಾಭಿಪ್ರಾಯಗಳಿಂದಲೂ ನಿನ್ನನ್ನೇ ಈಶ್ವರನೆಂಬದಾಗಿ ನಿಶ್ಚಯಿಸುತ್ತಾರೆ.

ಉತ್ಕೃಷ್ಟವಾದ ದಿವ್ಯಮಂಗಳ ವಿಗ್ರಹ ಶೋಭಾವಿಶೇಷದಿಂದಲೂ ಶ್ರೀಪರಮಪದವೆ ವಾಸಸ್ಥಾನವಾಗಿರುಕೆಯಿಂದಲೂ ವಿಚಿತ್ರಗಳಾದ ಉಚಿತಗಳಾಗಿರುವ ನಿನ್ನ ಕೆಲವು ಚರಿತ್ರಗಳಿಂದಲೂ ಮರೆಮಾಡುವುದಕ್ಕೆ ಆಗದ ಇನ್ನೂ ಕೆಲವು ಗುರುತುಗಳಿಂದಲೂ, ಬೇರೆ ಕೆಲವು ಕಾರಣಗಳಿಂದಲೂ, ಮಹನೀಯರಾದ ಬ್ರಹ್ಮವಿದಗ್ರೇಸರರು ನಿನ್ನಲ್ಲಿ ತಾನೆ ಈಶ್ವರತ್ವವನ್ನು ನಿಶ್ಚಯಿಸಿರುತ್ತಾರೆ)

(ಶಂ॥ ಭಾ॥) "ಕಿಮೇಕಂ ದೈವತಂ ಲೋಕೇ" ಎಂಬ ಮೊದಲನೇ ಪ್ರಶ್ನೆಕ್ಕೆ ಉತ್ತರವು. (೧೦ನೆ ಶ್ಲೋಕಾರ್ಥವು) ಪಾವನಗಳಾದ ತೀರ್ಥಾದಿಗಳಿಗೂ ಕೂಡ ಪಾವನತ್ವವನ್ನು ಕಲ್ಪಿಸುವಂತವನು; ಮತ್ತು ಧ್ಯಾನಿಸಲ್ಪಟ್ಟರೂ ನೋಡಲ್ಪಟ್ಟರೂ ಕೀರ್ತಿಸಲ್ಪಟ್ಟರೂ ಸ್ತೋತ್ರಮಾಡಲ್ಪಟ್ಟರೂ ಪೂಜಿಸಲ್ಪಟ್ಟರೂ ಸ್ಮರಿಸಲ್ಪಟ್ಟರೂ ನಮಸ್ಕರಿಸಲ್ಪಟ್ಟರೂ ಸಮಸ್ತ ಪಾಪಗಳನ್ನು ನಾಶಪಡಿಸುತ್ತಾನಾದುದರಿಂದ ಪಾವನನೆನ್ನಲ್ಪಡುವನು. ಅಥವಾ ಸಂಸಾರಕ್ಕೆ ಕಾರಣವಾದ ಪುಣ್ಯಪಾಪಗಳನ್ನೂ ಅದಕ್ಕೆ ಕಾರಣವಾದ ಸಮಸ್ತ ಅಜ್ಞಾನವನ್ನೂ; ಆತ್ಮಯಾಥಾತ್ಮ್ಯ ಜ್ಞಾನವನ್ನು ಹುಟ್ಟಿಸುವುದರಿಂದ ನಾಶಪಡಿಸುತ್ತಾನಾದುದರಿಂದ ಪಾವನಗಳಾದ ತೀರ್ಥಾದಿಗಳಿಗೂ ಕೂಡ ಪವಿತ್ರತೆಯನ್ನುಂಟುಮಾಡತಕ್ಕವನೆಂದರಿಯಬೇಕು. (ಈ ವಿಷಯದಲ್ಲಿ ಶ್ರುತಿ ಸ್ಮೃತ್ಯಾದ್ಯನೇಕ ಪ್ರಮಾಣಗಳನ್ನಿಲ್ಲಿ ತೋರಿಸುತ್ತಾರೆ.) (೧) "ರೂಪಮಾರೋಗ್ಯ ಮರ್ಥಾಂಶ್ಚ ಭೋಗಾಂಶ್ಚೈವಾನುಷಂಗಿಕಾನ್ | ದದಾತಿ ಧ್ಯಾಯತೋ ನಿತ್ಯ ಮಪವರ್ಗ ಪ್ರದೋ ಹರಿಃ ‖ (೨) ಚಿಂತ್ಯಮಾನ ಸ್ಸಮಸ್ತಾನಾಂ ಕ್ಲೇಶಾನಾಂ ಹಾನಿದೋ ಹರಿಃ | ಸಮುತ್ಸೃಜ್ಯಾಖಿಲಂಚಾನ್ಯ ತ್ಸೋಽಚ್ಯುತಃ ಕಿಂ ನಚಿಂತ್ಯತೆ ‖ (೩) ಧ್ಯಾಯೇ ನ್ನಾರಾಯಣಂ ದೇವಂ ಸ್ನಾನಾದಿಷು ಚ ಕರ್ಮಸು | ಪ್ರಾಯಶ್ಚಿತ್ತಂ ಹಿ ಸರ್ವಸ್ಯ ದುಷ್ಕೃತಸ್ಯೇತಿ ವೈಶ್ರುತಿಃ ‖ (೪) ಅತಿಪಾತಕಯುಕ್ತೋಽಪಿ ಧ್ಯಾಯನ್ನಿಮಿಷ ಮಚ್ಯುತಂ | ಭೂಯಸ್ತಪಸ್ವೀ ಭವತಿಪಂಕ್ತಿಪಾವನ ಪಾವನಃ | (೫) ಆಲೋಡ್ಯ ಸರ್ವಶಾಸ್ತ್ರಾಣಿ ವಿಚಾರ್ಯಚ ಪುನಃ ಪುನಃ | ಇದಮೇಕಂ ಸು ನಿಷ್ಪನ್ನಂ ಧ್ಯೇಯೋ ನಾರಾಯಣ ಸ್ಸದಾ" ‖

(ಈ ಪ್ರಮಾಣಾರ್ಥಗಳು. (೧) ಮೋಕ್ಷಪ್ರದನಾದ ನಾರಾಯಣನು ತನ್ನನ್ನು ಧ್ಯಾನಿಸುವಂತವನಿಗೆ ರೂಪವು ಆರೋಗ್ಯವು ಧನವು ಇನ್ನೂ ಇತರ ಭೋಗಗಳೆಲ್ಲವನ್ನೂ ಈ ಲೋಕದಲ್ಲಿ ಕೊಡುವನು. ಇಲ್ಲಿ ಮೋಕ್ಷವೆಂಬ ಮಹಾಫಲವು ಪ್ರಧಾನವಾಗಿ ಧ್ಯಾನಿಸತಕ್ಕವರಿಗುಂಟಾಗುವುದೆಂತಲೂ ಅನುಷಂಗಿಕವಾಗಿ ಇಹಲೋಕದಲ್ಲಿ ಆರೋಗ್ಯಾದಿಗಳುಂಟಾಗುವುವೆಂತಲೂ ಅರಿಯಬೇಕು. (೨) ಹರಿಯಾದವನು ಧ್ಯಾನಿಸಲ್ಪಟ್ಟರೆ ಸಮಸ್ತ ದುಃಖಗಳನ್ನೂ ನಾಶಪಡಿಸುವನು. ಆದುದರಿಂದ ಇತರ ಸಮಸ್ತ ವಿಷಯಗಳನ್ನು ಬಿಟ್ಟು ಅವನನ್ನೇ ಯಾತಕ್ಕೆ ಧ್ಯಾನಿಸಬಾರದು. (೩) ಸ್ನಾನಾದಿ ಸಕಲ ಕರ್ಮಗಳಲ್ಲಿಯೂ ನಾರಾಯಣನನ್ನು ಸ್ಮರಿಸಬೇಕು. ಏತಕ್ಕೆಂದರೆ ? ನಾರಾಯಣನ ಸ್ಮರಣವು ಸ್ನಾನಾದಿ ಕರ್ಮಗಳಲ್ಲಿ ಪ್ರಾಪ್ತವಾಗುವ ಸಮಸ್ತ ಪಾಪಗಳಿಗೂ ಪ್ರಾಯಶ್ಚಿತ್ತವಾ

ಗಿರುವುದೆಂದು ಶ್ರುತಿಯು ಹೇಳುವುದು. (೪) ಅತ್ಯಂತ ಕ್ರೂರಗಳಾದ ಪಾಪಗಳನ್ನು ಮಾಡಿದವನು ಕೂಡ ಶ್ರೀಮನ್ನಾರಾಯಣನನ್ನು ಸ್ವಲ್ಪಕಾಲವಾದರೂ ಧ್ಯಾನಿಸಿದರೆ ಅಂತವನು ಪುನಃ ಪಂಕ್ತಿಯನ್ನು ಪಾವನವನ್ನಾಗಿ ಮಾಡುವವರನ್ನು ಕೂಡ ಪವಿತ್ರರನ್ನಾಗಿ ಮಾಡುವ ತಪಸ್ವಿಯಾಗುವನು (೫) ಸಮಸ್ತ ಶಾಸ್ತ್ರಗಳನ್ನು ಪರಿಶೋಧಿಸಿ ಪುನಃ ಪುನಃ ವಿಮರ್ಶಿಸುವುದರಿಂದ ನಾರಾಯಣನೊಬ್ಬನೇ ಧ್ಯಾನಾರ್ಹನಾದ ಪರತತ್ವವೆಂದು ಸಿದ್ಧಾಂತಪಡಿಸಲ್ಪಟ್ಟಿರುವುದು.)

(೬) "ಹರಿರೇಕಸ್ಸದಾ ಧ್ಯೇಯೋ ಭವದ್ಭಿ ಸ್ಸತ್ವ ಸಂಸ್ಥಿತೈಃ । ಓಮ್ ಇತ್ಯೇವಂ ಸದಾ ವಿಪ್ರಾ ಪಠತ ಧ್ಯಾತ ಕೇಶವಂ ॥ (೭) ಭಿದ್ಯತೇ ಹೃದಯಗ್ರಂಥಿ ಶ್ಛಿದ್ಯಂತೆ ಸರ್ವ ಸಂಶಯಾಃ । ಕ್ಷೀಯಂತೇ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೆ ॥ (೮) ಯನ್ನಾಮ ಕೀರ್ತನಂ ಭಕ್ತ್ಯಾ ವಿಲಾಪನ ಮನುತ್ತಮಂ । ಮೈತ್ರೇಯಾ ಶೇಷ ಪಾಪಾನಾಂ ಧಾತೂನಾ ಮಿವ ಪಾವಕಃ ॥ (೯) ಅವಶೇನಾಪಿ ಯನ್ನಾಮ್ನಿ ಕೀರ್ತಿತೆ ಸರ್ವಪಾತಕೈಃ । ಪುಮಾ ನ್ವಿಮುಚ್ಯತೆ ಸದ್ಯಸ್ಸಿಂಹತ್ರಸ್ತೈ ರ್ಮೃಗೈರಿವ ॥ (೧೦) ಧ್ಯಾಯನ್ ಕೃತೆಯಜನ್ ಯಜ್ಞೈ ಸ್ತ್ರೇತಾಯಾಂ ದ್ವಾಪರೇಽರ್ಚಯನ್ । ಯದಾಪ್ನೋತಿ ತದಾಪ್ನೋತಿ ಕಲೌ ಸಂಕೀರ್ತ್ಯ ಕೇಶವಂ"॥

(೬) ಓ ವಿಪ್ರರೆ ? ಸತ್ವಗುಣಾವಲಂಬಿಗಳಾದ ನಿಮ್ಮಗಳಿಗೆ ಸರ್ವಕಾಲದಲ್ಲಿಯೂ ನಾರಾಯಣನೊಬ್ಬನೆ ಧ್ಯಾನಾರ್ಹನಾಗಿರುವುದರಿಂದ "ಓಮ್" ಎಂಬದಾಗಿ ಬಾಯಿಯಲ್ಲಿ ಹೇಳುತಾ ನಾರಾಯಣನ ಧ್ಯಾನವನ್ನು ಮಾಡಿ. (೭) ಪರಾ ವರವಸ್ತುವಾದ ಅವನನ್ನು ಕಂಡಮಾತ್ರದಲ್ಲಿಯೇ ಹೃದಯಗ್ರಂಥಿಯು ಭೇದಿಸಲ್ಪಡುವುದು, ಸಕಲ ಸಂದೇಹಗಳೂ ಛೇದಿಸಲ್ಪಡುವುವು, ಸಂಸಾರ ಕಾರಣಗಳಾದ ಪುಣ್ಯಾ ಪಾಪಾತ್ಮಕಗಳಾದ ಕರ್ಮಗಳು ನಶಿಸಿ ಹೋಗುವುವು. (೮) ಎಲೈ ಮೈತ್ರೇಯನೆ ? ಅಗ್ನಿಯು ಬೆಳ್ಳಿ ಚಿನ್ನವೇ ಮೊದಲಾದ ಧಾತುಗಳನ್ನು ಕರಗಿಸುವಂತೆ ಭಕ್ತಿಯಿಂದ ಮಾಡಲ್ಪಡುವ ನಾರಾಯಣನ ನಾಮ ಸಂಕೀರ್ತನವು ಸಕಲ ಪಾಪಗಳನ್ನು ಕರಗಿಸುವುದು. (೯) ನಾರಾಯಣನ ನಾಮಕೀರ್ತನವು ಅವಶಾತ್ತಾಗಿ ಮಾಡಲ್ಪಟ್ಟರೂ ಸಿಂಹದಿಂದ ಭಯಪಟ್ಟು ಓಡುವ ಮೃಗಗಳು ಹೇಗಾದರೆ ಬಿಡುಗಡೆಯನ್ನು ಹೊಂದುವುವೊ ಅದರಂತೆ ಪಾಪಗಳಿಂದ ಬಿಡುಗಡೆಯನ್ನು ಹೊಂದುವನು. (೧೦) ಕೃತಯುಗದಲ್ಲಿ ಧ್ಯಾನದಿಂದಲೂ, ತ್ರೇತಾಯುಗದಲ್ಲಿ ಯಜ್ಞಾದ್ಯನುಷ್ಠಾನಗಳಿಂದಲೂ ದ್ವಾಪರಯುಗದಲ್ಲಿ ಅರ್ಚಿಸುವುದರಿಂದಲೂ ಯಾವ ಫಲವು ಲಭಿಸುವುದೊ ಕಲಿಯುಗದಲ್ಲಿ ಮಾಡಲ್ಪಡುವ ನಾರಾಯಣನ ನಾಮ ಸಂಕೀರ್ತನವು ಅಂತಹ ಮೂರು ಯುಗಗಳಲ್ಲಿ ಮಾಡಲ್ಪಡುವ ಧ್ಯಾನ ಯಜ್ಞಾರ್ಚನಾದಿ ಸರ್ವಫಲಗಳನ್ನು ಕೊಡುವುದು.

(೧೧) " ಹರಿರ್ಹರತಿ ಪಾಪಾನಿ ದುಷ್ಟಚಿತ್ತೈರಪಿ ಸ್ಮೃತಃ | ಅನಿಚ್ಛಯಾಪಿ ಸಂಸ್ಪೃಷ್ಟೋ ದಹತ್ಯೇವಹಿ ಪಾವಕಃ ‖ (೧೨) ಜ್ಞಾನತೋಽಜ್ಞಾನತೋವಾಪಿ ವಾಸುದೇವಸ್ಯ ಕೀರ್ತನಾತ್| ತತ್ಸರ್ವಂ ವಿಲಯಂ ಯಾತಿ ತೋಯಸ್ಥಂ ಲವಣಂ ಯಥಾ ‖ (೧೩) ಯಸ್ಮಿನ್ನ್ಯಸ್ತಾ ಮತಿರ್ನ ಯಾತಿ ನರಕಂ ಸ್ವರ್ಗೋಪಿಯಚ್ಚಿಂತನೆ ವಿಘ್ನೋ ಯತ್ರ ನಿವೇಶಿತಾತ್ಮಮನಸೊ ಬ್ರಾಹ್ಮೋಪಿ ಲೋಕೋಲ್ಪಕಃ | ಮುಕ್ತಿಂ ಚೇತಸಿ ಯಸ್ಸ್ಥಿತೊ ಮಲಧಿಯಾಂ ಪುಂಸಾಂ ದದಾತ್ಯವ್ಯಯಃ ಕಿಂ ಚಿತ್ರಂ ಯದಘಂ ಪ್ರಯಾತಿ ವಿಲಯಂ ತತ್ರಾಚ್ಯುತೇ ಕೀರ್ತಿತೆ ‖ (೧೪) ಶಮಾಯಾಲಂ ಜಲಂ ವಹ್ನೆ ಸ್ತಮಸೊ ಭಾಸ್ಕರೊದಯಃ | ಶಾಂತಿಃ ಕಲೌ ರಘೌಘಸ್ಯ ನಾಮ ಸಂಕೀರ್ತನಂ ಹರೇಃ ‖ (೧೫) ಹರೇರ್ನಾಮೈವ ನಾಮೈವ ನಾಮೈವ ಮಮಜೀವನಂ | ಕಲೌ ನಾಸ್ತ್ಯೇವ ನಾಸ್ತ್ಯೇವ ನಾಸ್ತ್ಯೇವ ಗತಿರನ್ಯಥಾ ‖ "

(೧೧) ಇದು ಬೆಂಕಿಯೆಂಬದಾಗಿ ತಿಳಿಯದೆ ಸ್ಪರ್ಶಿಸಿದರೂ ಬೆಂಕಿಯು ಹೇಗಾದರೆ ಸುಡುವಂತಹ ತನ್ನ ಕಾರ್ಯವನ್ನು ಮಾಡುವುದೊ ಅದರಂತೆ ಕಾಮ ಕ್ರೋಧ ರಾಗಾದಿ ದೋಷಗಳಿಂದ ದೂಷಿತವಾದ ಮನೊಮಾಲಿನ್ಯವುಳ್ಳವರು ಸ್ಮರಿಸಿದರೂ ಪರಮಾತ್ಮನು ಪಾಪಗಳನ್ನಪಹರಿಸುವನು. ನಾಮ ಸಂಕೀರ್ತನೆ ಪ್ರಭಾವವಿಂಥಾದ್ದೆಂದು ಭಾವವು. (೧೨) ೩೧ನೇ ಪುಟದಲ್ಲಿ ನೋಡಿ. (೧೩) ನಾರಾಯಣನಲ್ಲಿಡಲ್ಪಟ್ಟ ಬುದ್ಧಿಯುಳ್ಳವನು ನರಕವನ್ನು ಹೊಂದಲಾರನು, ನಾರಾಯಣನ ನಾಮಸಂಕೀರ್ತನದಲ್ಲಿ ಸ್ವರ್ಗವೂ ವಿಘ್ನಕಾರಿಯಾಗಿರುವುದು, ನಾರಾಯಣನಲ್ಲಿ ಇಡಲ್ಪಟ್ಟ ಮನಸ್ಸುಳ್ಳವರಿಗೆ ಬ್ರಹ್ಮಲೋಕವೂ ಅಲ್ಪವಾದದ್ದು, ನಾರಾಯಣನನ್ನು ಪಾಪಿಷ್ಠರು ಸ್ಮರಿಸಿದರೂ ಮುಕ್ತಿಯನ್ನು ಹೊಂದುವರೆನ್ನುವುದಕ್ಕೆ ಸಂದೇಹವೆ ಇಲ್ಲವು, ಹೀಗಿರುವಲ್ಲಿ ನಾರಾಯಣನನ್ನು ಸ್ಮರಿಸುವುದರಿಂದ ಸಕಲ ಪಾಪಗಳೂ ನಾಶಹೊಂದುವುವೆನ್ನುವುದು ಆಶ್ಚರ್ಯವೆ ? (೧೪) ೩೧ನೇ ಪುಟವನ್ನು ನೊಡಿ (೧೫) ಮನೋವಾಕ್ಕಾಯಗಳೆಂಬ ತ್ರಿವಿಧದಿಂದಲೂ ಮೂರುಸಲ ಹೇಳುವೆನು. ಶ್ರೀಹರಿಯ ನಾಮಸಂಕೀರ್ತನವೆ ನನಗೆ ಜೀವನವು ಅದನ್ನು ಬಿಟ್ಟರೆ ಬೇರೆ ಗತಿ ಇಲ್ಲವೇ ಇಲ್ಲ (೩) ವೆಂಬದಾಗಿ ಹೇಳುವೆನು.

(೧೬) " ಸ್ಮೃತ್ವಾ ವಿಷ್ಣುಂ ವಾಸುದೇವಂ ವಿ ಪಾಪೊ ಜಾಯತೆ ನರಃ | ವಿಷ್ಣೋಸ್ಸಂಪೂಜನಾನ್ನಿತ್ಯಂ ಸರ್ವ ಪಾಪಂ ಪ್ರಣಶ್ಯತಿ‖ (೧೭) ಸಂಸಾರ ಸರ್ಪ ಸಂದಷ್ಟ ನಷ್ಟಚೇಷ್ಟೈಕಭೇಷಜಂ | ಕೃಷ್ಣೇತಿ ವೈಷ್ಣವಂ ಮಂತ್ರಂ ಶ್ರುತ್ವಾ ಮುಕ್ತೊ ಭವೇನ್ನರಃ ‖ (೧೮) ಸರ್ವದಾ ಸರ್ವಕಾರ್ಯೇಷು ನಾಸ್ತಿ ತೇಷಾ ಮಮಂಗಳಂ | ಯೇಷಾಂ ಹೃದಿಸ್ಥೊ

ಭಗವಾನ್ಮಂಗಳಾಯತನಂ ಹರಿಃ ‖ (೧೯) ನಿತ್ಯಂ ಸಂಚಿಂತಯೇತ್ಯೇಷ ಯೋಗಯುಕ್ತೋ ಜನಾರ್ದನಂ | ಸಾಸ್ಯರಕ್ಷಾಂ ಪರಾಂ ಮನ್ಯೇಕೋಹಿ ನಸ್ತ್ಯಚ್ಯುತಾಶ್ರಯಂ ‖ (೨೦) ಗಂಗಾಸ್ನಾನ ಸಹಸ್ರೇಷು ಪುಷ್ಕರ ಸ್ನಾನಕೋಟಿಷು | ಯತ್ಪಾಪಂ ವಿಲಯಂಯಾತಿ ಸ್ಮೃತೆ ನಶ್ಯತಿತದ್ಧರೌ ‖"

(೧೬) ಸರ್ವವ್ಯಾಪಕನಾದ ನಾರಾಯಣನನ್ನು ಸ್ತುತಿಸುವಂತವನು ಸಕಲ ಪಾಪಗಳಿಂದ ಬಿಡಲ್ಪಡುವನು ಶ್ರೀವಿಷ್ಣುವಿನ ಆರಾಧನದಿಂದ ಸರ್ವಪಾಪವೂ ನಶಿಸಿಹೋಗುವುದು. (೧೭) ಸಂಸಾರವೆಂಬ ಸರ್ಪದಿಂದ ಕಡಿಯಲ್ಪಟ್ಟು ಸ್ಮೃತಿಹೀನರಾದವರಿಗೆ "ಶ್ರೀಕೃಷ್ಣ" ಎಂಬ ವಿಷ್ಣುಸಂಬಂಧವಾದ ನಾಮರೂಪವಾಗಿರುವ ಮಂತ್ರವು ದಿವ್ಯೌಷಧವಾಗಿರುವುದು. (೧೮) ಸರ್ವಮಂಗಳಗಳಿಗೂ ನಿಲಯನಾದ ಶ್ರೀಹರಿಯು ಯಾವನ ಹೃದಯದಲ್ಲಿರುವನೊ ಅಂತವರಿಗೆ ಸರ್ವಕಾಲದಲ್ಲಿಯೂ ಅಮಂಗಳವಿಲ್ಲದೆ ಇರುವುವು. ಅಂತವರಿಗೆ ಯಾವಾಗಲೂ ಶುಭವೆ ಎಂದರ್ಥವು. (೧೯) ಮನೋನಿಗ್ರಹವುಳ್ಳವನಾಗಿ ನಾರಾಯಣನನ್ನು ಸರ್ವಕಾಲಗಳಲ್ಲಿಯೂ ಸ್ಮರಿಸುವಂತವನಿಗೆ ಆ ನಾರಾಯಣನ ಸ್ಮರಣೆಕ್ಕಿಂತಲೂ ಇತರವಾದ ಶ್ರೇಷ್ಠವಾಗಿರುವ ರಕ್ಷಣೋಪಾಯವೇನಿರುವುದು ? ಅಚ್ಯುತನನ್ನಾಶ್ರಯಿಸಿರುವ ಮಹಾನುಭಾವನನ್ನು ಯಾರುತಾನೆ ಕೊಲ್ಲುವರು. (ಈ ಅರ್ಥವು ಶ್ರೀಮದ್ರಾಮಾಯಣ ಸುಂದರಕಾಂಡದಲ್ಲಿರುವ "ಬ್ರಹ್ಮಾ ಸ್ವಯಂಭೂ ಶ್ಚತುರಾನನೋವಾ ರುದ್ರಸ್ತ್ರಿನೇತ್ರ ಸ್ತ್ರಿಪುರಾಂತಕೋವಾ | ಇಂದ್ರೋ ಮಹೇಂದ್ರ ಸ್ಸುರನಾಯಕೋವಾ ತ್ರಾತುಂ ನಶಕ್ತಾಯುಧಿ ರಾಮ ವಧ್ಯಂ" ಎಂಬ ಹನುಮದ್ವಾಕ್ಯದಿಂದಲೂ ಸಿದ್ಧವಾಗಿರುವುದು.) (೨೦) ಅನೇಕ ಸಾವಿರಾರು ಗಂಗಾಸ್ನಾನಗಳಿಂದಲೂ ಅನೇಕ ಕೋಟಿ ಪುಷ್ಕರ ಸ್ನಾನಗಳಿಂದಲೂ ಎಷ್ಟು ಪಾಪಗಳು ನಶಿಸುವುವೊ ಅಷ್ಟು ಪಾಪಗಳು ಹರಿ ಸ್ಮರಣ ಮಾತ್ರದಿಂದ ನಶಿಸುವುವು.

(೨೧) " ಪ್ರಾಯಶ್ಚಿತ್ತಾನ್ಯ ಶೇಷಾಣಿ ತಪಃ ಕರ್ಮಾತ್ಮಕಾನಿವೈ | ಯಾನಿ ತೇಷಾ ಮಶೇಷಾಣಾಂ ಶ್ರೀಕೃಷ್ಣಾನು ಸ್ಮರಣಂ ಪರಂ ‖ (೨೨) ಕಲಿಕಲ್ಮಷ ಮತ್ಯುಗ್ರಂ ನರಕಾರ್ತಿ ಪ್ರದಂ ನೃಣಾಂ | ಪ್ರಯಾತಿ ವಿಲಯಂಸದ್ಯ ಸ್ಸಕೃ ತ್ಕೃಷ್ಣಾನು ಸಂಸ್ಮೃತೇಃ ‖ (೨೩) ಮುಹೂರ್ತ ಮಪಿಯೊ ಧ್ಯಾಯೇ ನ್ನಾರಾಯಣ ಮತಂದ್ರಿತಃ | ಸೋಪಿ ಸಿದ್ಧಿ ಮವಾಪ್ನೋತಿ ಕಿಂ ಪುನಸ್ತತ್ಪರಾಯಣಃ ‖ (೨೪) ಏಕಸ್ಮಿನ್ನಪ್ಯತಿಕ್ರಾಂತೆ ಮುಹೂರ್ತೇ ಧ್ಯಾನವರ್ಜಿತೆ | ದಸ್ಯುಭಿ ರ್ಮುಷಿತೇನೇವ ಯುಕ್ತಮಾಕ್ರಂದಿತುಂಭೃಶಂ ‖ (೨೫) ಸಕೃತ್ಸ್ಮೃತೋಪಿ ಗೋವಿಂದೋ ನೃಣಾಂ ಜನ್ಮಶತೈಃಕೃತಂ | ಪಾಪರಾಶಿಂ ದಹತ್ಯಾಶು ತೂಲರಾಶಿ ಮಿವಾನಲಃ" ‖

(೨೧) ತಪಃ ಕರ್ಮಾತ್ಮಕಗಳಾದ ಸಕಲ ಪ್ರಾಯಶ್ಚಿತ್ತಗಳ್ಯಾವವೋ ಅಂತಹ ಸಮಸ್ತ ಪಾಪ ಪ್ರಾಯಶ್ಚಿತ್ತಗಳಲ್ಲಿ ಶ್ರೀಕೃಷ್ಣನು ಸ್ಮರಣವೇ ಸರ್ವ ಪಾಪಹರವಾಗಿರುವ ಶ್ರೇಷ್ಠವಾದ ಪ್ರಾಯಶ್ಚಿತ್ತವು. (೨೨) ನರಕದುಃಖಗಳನ್ನುಂಟುಮಾಡತಕ್ಕದ್ದಾಗಿಯೂ ಅತ್ಯಂತ ಭಯಂಕರವಾಗಿಯೂ ಇರುವ ಕಲಿಕಲ್ಮಷವೆಲ್ಲವೂ ಶ್ರೀಕೃಷ್ಣನ ನಾಮ ಸ್ಮರಣದಿಂದ ನಾಶಹೊಂದುವುದು. (೨೩) ನಾರಾಯಣನನ್ನು ಕ್ಷಣಮಾತ್ರವಾದರೂ ನಿಶ್ಶಂಕವಾಗಿ ಧ್ಯಾನಮಾಡುವಂತವನು ಸಿದ್ಧಿಯನ್ನು ಹೊಂದುವಾಗ ಸರ್ವಕಾಲದಲ್ಲಿಯೂ ನಾರಾಯಣ ಪರಾಯಣನಾದವನು ಸಿದ್ಧಿಯನ್ನು ಹೊಂದುವ ವಿಷಯದಲ್ಲಿ ಸಂದೇಹ ವೇನು. (೨೪) ನಾರಾಯಣ ಧ್ಯಾನನಿಷ್ಠನಾದವನಿಗೆ ಕ್ಷಣಕಾಲವು ವ್ಯರ್ಥವಾಗಿ ಕಳದು ಹೋದರೂ ಅವನು ಅದಕ್ಕೆ ತನ್ನ ಪದಾರ್ಥವನ್ನು ಕಳ್ಳರು ತೆಗದುಕೊಂಡು ಹೋದ ಕಾಲದಲ್ಲಿ ಕೂಗಿಕೊಳ್ಳುವಂತೆ ಘಟ್ಟಿಯಾಗಿ ಅಳಬೇಕಾಗಿರುವುದು ಯುಕ್ತವು. (೨೫) ನಾರಾಯಣ ನೊಂದುಸಲ ಸ್ಮರಿಸಲ್ಪಟ್ಟರೂ ಅಗ್ನಿದೇವನು ಹತ್ತಿಯ ಸಮೂಹವನ್ನು ದಹಿಸುವಂತೆ ಅನೇಕಗಳಾದ ನಾರಾರು ಜನ್ಮಗಳಿಂದ ಸಂಪಾದಿಸಲ್ಪಟ್ಟ ಪಾಪರಾಶಿಗಳನ್ನು ದಹಿಸುವನು.

(೨೬) "ಏವಮೇಕಾಗ್ರ ಚಿತ್ತಸ್ಸ್ಯ ಸಂಶ್ರಿತೋ ಮಧುಸೂದನಂ| ಜನ್ಮಮೃತ್ಯು ಜರಾಗ್ರಾಹಂ ಸಂಸಾರಾಬ್ಧಿಂ ತರಿಷ್ಯತಿ‖ (೨೭) ಯಥಾಗ್ನಿ ರುದ್ಧತ ಶಿಖಃ ಕಕ್ಷಂ ದಹತಿ ಸಾನಿಲಃ | ತಥಾ ಚಿತ್ತ ಸ್ಥಿತೋ ವಿಷ್ಣು ರ್ಯೋಗಿನಾಂ ಸರ್ವ ಕಿಲ್ಬಿಷಂ ‖ (೨೮) ಜನಾರ್ದನಂ ಭೂತಪತಿಂ ಜಗದ್ಗುರುಂ ಸ್ಮರ ನ್ಮನುಷ್ಯ ಸ್ಸತತಂ ಮಹಾಮುನೆ | ದುಃಖಾನ್ಯಶೇಷಾಣ್ಯಪಹಂತಿ ಸಾಧಯ ತ್ಯಶೇಷ ಕಾರ್ಯಾಣಿಚ ಯಾನ್ಯಭೀಪ್ಸತೆ‖(೨೯) ಕಲಾ ವತ್ರಾಪಿ ದೋಷಾಢ್ಯೆ ವಿಷಯಾಸಕ್ತ ಮಾನಸಃ |. ಕೃತ್ವಾಪಿ ಸಕಲಂ ಪಾಪಂ ಗೋವಿಂದಂ ಸಂಸ್ಮರ ನ್ಮುಚಿಃ ‖ (೩೦) ವಾಸುದೇವೇ ಮನೋ ಯಸ್ಯ ಜಪ ಹೋಮಾರ್ಚನಾದಿಷು | ತಸ್ಯಾಂತರಾ ಯೊ ಮೈತ್ರೇಯ ದೇವೇಂದ್ರತ್ವಾದಿಕಂ ಫಲಂ" ‖

(೨೬) ಈ ಪ್ರಕಾರದಿಂದ ಏಕಾಗ್ರಚಿತ್ತನಾಗಿ ಶ್ರೀಮನ್ನಾರಾಯಣನನ್ನಾಶ್ರಯಿಸಿ ಧ್ಯಾನಿಸುವಂತವನು ಹುಟ್ಟುವಿಕೆ, ಸಾಯುವಿಕೆ, ಮುದಿತನ, ವೆಂಬ ಮಕರ(ಮೊಸಳೆ) ಗಳುಳ್ಳ ಸಂಸಾರ ಸಮುದ್ರವನ್ನು ದಾಟುವನು. (೨೭) ಅಗ್ನಿ ದೇವನು ಘಾಳಿಯಿಂದ ವೃದ್ಧಿಹೊಂದಿರುವ ಜ್ವಾಲೆಗಳುಳ್ಳವನಾಗಿ ಅರಣ್ಯವನ್ನು ಸುಡುವಂತೆ ಧ್ಯಾನನಿಷ್ಠರಾದ ಯೋಗಿಗಳ ಹೃದಯದಲ್ಲಿರುವ ಶ್ರೀವಿಷ್ಣುವು ಅವರ ಸರ್ವಪಾಪಗಳನ್ನು ನಾಶಪಡಿಸುವನು. (೨೮) ಭೂತಪತಿಯೂ ಜಗದ್ಗುರುವೂ ಆದ ನಾರಾಯಣನನ್ನು ಸರ್ವಕಾಲದಲ್ಲಿಯೂ ಸ್ಮರಿಸುವಂತವನು ಸಕಲ ದುಃಖಗಳನ್ನು ಹೋಗಲಾಡಿಸಿಕೊಂಡು ತನಗೆ

ಯಾವುದು ಇಷ್ಟವೊ ಅಂತಹ ಸಮಸ್ತವನ್ನು ಸಾಧಿಸುವನು (೧೯) ದೋಷಗಳಿಂದ ಪೂರ್ಣವಾದ ಈ ಕಲಿಯುಗದಲ್ಲಿ ಪ್ರಾಕೃತ ವಿಷಯಗಳಲ್ಲಾಸಕ್ತ ಮನಸ್ಕನಾಗಿ ಸಕಲ ಪಾಪಗಳನ್ನು ಮಾಡಿದರೂ ಗೋವಿಂದನನ್ನು ಸ್ಮರಿಸಿದರೆ ಶುದ್ಧನಾಗುವನು (೨೦) ಜಪ ಹೋಮಾರ್ಚನಾದಿಗಳಲ್ಲಿಯೂ ವಾಸುದೇವನಲ್ಲಿಯೂ ಯಾವನ ಮನಸ್ಸು ನಿಂತಿರುವುದೊ ಅವನಿಗೆ ದೇವೇಂದ್ರ ಪದವಿಯೂ ವಿಘ್ನಕಾರಿಯೇ ಆಗಿರುವುದು. ಇಂತವನು ಮೋಕ್ಷಾರ್ಹನಾಗಿರುವುದರಿಂದ ಮೋಕ್ಷಸ್ಥಾನಕ್ಕೆ ಹೋಗುವಂತವನಿಗೆ ಸ್ವರ್ಗ ಪ್ರಾಪ್ತಿಯು ವಿಘ್ನಕರವೆಂದರ್ಥವು

(೨೧) "ಲೋಕತ್ರಯಾಧಿಪತಿ ಮಪ್ರತಿಮ ಪ್ರಭಾವ ಮೀಷತ್ಪ್ರಣಮ್ಯ ಶಿರಸಾ ಪ್ರಭವಿಷ್ಣುಮೀಶಂ । ಜನ್ಮಾಂತರ ಪ್ರಳಯ ಕಲ್ಪ ಸಹಸ್ರ ಜಾತ ಮಾಶು ಪ್ರಣಾಶ ಮುಪಯಾತಿ ನರಸ್ಯಪಾಪಂ ॥ (೨೨) ಏಕೋಪಿ ಕೃಷ್ಣಸ್ಯ ಕೃತಃ ಪ್ರಣಾಮೊ ದಶಾಶ್ವ ಮೇಧಾವಭೃಥೇನ ತುಲ್ಯಃ? । ದಶಾಶ್ವಮೇಧೀ ಪುನರೇತಿ ಜನ್ಮ ಕೃಷ್ಣ ಪ್ರಣಾಮೀನ ಪುನರ್ಭವಾಯ॥ (೨೩) ಅತಸೀ ಪುಷ್ಪ ಸಂಕಾಶಂ ಪೀತವಾಸಸ ಮಚ್ಯುತಂ । ಯೇನ ಮಸ್ಯಂತಿ ಗೋವಿಂದಂ ನತೇಷಾಂ ವಿದ್ಯತೇ ಭಯಂ॥ (೨೪) ಶಾಠ್ಯೇನಾ ನಮಸ್ಕಾರಃ ಪ್ರಯುಕ್ತ ಶ್ಚಕ್ರಪಾಣಯೆ । ಸಂಸಾರ ಮೂಲ ಬಂಧಾನಾ ಮುದ್ವೇ ಜನಕರೊಹಿಸಃ" ॥

(೨೧) ತ್ರಿಲೋಕಾಧಿಪತಿಯಾಗಿಯೂ ಅನ್ಯಾದೃಶವಾದ ಮಹಿಮೆಯುಳ್ಳವನಾಗಿಯೂ ಸರ್ವ ಜಗತ್ಸೃಷ್ಟಿ ಕರ್ತನಾಗಿಯೂ ಈಶನಾಗಿಯೂ ಆದ ನಾರಾಯಣನಿಗೆ ನಮಸ್ಕಾರ ಮಾಡುವಂತವನ ಅನೇಕ ಸಹಸ್ರ ಜನ್ಮಗಳಿಂದ ಮಾಡಲ್ಪಡುವ ಸರ್ವಪಾಪಗಳೂ ನಶಿಸಿಹೋಗುವುವು. (೨೨) ಕೃಷ್ಣನಿಗೆ ಒಂದು ನಮಸ್ಕಾರವನ್ನು ಮಾಡಿದರೂ ಅದು ಹತ್ತು ಅಶ್ವಮೇಧ ಯಾಗಗಳನ್ನು ಮಾಡಿ ಅವಭೃಥ ಸ್ನಾನವನ್ನು ಮಾಡಿದರೆ ಅದಕ್ಕೆ ಸಮಾನವಾಗುತ್ತದೆ? ಆಗಲಾರದು. ಏತಕ್ಕೆಂದರೆ : ಹತ್ತು ಅಶ್ವಮೇಧಗಳನ್ನು ಮಾಡಿದವನು ಪುನರ್ಜನ್ಮವನ್ನು ಹೊಂದುವನು. ಕೃಷ್ಣನನ್ನು ಕುರಿತು ನಮಸ್ಕರಿಸುವಂತವನು ಪುನಶ್ಚ ಹುಟ್ಟಲಾರನು. ಆದುದರಿಂದ ಹತ್ತು ಅಶ್ವಮೇಧಗಳನ್ನು ಮಾಡುವಂತವನಿಗಿಂತಲೂ ಕೃಷ್ಣನನ್ನು ಸೇವಿಸುವಂತವನು ಅಧಿಕನೆಂದರ್ಥವು. (೨೩) ಅತಸೀ ಪುಷ್ಪದಂತಿರುವ ಪೀತಾಂಬರ ಧರನಾದ ಅಚ್ಯುತನನ್ನು ಯಾರಾದರೆ ನಮಸ್ಕರಿಸುವರೊ ಅವರಿಗೆ ಸಂಸಾರ ಭಯವಿರುವುದಿಲ್ಲವು. (೨೪) ಚಕ್ರಪಾಣಿಯಾದ ನಾರಾಯಣನಿಗೆ ಶಠ ಬುದ್ಧಿಯಿಂದಲಾದರೂ ನಮಸ್ಕರಿಸಿದ್ದೇ ಆದರೆ ಅದು ಸಂಸಾರಕ್ಕೆ ಕಾರಣವಾದ ಅವಿದ್ಯಾ ಕರ್ಮವಾಸನಾದಿಗಳನ್ನು ಬೇರೊಡನೆ ಕತ್ತರಿಸುವುದು.

ಇತ್ಯಾದಿ ಶ್ರುತಿಸ್ಮೃತಿ ಪ್ರಮಾಣಗಳಿಂದ ಪಾವನಗಳಾದ ಗಂಗಾದಿ ಮಹಾನದಿಗಳಿಗಿಂತಲೂ ನಾರಾಯಣನು ಅತ್ಯಂತಪಾವನನೆಂತಲೂ; ಮತ್ತು ಸುಖಸಾಧನಗಳೆಂತಲೂ ಸುಖ ಜ್ಞಾಪಕಗಳೆಂತಲೂ ಹೇಳಲ್ಪಡುವಂತಹ ಮಂಗಳ ವಸ್ತುಗಳಲ್ಲಿ ಅಧಿಕಾನಂದ ಲಕ್ಷಣವಾದ ಪರಮ ಮಂಗಳವು ನಾರಾಯಣನೇ ಎಂತಲೂ; ಸರ್ವೋತ್ಕರ್ಷದಿಂದ ಪ್ರಕಾಶಿಸುವ ಸಕಲ ದೇವತೆಗಳಿಗೂ ದೈವತವು ನಾರಾಯಣ ನೊಬ್ಬನೇ ಯೆಂತಲೂ; ಸಕಲ ಪ್ರಾಣಿಗಳಿಗೂ ನಾಶರಹಿತನಾದ ತಂದೆಯಾಗಿರುವ ನಾರಾಯಣ ನೊಬ್ಬನೆ ಲೋಕದಲ್ಲಿ ದೈವತವಾಗಿರುವುದೆಂತಲೂ ತಿಳಿಯಬೇಕು.

(೧) "ಏಕೋದೇವ ಸ್ಸರ್ವಭೂತೇಷು ಗೂಢ ಸ್ಸರ್ವವ್ಯಾಪೀ ಸರ್ವ ಭೂತಾಂತರಾತ್ಮಾ । ಕರ್ಮಾಧ್ಯಕ್ಷ ಸ್ಸರ್ವಭೂತಾಧಿವಾಸ ಸ್ಸಾಕ್ಷೀ ಚೇತಾಃ ಕೇವಲೋ ನಿರ್ಗುಣಶ್ಚ ॥ (೨) ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ । ತಗ್ಂಹಿದೇವ ಮಾತ್ಮಬುದ್ಧಿ ಪ್ರಕಾಶಂ ಮುಮುಕ್ಷುರ್ವೈ ಶರಣಮಹಂ ಪ್ರಪದ್ಯೇ ॥ (೩) ಸೇಯಂ ದೈವತ್ಯೈಕ್ಷತ ಏಕಮೇವಾ ದ್ವಿತೀಯಂ ಬ್ರಹ್ಮ" ॥ ಎಂಬೀ ಶ್ರುತಿ ಪ್ರಮಾಣಗಳಿಂದ ದೇವ ನೊಬ್ಬನೆ ಎಂದರಿಯಬೇಕು.

(ಮೇಲಿನ ಪ್ರಮಾಣ ತಾತ್ಪರ್ಯವು. (೧) ಸಕಲ ಭೂತಗಳಲ್ಲಿ ಗೂಢನಾಗಿರುವಂತವನೂ ಸರ್ವ ಭೂತಗಳಲ್ಲಿ ವ್ಯಾಪಿಸಿರುವಂತವನೂ ಸರ್ವಭೂತಗಳಿಗೂ ಅಂತರಾತ್ಮನೂ ಸಕಲ ಕರ್ಮಗಳಿಗೂ ಅಧ್ಯಕ್ಷನೂ ಎಂದರೆ ಸಕಲ ಕರ್ಮಗಳಿಂದ ಆರಾಧಿಸಲ್ಪಟ್ಟು ಅವುಗಳಿಗೆ ತಕ್ಕ ಫಲಗಳನ್ನು ಕೊಡುವಂತವನೂ ಸರ್ವಭೂತಗಳಲ್ಲಿ ವಾಸಮಾಡುವಂತವನೂ ಸರ್ವಸಾಕ್ಷಿಯೂ ಕೇವಲನೂ ನಿರ್ಗುಣನೂ ಆದ ದೇವನೊಬ್ಬನೆ (೨) ಮೊದಲು ಚತುರ್ಮುಖನನ್ನು ಸೃಷ್ಟಿಸಿ ಅವನಿಗೆ ವೇದಗಳನ್ನು ಬೋಧಿಸಿದವನು ಯಾವನೊ; ಅಂತಹ ಆತ್ಮಬುದ್ಧಿಯಿಂದ ಪ್ರಕಾಶಿಸುತಲಿರುವ ದೇವನನ್ನು ಮೋಕ್ಷವನ್ನು ಹೊಂದಬೇಕೆಂಬ ಆಸಕ್ತಿಯುಳ್ಳ ನಾನು ಶರಣಹೊಂದುವೆನು (೩) ಆ ದೇವತೆ ಯೊಂದೇ ಸಜಾತೀಯ ವಿಜಾತೀಯ ಸ್ವಗತ ಭೇದ ಶೂನ್ಯವಾದದ್ದಾಗಿ ಕಾಣಲ್ಪಟ್ಟಿತು.

ಆದರೆ ಜೀವೇಶ್ವರರಿಗೆ ಭೇದವು ಕಾಣಲ್ಪಡುತಲಿರುವಲ್ಲಿ ದೇವ ನೊಬ್ಬನೆ ಯೆನ್ನುವುದು ಹೇಗೆ? ಎಂದ ಸಂದೇಹಿಸದೆ "ತತ್ಸೃಷ್ಟ್ವಾ ತದೇವಾನು ಪ್ರಾವಿಶತ್ ॥ ಸಏಷ ಇಹಾನು ಪ್ರವಿಷ್ಟ ಆನಖಾಗ್ರೇಭ್ಯಃ ಪುರಶ್ಚಕ್ರೇ ಚತುಷ್ಪದಃ ಪುರಸ್ಸ ಪಕ್ಷೀಭೂತ್ವಾ ಪುರಃಪುರುಷ ಆವಿಶತ್" ಎಂಬೀ ಶ್ರುತಿ ಪ್ರಮಾಣಾನುಸಾರವಾಗಿ ಅವಿಕಾರನಾದ ಪರಮಾತ್ಮನಃ

ಬುದ್ಧಿ ತದ್ವೃತ್ತಿಗಳಿಗೆ ಸಾಕ್ಷಿಯಾಗಿ ಪ್ರವೇಶಿಸಿರುವಂತೆ ತಿಳಿಯಬರುವುದರಿಂದ ದೇವನೊಬ್ಬನೆಂದು ಹೇಳುವುದಕ್ಕೆ ಯಾವ ವಿರೋಧವೂ ಇಲ್ಲವು.

ಮತ್ತು "ಏಕೋದೇವೋ ಬಹುಧಾ ಸನ್ನಿವಿಷ್ಟಃ ‖ ಏಕಸ್ಸನ್ಬಹುಧಾ ವಿಚಚಾರ ‖ ತ್ವಮೇಕೋಸಿ ಬಹೂನ್ವನು ಪ್ರವಿಷ್ಟಃ" ಎಂಬೀ ಶ್ರುತಿಗಳು ದೇವನೊಬ್ಬನೆ ಅನೇಕ ವಿಧಗಳಾಗಿ ಪ್ರವೇಶಿಸಿರುವಂತೆ ಸ್ಪಷ್ಟವಾಗಿ ಪ್ರತಿಪಾದಿಸುವುವಾದುದರಿಂದ ಪ್ರವೇಶಿಸಿರುವಂತವರಿಗೂ ಪರನಿಗೂ ಬಿಂಬ ಪ್ರತಿಬಿಂಬಗಳಿಗೆ ಹೇಗಾದರೆ ಭೇದವಿಲ್ಲವೋ ಅದರಂತೆ ಜೀವ ಪರಮಾತ್ಮರಿಗೆ ಪರಸ್ಪರ ಭೇದವಿಲ್ಲವೆಂದರಿಯಬೇಕು.

ಕಿಂಚ "ಹಿರಣ್ಯಗರ್ಭ ಸ್ಸಮವರ್ತತಾಗ್ರೇ" ಎಂಬೀ ಯೆಂಟು ಮಂತ್ರಗಳು "ಕಸ್ಮೈ ದೇವಾಯ ಹವಿಷಾ ವಿಧೇಮ" ಎಂಬೀ ಸ್ಥಾನದಲ್ಲಿ ಏಕಾರ ಲೋಪದಿಂದ ದೇವನೊಬ್ಬನೆ ಎಂದು ಪ್ರತಿಪಾದಿಸುವುವು. (೧) "ಅಗ್ನಿರ್ಯಥೈಕೋ ಭುವನಂ ಪ್ರವಿಷ್ಟೋ ರೂಪಂರೂಪಂ ಪ್ರತಿರೂಪೋ ಬಭೂವ | ಏಕಸ್ತಥಾ ಸರ್ವ ಭೂತಾಂತರಾತ್ಮಾ ರೂಪಂ ರೂಪಂ ಪ್ರತಿರೂಪೋ ಬಹಿಶ್ಚ ‖ (೨) ವಾಯುರ್ಯಥೈಕೋ ಭುವನಂ ಪ್ರವಿಷ್ಟೋ ರೂಪಂ ರೂಪಂ ಪ್ರತಿ ರೂಪೋ ಬಭೂವ | ಏಕಸ್ತಥಾ ಸರ್ವಭೂತಾಂತರಾತ್ಮಾ ರೂಪಂ ರೂಪಂ ಪ್ರತಿರೂಪೋ ಬಹಿಶ್ಚ ‖ (೩) ಸೂರ್ಯೋ ಯಥಾ ಸರ್ವಲೋಕಸ್ಯ ಚಕ್ಷು ರ್ನಲಿಪ್ಯತೆ ಚಾಕ್ಷುಷೈ ರ್ಬಾಹ್ಯದೋಷೈಃ | ಏಕಸ್ತಥಾ ಸರ್ವಭೂತಾಂತರಾತ್ಮಾ ನಲಿಪ್ಯತೆ ಲೋಕ ದುಃಖೇನ ಬಾಹ್ಯಃ ‖ (೪) ಏಕೋವಶೀ ಸರ್ವಭೂತಾಂತರಾತ್ಮಾ ಏಕಂ ರೂಪಂ ಬಹುಧಾಯಃ ಕರೋತಿ | ತಮಾತ್ಮಸ್ಥಂ ಯೇನುಪಶ್ಯಂತಿ ಧೀರಾ ಸ್ತೇಷಾಂ ಸುಖಂ ಶಾಶ್ವತಂ ನೇತರೇಷಾಂ" ಎಂಬೀ ಕಠೋಪನಿಷದ್ವಚನಗಳು ಕೂಡ ದೇವನೊಬ್ಬನೆ ಏನ್ನುವುವು.

(ಈ ಕಠೋಪನಿಷಚ್ಛ್ರುತ್ಯರ್ಥವು. (೧) ಅಗ್ನಿಯು ದಾರ್ವಾದಿಗಳಲ್ಲಿ ಪ್ರವೇಶಿಸಿ (ದಾರು ಎಂದರೆ ಮರದ ತುಂಡು ಅಥವಾ ಸೌದೆ ತುಂಡು) ಪ್ರಜ್ವಲಿಸುತಲಿರುವಾಗ ಆ ದಾರ್ವಾದಿ ರೂಪಗಳುಳ್ಳವನಾಗಿ ಕಾಣಲ್ಪಡುವಂತೆ ಸರ್ವ ಭೂತಾಂತರಾತ್ಮನಾದ ನಾರಾಯಣನೂ ಆಯಾ ಭೂತಗಳ ಆಕಾರಗಳೊಡನೆ ನಾನಾರೂಪಗಳುಳ್ಳವನಂತೆ ಕಾಣಲ್ಪಡುವನು.

(೨) ವಾಯುವು ಪ್ರಾಣಾತ್ಮದೊಡನೆ ದೇಹಗಳಲ್ಲಿ ಪ್ರವೇಶಿಸಿ ಆಯಾ ಉಪಾಧಿಭೇದಗಳಿಂದ ನಾನಾರೂಪಗಳುಳ್ಳವನಾಗಿರುವಂತೆ ಸರ್ವ ಭೂತಾಂತರಾತ್ಮನಾದ ನಾರಾಯಣನು ಕೂಡ ಉಪಾಧಿಭೇದಗಳಿಂದ ನಾನಾ ರೂಪಗಳುಳ್ಳವನಂತೆ ಕಾಣಲ್ಪಡುವನು.

(೩) ಸರ್ವಲೋಕಗಳಿಗೂ ಕಣ್ಣಿನಂತೆ ಇರುವ ಸೂರ್ಯನು ಕಣ್ಣುಗಳಿಗೆ ಸಂಬಂಧಪಟ್ಟ ಬಾಹ್ಯದೋಷಗಳಿಂದ ಹೇಗಾದರೆ ದೂಷಿತನಾಗಲಾರನೊ, ಅದರಂತೆ ಸರ್ವಭೂತಾಂತರಾತ್ಮನಾದ ನಾರಾಯಣನೂ ಲೋಕಗತವಾದ ದುಃಖಗಳಿಂದ ದುಃಖವುಳ್ಳವನಾಗಲಾರನು.

(೪) ಸರ್ವಗತನೂ ಸ್ವತಂತ್ರನೂ ಅದ್ವಿತೀಯನೂ ಸರ್ವಭೂತಗಳಿಗೂ ಅಂತರಾತ್ಮನೂ ಆದ ನಾರಾಯಣನು ಒಂದೇ ಆದ ತನ್ನ ರೂಪವನ್ನು ಅನೇಕ ರೂಪಗಳನ್ನಾಗಿ ಮಾಡಿದನು. ಅಂತಹ ಪರಮಾತ್ಮನನ್ನು ತಿಳಿದುಕೊಂಡವರಿಗಲ್ಲದೆ ಅನ್ಯರಿಗೆ ಪರಮಾನಂದ ಲಕ್ಷಣವಾದ ಸುಖವಿಲ್ಲವು )

ಮತ್ತು " ಬ್ರಹ್ಮವಾ ಇದಮಗ್ರ ಆಸೀತ್ ‖ ಏಕಮೇವ ತದೇಕಂ ಸನ್ನವ್ಯಭವತ್ ನಾನ್ಯೋತೋಸ್ತಿದ್ರಷ್ಟಾ ನಾನ್ಯೋತೋಸ್ತಿ ಶ್ರೋತಾ ಅನೇಜದೇಕಂ ಮನಸೋಜವೀಯೊ ನೈತದ್ದೇವಾ ಆಪ್ನುವನ್ಪೂರ್ವಮರ್ಷತ್‖ ತತ್ರಕೋಮೋಹಃ ಕಶ್ಶೋಕ ಏಕತ್ವಮನುಪಶ್ಯತಃ‖ ಸರ್ವೇಷಾಂ ಭೂತಾನಾ ಮಂತರಸ್ಸ ಪುರುಷಸ್ಸಮ ಆತ್ಮೇತಿ ವಿದ್ಯಾತ್ ‖ ಆತ್ಮಾವಾ ಇದಮಗ್ರ ಆಸೀನ್ನಾನ್ಯತ್ಕಿಂಚ ನಮಿಷತ್‖ ಏಕಂ ಸದ್ವಿಪ್ರಾ ಬಹುಧಾ ವದಂತಿ ‖ ಏಕಂ ಸಂತಂ ಬಹುಧಾ ಕಲ್ಪಯಂತಿ‖ ದ್ಯಾವಾ ಭೂಮೀ ಜನಯನ್ ದೇವ ಏಕಃ ‖ ಏಕೋಪಿ ವಿನಮೇತ್ರಿಭಿಃ‖ ಏಕೋದಧಾರ ಭುವನಾನಿ ವಿಶ್ವಾ‖ ಸದೇವ ಸೋಮ್ಯೇದಮಗ್ರ ಆಸೀತ್‖ ಏಕಮೇವಾ ದ್ವಿತೀಯಂ ‖ ಏಕ ಏವಹಿ ಭೂತಾತ್ಮಾ ಭೂತೇ ಭೂತೇ ವ್ಯವಸ್ಥಿತಃ | ಏಕಧಾ ಬಹುಧಾಚೈವ ದೃಶ್ಯತೇ ಜಲ ಚಂದ್ರವತ್ '' ಎಂಬೀ ಶ್ರುತಿಗಳೂ "ಸರ್ವಭೂತಸ್ಥಿತಂ ಯೊಮಾಂ ಭಜತ್ಯೇಕತ್ವ ಮಾಸ್ಥಿತಃ | ಸರ್ವಧಾ ವರ್ತಮಾನೋಪಿ ಸಯೋಗೀ ಮಯಿವರ್ತತೆ‖ ವಿದ್ಯಾ ವಿನಯ ಸಂಪನ್ನೇ ಬ್ರಹ್ಮಣೇ ಗವಿಹಸ್ತಿನಿ | ಶುನಿಚೈವ ಶ್ವಪಾಕೇಚ ಪಂಡಿತಾ ಸ್ಸಮದರ್ಶಿನಃ ‖ ಅಹಮಾತ್ಮಾ ಗುಡಾಕೇಶ ಸರ್ವಭೂತಾ ಶಯಸ್ಥಿತಃ | ಅಹಮಾದಿಶ್ಚ ಮಧ್ಯಂಚ ಭೂತಾನಾ ಮಂತಏವಚ ‖ ಯದಾಭೂತ ಪೃಥಗ್ಭಾವ ಮೇಕಸ್ಥ ಮನುಪಶ್ಯತಿ | ತತಏವಚ ವಿಸ್ತಾರಂ ಬ್ರಹ್ಮ ಸಂಪದ್ಯತೆ ತದಾ ‖ ಯಥಾ ಪ್ರಕಾಶ ಯತ್ಯೇಕಃ ಕೃತ್ಸ್ನಂ ಲೋಕಮಿಮಂ ರವಿಃ | ಕ್ಷೇತ್ರಂ ಕ್ಷೇತ್ರೀ ತಥಾ ಕೃತ್ಸ್ನಂ ಪ್ರಕಾಶಯತಿ ಭಾರತ ‖ ಸರ್ವಧರ್ಮಾ ನ್ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ | ಅಹಂತ್ವಾ ಸರ್ವ

ಪಾಪೇಭ್ಯೋ ಮೋಕ್ಷ ಯಿಷ್ಯಾಮಿ ಮಾಶುಚಃ ” ‖ ಎಂಬೀ ಗೀತಾ ವಚನಗಳೂ ; “ ಯದ್ವೈ ಕಿಂಚಮನುರವದ ತ್ತದ್ಭೇಷಜಂ ” ಎಂಬದಾಗಿ ಮನುವಿನ ಮಾಹಾತ್ಮ್ಯವನ್ನು ಬೋಧಿಸುವಂತಹ ಶ್ರುತಿಯೂ ; ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿಚಾತ್ಮನಿ | ಸಂಪಶ್ಯ ನ್ನಾತ್ಮನಾಜೀವಸ್ಸ್ವಾರಾಜ್ಯ ಮಧಿಗಚ್ಛತಿ ‖ ಆಶ್ಚರ್ಯಂ ಖಲುದೇವಾನಾ ಮೇಕಸ್ತ್ವಂ ಪುರುಷೋತ್ತಮ ‖ ಧನ್ಯಶ್ಚಾಸ್ಮಿ ಮಹಾಬಾಹೋ ಲೋಕೇ ನಾನ್ಯೋಸ್ತಿ ಕಶ್ಚನ ‖ ಸೃಷ್ಟಿ ಸ್ಥಿತ್ಯಂತ ಕರಿಣೀಂ ಬ್ರಹ್ಮ ವಿಷ್ಣು ಶಿವಾತ್ಮಿಕಾಂ | ಸಸಂಜ್ಞಾಂ ಯಾತಿ ಭಗವಾನೇಕ ಏವ ಜನಾರ್ದನಃ ‖ ತಸ್ಮಾನ್ನ ವಿಜ್ಞಾನ ಮೃತೇಸ್ತಿ ಕಿಂಚಿತ್ಕ್ವಚಿತ್ಕದಾಚಿ ದ್ದ್ವಿಜ ವಸ್ತು ಜಾತಂ | ವಿಜ್ಞಾನಮೇಕಂ ನಿಜಕರ್ಮಭೇದ ವಿಭಿನ್ನ ಚಿತ್ತೈ ರ್ಬಹುಧಾಭ್ಯುಪೇತಂ‖ ಜ್ಞಾನಂ ವಿಶುದ್ಧಂ ವಿಮಲಂ ವಿಶೋಕ ಮಶೇಷ ಲೋಕಾದಿ ನಿರಸ್ತ ಸಂಗಂ| ಏಕಂ ಸದೇಕಃ ಪರಮಃ ಪರೇಶಸ್ಸ ವಾಸುದೇವೋ ನಯತೋನ್ಯದಸ್ತಿ ‖ ಯದಾ ಸಮಸ್ತ ದೇಹೇಷು ಪುಮಾನೇಕೋ ವ್ಯವಸ್ಥಿತಃ | ತದಾಹಿಕೋ ಭವಾನ್ಕೋಹ ಮಿತ್ಯೇ ತದ್ವಿಫಲಂ ವಚಃ ‖ ಸಿತನೀಲಾದಿಭೇದೇನ ಯಥೈಕಂ ದೃಶ್ಯತೇ ನಭಃ | ಭ್ರಾಂತ ದೃಷ್ಟಿಭಿರಾತ್ಮಾಪಿ ತಥೈಕಸ್ಸನ್ ಪೃಥ ಕ್ಪೃಥಕ್ ‖ ಏಕಸ್ಸಮಸ್ತಂ ಯದಿಹಾಸ್ತಿ ಕಿಂಚಿ ತ್ತದಚ್ಯುತೋ ನಾಸ್ತಿ ಪರಂ ತತೋನ್ಯತ್ ‖ ಸೋಹಂ ಸಚತ್ವಂ ಸಚ ಸರ್ವಮೇತ ದಾತ್ಮ ಸ್ವರೂಪಂ ತ್ಯಜ ಭೇದ ಮೋಹಂ ‖ ಇತೀರಿತಸ್ತೇನ ಸರಾಜವರ್ಯ ಸ್ತತ್ಯಾಜಭೇದಂ ಪರಮಾರ್ಥ ದೃಷ್ಟಿಃ ‖ ಸಕಲಮಿದಮಹಂಚ ವಾಸುದೇವಃ ಪರಮಪುಮಾನ್ ಪರಮೇಶ್ವರ ಸ್ಸಏಕಃ | ಇತಿಮತಿರಚಲಾ ಭವತ್ಯನಂತೇ ಹೃದಯಗತೇ ವ್ರಜತಾನ್ವಿಹಾಯ ದೂರಾತ್ ” ‖ ಎಂಬ ಯಮನಿಂದ ಹೇಳಲ್ಪಟ್ಟ ವಚನಗಳೂ ; “ಯಥಾಹಂ ವಸುಧಾ ಸರ್ವಂ ಸತ್ಯಮೇತ ದ್ದಿವೌಕಸಃ | ಅಹಂ ಭವೋ ಭವಂತಶ್ಚ ಸರ್ವೇ ನಾರಾಯಣಾತ್ಮಕಾಃ‖ ವಿಭೂತಯಸ್ತುಯಾಸ್ತಸ್ಯ ತಾಸಾಮೇವ ಪರಸ್ಪರಂ | ಆಧಿಕ್ಯಂ ನ್ಯೂನತಾ ಬಾಧ್ಯ ಬಾಧಕತ್ವೇನ ವರ್ತತೇ ‖ ಭವಾನಹಂಚ ವಿಶ್ವಾತ್ಮ ನ್ನೇಕ ಏವಹಿ ಕಾರಣಂ | ಜಗತೋಸ್ಯ ಜಗತ್ಯರ್ಥೇ ಭೇದೇನಾವಾಂ ವ್ಯವಸ್ಥಿತೌ ‖ ತ್ವಯಾ ಯದಭಯಂ ದತ್ತಂ ತದ್ದತ್ತಮಖಿಲಂ ಮಯಾ| ಮತ್ತೋ ವಿಭಿನ್ನ ಮಾತ್ಮಾನಂ ದ್ರಷ್ಟುಂ

ನಾರ್ಹಸಿ ಶಂಕರ ‖ ಯೋಽಹಂ ಸತ್ವಂ ಜಗಚ್ಚೇದಂ ಸದೇವಾ ಸುರಮಾ ನುಷಂ | ಅವಿದ್ಯಾ ಮೋಹಿತಾತ್ಮಾನಃ ಪುರುಷಾ ಭಿನ್ನ ದರ್ಶಿನಃ" ಎಂಬೀ ವಿಷ್ಣುಪುರಾಣ ವಚನಗಳೂ; "ವಿಷ್ಣೋರನ್ಯಂತು ಪಶ್ಯಂತಿ ಯೇ ಮಾಂ ಬ್ರಹ್ಮಾಣ ಮೇವವಾ | ಕುತರ್ಕ ಮತಯೊ ಮೂಢಾಃ ಪಚ್ಯಂತೇ ನರಕೇಷ್ವಧಃ ‖ ಯೇಚ ಮೂಢಾ ದುರಾತ್ಮಾನೊ ಭಿನ್ನಂ ಪಶ್ಯಂತಿ ಮಾಂ ಹರೇಃ | ಬ್ರಹ್ಮಾಣಂಚ ತತಸ್ತಸ್ಮಾ ದ್ಬ್ರಹ್ಮಹತ್ಯಾ ಸಮಂ ತ್ವಘಂ" ‖ ಎಂಬ ಶ್ರೀಭವಿಷ್ಯೋತ್ಪುರಾಣದಲ್ಲಿರುವ ಮಹೇಶ್ವರ ವಾಕ್ಯ ಗಳೂ; "ಆದಿಸ್ತ್ವಂ ಸರ್ವಭಾವಾನಾಂ ಮಧ್ಯಮನ್ತ ಸ್ತಥಾಭವಾ‍ಞ್ | ತ್ವತ್ತ ಸ್ಸರ್ವ ಮಭೊದ್ವಿಶ್ವಂ ತ್ವಯಿ ಸರ್ವಂ ಪ್ರಲೀಯತೇ ‖ ಅಹಂತ್ವಂ ಸರ್ವ ಗೋದೇವತ್ವಮೇವಾಹಂ ಜನಾರ್ದನ | ಆವಯೋರಂತರಂ ನಾಸ್ತಿ ಶಬ್ದೈ ರರ್ಥೈ ರ್ಜಗತ್ಪತೆ ‖ ನಾಮಾನಿತವ ಗೋವಿಂದ ಯಾನಿಲೋಕೇ ಮಹಾಂತಿಚ | ತಾನ್ಯೇವ ಮಮನಾಮಾನಿ ನಾತ್ರ ಕಾರ್ಯಾ ವಿಚಾರಣಾ ‖ ತ್ವದುಪಾಸಾ ಜಗನ್ನಾಥ ಸೈವಾಸ್ತು ಮಮ ಗೋಪತೇ | ಯಶ್ಚತ್ವಾಂ ದ್ವಿಷತೇಗೋಪ ಸಮಾಂದ್ವೇಷ್ಟಿ ನಸಂಶಯಃ ‖ ತ್ವದ್ವಿಸ್ತರೊ ಯತೋ ದೇವ ಅಹಂ ಭೂತಪತಿಸ್ತತಃ | ನತದಸ್ತಿವಿಭೋ ದೇವಯತ್ತೇ ವಿರ ಹಿತಂ ಕ್ವಚಿತ್ ‖ ಯದಾಸೀ ದ್ವರ್ತತೇಯಚ್ಚ ಯಚ್ಚಭಾವಿ ಜಗತ್ಪತೇ | ಸರ್ವಂ ತ್ವಮೇವ ದೇವೇಶ ವಿನಾ ಕಿಂಚಿತ್ತ್ವಯಾ ನಹಿ" ‖ ಎಂಬದಾಗಿ ಹರಿವಂಶದಲ್ಲಿ ಕೈಲಾಸಯಾತ್ರಾ ಸಂದರ್ಭದಲ್ಲಿ ಹೇಳಿರುವ ಮಹೇಶ್ವರ ವಚನಗಳೂ; ದೇವನೊಬ್ಬನೇ ಎಂಬ ವಿಷಯವನ್ನು ಬೋಧಿಸುವುವು. ಮತ್ತು "ಆತ್ಮೇತಿ ತೂಪಗಚ್ಛಂತಿ ಗ್ರಾಹಯಂತಿಚ" ಎಂಬ ಸೂತ್ರ ದಲ್ಲಿ; "ತ್ವಂ ವಾ ಅಹಮಸ್ಮಿ ಭಗವೊ ದೇವತೇ ಅಹಂ ವೈತ್ವಮಸಿ" ಇತ್ಯಾದಿ ಜಾಬಾಲಾದಿ ಶ್ರುತಿಗಳು ಶಾಸ್ತ್ರೋಕ್ತ ಲಕ್ಷಣನಾದ ಪರ ಮಾತ್ಮನನ್ನು ಆತ್ಮನೆಂತಲೇ ತಿಳಿಯಬೇಕಂತಲೂ ಈ ಪ್ರಕಾರವೇ ಬೇರೇ ಶ್ರುತಿಗಳೂ, "ಯದೇವೇಹ ತದಮುತ್ರ ಯದಮುತ್ರ ತದನ್ವಿಹ ‖ ಸಯಶ್ಚಾಯಂಪುರುಷೇ – ಯಶ್ಚಾಸಾವಾದಿತ್ಯೇ–ಸಏಕಃ–ತದಾತ್ಮಾನಮೇ ವಾ ವೈದಹಂ ಬ್ರಹ್ಮಾಸ್ಮೀತಿ ತದೇತದ್ಬ್ರಹ್ಮಾ ಪೂರ್ವಮನಂತರಮಬಾ ಹ್ಯ ಮಯಮಾತ್ಮಾ ಬ್ರಹ್ಮ ‖ ಸವಾ ಏಷಮಹಾನಜ ಆತ್ಮಾಽಜರೋಽ ಮರೋಽ ಮೃತೋಽ ಭಯೋ ಬ್ರಹ್ಮ" ಇತ್ಯಾದಿಗಳು ಇದನ್ನೇ ಅಂಗೀ

ಕರಿಸಿರುವುವು ಗ್ರಾಹಯಂತಿಚ–" ಏಷತ ಆತ್ಮಾಂತರ್ಯಾಮ್ಯ ಮೃತಃ॥ ಯನ್ಮನಸಾ ನಮನುತೆ ಯೇನಾಹುರ್ಮನೊ ಮತಂ | ತದೇವ ಬ್ರಹ್ಮ ತ್ವಂ ವಿದ್ಧಿನೇದಂ ಯದಿದ ಮುಪಾಸತೇ ॥ ತತ್ಸತ್ಯಂ ಸ ಆತ್ಮಾ ತತ್ವ ಮಸಿ " ಇತ್ಯಾದಿ ವೇದಾಂತ ವಾಕ್ಯಗಳು ಈಶ್ವರನನ್ನು ಆತ್ಮತ್ವೇನ ಗ್ರಹಿಸಿಕೊಳ್ಳುವುವು. ಆದರೆ ಈ ವಾಕ್ಯಗಳೆಲ್ಲವೂ ಏಕ ದೇಶೋಪಾಸನ ವಿಷಯವನ್ನು ಎಂದರೆ ಅವಯವೋಪಾಸನ ವಿಷಯವನ್ನು ಬೋಧಿಸುವುವೆನ್ನಬಾರದೊ ? ಎಂದು ಸಂದೇಹಿಸದೆ ಈ ವಾಕ್ಯಗಳಿಗೆ ಗೌಣತ್ವವೂ ವೈರೂಪ್ಯವೂ ಉಂಟಾಗುವುದರಿಂದ ಮತ್ತು ಇಷ್ಟುಮಾತ್ರವಲ್ಲದೆ ಪ್ರತೀಕೊಪಾಸನಾ ವಿಷಯವನ್ನೇ ಹೇಳುವುವೆಂದು ಹೇಳಿದರೆ " ಮನೊ ಬ್ರಹ್ಮ–ಆದಿತ್ಯೋ ಬ್ರಹ್ಮ " ಎಂಬೀ ಸ್ಥಲಗಳಲ್ಲಿ ಹೇಗಾದರೆ ಒಂದೇ ಸಲ ಹೇಳಿರುತ್ತಾರೊ ಅದರಂತೆ ಇಲ್ಲಿಯೂ ಒಂದೇಸಲ ಹೇಳಬೇಕಾಗಿ ಬರುವುದೆಂತಲೂ ಪ್ರಾಪ್ತವಾಗುವುದರಿಂದ ಪ್ರತೀಕೋಪಾಸನಾ ವಿಷಯವಲ್ಲವೆಂದರಿಯಬೇಕು. ಇಲ್ಲಿ " ತ್ವಮಹಮಸ್ಮಿ ಅಹಂವೈ ತ್ವಮಸಿ" ಎಂಬದಾಗಿ ಅನೇಕ ಸಲ ಹೇಳಿರುವುದರಿಂದ ಪ್ರತೀಕವಿಷಯವನ್ನು ಬೋಧಿಸಲಿಲ್ಲವೆಂತಲೂ ಭೇದ ದೃಷ್ಟಿಯನ್ನು ತಿರಸ್ಕರಿಸುವುದರಿಂದ ಅಭೇದ ಬೋಧಕವಾಗಿಯೂ ಇರುವುದೆಂತಲೂ ತಿಳಿಯಬೇಕು. ಆದುದರಿಂದಲೆ " ಅದಯೊನ್ಯಾಂ ದೇವತಾ ಮುಪಾಸ್ತೇಽನ್ಯೋಸಾ ವನ್ಯೋಹಮಸ್ಮೀತಿ ನಸವೇದ ಯಥಾ ಪಶುಃ| ಮೃತ್ಯೋಸ್ಸಮೃತ್ಯು ಮಾಪ್ನೋತಿ ಯ ಇಹನಾನೇವ ಪಶ್ಯತಿ ॥ ಯಥೋದಕಂ ದುರ್ಗೇ ವೃಷ್ಟಂ ಪರ್ವತೇಷು ವಿಧಾವತಿ | ಏವಂ ಧರ್ಮಾನ್ ಪೃಥಕ್ಪಶ್ಯಂ ಸ್ತಾನೇವಾನು ವಿಧಾವತಿ॥ ದ್ವಿತೀಯಾದ್ವೈ ಭಯಂ ಭವತಿ ॥ ಯದಾಹ್ಯೇ ವೈಷ ಏತಸ್ಮಿ ನ್ನುದರ ಮಂತರಂ ಕುರುತೆ ಅಥ ತಸ್ಯ ಭಯಂ ಭವತಿ ತತ್ವೇವ ಭಯಂ ವಿದುಷೊ ಮನ್ವಾನಸ್ಯ ॥ ಸರ್ವಂ ತಂ ಪರಾದಾದ್ಯೋ ನ್ಯತ್ರಾತ್ಮನ ಸ್ಸರ್ವಂವೇದ" ಎಂಬೀ ಶ್ರುತಿಗಳೆಲ್ಲವೂ ಭೇದ ದೃಷ್ಟಿಯನ್ನು ಹೋಗಲಾಡಿಸುವುವು. " ಆತ್ಮೈವೇದಗ್ಂ ಸರ್ವಂ ಯದಯಮಾತ್ಮಾ ಬ್ರಹ್ಮೈವೇದಂ ಸರ್ವಮಿದಂ ಬ್ರಹ್ಮ " ಎಂಬೀ ಶ್ರುತಿಗಳೂ "ಯದ್ಜ್ಞಾತ್ವಾ ನಪುನರ್ಮೋಹಮೇವಂ ಯಾಸ್ಯಸಿ ಪಾಂಡವ | ಯೇನಭೂತಾನ್ಯಶೇಷೇಣ ದ್ರಕ್ಷ್ಯಸ್ಯಾತ್ಮನ್ಯಥೊ ಮಯಿ " ಎಂಬೀ ಸ್ಮೃತಿಗಳೂ ಕ್ಷೇತ್ರಜ್ಞನಿಗೂ ಈಶ್ವರ

ನಿಗೂ ಏಕತ್ವವನ್ನು ಬೋಧಿಸುವುವು. "ಸರ್ವಭೂತೇಷು ಯೇನೈಕಂ ಭಾವ ಮವ್ಯಯ ಮೀಕ್ಷತೆ | ಅವಿಭಕ್ತಂಚ ಭೂತೇಷು ತದ್ಜ್ಞಾನಂ ವಿದ್ಧಿ ಸಾತ್ವಿಕಂ" ಎಂಬೀ ಭಗವದ್ಗೀತಾ ವಚನವೂ ಅದ್ವೈತಾತ್ಮ ಜ್ಞಾನವೇ ಸಮ್ಯಗ್ದರ್ಶನವೆಂದು ಬೋಧಿಸುವುದು. ಆದುದರಿಂದ ಈಶ್ವರ ನಾದ ಆತ್ಮನಲ್ಲಿಯೇ ಮನಸ್ಸಿಡಬೇಕು. ಸಿದ್ಧವಾದ ಅರ್ಥದಲ್ಲಿ ಕೂಡ ವೇದಕ್ಕೆ ಪ್ರಾಮಾಣ್ಯವನ್ನಂಗೀಕರಿಸಬೇಕು. ಈ ಪ್ರಕಾರವಲ್ಲದೆ ಸ್ವ ಪಕ್ಷವನ್ನು ಸಾಧಿಸುವುದಕ್ಕಾಗಿ ಅಂಗೀಕರಿಸಬೇಕಾದ ಅರ್ಥವನ್ನು ಹೇಳಿ ದರೆ "ಪರೋಪಿವೇದಚೇತ್" ಎಂಬೀ ಶ್ರುತಿಯೂ ಪರಮಾತ್ಮನು ದೃಙ್ಮಾರ್ಗದಲ್ಲಿ ಅರ್ಧದೃಕ್ಕಾಗುವನೆಂದು ಅಭಿಯುಕ್ತರಿಂದ ಹೇಳಲ್ಪಟ್ಟಿ ರುವುದು ; ಅದು ಹೇಗೆಂದರೆ? ಪದಗಳಿಗೆ ಅನ್ಯಾನ್ವಿತ ಸ್ವಾರ್ಥದಲ್ಲಿ ಸಾಮರ್ಥ್ಯವಿಲ್ಲವೆಂದು ಹೇಳಲ್ಪಟ್ಟಿರುವುದು. ಆದುದರಿಂದ ಅರ್ಥವಾದ ಪದಗಳಿಗೆ ಅನನ್ವಯ ದೋಷವು ಸಂಭವಿಸುವುದು. ಅನ್ವಯ ಬುದ್ಧಿ ಯು ಸ್ತುತಿಪರವಾಗಿರುವುದರಿಂದ ಅನ್ವಿತವಲ್ಲವೆಂದು ತಿಳಿಯಬೇಕು. "ವಾಯವ್ಯಗ್ಂ ಶ್ವೇತಮಾಲಭೇತ ಭೂತಿಕಾಮೋ ವಾಯುರ್ವೈ ಕ್ಷೇಪಿ ಷ್ಠಾ ದೇವತಾ" ಎಂಬೀ ಸ್ಥಲದಲ್ಲಿ ರಾಗಕ್ಕೆನೇ ಪ್ರವರ್ತಕತ್ವವಲ್ಲದೆ ನಿಯೋಗಕ್ಕಲ್ಲವು. "ಅಥೋಖಲ್ವಾಹುಃ ಕಾಮಮಯ ಏವಾಯಂ ಪುರು ಷಸ್ಸ ಯಥಾ ಕಾಮೋ ಭವತಿ ತತ್ಕ್ರತು ರ್ಭವತಿ ಯತ್ಕ್ರತು ರ್ಭವತಿ ತತ್ಕರ್ಮ ಕುರುತೇ ಯತ್ಕರ್ಮ ಕುರುತೆ ತದಭಿ ಸಂಪದ್ಯತೆ || ಅಕಾಮಸ್ಯ ಕ್ರಿಯಾಕಾಚಿ ದ್ದೃಶ್ಯತೇ ನೇಹಕಸ್ಯಚಿತ್| ಯದ್ಯದ್ಧಿ ಕುರುತೆ ಕಿಂಚಿ ತ್ತತ್ತತ್ಕಾಮಸ್ಯ ಚೇಷ್ಟಿತಂ || ಕಾಮ ಏಷ ಕ್ರೋಧ ಏಷಃ" ಎಂಬೀ ಶ್ರುತಿ ಸ್ಮೃತಿಗಳು ಕೂಡ ರಾಗಪರವಾಗಿರುವುದರಿಂದ ಅನ್ಯಪರಗಳಾದ ಮಂತ್ರಾರ್ಥವಾದಗಳಿಗೂ ಕೂಡ ಪ್ರಾಮಾಣ್ಯವನ್ನಂಗೀಕರಿಸಬೇಕು. ಈ ರೀತಿಯಾಗಿ ಹೇಳದೆ ಶ್ರುತಿ ಸ್ಮೃತಿಗಳಿಗೆ ಪ್ರಾಮಾಣ್ಯವನ್ನಂಗೀ ಕರಿಸದೆ ಹೋದದ್ದಕ್ಕಾಗಿಯೆ (ಅರ್ಥವಾದ ಪರಗಳಾದ ಶ್ರುತಿ ಸ್ಮೃತಿ ಗಳಿಗೆ ಅಪ್ರಾಮಾಣ್ಯವನ್ನು ಹೇಳಿದ್ದಕ್ಕಾಗಿಯೇ) ನಹುಷರಾಜನು ಸರ್ಪತ್ವವನ್ನು ಹೊಂದಿದನು. ಅದು ಹೇಗೆಂದರೆ? "ಋಷಯಸ್ತು ಪರಿಶ್ರಾಂತಾ ವಾಹ್ಯಮಾನಾ ದುರಾತ್ಮನಾ | ದೇವರ್ಷಯೊ ಮಹಾ ಭಾಗಾ ಸ್ತಥಾ ಬ್ರಹ್ಮರ್ಷಯೊಮಲಾಃ || ಪಪ್ರಚ್ಛು ಸ್ಸಂಶಯಂತೇತು

ನಹುಷಂ ಪಾಪಚೇತಸಂ| ಯ ಇಮೇ ಬ್ರಹ್ಮಣಾಪ್ರೋಕ್ತಾ ಮಂತ್ರಾ ವೈ ಪ್ರೋಕ್ಷಣೇ ಗವಾಂ॥ ಏತೇ ಪ್ರಮಾಣಂ ಭವತ ಉತಾಹೋಽನೇತಿ ವಾಸವ| ನಹುಷೋಽನೇತಿ ತಾನಾಹ ಸಹಸಾ ಗತಚೇತನಃ ॥ ಋಷಯ ಊಚುಃ ॥ ಅಧರ್ಮೇ ಸಂಪ್ರವೃತ್ತಸ್ತ್ವಂ ಧರ್ಮಂಚ ವಿಜಹಾಸಿ | ಪ್ರಮಾಣಮೇ ತದಸ್ಮಾಕಂ ಪೂರ್ವೈಃ ಪ್ರೋಕ್ತಂ ಮಹರ್ಷಿಭಿಃ ॥ ಅಗಸ್ತ್ಯಃ ॥ ತತೋ ವಿವದಮಾನಸ್ಸ ಋಷಿಭಿ ಸ್ಸಹ ಪಾರ್ಥಿವಃ | ಅಥಮಾಮಸ್ಪೃಶನ್ಮೂರ್ಧ್ನಿ ಪಾದೇನಾ ಧರ್ಮಪೀಡಿತಃ ॥ ತೇನಾಭೂ ದ್ಧತತೇಜಾಸ್ಸ ಶ್ರೀಕಶ್ಚ ಶಚೀಪತೇ | ತತಸ್ತ ಮಹಮುದ್ವಿಗ್ನ ಮವೋಚಂ ಭಯಪೀಡಿತಂ॥ ಯಸ್ಮಾತ್ಪೂರ್ವೈಃ ಕೃತಂ ಮಾರ್ಗಂ ಮಹರ್ಷಿಭಿ ರನುಷ್ಠಿತಂ| ಅದುಷ್ಟಂ ದೂಷಯಸಿ ವೈ ಯಚ್ಚಮೂರ್ಧ್ನ್ಯ ಸ್ಪೃಶಃ ಪದಾ ॥ ಯಚ್ಚಾಪಿ ತ್ವ ಮೃಷೀನ್ಮೂಢ ಬ್ರಹ್ಮ ಕಲ್ಪಾನ್ ದುರಾಸದಾನ್ | ವಾಹಾನ್ಕೃತ್ವಾವಾಹಯಸಿ ತೇನ ಸ್ವರ್ಗಾದ್ಧತ ಪ್ರಭಃ ॥ ಧ್ವಂಸ ಪಾಪ ಪರಿಭ್ರಷ್ಟಃ ಕ್ಷೀಣ ಪುಣ್ಯೋ ಮಹೀಪತೇ | ದಶವರ್ಷ ಸಹಸ್ರಾಣಿ ಸರ್ಪರೂಪಧರೋ ಮಹೀಂ ॥ ವಿಚರಿಷ್ಯಸಿ ತೀರ್ಣಶ್ಚ ಪುನಸ್ಸ್ವರ್ಗ ಮವಾಪ್ಸ್ಯಸಿ | ದೃಷ್ಟ್ವೈವ ಯುಧಿಷ್ಠಿರಂ ನಾಮ ತವವಂಶ ಸಮುದ್ಭವಂ "॥ ಎಂಬೀ ಶ್ರೀಮನ್ಮಹಾಭಾರತ ಪ್ರಮಾಣಾನುಸಾರವಾಗಿ ನಹುಷನಿಗೆ ಪ್ರಾಪ್ತವಾದ ಸರ್ಪತ್ವಕ್ಕೆ ಕಾರಣವನ್ನರಿಯಬೇಕು. ಮತ್ತು "ಅಶ್ರದ್ದಧಾನಾಃ ಪುರುಷಾ ಧರ್ಮಸ್ಯಾಸ್ಯ ಪರಂತಪ | ಅಪ್ರಾಪ್ಯಮಾಂ ನಿವರ್ತಂತೆ ಮೃತ್ಯು ಸಂಸಾರ ವರ್ತ್ಮನಿ " ಎಂಬ ಗೀತಾ ವಚನವೂ ; " ಏಷಪಂಥಾ ಏತತ್ಕರ್ಮೈತ ದ್ಬ್ರಹ್ಮೈತ ತತ್ಸತ್ಯಂ ತಸ್ಮಾನ್ನ ಪ್ರಮಾದ್ಯೇತ್ತನ್ನಾತೀಯಾನ್ನಹ್ಯತ್ಯಾಯ ನ್ಪೂರ್ವೇ ಯೇತ್ಯಾಯಂಸ್ತೇ ಪರಾ ಬಭೂವುಃ " ಎಂಬ ಐತರೇಯೋಪನಿಷದ್ವಚನವೂ ; " ಪ್ರಜಾಹತಿಸ್ರೋ ಅತ್ಯಾಯಮೀಯುಃ ಯಾ ವೈತಾ ಇಮಾಃ ಪ್ರಜಾಸ್ತಿಸ್ರೋತ್ಯಾಯಂ ತಾನೀಮಾನಿವಯಾಂಸಿ ವಂಗಾ ವಗಧಾಶ್ಚೇರ ಪಾದಾಃ " ಎಂಬೀ ಋಷಿ ವಚನಗಳೂ; " ಅಸೂರ್ಯಾ ನಾಮ ಯೇಲೋಕಾ ಅಂಧೇನ ತಮಸಾವೃತಾಃ| ತಾಗ್ಸ್ತೇ ಪ್ರೇತ್ಯಾಭಿ ಗಚ್ಛಂತಿ ಯೇಕೇ ಚಾತ್ಮಹನೋ ಜನಾಃ " ॥ ಎಂಬೀ ಈಶಾವಾಸ್ಯೋಪನಿಷದ್ವಚನವೂ ; "ಅಸನ್ನೇವಸ ಭವತಿ ಅಸದ್ಬ್ರಹ್ಮೇತಿ ವೇದಚೇತ್ ॥ " ಎಂಬೀ ತೈತ್ತಿರೀಯಕ ಶ್ರುತಿ ವಚನವೂ ;

"ಯೋನ್ಯಥಾ ಸಂತಮಾತ್ಮಾನ ಮನ್ಯಥಾ ಪ್ರತಿಪದ್ಯತೇ| ಕಿಂತೇನ ನಕೃತಂ ಪಾಪಂ ಚೋರೇಣಾತ್ಮಾಪ ಹಾರಿಣಾ ‖" ಎಂಬೀ ಶಕುಂತಲೋಪಾಖ್ಯಾನ ವಚನವೂ ; ಆತ್ಮಜ್ಞಾನದಲ್ಲಿ ಶ್ರದ್ಧಾಯುಕ್ತನಾಗಿರಬೇಕೆಂಬ ವಿಷಯ ವನ್ನು ಬೋಧಿಸುವುವು. ಇಂತಹ ವಿಷಯವನ್ನು ಯೆಷ್ಟು ಹೇಳಿದರೂ ಇನ್ನು ಹೇಳಬೇಕಾದ ಅನೇಕಾಂಶಗಳಿರುವುದರಿಂದ ಇಷ್ಟರಲ್ಲಿಯೇ ಪೂ ರೈಸಿಕೊಂಡು ಪ್ರಕೃತವಾದದ್ದನ್ನನುಸರಿಸುವೆವು.

"ಯಸ್ಮಿನ್ ದೇವಾಶ್ಚ ವೇದಾಶ್ಚ ಪವಿತ್ರಂ ಕೃತ್ಸ್ನಮೇಕತಾಂ | ವ್ರಜೇತ್ತನ್ಮಾನಸಂ ತೀರ್ಥಂ ಯತ್ರಸ್ನಾತ್ವಾऽಮೃತೋಭವೇತ್ ‖ ಜ್ಞಾನಹ್ರದೇಧ್ಯಾನ ಜಲೆ ರಾಗದ್ವೇಷ ಮಲಾಪಹೇ | ಯಸ್ಸ್ನಾತಿ ಮಾನ ಸೇ ತೀರ್ಥೇ ಸಯಾತಿ ಪರಮಾಂಗತಿಂ ‖ ಆತ್ಮಾನದೀಸಂ ಯಮ ಪುಣ್ಯ ತೋಯಾ ಸತ್ಯಹ್ರದಾಶೀಲ ತಟಾದಯೋರ್ಮಿಃ | ತತ್ರಾವಗಾಹಂ ಕುರು ಪಾಂಡು ಪುತ್ರ ನವಾರಿಣಾ ಶುದ್ಧ್ಯತಿ ಚಾನ್ತರಾತ್ಮಾ ‖" ಎಂಬೀ ಭಾರತ ವಚನಗಳೂ; "ಮಾನಸಂ ವಿಷ್ಣು ಚಿಂತನಂ" ಎಂಬ ವಿಷ್ಣು ಸ್ಮೃತಿ ವಚನವೂ; "ಜಪ್ಯೇನೈವತು ಸಂಸಿಧ್ಯೇ ದ್ಬ್ರಾಹ್ಮಣೋ ಬ್ರಹ್ಮ ವಿತ್ತಮಃ | ಕುರ್ಯಾದನ್ಯ ನ್ನವಾಕುರ್ಯಾ ನ್ಮೈತ್ರೋ ಬ್ರಾಹ್ಮಣ ಉ ಚ್ಯತೆ" ಎಂಬೀ ಮನುವಚನವೂ ; "ಯಜ್ಞಾನಾಂ ಜಪಯಜ್ಞೋಸ್ಮಿ" ಎಂಬೀ ಗೀತಾ ವಚನವೂ ; "ಅಪವಿತ್ರಃ ಪವಿತ್ರೋವಾ ಸರ್ವಾವಸ್ಥಾಂ ಗತೋಪಿವಾ| ಯಸ್ಸ್ಮರೇತ್ಪುಂಡರೀಕಾಕ್ಷಂ ಸಬಾಹ್ಯಾಭ್ಯಂತರ ಶ್ಶುಚಿಃ‖ ಎಂಬಿದೇ ಮೊದಲಾದ ವಚನಗಳೂ ; ಸಹಸ್ರನಾಮ ಜಪಕ್ಕೆ ಅನುರೂಪ ವಾದದ್ದು ಮಾನಸಸ್ನಾನವೆಂದು ಹೇಳುವುವು. ‖ ೧೦ ‖

ಮುಂದಿನ ಶ್ಲೋಕದಲ್ಲಿಯೂ ದೇವನೊಬ್ಬನೆಂದು ಹೇಳುವ ಪ್ರ ಸ್ತುತವಾದ ವಿಷಯಕ್ಕೆ ಉಪಲಕ್ಷಣವು ಹೇಳಲ್ಪಡುವುದು.

"ಯತೋವಾ ಇಮಾನಿ ಭೂತಾನಿ ಜಾಯಂತೆ" ಎಂಬ ಶ್ರುತ್ಯ ನುಸಾರವಾಗಿ ಮೊದಲಿನ ಯುಗದ ಪ್ರಾರಂಭದಲ್ಲಿ ಯಾವ ಭಗವಂತನ ದೆಶೆಯಿಂದ ಸಕಲ ಭೂತಗಳು ಹುಟ್ಟುವುವೋ ; ಪುನಶ್ಚ ಯುಗಾಂತದಲ್ಲಿ ಯಾವ ಪರಮಾತ್ಮನಲ್ಲಿಯೇ ಲಯಿಸುವುವೋ; (ಲಯಸ್ಥಾನವು ಬೇರೊಂ ದಿಲ್ಲವೆಂದಭಿಪ್ರಾಯವು) "ಯಸ್ಮಿಂಶ್ಚ" ಎಂಬ ಚಕಾರದಿಂದ ಮಧ್ಯ (ಸ್ಥಿತಿ) ಕಾಲದಲ್ಲಿಯೂ ಯಾವ ಪರಮಾತ್ಮನಲ್ಲಿಯೇ ಇರುವುವೋ ;

ಅಂತಹ ಲೋಕಪ್ರಧಾನನಾದ ಶ್ರೀಮಹಾವಿಷ್ಣುವಿನ ನಾಮಸಹಸ್ರವನ್ನು ಕೇಳೆಂದು ಮುಂದಿನ ಶ್ಲೋಕದೊಡನೆ ಸಂಬಂಧವನ್ನರಿಯಬೇಕು. ‖ ೧೧ ‖

(ವಿ‖ ಭಾ‖) ಈ ಪ್ರಕಾರವಾಗಿ ಸರ್ವಚೇತನರಿಗೂ ತತ್ವಹಿತಗಳೆಂದು ನಿರ್ಣಯಿಸಿ ಈಗ ಸರ್ವರಿಗೂ ಅಪೇಕ್ಷಿತವಾದ ಬೇರೊಂದು ಹಿತವಿಶೇಷವನ್ನು ನಿರ್ಣಯಿಸಿ ಹೇಳುವಂತೆ ನೆನಸಿಕೊಂಡು ಶ್ರೀಭೀಷ್ಮಾಚಾರ್ಯರು ಇಂತಹ ಅರ್ಥವನ್ನು ಶ್ರವಣಮಾಡುವುದಕ್ಕೆ ಸನ್ನದ್ಧರಾಗಿರುವ ಧರ್ಮಪುತ್ರರನ್ನು ನೋಡಿ ಹೇಳುವೆನು ಕೇಳೆಂದು ಹೇಳುತ್ತಾರೆ. (ತಸ್ಯೇತ್ಯಾದಿ ಮುಂದಿನ ಶ್ಲೋಕದಿಂದ)

ಮೂ‖ ತಸ್ಯ ಲೋಕ ಪ್ರಧಾನಸ್ಯ ಜಗನ್ನಾಥಸ್ಯ ಭೂಪತೇ। ವಿಷ್ಣೋರ್ನಾಮ ಸಹಸ್ರಂ ಮೇ ಶೃಣು ಪಾಪ ಭಯಾಪಹಂ ‖ ೧೨ ‖

ಟೀ‖ ಹೇ ಭೂಪತೇ—ಎಲೈರಾಜನೆ ? ತಸ್ಯ—ಅಂತಹ ವೈಭವಶಾಲಿಯಾದ, ಲೋಕಪ್ರಧಾನಸ್ಯ – ಸರ್ವಲೋಕ ಪ್ರಧಾನನಾಗಿರುವ, ಜಗನ್ನಾಥಸ್ಯ – ಲೋಕನಾಥನಾದ, ವಿಷ್ಣೋಃ—ವಿಷ್ಣುವಿನ, ಪಾಪಭಯಾಪಹಂ—ಪಾಪದಿಂದುಂಟಾದ ಭಯವನ್ನು ಅಥವಾ ಪಾಪವನ್ನೂ ಭಯವನ್ನೂ ಹೋಗಲಾಡಿಸುವ, ನಾಮಸಹಸ್ರಂ—ಸಹಸ್ರನಾಮಗಳನ್ನು, ಮೇ—ನನ್ನ ದೆಶೆಯಿಂದ, ಶೃಣು—ಕೇಳು.

ಹಿಂದೇ ಹೇಳಿರುವಂತೆ ಮಹಾಮಹಿಮಶಾಲಿಯಾಗಿಯೂ ಸಕಲಲೋಕ ಪ್ರಧಾನನಾಗಿರುವುದರಿಂದ ಸರ್ವಶೇಷಿಯಾಗಿಯೂ, ಜಗನ್ನಾಥನಾಗಿರುವುದರಿಂದ ಸರ್ವನಿಯಂತಾ ಆಗಿಯೂ ಪ್ರಕಾಶಿಸುತಲಿರುವ ಶ್ರೀಮನ್ನಾರಾಯಣನ ತಿರುನಾಮಗಳು ಸಕಲವಿಧ ಪಾಪಗಳನ್ನೂ ; ಅವುಗಳಿಂದುಂಟಾಗುವ ಭಯವನ್ನೂ ; ನಿರ್ಮೂಲವಾಗಿ ಹೋಗಲಾಡಿಸುವುದಾದುದರಿಂದ ಅಂತಹ ನಾಮಸಹಸ್ರವನ್ನು ಕೇಳು ಹೇಳುವೆನು. ಇಲ್ಲಿ ಶೃಣು ಎಂದು ಕೇಳಬೇಕೆಂಬ ಅಭಿನಿವೇಶದಿಂದ ತಾನಾಗಿಯೇ ಪ್ರಶ್ನೆ ಮಾಡಿರುವ ಧರ್ಮಪುತ್ರರನ್ನು ನೋಡಿ ಭೀಷ್ಮರೀಗ ಪುನಃ ಕರದು ಕೇಳು ಹೇಳುವೆನೆಂದೂ ಹೇಳಿರುವುದನ್ನು ನೋಡಿದರೆ ಭಗವದ್ವಿಷಯವನ್ನು ಹೇಳುವಂತವರೂ ಕೇಳುವಂತವರೂ ದೊರಕುವುದು ದುರ್ಲಭರೆಂಬ ಅರ್ಥವು ಇದರಿಂದ ಬೋಧಿತವಾಗುವುದು.

(ಶಂ॥ ಭಾ) ತಸ್ಯ–ಇಂತಹ ಲಕ್ಷಣಗಳಿಂದ ಕೂಡಿರುವ ಒಬ್ಬನಾದ ದೇವನ, ಲೋಕಪ್ರಧಾನಸ್ಯ–ಆಲೋಕನಕ್ಕೆ ಕಾರಣಗಳಾದ ವಿದ್ಯಾಸ್ಥಾನಗಳಿಂದ ಪ್ರತಿಪಾದಿಸಲ್ಪಟ್ಟವನಾಗಿಯೂ, ವಿಷ್ಣೋಃ–ವ್ಯಾಪನಶೀಲನಾಗಿಯೂ, ಶೃಣು–ಏಕಾಗ್ರಮನಸ್ಸುಳ್ಳವನಾಗಿ ಕೇಳು. ॥೧೨॥

ಮೂ॥ ಯಾನಿ ನಾಮಾನಿ ಗೌಣಾನಿ ವಿಖ್ಯಾ
ತಾನಿ ಮಹಾತ್ಮನಃ । ಋಷಿಭಿಃ ಪರಿಗೀತಾನಿ
ತಾನಿ ವಕ್ಷ್ಯಾಮಿ ಭೂತಯೆ ॥೧೩॥

ಟೀ॥ ಮಹಾತ್ಮನಃ–ಮಹಾಮಹಿಮಶಾಲಿಯಾದ ಪರಮಪುರುಷನ, ಯಾನಿ ನಾಮಾನಿ–ಯಾವ ನಾಮಗಳು, ಗೌಣಾನಿ–ಗುಣ ನಿಮಿತ್ತವಾಗಿ ಬಂದವುಗಳೂ ; ವಿಖ್ಯಾತಾನಿ–ಪ್ರಸಿದ್ಧಗಳಾಗಿರುವುವೊ, ಋಷಿಭಿಃ–ಋಷಿಗಳಿಂದ, ಪರಿಗೀತಾನಿ – ಎಲ್ಲೆಲ್ಲಿಯೂ ಗಾನಮಾಡಲ್ಪಟ್ಟು, ತಾನಿ–ಅಂತಹ ನಾಮಗಳನ್ನು, ಭೂತಯೇ–ಸತ್ತಾಜನನಾರ್ಥವಾಗಿ, (ಶಂ) ಧರ್ಮಾದಿ ಚತುರ್ವಿಧ ಪುರುಷಾರ್ಥ ಸಿದ್ಧಿಗಾಗಿ, ವಕ್ಷ್ಯಾಮಿ–ಹೇಳುವೆನು.

(ವಿ॥ ಭಾ) ಇನ್ನು ಮುಂದೇ ಹೇಳಲುಪಕ್ರಮಿಸುತ್ತಾರೆ. ಭಗವತ್ಕಲ್ಯಾಣಗುಣಗಳನ್ನಾಶ್ರಯಿಸಿಯೂ, ಭಗವದ್ದಿವ್ಯಚೇಷ್ಟಿತಗಳನ್ನಾಶ್ರಯಿಸಿಯೂ ಬಂದವುಗಳಾಗಿ ಲೋಕದಲ್ಲಿಯೂ ವೇದದಲ್ಲಿಯೂ ಅಧಿಕವಾಗಿ ಪ್ರಯೋಗಿಸಲ್ಪಟ್ಟು ಪ್ರಸಿದ್ಧಗಳಾಗಿರುವಂತವುಗಳಾಗಿಯೂ; ವೇದಾರ್ಥವನ್ನು ಯಥಾತತ್ವವಾಗಿ ದರ್ಶಿಸುವಂತಹ ಸನಕಸನತ್ಕುಮಾರನಾರದಾದಿಗಳು "ಈ ತಿರುನಾಮವು ಈ ಕಾರಣದಿಂದ ಬಂದಿರುವುದು, ಇಂತಹ ಅರ್ಥವನ್ನು ಹೇಳುವುದು" ಎಂಬದಾಗಿ ಕರುವಿಗೆ ಹಾಲನ್ನು ಕೊಡುವ ಹಸುವಿನಂತೆ ಅತ್ಯಂತಾದರಾತಿಶಯದೊಡನೆ ಅಲ್ಲಲ್ಲಿ ಸಂಕೀರ್ತನವನ್ನು ಮಾಡಲು ; ಅವುಗಳಿಂದ ಒದೊಂದಾಗಿ ಮಧುಕರನ್ಯಾಯದಿಂದ (ಮಧುಕರಗಳು ಎಂದರೆ ಭ್ರಮರಗಳು, ಇವು ಒಂದೊಂದು ಪುಷ್ಪದಲ್ಲಿಯೂ ಇರುವ ರಸವನ್ನು ಗ್ರಹಿಸಿ, ಒಂದು ಕಡೆ ಕೂಡಿಸುವುದೇ ಮಧುಕರನ್ಯಾಯವು) ಸಂಪಾದಿಸಲ್ಪಟ್ಟು ಶ್ರೀವೇದವ್ಯಾಸರಿಂದ ಈ ಸ್ತೋತ್ರರೂಪವಾಗಿ ಸೇರಿಸಲ್ಪಟ್ಟವುಗಳಾಗಿಯೂ; ಅನಂತರದಲ್ಲಿ ಸಂಪ್ರದಾಯ ಪರಂಪರೆಯಾಗಿ ನಮ್ಮವರೆಗೂ ಬಂದಿರುವ ಭಗವನ್ನಾಮಗಳನ್ನು ಅನಾದಿ ಕಾಲದಿಂದ ಸಂಸಾರದಲ್ಲಿ ಸಿಕ್ಕಿ ಅಕಾರಾಂತರವನ್ನು ಹೊಂದಿ ನಷ್ಟಾತ್ಮರಾಗಿರುವ ಆತ್ಮಕೋಟಿಗಳು ಸತ್ತಾ[illegible]ವನ್ನು ಹೊಂದಿ ಉಜ್ಜೀವಿಸುವುದಕ್ಕಾಗಿ ನಿನಿಗೆ ಹೇಳುವೆನು.

ಈ ಪ್ರಕಾರವಾಗಿ ಪರಮಪುರುಷನನ್ನು ತಿಳಿಯುವುದರಿಂದಲೂ ತಿಳಿಯದೇ ಇರುವುದರಿಂದಲೂ ಆತ್ಮನಿಗೆ ಕ್ರಮವಾಗಿ ಸದ್ಭಾವ ಅಸದ್ಭಾವಗಳುಂಟಾಗುವಂತೆ ಶ್ರುತಿಯಲ್ಲಿ ಪ್ರತಿಪಾದಿಸಲ್ಪಡುವುದಷ್ಟೆ ? ಪರಮಪುರುಷನ ಮಾಹಾತ್ಮ್ಯಕ್ಕೆ ಅನುಗುಣವಾಗಿ ತಿರುನಾಮಗಳು ಅಪರಿಮಿತವಾಗಿರುವುದರಿಂದ ಅಷ್ಟನ್ನೂ ಹೇಳುವುದು ಅಸಾಧ್ಯವಾಗಿದ್ದರೂ ಹೇಳಿರುವ ಮಟ್ಟಿಗೆ ಕೇಳುವಂತವರಿಗೆ ಆತ್ಮಲಾಭವುಂಟಾಗುವುದಕ್ಕೆ ಯಾವ ವಿರೋಧವೂ ಇಲ್ಲವೆಂಬುವುದನ್ನು "ಮಹಾತ್ಮನಃ" ಎಂಬುವುದರಿಂದ ತೋರಿಸುತ್ತಾರೆ.

## — ಸಗುಣ ನಿರ್ಗುಣ ವಾಕ್ಯ ವಿಚಾರವು —

ಈ ಸಗುಣ ಬ್ರಹ್ಮವಿದ್ಯೆಯು (ಜ್ಞಾನಶಕ್ತ್ಯಾದ್ಯನಂತ ಕಲ್ಯಾಣ ಗುಣ ವಿಶಿಷ್ಟವಾದ ಬ್ರಹ್ಮವನ್ನು ಉಪಾಸನೆಮಾಡುವ ವಿದ್ಯೆಯು) ಮೋಕ್ಷ ವ್ಯತಿರಿಕ್ತಗಳಾದ ಸ್ವರ್ಗಾದಿ ಸಾಮಾನ್ಯ ಫಲಗಳನ್ನು ಕೊಡುವುದೆಂತಲೂ, ನಿರ್ಗುಣ ಬ್ರಹ್ಮವಿದ್ಯೆಯು ಮೋಕ್ಷವೆಂಬ ಮಹಾಫಲವನ್ನು ಕೊಡುವುದೆಂತಲೂ ಕೆಲವರು ಹೇಳುವರು. ಅವರುಗಳು "ಮುಚ್ಯತೇ ಜಂತು ರ್ಜನ್ಮ ಸಂಸಾರ ಬಂಧನಾತ್ ॥ ಯಾತಿ ಬ್ರಹ್ಮ ಸನಾತನಂ" ಎಂಬದಾಗಿ "ಜನ್ಮವನ್ನೆತ್ತಿದವನು ಜನನಮರಣ ರೂಪವಾದ ಬಂಧದಿಂದ ಬಿಡಲ್ಪಡುವನೆಂತಲೂ, ಸನಾತನನಾದ ಪರಮಾತ್ಮನನ್ನು ಹೊಂದುವನೆಂತಲೂ" ಹೇಳಲ್ಪಡುವ ಸಗುಣ ಬ್ರಹ್ಮವಿದ್ಯಾ ಫಲವನ್ನು ಗಮನಿಸಲಿಲ್ಲವೆಂದು ಹೇಳಬಹುದು. ಮತ್ತು ಸಗುಣವೆಂತಲೂ ನಿರ್ಗುಣವೆಂತಲೂ ಯೆರಡು ಬ್ರಹ್ಮಗಳನ್ನು ಅಂಗೀಕರಿಸಿದಂತೆ ಇದರಿಂದ ಯೇರ್ಪಟ್ಟ ತಮ್ಮಗಳಿಂದ ಅಂಗೀಕರಿಸಲ್ಪಟ್ಟಿರುವ ಅದ್ವೈತಕ್ಕೆ ಹಾನಿಯನ್ನುಂಟು ಮಾಡಿಕೊಂಡಂತೆಯೂ ಆಗುವುದು. "ಪರಮೋ ಮತಃ" ಎಂತಲೂ, "ಅಧಿಕತಮೋಮತಃ" ಎಂತಲೂ ಇದರಲ್ಲಿ ಹೇಳಲ್ಪಟ್ಟಿರುವುದರಿಂದ ಸಕಲ ಶಾಸ್ತ್ರಗಳಲ್ಲಿಯೂ ಶ್ರೇಷ್ಠವಾದ ಸಾರತಮಾರ್ಥವನ್ನೆತ್ತಿ ಹೇಳುವುದಕ್ಕಾಗಿಯೇ ಬಂದ ಇದನ್ನು ಸಾಮಾನ್ಯ ಫಲ ವಿಷಯವೆಂದರೆ ಈ ಸಗುಣ ನಿರ್ಗುಣಬ್ರಹ್ಮವಿದ್ಯೆಗಳಿಗೆ ಇದಕ್ಕಿಂತಲೂ ಶ್ರೇಷ್ಠವಾದ ಫಲವು ಯೆಲ್ಲಿ ತಾನೆ ಇರುವುದು ?

ನಿರ್ಗುಣ ಬ್ರಹ್ಮವನ್ನು ಹೊಂದುವುದಕ್ಕಾಗಿಯೇ ಸಗುಣ ಬ್ರಹ್ಮ ವಿದ್ಯೆಯುಂಟಾಗಿರುವುದೆಂದರೆ ಅದೂ ಯುಕ್ತವಾದದ್ದಲ್ಲವು. ಸಗುಣ ವೆಂತಲೂ ನಿರ್ಗುಣವೆಂತಲೂ ಇರುವ ಯೆರಡೂ ಪರಸ್ಪರವಾಗಿ ವಿರೋಧಿಸಿ ದಾಗ ಇವುಗಳಲ್ಲಿ ಒಂದನ್ನು ಉಪಾಯ (ಸಾಧನ)ವಾಗಿಯೂ, ಒಂದನ್ನು ಫಲವಾಗಿಯೂ ಅಂಗೀಕರಿಸುವುದು ಅತ್ಯಂತ ಪರಿಹಾಸ್ಯವು.

ಮತ್ತು ಬ್ರಹ್ಮಕ್ಕೆ ಗುಣವಿರುವುದೆಂದು ಹೇಳಲ್ಪಡುವಾಗ ಗುಣ ವಿಲ್ಲವೆಂದು ಹೇಳುವುದರಿಂದ ಪ್ರಯೋಜನವೇನು? ಅದು ಅವಿದ್ಯೆ ಯೆಂ ದರೆ ಜನನ ಮರಣ ಮೋಹಾದಿಗಳಾದ ಸಂಸಾರ ದೋಷವೆಂಬ ವಿಷದಿಂದ ಮೂರ್ಛೆಯನ್ನು ಹೊಂದಿ ಮರಣವನ್ನು ಹೊಂದುವಂತವನಿಗೆ ಪರಮೌ ಷಧವಾದ ಬ್ರಹ್ಮವೇ ಅವಿದ್ಯಾಭ್ರಮಾದಿ ಸಕಲ ದೋಷಗಳಿಗೂ ವಾಸ ಸ್ಥಾನವೆಂತಲೂ ಅದಕ್ಕೆ ಗುಣಲೇಶವೂ ಇಲ್ಲವೆಂತಲೂ ಹೇಳುವುದು ಅತ್ಯಂತ ಮನೋಹರವಾದ ವೇದರಹಸ್ಯವಲ್ಲವೆ? ಅಲ್ಲವಯ್ಯಾ! ಬ್ರಹ್ಮ ಕ್ಕುಂಟಾಗಿರುವ ಭ್ರಮಾದಿ ದೋಷಗಳೂ ಮಿಥ್ಯಾಭೂತಗಳೆಂದರೆ? ಆಗ ನಿಮ್ಮ ಮತಾನುಸಾರವಾಗಿ ಬ್ರಹ್ಮಕ್ಕೆ ಗುಣವಿಲ್ಲವೆನ್ನುವುದೂ ಮಿಥ್ಯೆಯಲ್ಲವೊ? ಮಿಥ್ಯೆಯಾದಮೇಲೆ ಬ್ರಹ್ಮಕ್ಕೆ ದೋಷವಿಲ್ಲವೆಂತಲೂ ಗುಣಗಳಿರುವುದೆಂತಲೂ ಸತ್ಯವಾಗಿ ಅಂಗೀಕರಿಸದಂತೆ ಆಗಲಾರದೊ? ಇದನ್ನು ನೀವು ಏತಕ್ಕೆ ಅಂಗೀಕರಿಸಬಾರದು? ಒಳ್ಳೇದಿರಲಿ! ಬ್ರಹ್ಮ ಕ್ಕುಂಟಾಗಿರುವ ಈ ಅವಿದ್ಯೆಯನ್ನು ಹೋಗಲಾಡಿಸುವಂತವರು ಯಾ ರೆಂದು ಕೇಳಿದಾಗ ಅದ್ವೈತ ವಿದ್ಯಾನಿಷ್ಠೆಯುಳ್ಳವನೆಂದಲ್ಲವೆ ಪ್ರತ್ಯುತ್ತರ [illegible]ಬೇಕು. ಪರಬ್ರಹ್ಮವೂ ಸಂಸಾರ ಬದ್ಧವಾಗುವುದೆಂತಲೂ ಅಂತಹ ಬಂಧವನ್ನು ಸಂಸಾರಿಯಾದವನು ಬಿಡುಸುತ್ತಾನೆಂತಲೂ ಹೇಳು ವುದು ಮೊದಲು ಹೇಳಿರುವುದಕ್ಕಿಂತಲೂ ಅತ್ಯಂತ ರಮಣೀಯವಲ್ಲವೆ?

ಕಿಂಚ-ಸಗುಣಬ್ರಹ್ಮ ಪ್ರತಿಪಾದಕಗಳಾದ ಶ್ರುತಿಗಳು ನಿರರ್ಥಕ ಗಳಾಗುವುದಕ್ಕೆ ಕಾರಣವೇನು? ನಿರ್ಗುಣ ವಾಕ್ಯದಿಂದ ಬಾಧಿಸಲ್ಪಡುವು ದರಿಂದ ವೆಂದು ಉತ್ತರ ಹೇಳುವ ಪಕ್ಷದಲ್ಲಿ ಸಗುಣವಾಕ್ಯವೇ ನಿರ್ಗುಣ ವಾಕ್ಯಗಳನ್ನು ಯಾತಕ್ಕೆ ಬಾಧಿಸಬಾರದು? ಪ್ರಮಾಣಗಳೆಂಬ ವಿಷಯ ವೂ, ಒಂದರಿಂದೊಂದು ವಿರೋಧಿಸುವುದೆಂಬ ವಿಷಯವೂ ಈ ಎರಡಕ್ಕೂ ಸಮವಾಗಿ ತಾನೇ ಇರುವುದು. ಇಷ್ಟುಮಾತ್ರವಲ್ಲದೆ ಇನ್ನೊಂದನ್ನು

ಕೊಡ ಹೇಳುವೆವು. ಅದು ಯಾವದೆಂದರೆ? ಗುಣಗಳೆಲ್ಲವೂ ನಿಷೇಧಕ್ಕೆ ವಿಷಯವಾದರೆ ಗುಣಗಳುಂಟೆಂದು ಶ್ರುತಿಗಳು ಏತಕ್ಕೆ ಉದ್ಘೋಷಿಸ ಬೇಕು? ಒಂದನ್ನು ಆರೋಪಿಸಿ ಯಲ್ಲವೆ ಒಂದನ್ನು ನಿಷೇಧಿಸಬೇಕು. ಅದಕ್ಕಾಗಿ ಸಗುಣ ಶ್ರುತಿಗಳು ಪ್ರವರ್ತಿಸಿದವೆಂದರೆ? ಆರೋಪಿಸಿ ನಿಷೇಧಿಸುವುದಕ್ಕಿಂತಲೂ ಆರೋಪಿಸದೇನೇ ಇದ್ದರೆ ನಿಷೇಧಿಸಬೇಕಾದ ಶ್ರಮಕ್ಕೇನೇ ಅವಕಾಶವಿಲ್ಲದೆ ಇರಬಹುದಲ್ಲವೆ? ಇಲ್ಲದೇ ಇರುವುದನ್ನಾರೋಪಿಸಿ ಅದನ್ನು ನಿಷೇಧಿಸುವುದೆಂಬೀ ಹಣೇ ಬರಯೆಲ್ಲಿ ಬಂತು? "ಪ್ರಕ್ಷಾಳನಾದ್ಧಿ ಪಂ ಕಸ್ಯ ದೂರಾದಸ್ಪರ್ಶನಂ ವರಂ" ಎಂಬ ಶ್ರೀಮಹಾಭಾರತ ಆರಣ್ಯಪರ್ವದ ಎರಡನೇ ಅಧ್ಯಾಯ ೪೮-ನೇ ಶ್ಲೋಕದಲ್ಲಿ ಕೆಸರನ್ನು ಸ್ಪರ್ಶಿಸಿ ಅದಕ್ಕಾಗಿ ಕಾಲು ತೊಳೆಯುವುದಕ್ಕಿಂತಲೂ ಕೆಸರನ್ನು ಸ್ಪರ್ಶಿಸದೆ ಇರುವುದು ಉತ್ತಮವೆಂದು ಹೇಳಿರುವಂತೆ ಮೊದಲು ಗುಣಗಳನ್ನು ಆರೋಪಿಸಿ ಆನಂತರದಲ್ಲಿ ನಿಷೇಧವು ಪ್ರವರ್ತಿಸಿರುವುದೆಂದು ಹೇಳುವುದರಿಂದ ಪ್ರಯೋಜನವಿಲ್ಲವು ಹಿಂದು ಮುಂದಾಗಿರುವ ವಾಕ್ಯಗಳಲ್ಲಿ ಹಿಂದೇ ಇರುವುದಕ್ಕಿಂತಲೂ ಮುಂದೇ ಇರುವ ವಾಕ್ಯವು ದುರ್ಬಲವೆನ್ನುವ ನ್ಯಾಯವನ್ನು ಸರ್ವತ್ರ ಎಲ್ಲಿ ಬೇಕಾದರೂ ಸೇರಿಸಿಕೊಳ್ಳಬಹುದಷ್ಟೆ? ಆದರೂ ಉಂಟೆಂದು ಮೊದಲು ಒಬ್ಬನಿಗೆ ಜ್ಞಾನ ವುಂಟಾಗಿದ್ದರೆ ಅದನ್ನು ಇಲ್ಲವೆನ್ನುವ ಒಂದು ಶಬ್ದವು ಹಿಂದೆ ಉಂಟಾದ ಮಾತ್ರದಲ್ಲಿ ಬಾಧಿಸುವುದುಂಟೊ? ಜ್ಞಾನವನ್ನು ಶಬ್ದವು ಬಾಧಿಸಲಾರದಾದುದರಿಂದ ಅದಕ್ಕನುಗುಣವಾದ ಜ್ಞಾನವಲ್ಲವೆ ಬಾಧಿಸಬೇಕು. ಅದರಂತೆ ಇಲ್ಲಿ ನಿರ್ಗುಣವಾಕ್ಯವು ಹಿಂದೆ ಬಂದಮಾತ್ರದಲ್ಲಿಯೇ ಸಗುಣ ವಾಕ್ಯವನ್ನು ಬಾಧಿಸಲಾರದೆಂಬ ಅಂಶವು ಸ್ಫುಟವಾಗಿಯೇ ಇರುವುದು.

ಮತ್ತು ಹಿಂದೆ ಉಂಟಾಗಿರುವ ನಿರ್ಗುಣವಾಕ್ಯವು ಗುಣಾಂಶವನ್ನು ಬಾಧಿಸುವುದೆನ್ನುವ ಪಕ್ಷದಲ್ಲಿ ತತ್ವವು ಶೂನ್ಯವೆಂದು ಒಬ್ಬನು ಹಿಂದೆ ಹೇಳಿದರೆ ಅದು ಬ್ರಹ್ಮಸ್ವರೂಪಾಂಶವನ್ನು ಬಾಧಿಸಲಾರದೊ? ಏತಕ್ಕೆ ಬಾಧಿಸಬೇಕೆಂದರೆ ಇದು ಹಿಂದೆ ಉಂಟಾಗಿರುವ ಕಾರಣ ನಿಮ್ಮ ಅಭಿಪ್ರಾಯದಂತೆ ಮುಂದಿನ ವಾಕ್ಯಕ್ಕಿಂತಲೂ ಹಿಂದಿನ ವಾಕ್ಯಕ್ಕೆ ಪ್ರಾಬಲ್ಯವಿರುವುದರಿಂದ ಬಾಧಿಸಬೇಕಲ್ಲವೆ? ಇದನ್ನು ಅಂಗೀಕರಿಸುವ ಪಕ್ಷದಲ್ಲಿ ನಿಮ್ಮಿಂದ ಅಂಗೀಕರಿಸಲ್ಪಡುವ ತತ್ವಕ್ಕೇನೇ ಲೋಪಬರುವುದಷ್ಟೆ;

ಆದರೆ ಇದು ಬದ್ಧಸಂಸಾರಿಯ ಉಕ್ತಿಯಾಗಿರುವುದರಿಂದ ಇದು ವೇದ ಪ್ರತಿಪಾದ್ಯವಾದ ವಸ್ತುವನ್ನು ಬಾಧಿಸಲಾರದೆಂದರೆ? ನಿಮ್ಮ ಮತದಲ್ಲಿ ವೇದವೂ ಬ್ರಹ್ಮ ಭ್ರಮದಿಂದುಂಟಾದದ್ದಾಗಿ ಹೇಳಲ್ಪಡುವುದರಿಂದ ಬದ್ಧಚೇತನ ಸಾಮ್ಯವು ಬ್ರಹ್ಮಕ್ಕೂ ಉಂಟಾಗಿರುವಕಾರಣ ಈ ಎರಡು ವಾಕ್ಯವು ಬ್ರಹ್ಮದಿಂದಲೇ ಬಂದಿರುವಂತೆ ಪರ್ಯವಸಾನವಾಗಿ ಬದ್ಧಚೇತನನೊಕ್ತಿ ಎಂದು ಪರಿಹಾರವನ್ನು ಹೇಳುವುದು ಯುಕ್ತವಲ್ಲವು. ಇಲ್ಲಿ ಯರಡೂ ಸಮಾನವಾಗಿರುವಾಗ ಒಂದಕ್ಕೆ ಮಾತ್ರ ಆಧಿಕ್ಯವನ್ನು ಹೇಗೆ ಹೇಳಬಹುದು ಇದನ್ನು ಒಪ್ಪಿದರೂ ನಿಮ್ಮ ಇಷ್ಟದಂತೆ ಗುಣಪ್ರತಿಪಾದಕ ವಾಕ್ಯಗಳೇ ಹಿಂದೆ ಇರುವುವು. ಅದು ಹೇಗೆಂದರೆ? ದೇಹಕ್ಕೂ ಆತ್ಮಕ್ಕೂ ಉಂಟಾಗಿರುವ ದುರ್ಗುಣಗಳು ಬ್ರಹ್ಮಕ್ಕೆ ಇಲ್ಲವೆನ್ನುವ ವಾಕ್ಯವು ಮೊದಲು ಹೇಯಗುಣಗಳನ್ನು ನಿಷೇಧಿಸಿ ಅನಂತರದಲ್ಲಿ ಪರಮಪುರುಷನಿಗೆ ಕಲ್ಯಾಣ ಗುಣಗಳುಂಟೆನ್ನುವುದಕ್ಕೆ "ಏಷ ಸರ್ವಭೂತಾಂತರಾತ್ಮಾಽಪಹತಪಾಪ್ಮಾ ವಿಜರಃ" ಇತ್ಯಾದಿಯಾಗಿ ಆರಂಭಿಸಿ "ಸತ್ಯಕಾಮ ಸ್ಸತ್ಯ ಸಂಕಲ್ಪಃ" ಇತ್ಯಂತಗಳಾದ ಶ್ರುತಿಗಳು ಪ್ರಸಿದ್ಧಗಳಾಗಿರುವುವು.

ಮತ್ತು ಸಗುಣ ಶ್ರುತಿಗಳು ಮಿಥ್ಯಾರ್ಥವಾದಿಗಳೆಂತಲೂ ನಿರ್ಗುಣ ಶ್ರುತಿಗಳು ಸತ್ಯಾರ್ಥವಾದಿಗಳೆಂತಲೂ ಒಂದು ನಿರ್ಣಯವನ್ನು ಮಾಡಿ ವೇದಪ್ರಾಮಾಣ್ಯವನ್ನು ರಕ್ಷಿಸುವಂತೆ ಹೇಳುವ ಮಾತುಗಳೆಲ್ಲವೂ ವಂಚಕನೊಕ್ತಿಯೆಂತಲೇ ತಿಳಿಯಬೇಕು. ಅದು ಏತಕ್ಕೆಂದರೆ? ಪ್ರಮಾಣ ವಚನವನ್ನು ನೋಡಿ ಇದು ಮಿಥ್ಯಾವಿಷಯವೆಂದರೆ ಪ್ರಾಮಾಣ್ಯಭಂಗವು ಸಂಭವಿಸಲಾರದೋ? ಸುಳ್ಳಾಗಿ ಬೆಳ್ಳಿ ಎಂಬದಾಗಿ ಒಂದು ಜ್ಞಾನವು ಹುಟ್ಟುವುದಾದರೆ ಅದು ಜ್ಞಾನವಾದ ಮಾತ್ರದಲ್ಲಿಯೆ ಪ್ರಮಾಣವಾಗುವುದೊ? ಅದಕ್ಕೆ ವಿಷಯವು ಸುಳ್ಳೆಂದು ಹೇಳಿದಾಗಲೆ ಅಂತಹ ಜ್ಞಾನ ವಿಭವಕ್ಕೆ ಲೋಪವಿಲ್ಲವೆ? ಅದರಂತೆ ಮಿಥ್ಯಾವಿಷಯವೆಂದು ಹೇಳಿದಾಗಲೆ ಶ್ರುತಿವಾಕ್ಯವಾದರೂ ಅದಕ್ಕೆ ಒಂದು ಮಹಿಮೆಯು ಹೇಳಿದಂತೆ ಆಗುವುದೊ? ಆದುದರಿಂದ ವೇದಗಳನ್ನು ಕಾಪಾಡುವುದೆಂಬ ನೆಪದಿಂದ ಮನಸ್ಸು ಬಂದಂತೆ ಹೇಳುವಿಕೆಯು ಅದನ್ನು ನಾಶಪಡಿಸಿದಂತೆಯೇ ಆಗುವುದು. ಕಿಂಚ-ಗುಣಗಳನ್ನು ನಿಷೇಧಿಸುವುವೆಂದರೆ ಆ ನಿಷೇಧವೂ

ಸುಳ್ಳಾಯದುದರಿಂದ ಅದು ತಾನೇ ಕಾರ್ಯಕರವಾದೀತೆ? ಈ ಪಕ್ಷದಲ್ಲಿ ಇತ್ಯಾದ್ಯನುಪಪತ್ತಿಗಳುಂಟಾಗುವುದರಿಂದ ಈ ವಿಚಾರವು ಸಾಕು.

ಆದರೆ ತತ್ವದರ್ಶಿಗಳು ಅಂಗೀಕರಿಸಿರುವ ಸರ್ವ ಸಮಂಜಸವಾದ ಅರ್ಥವು ಈ ವಿಷಯದಲ್ಲಿ ಹೇಗೆ ಇರುವುದು ! ಎಂದರೆ ಈ ವಿಷಯದಲ್ಲಿ ತತ್ವ ದರ್ಶಿಗಳು ಮಾಡಿರುವ ನಿರ್ಣಯವನ್ನು ಹೇಳುವೆವು. ಜ್ಞಾನ ಶಕ್ತ್ಯಾದಿಗಳನ್ನು ಪ್ರತಿಪಾದಿಸುವ ಶ್ರುತಿಯು ಕಲ್ಯಾಣ ಗುಣಗಳುಂಟೆಂತಲೂ, ಪರಮಪುರುಷನು ನಿರ್ಗುಣನೆಂದು ಹೇಳುವ ಶ್ರುತಿಯು ರಾಗದ್ವೇಷಾದಿ ಹೇಯಗುಣಗಳು ಪರಮಾತ್ಮನಿಗಿಲ್ಲವೆಂತಲೂ ಹೇಳುವುದು. ಅದು ಹೇಗೆಂದರೆ: "ಸತ್ಯಕಾಮ ಸ್ಸತ್ಯ ಸಂಕಲ್ಪಃ" ಇತ್ಯಾದಿ (ಛಾಂದೊ|| ೮|| ೧|| ೫) ವಾಕ್ಯಗಳೆಲ್ಲವೂ ಮಂಗಳತ್ವವನ್ನೇ ಬೋಧಿಸುವುದರಿಂದ ಈ ರೀತಿ ವ್ಯವಸ್ಥೆ ಮಾಡಲ್ಪಟ್ಟಿರುವುದು. ನಿರ್ಗುಣ ನೆಂಬದಾಗಿ ಸಾಮಾನ್ಯದಿಂದ ಬಂದಿರುವ ಗುಣನಿಷೇಧವು ಅಂತಹ ಕಲ್ಯಾಣ ಗುಣಗಳಿಗಿಂತಲೂ ಅನ್ಯಗಳಾದ ಗುಣಗಳ ವಿಷಯವಾಗಿರುವುದು. ಈ ಪ್ರಕಾರವಾಗಿ ಸಗುಣ ನಿರ್ಗುಣ ಶ್ರುತಿ ದ್ವಯಕ್ಕೂ ಗತಿ ಕಲ್ಪನವನ್ನು ಮಾಡುವುದೆ ಉಚಿತವು. ಇದನ್ನು ಅನುಸರಿಸಿಯೇ ಬ್ರಾಹ್ಮಣ ಪರಿವ್ರಾಜಕ ನ್ಯಾಯವು ಈ ಪ್ರಕಾರವೇ ಗೋಬಲೀ ವರ್ದಾದಿ ನ್ಯಾಯಗಳೂ ಬಂದಿರುವುವು.

(ಬ್ರಾಹ್ಮಣ ಪರಿವ್ರಾಜಕರನ್ನು ಕರದುಕೊಂಡು ಬಾ ಎಂದು ಒಬ್ಬನು ಹೇಳಿದರೆ ಪರಿವ್ರಾಜಕನೂ (ಸನ್ಯಾಸಿಯೂ) ಬ್ರಾಹ್ಮಣನಾಗಿರುವುದರಿಂದ ಬ್ರಾಹ್ಮಣ ಶಬ್ದ ಪ್ರಯೋಗದಿಂದಲೆ ಪರಿವ್ರಾಜಕನನ್ನೂ ಹೇಳಿದಂತೆ ಆದರೂ ಅಧಿಕವಾದ ಪರಿವ್ರಾಜಕ ಶಬ್ದ ಪ್ರಯೋಗದಿಂದ ಅಲ್ಲಿನ ಬ್ರಾಹ್ಮಣ ಶಬ್ದಕ್ಕೆ ಪರಿವ್ರಾಜಕನಿಗಿಂತಲೂ ಅನ್ಯರಾದ ಬ್ರಾಹ್ಮಣರು ಅರ್ಥವಾಗುವುದರಿಂದ ಬ್ರಾಹ್ಮಣರನ್ನೂ ಪರಿವ್ರಾಜಕನನ್ನೂ ಕರೆದು ಕೊಂಡು ಬಾ ಎಂದು ಅರ್ಥವಾಗುವುದು. ಇದೇ ಬ್ರಾಹ್ಮಣ ಪರಿವ್ರಾಜಕ ನ್ಯಾಯವು ಈ ಪ್ರಕಾರವೇ ಗೋಬಲೀ ವರ್ದಾದಿ ನ್ಯಾಯಗಳನ್ನೂ ತಿಳಿಯಬೇಕು.)

ಇಷ್ಟುಮಾತ್ರವಲ್ಲದೆ ನಿರ್ಗುಣವಾದಿಗಳಿಗೆ ಅತ್ಯಂತವಿರೋಧವಾಗಿ ದೋಷ ವಿಷಯನಿಷೇಧವೂ ಗುಣವಿಷಯವಾದ ವಿಧಿಯೂ ಒಂದೇ ವಾಕ್ಯದಲ್ಲಿ "ಅಪಹತಪಾಪ್ಮಾ | ಸತ್ಯಕಾಮ ಸ್ಸತ್ಯ ಸಂಕಲ್ಪಃ" (ಛಾಂ|| ೮|| ೧|| ೫) ಎಂಬದಾಗಿ ಕಾಣಲ್ಪಡುವುದರಿಂದ ಈಗ ಮಾಡಿರುವ ವ್ಯವಸ್ಥೆಯೇ ಸರ್ವ ಶ್ರುತಿ ಸಮ್ಮತವಾದದ್ದೆಂದರಿಯಬೇಕು.

ಆದ್ದರಿ ಈ ವಿಷಯದಲ್ಲಿ "ಸ್ತಂಭೆ ವಿಸ್ಮೃದೂರವು, ಕುಂಭವಿಲ್ಲವು" ಎಂಬ ವಿಚಾರದಂತೆ ಕೆಲವು ನ್ಯಾಯ ವಿಚಾರವನ್ನು ಮಾಡುವುದೇ ಅನಾವಶ್ಯಕವಾಗಿರುವುದು. ಏತಕ್ಕೆಂದರೆ ?- ಸೂತ್ರಕಾರರೆ ಈ ವಿಷಯದಲ್ಲಿ ಅದೃಶ್ಯತ್ವಾದಿ ಗುಣಕೋಧರ್ಮೋಕ್ತೇಃ" (ಬ್ರಹ್ಮ ಸೂ॥ ೧॥ ೨॥ ೨೨) ಎಂಬುದಾಗಿ ಹೇಳಿರುತ್ತಾರೆ. ಗುಣೋಪ ಸಂಹಾರ ಪಾದದಲ್ಲಿ ಶಾಂಡಿಲ್ಯ ಉಪಕೋಸಲ ದಹರ ಪುರುಷ ಪರ್ಯಂಕಗಳೆಂಬ ವಿದ್ಯಾವೇದ್ಯಗಳಾದ ಗುಣಗಳನ್ನನುಸಂಧಿಸಿ ಇವುಗಳಿಗೆ ಬುದ್ಧಿ ಮಾತ್ರ ಸಾರತ್ವವನ್ನು ಶಂಕಿಸಿ ಪರಿಹರಿಸುತ್ತಾರೆ.

ಅದು ಎಲ್ಲೆಂದರೆ ?—ಆದರಾದಲೋಪಃ—(೩॥ ೩॥ ४೦) ಎಂಬ ಸೂತ್ರದಲ್ಲಿ (ವಾಜಸನೇಯಕ ಶ್ರುತಿಯಲ್ಲಿ "ಸರ್ವಸ್ಯವಶೀ" ಇತ್ಯಾದಿ ವಾಕ್ಯಕ್ಕೆ ಮೊದಲು ಪಠಿತವಾಗಿರುವ "ಮನಸೈವಾನು ದ್ರಷ್ಟವ್ಯಂ—ನೇಹನಾನಾಸ್ತಿ ಕಿಂಚನ" ಇತ್ಯಾದಿ ವಾಕ್ಯದಿಂದ ಗುಣನಿಷೇಧವಿರುವುದರಿಂದ ಮತ್ತು ಮುಂದೆಯೂ "ಸಏಷನೇತಿನೇತಿ" ಎಂಬದಾಗಿ ನಿಷೇಧವಿರುವುದರಿಂದಲೂ, ವಶಿತ್ವಾದಿ ಗುಣಗಳು ಬ್ರಹ್ಮಸ್ವರೂಪಾನು ಬಂಧಿಗಳಲ್ಲವು. ಈ ಪ್ರಕಾರವಾಗಿ ನಿಷೇಧಿಸಲ್ಪಡುವ ಗುಣಗಳು ಮೋಕ್ಷಸಾಧನವಾದ ಉಪಾಸನೆದಲ್ಲಿ ಹೇಯವೇದ್ಯಗಳಾಗಬಹುದೆಂದು ಶಂಕಿಸಿ ಸಮಾಧಾನವನ್ನು ಹೇಳುತ್ತಾರೆ ಆದರಾತ್— ಶ್ರುತಿಗಳಿಗಿಂತಲೂ ಅನ್ಯಗಳಾದ ಪ್ರಮಾಣಗಳಿಂದ ತಿಳಿಯಲ್ಪಡದ ವಶಿತ್ವಾದಿ ಕಲ್ಯಾಣ ಗುಣಗಳನ್ನು ಶ್ರುತಿಯು ತಾನೆ ಆದರದಿಂದ ಪ್ರತಿಪಾದಿಸುವುದರಿಂದ ಅಂತಹ ಗುಣಗಳಿಗೆ, ಅಲೋಪಃ-ಪ್ರತಿಷೇಧವನ್ನು ಹೇಳಕೂಡದು. ಅಂತಹ ವಶಿತ್ವಾದಿಗುಣಗಳು ಬ್ರಹ್ಮಕ್ಕೆ ಸ್ವಾಭಾವಿಕಗಳೆಂದು ಅವಶ್ಯವಾಗಿ ಸ್ವೀಕರಿಸಬೇಕು "ನಿರ್ಗುಣಂ ನಿರಂಜನಂ" ಇತ್ಯಾದಿ ವಾಕ್ಯಗಳು ಬ್ರಹ್ಮಕ್ಕೆ ಹೇಯಗುಣಗಳನ್ನು ನಿಷೇಧಿಸುವುವು. "ನೇಹನಾನಾಸ್ತಿ ಕಿಂಚನ" ಇತ್ಯಾದಿ ವಾಕ್ಯವೂ ಸರ್ವಜಗತ್ತೂ ಬ್ರಹ್ಮಾಂತರ್ಯಾಮಿಕವಾಗಿರುವುದರಿಂದ ಬ್ರಹ್ಮಾತ್ಮಕಗಳಲ್ಲದ ವಸ್ತುಗಳ್ಯಾವವೂ ಇಲ್ಲವೆಂದು ಹೇಳುವುದೆಂದು ಈ ಸೂತ್ರಾರ್ಥವು)

(ಅದೃಶ್ಯತ್ವಾದಿ ಗುಣಕಃ—ಕಾಣಕೂಡದೆ ಇರುವಿಕೆಯೆಂಬಿದೇ ಮೊದಲಾದ ಗುಣಗಳುಳ್ಳವನು, ಕುತಃ—ಏತಕ್ಕೆಂದರೆ ? ಧರ್ಮೋಕ್ತೇಃ—ಧರ್ಮಗಳುಂಟೆಂದು ಹೇಳಲ್ಪಡುವುದರಿಂದ, ಎಂದು (೧॥ ೨॥ ೨೨ನೆ) ಸೂತ್ರಾರ್ಥವು)

ಈ ವಿಷಯವನ್ನು ಶ್ರೀಪರಾಶರರೂ "ಸತ್ವಾದಯೋನ ಸಂತೀಶೆ ಯತ್ರಚ ಪ್ರಾಕೃತಾ ಗುಣಾಃ" (ವಿ॥ ಪು॥ ೧॥ ೯॥ ४४) "ಸಮಸ್ತ ಕಲ್ಯಾಣ ಗುಣಾತ್ಮಕೋಸಾ" (ವಿ॥ ಪು॥ ೬॥ ೫॥ ೫४) ಎಂದು ಸ್ಪಷ್ಟವಾಗಿ ವಿವರಿಸಿರುತ್ತಾರೆ

(ಈಶನಲ್ಲಿ ಪ್ರಾಕೃತಗಳಾದ ಸತ್ವಾದಿ ಗುಣಗಳಿಲ್ಲವು ಸಮಸ್ತ ಕಲ್ಯಾಣಗುಣಗಳುಳ್ಳವ ನಿವನು, ಎಂದು ಈ ಶ್ಲೋಕಗಳ ಅರ್ಥವು)

ಮತ್ತು, ವಿಕಾರಾದಿ ಹೇಯಗುಣಗಳ್ಯಾವವೂ ಇಲ್ಲದೆ ಅದಕ್ಕೆ ಸಾಕ್ಷಾತ್ ವಿರುದ್ಧವಾಗಿ ಕೇವಲ ಕಲ್ಯಾಣ ಗುಣಗಳಿಂದಲೇ ಪರಂ ಬ್ರಹ್ಮವು ಪರಿಪೂರ್ಣವಾಗಿರುವುದೆಂದು "ಏತಂಹಿ ಸರ್ವಾಣಿ ಕಾಮಾನ್ಯಭಿ ಸಂಪಶಂತಿ ‖ ಸರ್ವಸ್ಯವಶೀ ಸರ್ವಸ್ಯೇಶಾನಃ ‖ (ಬೃ‖ ಉ‖ ೬‖ ೪‖ ೨೨) ಸತ್ಯಕಾಮ ಸ್ಸತ್ಯ ಸಂಕಲ್ಪಃ ‖ (ಛಾಂ‖ ೮‖ ೧‖ ೫) ಯಸ್ಸರ್ವಜ್ಞಸ್ಸರ್ವವಿತ್ ‖ (ಮುಂಡುಕೋ‖ ೧‖ ೧‖ ೧೦‖) ಪರಾऽಸ್ಯ ಶಕ್ತಿರ್ವಿವಿಧೈವ ಶ್ರೂಯತೆ ‖ ಸ್ವಾಭಾವಿಕೀ ಜ್ಞಾನ ಬಲ ಕ್ರಿಯಾಚ‖ (ಶ್ವೇ‖ ೬) ಮಾತಾ ಪಿತಾ ಭ್ರಾತಾ ನಿವಾಸ ಶ್ಶರಣಂ ಸುಹೃದ್ಗತಿರ್ನಾರಾಯಣಃ ‖ (ಸುಬಾ‖ ೬) ಸರ್ವಕರ್ಮಾ ಸರ್ವಗಂಧ ಸ್ಸರ್ವರಸಃ" (ಛಾಂ‖ ೩‖ ೧೪‖) ಇತ್ಯಾದಿ ಶ್ರುತಿಗಳು ಉದ್ಘೋಷಿಸುವುವು.

(ಇವನನ್ನು ಸಮಸ್ತ ಮಂಗಳಗಳೂ ಪ್ರವೇಶಿಸುವುವು. ಸಮಸ್ತವನ್ನೂ ವಶಪಡಿಸಿಕೊಂಡವನು ಸರ್ವಕ್ಕೂ ಈಶಾನನು. ಸತ್ಯವಾದ ಪುರುಷಾರ್ಥಗಳುಳ್ಳವನು, ಸತ್ಯವಾದ ಸಂಕಲ್ಪವುಳ್ಳವನು. ಯಾವನಾದರೆ ಸರ್ವಜ್ಞನೊ ಸಮಸ್ತವನ್ನೂ ವಿಶೇಷಿಸಿ ತಿಳಿದಿರುವನೊ. ಇವನ ಶ್ರೇಷ್ಠವಾದ ಶಕ್ತಿಯೂ ನಾನಾವಿಧವಾಗಿ ಕೇಳಲ್ಪಡುವುದು. ಇವನ ಜ್ಞಾನ ಬಲ ಕ್ರಿಯಾ ಎಂಬ ಗುಣಗಳು ಸ್ವಾಭಾವಿಕಗಳ. ತಾಯಿ, ತಂದೆ, ಸೋದರನು, ವಾಸಸ್ಥಾನವು, ರಕ್ಷಕನು, ಮಿತ್ರನು, ಗತಿ ಈ ಯಲ್ಲವೂ ನಾರಾಯಣನೇ ಸಕಲ ವ್ಯಾಪಾರಗಳನ್ನು ಮಾಡತಕ್ಕವನು, ಸಕಲ ಗಂಧಸ್ವರೂಪನು, ಸರ್ವ ರಸಸ್ವರೂಪನೂ ಎಂದೀ ಪ್ರಮಾಣಾರ್ಥವು.)

ಮತ್ತು; ಪರಮಾತ್ಮನ ಜ್ಞಾನ ಬಲ ಯೌವನಾದಿ ಕಲ್ಯಾಣಗುಣಗಳಿಗೆ ಅಳವಿಲ್ಲದೆ ಇರುವಿಕೆಯಿಂದ ಆನಂದವಲ್ಲಿಯಲ್ಲಿ ಆ ಪರಬ್ರಹ್ಮನ ಆನಂದವೆಂಬ — ಗುಣವಿಶೇಷವನ್ನು ಇಷ್ಟೆರುವುದೆಂದು ಹೇಳಲುಪಕ್ರಮಿಸಿ ಅದು ಸಾಧ್ಯವಾಗದೆ ಹೋದದ್ದರಿಂದ "ಯತೋವಾಚೋ ನಿವರ್ತಂತೆ ‖ ಅಪ್ರಾಪ್ಯ ಮನಸಾ ಸಹ" ಎಂಬದಾಗಿ ವಾಙ್ಮನಸ್ಸುಗಳು ಈ ವ್ಯಾಪಾರದಿಂದ ನಿವೃತ್ತಗಳಾದಂತೆ ಹೇಳಿರುವುದು. ಶ್ರೀವಿಷ್ಣು ಪುರಾಣದಲ್ಲಿ ಭಗವಚ್ಛಬ್ದ ನಿರ್ವಚನವನ್ನು ಮಾಡುವಾಗ ಈ ವಿಷಯವು ವಿಸ್ತಾರಪಡಿಸಲ್ಪಟ್ಟಿರುವುದು. "ಜ್ಞಾನವೃದ್ಧಾ ಮಯಾರಾಜನ್ ಬಹವಃ ಪರ್ಯುಪಾಸಿತಾಃ | ತೇಷಾಂ ಗುಣವತಾಂ ಶೌರೇ ರಹಂ ಗುಣವತೋ ಗುಣಾನ್‖ ಸಮಾಗತಾನಾ ಮಶೌಷಂ ಬಹೂನ್ ಬಹುಮತಾನ್ ಸತಾಂ| ನಾತಿಕ್ರಮ್ಯ ಹರಿರ್ಯಸ್ಯ ತಮೋಮತಃ" ‖ ಎಂಬದಾಗಿ ಶ್ರೀ

ಮಹಾಭಾರತ ಸಭಾಪರ್ವದಲ್ಲಿಯೂ; "ವರ್ಷಾಯುತೈರ್ಯಸ್ಯ ಗುಣಾನಶಕ್ಯಾ ವಕ್ತುಂ ಸಮೇತೈರಪಿ ಸರ್ವದೇವೈಃ | ಮಹಾತ್ಮನ ಶ್ಶಂಖಚಕ್ರಾಸಿ ಪಾಣೇರ್ವಿಷ್ಣೋ ರ್ಜಿಷ್ಣೋ ರ್ವಸುದೇವಾತ್ಮಜಸ್ಯ" ‖ ಎಂಬದಾಗಿ ಕರ್ಣ ಪರ್ವದಲ್ಲಿಯೂ; "ಚತುರ್ಮುಖಾಯುರ್ಯದಿಕೋಟಿ ವಕ್ತ್ರೋಭವೇನ್ನರಃ ಕ್ವಾಪಿ ವಿಶುದ್ಧಚೇತಾಃ | ಸತೇ ಗುಣಾನಾ ಮಯುತೈಕಮಂಶಂ ವದೇನ್ನವಾ ದೇವ ವರಪ್ರಸೀದ" ಎಂಬದಾಗಿ ಶ್ರೀವರಾಹ ಪುರಾಣದಲ್ಲಿಯೂ, "ಯಥಾರತ್ನಾನಿ ಜಲಧೇ ರಸಂಖ್ಯೇಯಾನಿ ಪುತ್ರಕ | ತಥಾ ಗುಣಾಸ್ತು ದೇವಸ್ಯ ತ್ವಸಂಖ್ಯೇಯಾಹಿ ಚಕ್ರಿಣಃ" ಎಂಬದಾಗಿ ಮಾತ್ಸ್ಯ ಪುರಾಣ ದಲ್ಲಿಯೂ, "ನಹಿ ತಸ್ಯ ಗುಣಾಸ್ಸರ್ವೇ ಸರ್ವೈ ರ್ಮುನಿಗಣೈರಪಿ | ವಕ್ತುಂ ಶಕ್ಯಾಪಿ ಯುಕ್ತಸ್ಯ ಸತ್ವಾದ್ಯೈ ರಖಿಲೈರ್ಗುಣೈಃ" ಎಂಬದಾಗಿ ವೈಷ್ಣವ ಧರ್ಮದಲ್ಲಿಯೂ ವಿಶೇಷವಾಗಿ ಹೇಳಲ್ಪಟ್ಟಿರುವುದು. ಇದಕ್ಕಿಂತಲೂ ಅಧಿಕವಾಗಿ ಶ್ರೀಮದ್ರಾಮಾಯಣ ಭಾರತಾದಿಗಳಲ್ಲಿ ಈ ವಿಷಯವನ್ನು ಕಾಣಬಹುದು.

(ಎಲೈ ರಾಜನೆ ? ನಾನು ಜ್ಞಾನದಲ್ಲಿ ಅಧಿಕರಾದ ಅನೇಕ ಹಿರಿಯರನ್ನು ಉಪಾಸನೆ ಮಾಡಿರುವೆನು ; ಗುಣಶಾಲಿಯಾದ ಅವರಲ್ಲಿ ಗುಣವಂತನಾದ ಶ್ರೀಮನ್ನಾರಾಯಣನ ಸಮಸ್ತ ಗುಣಗಳನ್ನು ಕೇಳಿದೆನು. ಅದರಲ್ಲಿಯೂ ಲೋಕದಲ್ಲಿ ಬಹುಮಾನಿಸಬೇಕಾದ ಸರ್ವರಿಗಿಂತಲೂ ಗುಣಗಳಿಂದ ಅತಿಶಯಿಸಿದವನು ಶ್ರೀಮನ್ನಾರಾಯಣನೇ ; ಆದುದರಿಂದ ಅವನನ್ನೇ ಅರ್ಚಿಸಬೇಕೆಂದು ನನ್ನ ಅಭಿಪ್ರಾಯವು ಎಂದು ಸಭಾಪರ್ವ ಪ್ರಮಾಣಾರ್ಥವು

ಸಮಸ್ತ ದೇವತೆಗಳೂ ಸೇರಿ ಅನೇಕ ಸಹಸ್ರ ಸಂವತ್ಸರಗಳು ವರ್ಣಿಸಿದರೂ ಶಂಖ ಚಕ್ರಾದಿ ದಿವ್ಯಾಯುಧಗಳನ್ನು ಕೈಯ್ಯಲ್ಲಿ ಧರಿಸಿದ ಮಹಾತ್ಮನಾದ ಸರ್ವಲೋಕವ್ಯಾಪಿಯಾಗಿರುವ ಸರ್ವೋತ್ಕೃಷ್ಟನಾದ ಶ್ರೀವಾಸುದೇವನ ಗುಣಗಳು ಇಷ್ಟೆಂದು ಎಣಿಸಲಾಗುವುದಿಲ್ಲವೆಂದು ಕರ್ಣಪರ್ವ ವಚನಾರ್ಥವು.

ಯಾವನಾದರೂ ಒಬ್ಬ ಮನುಷ್ಯನು ಚತುರ್ಮುಖಬ್ರಹ್ಮನ ಆಯುಸ್ಸನ್ನು ಪಡದು ಭಗವದ್ಗುಣವರ್ಣನಕ್ಕೆ ಒಂದು ಮುಖವು ಸಾಲದೇ ಇರುವುದರಿಂದ ಕೋಟಿ ಮುಖಗಳುಳ್ಳವನಾಗಿ ಭಗವದ್ಗುಣಾನುಸಂಧಾನಕ್ಕೆ ಅನುಕೂಲವಾದ ಮನಶ್ಶುದ್ಧಿಯುಳ್ಳವನು ಯೆಲ್ಲಿಯಾದರೂ ದೊರೆಕಿದರೆ ಅಂತವನು ಶ್ರೀಹರಿಯ ಗುಣಗಳ ಹತ್ತು ಸಹಸ್ರದಲ್ಲಿ ಒಂದು ಅಂಶವನ್ನಾದರೂ ಹೇಳುವನೊ ? ಅಥವಾ ಹೇಳಲಾರನೊ ಎಂದು ಶ್ರೀವರಾಹ ಪುರಾಣ ವಚನಾರ್ಥವು.

ಹೇಗಾದರೆ ಸಮುದ್ರದಲ್ಲಿರುವ ರತ್ನಗಳಿಗೆ ಸಂಖ್ಯೆಯಿಲ್ಲವೋ ಅದರಂತೆ ಎಲೈ ಮುಕ್ತರಿರಾ ? ಚಕ್ರಪಾಣಿಯಾದ ಶ್ರೀಹರಿಯ ಗುಣಗಳಿಗೆ ಸಂಖ್ಯೆಯಿಲ್ಲವೆಂದು ಮತ್ಸ್ಯ ಪುರಾಣ ವಚನಾರ್ಥವು.

ಸತ್ವಾದಿಗಳಾದ ಪ್ರಾಕೃತ ಗುಣಗಳಿಲ್ಲದ ಶ್ರೀಮನ್ನಾರಾಯಣನ ಕಲ್ಯಾಣ ಗುಣಗಳನ್ನು ಇಷ್ಟೆಂದು ವರ್ಣಿಸುವುದಕ್ಕೆ ಸಮಸ್ತವಾದ ಮುನಿಗಣವು ಒಂದಾಗಿ ಸೇರಿದರೂ ಸಾಧ್ಯವಾಗಲಾರದೆಂದು ವೈಷ್ಣವ ಧರ್ಮ ಪ್ರಮಾಣಾರ್ಥವು)

ಉಪಾಧಿವಶದಿಂದ ಬ್ರಹ್ಮವು ಸಂಸಾರಿಯಾಗುವುದೆಂತಲೂ ಸ್ವರೂಪದಿಂದಲೆ ವಿಕಾರವನ್ನು ಹೊಂದುವುದೆಂತಲೂ ಹೇಳುವಂತವರು ಪರಮಾತ್ಮನಲ್ಲಿಯೇ ಸಕಲ ದೋಷಗಳಿರುವಂತೆ ಅಂಗೀಕರಿಸುತ್ತಾರಾದುದರಿಂದ ಅವರನ್ನು ಕುರಿತು "ಪವಿತ್ರಂ-ಮಂಗಳಂ-ಪರಂ" ಎಂಬ ನಾಮಗಳು ಕೋಪಿಸಿಕೊಳ್ಳುವುವು.

"ವಾಚೋ ನಿವರ್ತಂತೆ" (ವಾಕ್ಕುಗಳು ಪರಮಾತ್ಮನ ಗುಣಗಳನ್ನು ಅಳೆವಿಡಲಸಾಧ್ಯವೆಂದು ತಿಳಿದು ಯಾವ ಪರಮಾತ್ಮನ ದೆಶೆಯಿಂದ ಹಿಂದಕ್ಕೆ ತಿರುಗುವುವು) ಎಂಬದಾಗಿ ಶ್ರುತಿಯು ಹೇಳಿದ್ದಕ್ಕೆ ಬ್ರಹ್ಮವು ಪ್ರಮಾಣಕ್ಕೆ ವಿಷಯವಾಗುವುದಿಲ್ಲವೆಂದು ತಾತ್ಪರ್ಯವಲ್ಲವು ಬ್ರಹ್ಮವು ಪ್ರಮಾಣಾ ವಿಷಯವೆಂದರೆ ಅದು ತುಚ್ಛ, ಎಂದರೆ ಶಶವಿಷಾಣದಂತೆ ಶೂನ್ಯದಲ್ಲಿ ಬರುವುದು. (ಶಶವಿಷಾಣ-ಮೊಲದ ಕೊಂಬು) ಅಷ್ಟುಮಾತ್ರವಲ್ಲದೆ "ವಾಕ್ಕುಗಳೂ ಮನಸ್ಸೂ ಯಾವದನ್ನು ಬಿಟ್ಟು ನಿವೃತ್ತಿಸಿರುವುವು" ಎಂತಲೂ, "ಬ್ರಹ್ಮದ ಆನಂದ ಗುಣವನ್ನು ತಿಳಿಯಲಪೇಕ್ಷಿಸಿ" ಎಂತಲೂ ಹೇಳುವ ಶ್ರುತಿ ವಾಕ್ಯಗಳು ಬ್ರಹ್ಮಕ್ಕೆ ಧರ್ಮಗಳುಂಟಾಗಿರುವಂತೆ ಹೇಳುವುದರಿಂದ ಅವುಗಳೊಡನೆಯೂ ವಿರೋಧಿಸುವುದು. ಹೇಗೆಂದರೆ? ...ವು ಪ್ರಮಾಣವಿಷಯವಾಗಲಾರದಾದುದರಿಂದ ಅದನ್ನು ಬಿಟ್ಟು ಹಿಂದಕ್ಕೆ ತಿರಿಗಿರುವಂತೆ ಹೇಳುವ ಅರ್ಥವು ಹೇಗೆತಾನೆ ಯುಕ್ತವಾಗುವುದು? ಈ ಪ್ರಕಾರವಾಗಿ ಹೇಳುವುದರಿಂದ ಬ್ರಹ್ಮ ಸ್ವರೂಪವನ್ನು ತೋರಿಸುವುದಕ್ಕಾಗಿ ಪ್ರವೃತ್ತಗಳಾದ ಶಾಸ್ತ್ರಗಳೆಲ್ಲವೂ ವ್ಯರ್ಥಗಳೇ ಆಗುವುವು. ಸೂತ್ರಕಾರರೂ "ಅಥಾತೋ ಬ್ರಹ್ಮ ಜಿಜ್ಞಾಸಾ" ಎಂದು ಆರಂಭಿಸಿ ಮಾಡಿರುವ ಬ್ರಹ್ಮ ವಿಚಾರಾರಂಭವೂ ಅನಾವಶ್ಯಕವಾಗುವುದು. "ವಾಕ್ಕುಗಳಿಗೆಲ್ಲವೂ ಶ್ರೇಷ್ಠವಾದ ತಾತ್ಪರ್ಯವು ಯಾವನಲ್ಲಿಯೊ"

ಎಂಬಿದೇ ಮೊದಲಾದ ವಾಕ್ಯಗಳೂ ಕೋಪಿಸಿಕೊಳ್ಳುವುವು ; ಕಿಂಚ ; ಉಪನಿಷತ್ತಿನಲ್ಲಿ "ಆನಂದವು ಅಳವಿಡಲ್ಪಡುವು" ದೆಂದಾರಂಭಿಸಿ ಅದನ್ನು ಬ್ರಹ್ಮಾನಂದದೊಡನೆ ಸೇರಿಸಿ ನೋಡಿರುವುದೂ ಅಸಂಗತವಾಗುವುದು ಆದುದರಿಂದ ಸೂತ್ರನ್ಯಾಯದಂತೆ ಆನಂದಕ್ಕೆ ಅಳವಿಲ್ಲವೆಂಬುವುದೇ ಸಿದ್ಧಾಂತವು. ಈ ಪ್ರಕಾರವೇ "ಶ್ರುತಿಸ್ತ್ವಾನಂದ ಮಾಃಖ್ಯಾತ್ ಹರೇರ್ಗುಣಾ ನಿಯತ್ತಯಾಮಾತು ಮಿಪ್ರೋದ್ಯತಾ ಸತೀ|ಉವಾಚ ವಾಚಾ ಮನಸಾ ಸಹೋಚಿತಾಂ ನಿವೃತ್ತಿಮೇವ ತ್ವವಧೇರ ಸಂಭವಾತ್" ಎಂಬದಾಗಿ ಶ್ರೀವತ್ಸಾಂಕಮಿಶ್ರರೂ ಅನುಗ್ರಹಿಸಿರುತ್ತಾರೆ.

(ಎಲೈ ಪರಮಪುರುಷನೆ ? ನಿನ್ನ ಆನಂದವೇ ಮೊದಲಾದ ದಿವ್ಯಕಲ್ಯಾಣ ಗುಣಗಳು ಎಷ್ಟು ಇರುವುವೊ ಅದನ್ನು ಶ್ರುತಿಯು ಮನಸ್ಸನ್ನು ಸಹಾಯಪಡಿಸಿಕೊಂಡು ಅಳವಿಡುವುದಕ್ಕೆ ಪ್ರಯತ್ನಪಟ್ಟಿತು. ಭಗವತ್ಕಲ್ಯಾಣ ಗುಣಗಳಿಗೆ ಅವಧಿ ಇಲ್ಲವಾದುದರಿಂದ ಈ ವ್ಯಾಪಾರವು ನಮ್ಮಿಂದ ಸಾಧ್ಯವಾಗಲಾರದೆಂದು ತಿಳಿದು ನಿವೃತ್ತಿಸುವುದೆ ಯೋಗ್ಯವೆಂದು ಹೇಳಿತೆಂದು ಈ ಮೇಲಿನ ಶ್ಲೋಕಾರ್ಥವು)

ಇದರಿಂದ "ನ ಯತ್ರ ನಾಥ ವಿದ್ಯಂತೆ ನಾಮಜಾತ್ಯಾದಿ ಕಲ್ಪನಾಃ" ಎಂಬ ಶ್ಲೋಕವನ್ನೂ ವ್ಯಾಖ್ಯಾನ ಮಾಡಿದಂತೆ ಆಯಿತು "ಯಾವ ನಿಮ್ಮಲ್ಲಿ ನಾಮಜಾತಿಯೇ ಮೊದಲಾದವು ಇಲ್ಲ" ವೆನ್ನುವುದಾಗಿ ಹೇಳಿರುವುದಕ್ಕೆ ಲೋಕ ವಿಲಕ್ಷಣವಾದ ನಾಮಾದಿಗಳುಂಟೆಂದು ಹೇಳಿದಂತೆಯೇ ಅರ್ಥವಾಗುವುದು. ಮತ್ತು ನಾಮ ಜಾತ್ಯಾದಿಗಳ ಕಲ್ಪನವಿಲ್ಲವೆಂದು ಹೇಳಿದರೆ ಕಲ್ಪಿತವಾದ ನಾಮ ಜಾತ್ಯಾದಿಗಳಿಗೆ ನಿಷೇಧವೂ ವಾಸ್ತವಗಳಾದ ನಾಮ ಜಾತ್ಯಾದಿಗಳುಂಟೆಂತಲೂ ಅರ್ಥವಾಗುವುದಷ್ಟೆ. ಇದರಿಂದ ಅವರು ಹೇಳಿರುವ ಪ್ರಮಾಣವು ಅವರಿಗೇನೆ ಬಾಧಕವಾಗುವುದರಲ್ಲಿ ಸಂಶಯವಿಲ್ಲವೆಂದು ತಿಳಿಯಬೇಕು.

ಮತ್ತು ಈ ಶ್ಲೋಕವನ್ನು ನಾಮವಿಲ್ಲವೆನ್ನುವುದಕ್ಕೆ ಸಾಧಕವಾಗಿ ಅಂಗೀಕರಿಸುವ ಪಕ್ಷದಲ್ಲಿ ಇದರಲ್ಲಿಯೇ "ನಾಥ" ಶಬ್ದ ಪ್ರಯೋಗವಿರುವುದರಿಂದ ಇದು ನಾಮವಾಗಲಿಲ್ಲವೊ? ಅದು ನಾಮವಾಗದಮೇಲೆ ಈ ಶಬ್ದದಿಂದ ಭಗವಂತನಿಗೆ ಸಂಬೋಧನ ಮಾಡಿರುವುದು ಯುಕ್ತವಾಗುವುದೊ ? ಆದುದರಿಂದ ನಾಮವಿಲ್ಲವೆನ್ನುವುದಕ್ಕ ಲೋಕ ವಿಲಕ್ಷಣವಾಗಿ ಪರಮಾತ್ಮನಿಗೆ ಮಾತ್ರವೆ ಸಲ್ಲತಕ್ಕ ದಿವ್ಯರೂಪ ನಾಮಗಳುಳ್ಳವನಾಗಿರುವುದರಿಂದ ಇಷ್ಟೆಂದು ಅಳವಿಡಲ್ಪಡುವ ಸಾಧಾರಣ ನಾಮಗ

ಈ ದಿವ್ಯ ನಾಮಗಳನ್ನು ವಿನಿಯೋಗಿಸುವ ಪ್ರಕಾರವನ್ನು ಉದ್ಯೋಗ ಪರ್ವ ಮೋಕ್ಷಧರ್ಮ ವೈಷ್ಣವಧರ್ಮ ನಿರ್ವಚನಾಧ್ಯಾಯಗಳಲ್ಲಿಯೂ ಆಯಾ ಮಂತ್ರ ಕಲಾಪಗಳಲ್ಲಿರುವ ವಚನಗಳಲ್ಲಿಯೂ ಕಾಣಬಹುದು. ॥೧೩॥

(ಶಂ॥ ಭಾ) "ಏಕಸ್ಯೈವ ಸಮಸ್ತಸ್ಯ ಬ್ರಹ್ಮಣೋ ದ್ವಿಜಸತ್ತಮ। ನಾಮ್ನಾಂ ಸಹಸ್ರಂ ಲೋಕಾನಾ ಮುಪಕಾರಕರಂ ಶೃಣು॥೧॥ ನಿಮಿತ್ತಶಕ್ತಯೋ ನಾಮ್ನಾಂ ಭೇದಿನ್ಯಸ್ತದುದೀರಣಾತ್ । ವಿಭಿನ್ನಾನ್ಯೇವ ಸಾಧ್ಯಂತೆ ಫಲಾನಿ ದ್ವಿಜಸತ್ತಮ ॥ ೨ ॥ ಯಚ್ಛಕ್ತಿ ನಾಮ ಯತ್ತಸ್ಯ ತತ್ತಸ್ಮಿನ್ನೇವ ವಸ್ತುನಿ । ಸಾಧಕಂ ಪುರುಷ ವ್ಯಾಘ್ರ ಸಾಮ್ಯ್ಯಕ್ರೂರೇಷು ವಸ್ತುಷು" ॥ ೩ ॥ ಎಂಬೀ ರೀತಿಯಾಗಿ ಶ್ರೀವಿಷ್ಣು ಧರ್ಮೋತ್ತರದಲ್ಲಿ ಹೇಳಲ್ಪಟ್ಟಿರುವುದರಿಂದ ವಿಚಾರಿಸಿ ನೋಡಿದರೆ ಗುಣಕ್ರಿಯಾ ಜಾತಿ ರೂಢಗಳೂ ಶಬ್ದ ಪ್ರವೃತ್ತಿಗೆ ಕಾರಣಗಳೂ ಆದ ನಿಮಿತ್ತ ಶಕ್ತ್ಯಾದಿಗಳು ಬ್ರಹ್ಮನಲ್ಲಿ ಪ್ರವರ್ತಿಸಲಾರವು. ಆದರೂ ಸಗುಣನೂ ಸವಿಕಾರನೂ ಆದ ಬ್ರಹ್ಮನು ಸರ್ವಾತ್ಮಕನಾಗಿರುವುದರಿಂದ ಅಂತಹ ಬ್ರಹ್ಮನಲ್ಲಿ ಶಬ್ದ ಪ್ರವೃತ್ತಿಗೆ ಕಾರಣಗಳಾದ ಸಕಲ ಶಕ್ತಿಗಳೂ ಸೇರಿರುವುವು.

(ಎಲೈ ಬ್ರಾಹ್ಮಣ ಶ್ರೇಷ್ಠನೇ ? ಅದ್ವಿತೀಯನಾಗಿಯೂ ಸರ್ವಸ್ವರೂಪನಾಗಿಯೂ ಇರುವ ಪರಬ್ರಹ್ಮನ ಸಹಸ್ರನಾಮಗಳು ಲೋಕಗಳಿಗೆ ಉಪಕಾರಗಳನ್ನು ಮಾಡತಕ್ಕವುಗಳಾದುದರಿಂದ ಅವನ ಸಹಸ್ರನಾಮಗಳನ್ನು ಕೇಳು. ॥೧॥ ನಾಮಗಳ ನಿಮಿತ್ತ ಶಕ್ತಿಗಳು ಅನೇಕ ವಿಧಗಳಾಗಿರುವುವು. ಆದುದರಿಂದ ಅಂತಹ ನಾಮಗಳ ಫಲಗಳೂ ಅನೇಕ ವಿಧಗಳಾಗಿರುವುವು. ॥೨॥ ಯಾವ ನಾಮವು ಎಂತಹ ಶಕ್ತಿಯುಳ್ಳದ್ದಾಗಿರುವುದೋ ಆ ನಾಮವು ಅದಕ್ಕೆ ತಕ್ಕ ವಸ್ತುವಿನಲ್ಲಿಯೇ ಪ್ರವರ್ತಿಸುವುದು. ಎಲೈ ಪುರುಷಶ್ರೇಷ್ಠನೇ ! ಸಾಮ್ಯ ಕ್ರೂರಗಳಾದ ವಸ್ತುಗಳಲ್ಲಿ ಆ ನಾಮವು ಸಾಧಕವಾಗುವುದು. ॥೩॥ ಎಂದೀ ಶ್ಲೋಕಾರ್ಥವು.)

ಮತ್ತು ಸರ್ವ ಶಬ್ದಗಳೂ ಪರಬ್ರಹ್ಮನಾದ ಪರಮಪುರುಷನಲ್ಲಿ ಪ್ರವರ್ತಿಸುವುವೆಂತಲೂ ಸಕಲ ಶಬ್ದಗಳಲ್ಲಿಯೂ ಗೌಣಗಳಾದ ನಾಮಗಳು ಗುಣಪ್ರಯೋಗದಿಂದ ಪ್ರವರ್ತಿಸುವುವೆಂತಲೂ ಪ್ರಸಿದ್ಧಗಳಾದ ನಾಮಗಳು ಸಾಕ್ಷಾತ್ತಾಗಿಯೇ ಪ್ರವರ್ತಿಸುವುವೆಂತಲೂ; ಮಂತ್ರಗಳಿಂದಲೂ, ಬ್ರಹ್ಮ ಸಾಕ್ಷಾತ್ಕಾರವುಳ್ಳ ಮಹರ್ಷಿಗಳಿಂದಲೂ (ಭಗವತ್ಕಥಾ

ಪ್ರಸಂಗವುಳ್ಳ ಸ್ಥಲಗಳಲ್ಲಿ ಮಹರ್ಷಿಗಳಿಂದಲೂ) ಹೇಳಲ್ಪಟ್ಟಿತೆಂದರಿಯಬೇಕು

ಮತ್ತು "ಯಚ್ಚಾಪ್ನೋತಿ ಯದಾದತ್ತೇ ಯಚ್ಚಾತ್ತಿ ವಿಷಯಾನಿಹ। ಯಚ್ಚಾಸ್ಯ ಸಂತತೋಭಾವ ಸ್ತಸ್ಮಾದಾತ್ಮೇತಿ ಗೀಯತೇ" ಎಂಬೀ ಪ್ರಮಾಣವನ್ನನುಸರಿಸಿ ಬ್ರಹ್ಮನನ್ನು ಮಹಾತ್ಮನೆಂತಲಾದರೂ ಅಥವಾ ಜನನಾದಿಗಳಿಲ್ಲದೇ ಇರುವುದರಿಂದ ಅಧಿಕವಾದ ಆತ್ಮನಾಗಿರುವುದರಿಂದ ಮಹಾತ್ಮನೆಂತಲಾದರೂ, ಅರ್ಥವನ್ನು ತಿಳಿದು ಚಿಂತಿಸಲಶಕ್ಯವಾದ ಪ್ರಭಾವವುಳ್ಳ ಆ ಮಹಾತ್ಮನ ನಾಮಗಳನ್ನು ಧರ್ಮಾರ್ಥ ಕಾಮ ಮೋಕ್ಷಗಳೆಂಬ ನಾಲ್ಕುವಿಧಗಳಾದ ಪುರುಷಾರ್ಥಗಳನ್ನಪೇಕ್ಷಿಸತಕ್ಕವರಿಗೆ ಅವುಗಳ ಸಿದ್ಧಿಗೋಸ್ಕರವಾಗಿ ಹೇಳುವೆನು ಕೇಳು. ॥೧೩॥

ಇನ್ನು ಮುಂದೆ ಮಂತ್ರಶಾಸ್ತ್ರ ಪ್ರಕ್ರಿಯೆಯನ್ನನುಸರಿಸಿ ಇದು ಮಹಾಮಂತ್ರವಾಗಿರುವುದರಿಂದ ಇದಕ್ಕುಂಟಾದ ಋಷಿಛಂದೋ ದೇವತಾ ಬೀಜ ಶಕ್ತ್ಯಾದಿಗಳನ್ನು ಹೇಳುತ್ತಾರೆ.

ಮೂ॥ ವಿಷ್ಣೋರ್ನಾಮ ಸಹಸ್ರಸ್ಯ ವೇದವ್ಯಾಸೋ
ಮಹಾನ್ ಋಷಿಃ । ಛಂದೋಽನುಷ್ಟುಪ್ತಥಾ
ದೇವೋ ಭಗವಾನ್ ದೇವಕೀಸುತಃ ॥ ಅಮೃತಾಂ
ಶೂದ್ಭವೋ ಬೀಜಂ ಶಕ್ತಿರ್ದೇವಕಿ ನಂದನಃ ।
ತ್ರಿಸಾಮಾ ಹೃದಯಂ ತಸ್ಯ ಶಾಂತ್ಯರ್ಥೇ ವಿನಿ
ಯುಜ್ಯತೇ ॥

"ಮಂತ್ರಂ ಯತ್ನೇನಗೋಪಯೇತ್" ಎಂಬ ಪ್ರಮಾಣದಿಂದ ಮಂತ್ರ ಸ್ವರೂಪವನ್ನು ಪ್ರಕಟಪಡಿಸುವುದು ಶಾಸ್ತ್ರ ವಿರುದ್ಧವಾದುದರಿಂದ ಈ ಅಂಶವು ಗುರುಮುಖೇನ ಕೇಳಿ ತಿಳಿದುಕೊಳ್ಳತಕ್ಕದ್ದಾಗಿರುವುದು.

ಮೂ॥ ಧ್ಯಾನಂ ॥ ಕ್ಷೀರೋದನ್ವತ್ಪ್ರದೇಶೇ
ಶುಚಿ ಮಣಿವಿಲಸತ್ಸೈಕತೇ ಮೌಕ್ತಿಕಾನಾಂ ಮಾ
ಲಾ ಕ್ಲೃಪ್ತಾ ಸ್ಥ ರ್ಮೌ
ಕ್ತಿಕೈ ರ್ಮಂಡಿತಾಂಗಃ । ಶುಭ್ರೈ ರಭ್ರೈ ರದಭ್ರೈ

ರುಪರಿ ವಿರಚಿತೈ ರ್ಮುಕ್ತಪೀಯೂಷ ವರ್ಷೈರ್ಆ
ನಂದೀನಃ ಪುನೀಯಾದರಿ ನಳಿನಗದಾ ಶಂಖಪಾ
ಣಿ ರ್ಮುಕುಂದಃ ॥೧॥

ತಾ॥ ನಿರ್ಮಲವಾದ ವಜ್ರಮಣಿಗಳಿಂದ ಪ್ರಕಾಶಿಸುತಲಿರುವ ಮರಳು ಗಳುಳ್ಳ ಕ್ಷೀರಾಬ್ಧಿಯ ತೀರದಲ್ಲಿ ಮುತ್ತಿನಸರಗಳಿಂದ ಅಲಂಕರಿಸಲ್ಪಟ್ಟ ದಿವ್ಯಾಸನದಮೇಲೆ ಕೂತುಕೊಂಡು ಸ್ಫಟಿಕಮಣಿಯಂತೆ ಪ್ರಕಾಶಿಸುತ ಲಿರುವ ಮುತ್ತಿನ ಸರಗಳಿಂದ ಅಲಂಕರಿಸಲ್ಪಟ್ಟ ದಿವ್ಯದೇಹವುಳ್ಳವರಾಗಿ ಯೂ, ಮೇಲ್ಭಾಗದಲ್ಲಿ ಅನೇಕಗಳಾದ ಸ್ವಚ್ಛವಾದ ಮೇಘಗಳು ಅಮೃತ ವರ್ಷವನ್ನು ವರ್ಷಿಸಲು ಅದಂಕಂಡು ಅತ್ಯಾನಂದದೊಡನೆ ಕೂಡಿದವರಾ ಗಿಯೂ, ಶಂಖ ಚಕ್ರ ಗದಾ ಪದ್ಮಗಳನ್ನು ಧರಿಸಿದವರಾಗಿಯೂ ಇರುವ ಮುಕ್ತಿಪ್ರದನಾದ ಪರಮಪುರುಷನು ನಮ್ಮನ್ನು ಕರ್ಮವಶ್ಯತೆಯಿಂದ ಬಿಡಿಸಿ ಕಾಪಾಡಲಿ ॥೧॥

ಮೂ॥ ಭೂಃ ಪಾದೌ ಯಸ್ಯನಾಭಿ ರ್ವಿಯದ
ಸುರನಿಲಶ್ಚಂದ್ರ ಸೂರ್ಯಾಚ ನೇತ್ರೇ ಕರ್ಣಾವಾ
ಶಾಶ್ಶಿರೋ ದ್ಯೌರ್ಮುಖಮಪಿ ದಹನೋ ಯಸ್ಯವಾ
ಸೋಯಮಬ್ಧಿಃ । ಅಂತಸ್ಸ್ಥಂ ಯಸ್ಯ ವಿಶ್ವಂ
ಸುರನರ ಖಗಗೋ ಭೋಗಿ ಗಂಧರ್ವ ದೈತ್ಯೈ
ಶ್ಚಿತ್ರಂ ರಂರಮ್ಯತೇತಂ ತ್ರಿಭುವನ ವಪುಷಂ ವಿ
ಷ್ಣುಮೀಶಂ ನಮಾಮಿ ॥೨॥

ತಾ॥ ಯಾವನಿಗಾದರೆ ಭೂಲೋಕವು ಪಾದವಾಗಿಯೂ, ಆಕಾಶವು ನಾಭಿಯಾಗಿಯೂ, ವಾಯುದೇವತೆಯು ಪ್ರಾಣವಾಗಿಯೂ, ಚಂದ್ರಸೂ ರ್ಯರು ಕಣ್ಣಾಗಿಯೂ, ದಿಕ್ಕುಗಳು ಕಿವಿಗಳಾಗಿಯೂ. ಸ್ವರ್ಗವು ಶಿರಸ್ಸಾ ಗಿಯೂ, ಅಗ್ನಿದೇವತೆಯು ಮುಖವಾಗಿಯೂ, ಸಮುದ್ರವು ವಾಸಸ್ಥಾನ ವಾಗಿಯೂ ಇರುವುದೋ; ಪ್ರಪಂಚವು ಯಾವ ಪರಮಪುರುಷನ ಗರ್ಭ ದಲ್ಲಿದ್ದುಕೊಂಡು ದೇವ ಮನುಷ್ಯ ಪಶು ಪಕ್ಷಿ ಸರ್ಪ ಯಕ್ಷ ರಾಕ್ಷಸ ಗಂಧರ್ವಾದಿ ರೂಪೇಣ ನಾನಾವಿಧ ವಿಚಿತ್ರ ರೂಪದಿಂದ ಮನೋಹರವಾ

ಗಿರುವುದೊ; ಸರ್ವವ್ಯಾಪಿಯಾದ ಸರ್ವ ನಿಯಾಮಕನಾಗಿರುವ ಅಂತಹ ಪರಮಪುರುಷನನ್ನು ನಮಸ್ಕರಿಸುವೆನು. ‖೨‖

ಮೂ‖ ಶಾಂತಾಕಾರಂ ಭುಜಗಶಯನಂ ಪದ್ಮ
ನಾಭಂ ಸುರೇಶಂ ವಿಶ್ವಾಕಾರಂ ಗಗನ ಸದೃಶಂ
ಮೇಘವರ್ಣಂ ಶುಭಾಂಗಂ । ಲಕ್ಷ್ಮೀಕಾಂತಂ ಕ
ಮಲ ನಯನಂ ಯೋಗಿ ಹೃದ್ಧ್ಯಾನ ಗಮ್ಯಂ
ವಂದೇ ವಿಷ್ಣುಂ ಭವಭಯಹರಂ ಸರ್ವಲೋಕೈಕ
ನಾಥಂ ‖ ೩ ‖

ತಾ‖ ಸುಪ್ರಸನ್ನವಾದ ಆಕಾರವುಳ್ಳವನಾಗಿಯೂ ಶೇಷಶಾಯಿಯಾಗಿಯೂ (ಜಗತ್ಕಾರಣತ್ವ ಸೂಚಕವಾದ) ಚತುರ್ಮುಖ ಬ್ರಹ್ಮನ ಉತ್ಪತ್ತಿಗೆ ಕಾರಣವಾಗಿರುವ ಪದ್ಮವನ್ನೇ ನಾಭಿಸ್ಥಾನದಲ್ಲಿ ಉಳ್ಳವನಾಗಿಯೂ ಸರ್ವದೇವತೆಗಳಿಗು ಪ್ರಭುವಾಗಿಯೂ ಆಕಾಶದಂತೆ ಸರ್ವಗತನಾಗಿದ್ದರೂ ವ್ಯಾಪ್ಯಗತದೋಷ ಸಂಪರ್ಕ ಶೂನ್ಯವಾಗಿಯೂ ನೀರುಳ್ಳ ಮೇಘದಂತೆ ನೀಲವರ್ಣನಾಗಿಯೂ ಅಖಿಲಹೇಯ ಪ್ರತ್ಯನೀಕ ಕಲ್ಯಾಣಗುಣೈಕ ತಾನನಾಗಿರುವುದರಿಂದ ಶುಭಾಶ್ರಯವಾದ ದಿವ್ಯಮಂಗಳವಿಗ್ರಹದಿಂದ ಕೂಡಿದವನಾಗಿಯೂ ಶ್ರೀದೇವಿಗೂ ಕೂಡ ಮನೋಹರನಾಗಿಯೂ ಪದ್ಮದಳಾಯತಾಕ್ಷನಾಗಿಯೂ ಯೋಗಿಗಳ ಹೃತ್ಪದ್ಮದಿಂದ ಧ್ಯಾನಿಸಲ್ಪಡತಕ್ಕವನಾಗಿಯೂ ಸರ್ವಲೋಕೈಕೇಶ್ವರನಾಗಿಯೂ ಸಂಸಾರ ಭಯ ವಿಮೋಚಕನಾಗಿಯೂ ಇರುವ ಸರ್ವ ವ್ಯಾಪನಶೀಲನಾದ ಶ್ರೀ ಮಹಾವಿಷ್ಣುವನ್ನು ಸೇವಿಸುವೆನು.

ಮೂ‖ ಮೇಘಶ್ಯಾಮಂ ಪೀತಕೌಶೇಯವಾಸಂ
ಶ್ರೀವತ್ಸಾಂಕಂ ಕೌಸ್ತುಭೋದ್ಭಾಸಿತಾಂಗಂ। ಪು
ಣ್ಯೋಪೇತಂ ಪುಂಡರೀಕಾಯ ತಾಕ್ಷಂ ವಿಷ್ಣುಂ
ವಂದೇ ಸರ್ವಲೋಕೈಕ ನಾಥಂ ‖ ೪ ‖

ತಾ‖ ಕಾಳಮೇಘದಂತ ಕಪ್ಪಾದ ತಿರುಮೇನಿ (ದೇಹ) ಕಾಂತಿಯುಳ್ಳವನಾಗಿ ಪೀತಾಂಬರವನ್ನು ಧರಿಸಿಯೂ ಮೂಲಪ್ರಕೃತಿ ಸ್ಥಾನೀ

ಯುವಾದ ಶ್ರೀವತ್ಸವೆಂಬ ಗುರ್ತನ್ನು ಧರಿಸಿಯೂ ಜೀವಾತ್ಮ ಸ್ಥಾನೀಯ ವಾದ ಕೌಸ್ತುಭವೆಂಬ ರತ್ನದಿಂದ ಪ್ರಕಾಶಿಸುತಲಿರುವ ವಕ್ಷಸ್ಥಲವುಳ್ಳ ವನಾಗಿಯೂ ಪುಂಡರೀಕದಂತೆ ದೀರ್ಘವಾದ ಕಣ್ಣುಗಳುಳ್ಳವನಾಗಿಯೂ ಪುಣ್ಯಪುರುಷರಿಂದ ಸದಾ ಅನುಭವಿಸಲ್ಪಟ್ಟು ಸರ್ವಲೋಕದಿಂದಲೂ ಇವನೇ ಜಗತ್ಪ್ರಭುವೆನ್ನಲ್ಪಡುವಂತಹ ಶ್ರೀಮಹಾವಿಷ್ಣುವನ್ನು ನಮ ಸ್ಕರಿಸುವೆನು. ‖೪‖

(ಶ್ರೀಮಧ್ವ ಸಿದ್ಧಾನ್ತ ಪ್ರತಿಷ್ಠಾಪಕರಾದ ಶ್ರೀಮದಾನಂದ ತೀರ್ಥಪಾದರ ಸಹಸ್ರ ನಾಮ ಭಾಷ್ಯವು ಈ ಸಮಯದಲ್ಲಿ ಸಿಕ್ಕದೇ ಇದ್ದ ಪ್ರಯುಕ್ತ ಈ ಉಪೋದ್ಘಾತವು ಅನಂತರದಲ್ಲಿ ಮುದ್ರಿಸಿ ಇದರ ಜೊತೆಗೆ ಸೇರಿಸಲ್ಪಡುವುದು.)

## ಶ್ರೀಸಹಸ್ರನಾಮ ಭಾಷ್ಯಗಳ ಉಪೋದ್ಘಾತವು ಸಮಾಪ್ತವು.

—ಅಸ್ಮದ್ಗುರುಪರಂಪರಾಯೈನಮಃ.—



ಶ್ರೀಯೈನಮಃ.

++ ಅಸ್ಮದ್ಗುರುಪರಂಪರಾಯೈನಮಃ. ++

# ಶ್ರೀಸಹಸ್ರನಾಮ ಭಾಷ್ಯದಲ್ಲಿ ಪ್ರಥಮ ಶತಕವು.

## ಶ್ರೀನಾಮ ನಿರ್ವಚನ ಮಂಗಳ ಶ್ಲೋಕವು.

ಕರಿಭೂಧರಜಾತ ಪಾರಿಜಾತಃ ಕರಿರಾಜಾರ್ತಿನಿದಾಘ ಕಾಲ ಮೇಘಃ । ಕಮಲಾ ಕುಚ ಗುಚ್ಛ ಚಂಚರೀಕಃ ಕಮಲೇಶೋ ಮಮ ಕಾಮಿತಂ ವಿಧತ್ತಾಮ್ ॥೧॥ ಪ್ರಣಾಮಮಿಮಮಾಚಾರ್ಯಾಃ ಪರಮಾ ಅಪಿ ದೇಶಿಕಾಃ । ತಥಾ ಸರ್ವೇಚ ಗುರವಃ ಪ್ರತಿಗೃಹ್ಣಂತು ಮಾಮಕಮ್ ॥೨॥

ಓಮ್ ॥ ವಿಶ್ವಂ ವಿಷ್ಣು ರ್ವಷಟ್ಕಾರೋ ಭೂತ ಭವ್ಯ ಭವತ್ಪ್ರಭುಃ । ಭೂತಕೃ ದ್ಭೂತಭೃ ದ್ಭಾವೋ ಭೂತಾತ್ಮಾ ಭೂತ ಭಾವನಃ ॥೧॥

## ಶಂಕರ ಭಾಷ್ಯವು.

ಈ ನಾಮ ಸಹಸ್ರದಲ್ಲಿರುವ ಆದಿತ್ಯಾದಿ ಶಬ್ದಗಳಿಗೆ ಶ್ರೀಮಹಾವಿಷ್ಣುವಿಗಿಂತಲೂ ಬೇರೆ ಕಡೆಯಲ್ಲಿ (ಎಂದರೆ ಪ್ರಸಿದ್ಧಾದಿತ್ಯಾದಿಗಳಲ್ಲಿ) ಪ್ರಸಿದ್ಧಿ ಇದ್ದರೂ ಅಂತಹ ಆದಿತ್ಯಾದಿ ಸರ್ವದೇವತೆಗಳೂ ಶ್ರೀಮನ್ನಾರಾಯಣನ ವಿಭೂತಿಗಳೇ ಆಗಿ ನಾರಾಯಣನಿಗಿಂತಲೂ ಭಿನ್ನಪಟ್ಟವರಲ್ಲವಾದುದರಿಂದ (ಆದಿತ್ಯಾದಿ ನಾಮಗಳಿಗೆ ನಾರಾಯಣನಿಗಿಂತಲೂ ಬೇರೆಯಾದ ದೇವತೆಗಳು ಅರ್ಥವಾಗುವರೆಂದು ಪ್ರಸಿದ್ಧವಾಗಿದ್ದರೂ) ನಾರಾಯಣನ ಸ್ತೋತ್ರದಲ್ಲಿಯೇ ಪರ್ಯವಸಾನವಾಗುವುದು.

"ಭೂತಾತ್ಮಾ ಚೇಂದ್ರಿಯಾತ್ಮಾಚ ಪ್ರಧಾನಾತ್ಮಾ ತಥಾಭವಾನ್। ಆತ್ಮಾಚ ಪರಮಾತ್ಮಾಚ ತ್ವಮೇಕಃ ಪಂಚಧಾಸ್ಥಿತಃ ॥ ಜ್ಯೋತೀಂಷಿ ವಿಷ್ಣು ರ್ಭುವನಾನಿವಿಷ್ಣು ರ್ವನಾನಿವಿಷ್ಣು ರ್ಗಿರಯೋದಿಶಶ್ಚ । ನದ್ಯಸ್ಸಮುದ್ರಾಶ್ಚ ಸಏವ ಸರ್ವಂ ಯದಸ್ತಿ ಯನ್ನಾಸ್ತಿಚ ವಿಪ್ರವರ್ಯ ॥" ಎಂಬದಾಗಿ ಶ್ರೀವಿಷ್ಣುಪುರಾಣದಲ್ಲಿಯೂ "ಆದಿತ್ಯಾನಾಮಹಂವಿಷ್ಣುಃ"

ಎಂದುಪಕ್ರಮಿಸಿ "ಅಥವಾ ಬಹುನೈತೇನ ಕಿಂ ಜ್ಞಾನೇನ ತವಾರ್ಜುನ । ವಿಷ್ಟಭ್ಯಾಹಮಿದಂ ಕೃತ್ಸ್ನಮೇಕಾಂಶೇನ ಸ್ಥಿತೋ ಜಗತ್" ಎಂಬುದಾಗಿ ಶ್ರೀಮದ್ಗೀತೋಪನಿಷತ್ತಿನಲ್ಲಿಯೂ "ಬ್ರಹ್ಮೈವೇದಂ ವಿಶ್ವಮಿದಂ ವರಿಷ್ಠಂ । ಪುರುಷ ಏವೇದಗ್ಂ ಸರ್ವಂ । ಸರ್ವಂ ಕರ್ಮ ತಪೋ ಬ್ರಹ್ಮ ಪರಾಮೃತಂ" ಎಂಬೀ ಶ್ರುತಿಗಳಲ್ಲಿಯೂ ಈ ಹಿಂದಿನ ಅರ್ಥವೇ ಪ್ರತಿಪಾದಿಸಲ್ಪಟ್ಟಿರುವುದು.

(ಭೂತಾತ್ಮಾ, ಇಂದ್ರಿಯಾತ್ಮಾ, ಪ್ರಧಾನಾತ್ಮಾ, ಆತ್ಮಾ, ಪರಮಾತ್ಮಾ ಎಂಬುದಾಗಿ ಒಬ್ಬನಾದ ನೀನೇ ಐದು ವಿಧವಾಗಿರುವಿ. ತೇಜಸ್ಸೂ ವಿಷ್ಣುವೇ, ಲೋಕಗಳೂ ವಿಷ್ಣುವೇ, ಕಾಡುಗಳೂ ವಿಷ್ಣುವೇ, ನದೀ ಸಮುದ್ರಗಳೂ ಆ ವಿಷ್ಣುವೇ, ಎಲೈ ಬ್ರಾಹ್ಮಣೋತ್ತಮನೆ? ಯಾವದುಂಟೊ ಯಾವದಿಲ್ಲವೊ ಆ ಸರ್ವವು ವಿಷ್ಣುವೇ ಎಂದು ಶ್ರೀ ವಿಷ್ಣು ಪುರಾಣಾರ್ಥವು.

ದ್ವಾದಶಾದಿತ್ಯರಲ್ಲಿ ನಾನು ವಿಷ್ಣುವೆಂಬ ಸೂರ್ಯನು. ಎಲೈ ಅರ್ಜುನನೇ? ಇದಕ್ಕಿಂತಲೂ ಅಧಿಕವಾದ ಜ್ಞಾನದಿಂದ ನಿನಿಗೆ ಯಾವ ಪ್ರಯೋಜನವೂ ಇಲ್ಲವು. ನಾನು ಸಮಸ್ತವಾದ ಈ ಜಗತ್ತನ್ನು (ಒಂದು ಅಂಶದಿಂದ) ಏಕರೂಪವಾಗಿ ವ್ಯಾಪಿಸಿರುವೆನು ಎಂದು ಶ್ರೀಗೀತಾ ವಚನಾರ್ಥವು. ಶ್ರುತಿ ವಾಕ್ಯಗಳ ಅರ್ಥವನ್ನೂ ಇದರಂತೆಯೇ ತಿಳಿಯಬೇಕು.)

ಈ ಸಹಸ್ರನಾಮಗಳಲ್ಲಿ ವಿಷ್ಣ್ವಾದಿ ಶಬ್ದಗಳು ಅನೇಕಸಲವಾಗಿ ಹೇಳಲ್ಪಟ್ಟರೂ ಸಮಾಸಭೇದವೊ ಅಥವಾ ವೃತ್ತಿಭೇದವೊ ಯದ್ವಾ ಅರ್ಥಭೇದವೊ ಇರುವುದರಿಂದ ಪೌನರುಕ್ತ್ಯ ದೋಷವಿರುವುದಿಲ್ಲವು. "ಶ್ರೀಪತಿ ರ್ಮಾಧವಃ" ಇತ್ಯಾದಿ ಶಬ್ದಗಳಿಗೆ ಸಮಾಸವೃತ್ತಿಯು ಒಂದೇ ಆಗಿದ್ದರೂ ಶಬ್ದಭೇದ ವಿರುವುದರಿಂದ ಪೌನರುಕ್ತ್ಯ ವಿಲ್ಲವು. ಹಿಂದೆ "ಕಿಮೇಕಂ ದೈವತಂ ಲೋಕೇ" ಎಂಬ ಪ್ರಶ್ನಕ್ಕೆ ಪ್ರತಿಯಾಗಿ ಸಹಸ್ರನಾಮಗಳೂ ಒಂದು ದೇವತೆಯನ್ನೇ ಬೋಧಿಸುವುವೆಂದು ಹೇಳಿರುವುದರಿಂದ ಅರ್ಥಭೇದ ವಿಲ್ಲದಿದ್ದರೂ ಶಬ್ದಭೇದ ವಿರುವುದರಿಂದ ಪುನರುಕ್ತಿ ದೋಷಕ್ಕೆ ಅವಕಾಶವಿಲ್ಲವು. ಈ ನಾಮಗಳಲ್ಲಿ ಎಲ್ಲಿ ಪುಲ್ಲಿಂಗ ಶಬ್ದ ಪ್ರಯೋಗವೊ ಅಲ್ಲಿ 'ವಿಷ್ಣು'ವನ್ನು ವಿಶೇಷ್ಯವಾಗಿಯೂ, ಸ್ತ್ರೀಲಿಂಗ ಪ್ರಯೋಗ ಸ್ಥಲಗಳಲ್ಲಿ 'ದೇವತೆ'ಯನ್ನು ವಿಶೇಷ್ಯವಾಗಿಯೂ, ನಪುಂಸಕಲಿಂಗ ಪ್ರಯೋಗ ಸ್ಥಲಗಳಲ್ಲಿ 'ಬ್ರಹ್ಮ'ವನ್ನು ವಿಶೇಷ್ಯವಾಗಿಯೂ ಮಾಡಿಕೊಳ್ಳಬೇಕು. ॥೧೩॥

**(೧ನೇ ನಾಮವು)** ಓಮ್ ॥ ವಿಶ್ವಸ್ಮೈ ನಮಃ.

ವಿಶ್ವಮ್ "ಯತಸ್ಸರ್ವಾಣಿ ಭೂತಾನಿ" ಎಂದುಪಕ್ರಮಿಸಿ ಜಗತ್ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣವಾದ ಬ್ರಹ್ಮವನ್ನು ಅದ್ವಿತೀಯನಾದ ದೇವನೆಂಬದಾಗಿ ಹೇಳಿರುವುದರಿಂದ ಮೊದಲು ಸಗುಣ ನಿರ್ಗುಣವೆಂಬ ದ್ವಿವಿಧವಾದ ಬ್ರಹ್ಮವೂ ವಿಶ್ವ ಶಬ್ದದಿಂದ ಹೇಳಲ್ಪಡುವುದು; ಈ ಸರ್ವಲೋಕಗಳಿಗೂ ಬ್ರಹ್ಮವು ಕಾರಣವಾಗಿರುವುದರಿಂದ ವಿಶ್ವ ಶಬ್ದಕ್ಕೆ ಬ್ರಹ್ಮವು ಅರ್ಥವಾಗುವುದು. ಮತ್ತು ಮೊದಲು 'ವಿಶ್ವಂ' ಎಂಬದಾಗಿ ಕಾರ್ಯವಾಚಕ ಶಬ್ದದಿಂದ ಕಾರಣವಾದ ಬ್ರಹ್ಮವನ್ನು ಗ್ರಹಿಸಿರುವುದಕ್ಕೆ ಕಾರ್ಯಭೂತರಾದ ಬ್ರಹ್ಮಾದಿ ದೇವತೆಗಳ ನಾಮಗಳಿಂದ ಕೂಡ ಶ್ರೀಮಹಾವಿಷ್ಣುವಿನ ಸ್ತೋತ್ರವೇ ಯುಕ್ತವಾಗಿರುವುದೆಂಬ ಅರ್ಥವನ್ನು ತೋರಿಸುವುದರಲ್ಲಿ ತಾತ್ಪರ್ಯವು. (ಅಥವಾ) ಪರಮಾರ್ಥವಾಗಿ ವಿಚಾರಿಸಿ ನೋಡಿದರೆ "ಬ್ರಹ್ಮೈವೇದಂ ವಿಶ್ವಮಿದಂ ವರಿಷ್ಠಂ ॥ ಪುರುಷ ಏವೇದಗ್ ಸರ್ವಂ" (ಈ ಪ್ರಪಂಚವೆಲ್ಲವೂ ಶ್ರೇಷ್ಠವಾದ ಬ್ರಹ್ಮವೇ ಎಂದರ್ಥವು) ಎಂಬಿದೇ ಮೊದಲಾದ ಶ್ರುತ್ಯಾದಿಗಳಿಂದ ಈ ಪ್ರಪಂಚವು ಪರಮಪುರುಷನಿಗಿಂತಲೂ ಭಿನ್ನವಲ್ಲವಾದುದರಿಂದ 'ವಿಶ್ವಂ' ಎಂದು ಹೇಳಲ್ಪಟ್ಟಿತು. ವಾಸ್ತವವಾಗಿ ವಿಚಾರಿಸಿ ನೋಡಿದರೆ ಬ್ರಹ್ಮಕ್ಕಿಂತಲೂ ಬೇರೆಯಾಗಿರುವುದು ಯಾವದೂ ಇಲ್ಲವಷ್ಟೆ. (ಅಥವಾ) "ತತ್ಸೃಷ್ಟ್ವಾ ತದೇವಾನು ಪ್ರಾವಿಶತ್" (ಆ ಪ್ರಪಂಚವನ್ನು ಸೃಷ್ಟಿಸಿ ಅದನ್ನೆ ಪ್ರವೇಶಿಸಿದನು) ಎಂಬ ಶ್ರುತ್ಯನುಸಾರವಾಗಿ ಸರ್ವ ವಸ್ತುಗಳಲ್ಲಿಯೂ ಪ್ರವೇಶಿಸುವ ಬ್ರಹ್ಮವು ವಿಶ್ವಶಬ್ದದಿಂದ ಹೇಳಲ್ಪಡುವುದು. ಇಷ್ಟುಮಾತ್ರವಲ್ಲದೆ "ಯತ್ಪ್ರಯಂತ್ಯಭಿ ಸಂವಿಶಂತಿ" ಎಂಬ ಶ್ರುತಿ ಪ್ರಮಾಣವನ್ನನುಸರಿಸಿ ಪ್ರಳಯ ಕಾಲದಲ್ಲಿ ಸಕಲ ಭೂತಗಳೂ ಈ ಬ್ರಹ್ಮನಲ್ಲಿ ಪ್ರವೇಶಿಸುವುದರಿಂದ 'ವಿಶ್ವಂ' ಎನ್ನಲ್ಪಡುವುದು. "ಉಭಯಥಾ ವಿಶ್ವಂ ಬ್ರಹ್ಮ" ಎಂಬ ಪ್ರಮಾಣಾನುಸಾರವಾಗಿ ಕಾರ್ಯ ಭೂತವಾದ ಸರ್ವ ಪ್ರಪಂಚದಲ್ಲಿಯೂ ಯಾವನು ಪ್ರವೇಶಿಸುವನೋ ಆ ಕಾರಣದಿಂದಲಾದರೂ; ಈ ಬ್ರಹ್ಮದಲ್ಲಿ ಸಕಲವೂ ಪ್ರವೇಶಿಸುವದರಿಂದಲಾದರೂ 'ವಿಶ್ವಂ' ಎನ್ನಲ್ಪಡುವನು. ಮತ್ತು ಭಾಷ್ಯದಲ್ಲಿ ಉದಹರಿಸಿರುವ "ನಚಿಕೇತಾ ಮೃತ್ಯುಂ ಪೃಷ್ಟವಾನ್" ಎಂಬಿದೇ ಮೊದಲಾದ ಮಾಂಡೂಕ್ಯೋಪನಿಷದಾದಿ ವಾಕ್ಯಗಳನ್ನು ಪರ್ಯಾಲೋಚಿಸಿದರೆ ವಿಶ್ವ ಶಬ್ದದಿಂದ

ಓಂಕಾರವು ಹೇಳಲ್ಪಡುವುದು. ಆದುದರಿಂದ ವಾಚ್ಯವಾದ ಓಂಕಾರಕ್ಕೂ ವಾಚಕವಾದ ವಿಶ್ವ ಶಬ್ದಕ್ಕೂ ಅತ್ಯಂತವಾಗಿ ಭೇದವಿಲ್ಲದೆ ಇರುವುದರಿಂದ ವಿಶ್ವ ಶಬ್ದಕ್ಕೆ ಓಂಕಾರವು ಅರ್ಥವೆಂದು ತಿಳಿಯಬೇಕು. ಓಂಕಾರಕ್ಕೆ ಬ್ರಹ್ಮವೇ ಅರ್ಥವು. ಮತ್ತು "ಸರ್ವಂ ಖಲ್ವಿದಂ ಬ್ರಹ್ಮ ತಜ್ಜಲಾನಿತಿ ಶಾನ್ತ ಉಪಾಸೀತ"

(ಈ ಕಾಣಲ್ಪಡುವ ಪ್ರಪಂಚವೆಲ್ಲವೂ ಬ್ರಹ್ಮದಿಂದ ಹುಟ್ಟುವಂಥಾದ್ದಾಗಿಯೂ ಬ್ರಹ್ಮದಲ್ಲಿಯೇ ಲಯಿಸುವಂಥಾದ್ದಾಗಿಯೂ ಬ್ರಹ್ಮದಲ್ಲಿಯೇ ವೃದ್ಧಿಹೊಂದುವಂಥಾದ್ದಾಗಿಯೂ ಇರುವುದರಿಂದ ಈ ಪ್ರಪಂಚವೆಲ್ಲವೂ ಬ್ರಹ್ಮವೇ ಎಂದು ಶಾನ್ತನಾಗಿ ಉಪಾಸನ ಮಾಡಬೇಕು.)

ಎಂಬ ಶ್ರುತ್ಯನುಸಾರವಾಗಿ ಸಮಸ್ತವೂ ಒಂದೇ ಎಂದು ಸ್ಫುಟವಾಗಿರುವುದರಿಂದ ರಾಗಾದಿ ದೋಷಗಳಿಗೆ ಅವಕಾಶವಿಲ್ಲವಾದುದರಿಂದ ಶಾನ್ತನಾಗಿ ಉಪಾಸನೆವನ್ನು ಮಾಡಬೇಕು.

(ಅಥವಾ) "ಶ್ರೂಯತಾಂ ಧರ್ಮ ಸರ್ವಸ್ವಂ ಶ್ರುತ್ವಾಚೈವಾವಧಾರ್ಯತಾಂ | ಆತ್ಮನಃ ಪ್ರತಿಕೂಲಾನಿ ಪರೇಷಾಂ ನ ಸಮಾಚರೇತ್ ||೧|| ಆತ್ಮೌಪಮ್ಯೇನ ಸರ್ವತ್ರ ಸಮಂ ಪಶ್ಯತಿಯೋಽರ್ಜುನ| ಸುಖಂವಾ ಯದಿವಾ ದುಃಖಂ ಸಯೋಗೀ ಪರಮೋಮತಃ || ೨ || ನಿರ್ಗುಣಃ ಪರಮಾತ್ಮಾತ್ರ ದೇಹೇ ವ್ಯಾಪ್ಯ ವ್ಯವಸ್ಥಿತಃ | ತಮಹಂ ಜ್ಞಾನ ವಿಜ್ಞೇಯಂ ನಾವಮನ್ಯೇ ನಲಂಘಯೇ ||೩|| ಯದ್ವ್ಯಾಗಮೈರ್ನ ವಿಂದೇಯಂ ತಮಹಂ ಭೂತಭಾವನಂ| ಕ್ರಮೇಯಂ ತ್ವಾಂ ಗಿರಿಂ ಚೇಮಂ ಹನೂಮಾನಿವ ಸಾಗರಂ||೪|| ಬದ್ಧವೈರಾಣಿ ಭೂತಾನಿ ದ್ವೇಷಂ ಕುರ್ವಂತಿ ಚೇತ್ತತಃ | ಶೋಚ್ಯಾನ್ಯಹೋತಿ ಮೋಹೇನ ವ್ಯಾಪ್ತಾನೀತಿ ಮನೀಷಿಣಾ || ೫ || ಏತೇ ಭಿನ್ನದೃಶಾಂ ದೈತ್ಯಾ ವಿಕಲ್ಪಾಃ ಕಥಿತಾ ಮಯಾ" ||೫||

(ಸಮಸ್ತಗಳಲ್ಲಿಯೂ ಶ್ರೇಷ್ಠವಾದದ್ದು ಯಾವದೋ ಅದು ಕೇಳಲ್ಪಡಲಿ. ತನಿಗೂ ಅನ್ಯರಿಗೂ ಪ್ರತಿಕೂಲ ವ್ಯಾಪಾರಗಳನ್ನು ಮಾಡಕೂಡದು. ||೧|| ಎಲೈ ಅರ್ಜುನನೇ? ಸಮಸ್ತ ಪ್ರಾಣಿಗಳಲ್ಲಿಯೂ ಸುಖವನ್ನಾದರೂ ದುಃಖವನ್ನಾದರೂ ತನಗೆ ಪ್ರಾಪ್ತವಾದಂತೆ ಸಮದೃಷ್ಟಿಯಿಂದ ಯಾವನು ನೋಡುತ್ತಾನೆಯೋ ಅಂತಹ ಯೋಗಿಯು ಶ್ರೇಷ್ಠನೆಂದು ನನ್ನ ಅಭಿಪ್ರಾಯವು. ||೨|| ನಿರ್ಗುಣನಾದ ಪರಮಾತ್ಮನು ದೇಹದಲ್ಲಿ ವ್ಯಾಪಿಸಿರುವನು. ಅಂತಹ ಆತ್ಮವನ್ನು ನಾನು ಜ್ಞಾನದಿಂದ ತಿಳಿದುಕೊಳ್ಳುವೆನು. ಅವಮಾನಿಸಲಾರೆನು. ||೩|| ಸರ್ವ ಭೂತಗಳನ್ನು ಸೃಷ್ಟಿಸುವಂತಹ ಆ ಆತ್ಮನನ್ನು ನಾನು ಆಗಮಗಳಿಂದ ತಿಳಿದುಕೊಳ್ಳಲಾರೆನು. ಆದರೂ ಆಂಜನೇಯನು

ಸಮುದ್ರವನ್ನು ದಾಟಿದಂತೆ ಪರ್ವತದಂತೆ ಇರುವ ನಿನ್ನನ್ನು ಕೂಡ ಅತಿಕ್ರಮಿಸು ವೆನು. ॥ ೪ ॥ ಸಕಲ ಭೂತಗಳೂ ವೈರವನ್ನವಲಂಬಿಸಿ ಯುದ್ಧಕ್ಕೆ ಸನ್ನದ್ಧರಾದರೆ ಅಂತವರು ಅತ್ಯಂತಾ ಜ್ಞಾನಿಗಳೆಂದು ದುಃಖಿಸಲ್ಪಡತಕ್ಕವರಾಗುವರು. ॥ ೫ ॥ ಎಲೈ ದೈತ್ಯರೇ ? ಭೇದ ದರ್ಶಿಗಳ (ಈ ವಿಷಮ ಸ್ವಭಾವಗಳು) ವಿಕಲ್ಪಗಳು ನನ್ನಿಂದ ಹೇಳ ಲ್ಪಟ್ಟಿರುವವು ॥ ೫೪ ॥

" ಕೃತ್ವಾಭ್ಯುಪಗಮಂ ತತ್ರ ಸಂಕ್ಷೇಪ ಶ್ರೂಯತಾಂ ಮಮ । ವಿಸ್ತಾರ ಸ್ಸರ್ವಭೂತಸ್ಯ ವಿಷ್ಣೋ ಸ್ಸರ್ವಮಿದಂ ಜಗತ್ ॥ ೧ ॥ ದ್ರಷ್ಟವ್ಯ ಮಾತ್ಮವತ್ತಸ್ಮಾ ದಭೇದೇನ ವಿಚಕ್ಷಣೈಃ । ಸಮುತ್ಸೃಜ್ಯಾ ಸುರಂ ಭಾವಂ ತಸ್ಮಾದ್ಯೂಯಂ ತಥಾವಯಂ ॥ ೨ ॥ ತಥಾ ಯತ್ನಂ ಕರಿಷ್ಯಾಮೊ ಯಥಾ ಪ್ರಾಪ್ಸ್ಯಾಮ ನಿರ್ವೃತಿಂ । ಸರ್ವತ್ರ ದೈತ್ಯಾ ಸ್ಸಮತಾ ಮು ಪೇತಾ ಸ್ಸಮತ್ವ ಮಾರಾಧನ ಮಚ್ಯುತಸ್ಯ ॥ ೩ ॥ ನಮನಾದಿ ಕೃತ ಸ್ತಾತ ನಚ ನೈಸರ್ಗಿಕೋ ಮಮ । ಪ್ರಭಾವ ಏಷ ಸಾಮಾನ್ಯೋ ಯಸ್ಯ ಯಸ್ಯಾಚ್ಯುತೋ ಹೃದಿ ॥ ೪ ॥ ಅನ್ಯೇಷಾಂ ಯೊನಪಾಪಾನಿ ಚಿಂತ ಯ ತ್ಯಾತ್ಮನೊ ಯಥಾ । ತಸ್ಯಪಾಪಾಗಮಸ್ತಾತ ಹೇತ್ವ ಭಾವಾನ್ನ ವಿದ್ಯ ತೇ ॥ ೫ ॥ ಕರ್ಮಣಾ ಮನಸಾ ವಾಚಾ ಪರಪೀಡಾಂ ಕರೋತಿಯಃ । ತದ್ಬೀಜಂ ಜನ್ಮ ಫಲತಿ ಪ್ರಭೂತಂ ತಸ್ಯಚಾ ಶುಭಮ್ ॥ ೬ ॥ ಸೋಹಂ ನಪಾಪ ಮಿಚ್ಛಾಮಿ ನಕರೋಮಿ ವದಾಮಿವಾ । ಚಿಂತಯ ನ್ಸರ್ವಭೂ ತಸ್ಥ ಮಾತ್ಮನ್ಯಪಿಚ ಕೇಶವಂ ॥ ೭ ॥ ಶಾರೀರಂ ಮಾನಸಂವಾಗ್ಜಂ ದೈವಂ ಭೂತ ಭವಂ ತಥಾ । ಸರ್ವತ್ರ ಸಮಚಿತ್ತಸ್ಯ ತಸ್ಯಮೇ ಜಾಯತೇ ಕುತಃ ॥ ೮ ॥ ಏವಂ ಸರ್ವೇಷು ಭೂತೇಷು ಭಕ್ತಿರವ್ಯಭಿಚಾರಿಣೀ । ಕರ್ತ ವ್ಯಾ ಪಂಡಿತೈ ರ್ಜ್ಞಾತ್ವಾ ಸರ್ವಭೂತ ಮಯಂ ಹರಿಂ ॥ ೯ ॥ ಸಾಮ ಚೊಪ ಪ್ರದಾನಂಚ ಭೇದ ದಣ್ಡೌ ತಥಾ ಪರೌ । ಉಪಾಯಾಃ ಕಥಿತಾ ಹ್ಯೇತೆ ಮಿತ್ರಾದೀನಾಂಚ ಸಾಧನೆ । ತಾನೇವಾಹಂ ನಪಶ್ಯಾಮಿ ಮಿತ್ರಾ ದೀಂಸ್ತಾತಮಾಕ್ರುಧಃ " ॥ ೧೦ ॥

(ಭೇದ ದರ್ಶಿಗಳ ವಿಷಯದಲ್ಲಿ ಸಂಕ್ಷೇಪವಾಗಿ ಹೇಳುವೆನು ಕೇಳು. ಈ ಕಾಣ ಲ್ಪಡುವ ಪ್ರಪಂಚವೆಲ್ಲವೂ ಸರ್ವಭೂತ ನಿವಾಸನಾದ ವಿಷ್ಣುವಿನ ವಿಸ್ತಾರವು ॥೧॥ ಆದು ದರಿಂದ ವಿವೇಕಿಗಳಾದ ನೀವೆಲ್ಲರೂ ಆಸುರ ಸ್ವಭಾವವನ್ನು ಬಿಟ್ಟು ಸಮಸ್ತವನ್ನು ಅಭೇದದಿಂದ ನೋಡಬೇಕು. ॥ ೨ ॥ ಹೇಗಾದರೇ ನಾವೆಲ್ಲರೂ ಸುಖವನ್ನು ಹೊಂದು ವೆವೊ ಅದಕ್ಕೆ ತಕ್ಕ ಪ್ರಯತ್ನವನ್ನು ಮಾಡಬೇಕು. ಓ ದೈತ್ಯರೆ ? ಸರ್ವಪ್ರದೇಶಗಳ ಲ್ಲಿಯೂ ಸಮತ್ವವನ್ನು ಹೊಂದಿದವರಾಗಿ ನಾರಾಯಣನನ್ನು ಪೂಜಿಸಬೇಕು. ನಾರಾ

ಯಾಣನ ಪೂಜೆಯು ಯಾವದೆಂಬರೆ ? ಸರ್ವಭೂತಗಳಲ್ಲಿಯೂ ಸಮದೃಷ್ಟಿಯಾಗಿರುವಿಕೆಯೇ. ‖ ೩ ‖ ಮಂತ್ರಾದಿಗಳಿಂದ ಮಾಡಲ್ಪಡುವ ಭೇದವೂ ಅಲ್ಲವು. ಇದು ನನಿಗೆ ಸ್ವಾಭಾವಿಕವಾದದ್ದು. ಯಾವ ಯಾವನ ಮನಸ್ಸಿನಲ್ಲಿ ಪರಮಪುರುಷನಿರುವನೊ ಅಂತವರೆಲ್ಲರ ಸಾಮಾನ್ಯವಾದ ಸ್ವಭಾವವೇ ಈ ರೀತಿಯಾಗಿರುವುದು. ‖ ೪ ‖ ಯಾವನಾದರೆ ತನ್ನಲ್ಲಿ ಪಾಪಚಿಂತೆಯನ್ನು ಹೇಗಾದರೆ ಮಾಡಲಾರನೊ ಅದರಂತೆ ಅನ್ಯರಿಗೂ ಪಾಪವನ್ನು ಚಿಂತಿಸಲಾರನೊ ಅಂತವನಿಗೆ ಕಾರಣವಿಲ್ಲದೆ ಇರುವುದರಿಂದ ಪಾಪಕ್ಕೆ ಅವಕಾಶವೇ ಇಲ್ಲವು. ‖ ೫ ‖ ಮನೋ ವಾಕ್ಕಾಯಗಳಿಂದ ಯಾವನಾದರೆ ಅನ್ಯರಿಗೆ ಪೀಡೆಯನ್ನುಂಟು ಮಾಡುವನೊ ಇವನಿಂದ ಮಾಡಲ್ಪಡುವ ಅಂತಹ ಪೀಡೆಯು ಹುಟ್ಟುವಿಕೆಗೆ ಬೀಜ ರೂಪವಾಗುವದಲ್ಲದೆ ಅಂತವನಿಗೆ ಅಧಿಕವಾದ ಸಂಸಾರ ರೂಪವಾಗಿರುವ ಅಶುಭವೂ ಉಂಟಾಗುವುದು. ‖ ೬ ‖ ಆದುದರಿಂದ ನಾನು ಪಾಪವನ್ನು ಇಚ್ಛಿಸುವುದೂ ಮಾಡುವುದೂ ಹೇಳುವುದೂ ಇಲ್ಲವು. ಸರ್ವಭೂತಗಳಲ್ಲಿಯೂ ಸಮನಾಗಿರುವ ಶ್ರೀ ಕೇಶವನನ್ನು ಧ್ಯಾನಿಸಿಕೊಂಡಿರುವೆನು. ‖ ೭ ‖ ಸರ್ವತ್ರ ಸಮಚಿತ್ತನಾದ ನನಿಗೆ ಶಾರೀರ ಮಾನಸಾದಿಗಳಾದ ಪಾಪಗಳು ಯಾವ ಕಾರಣದಿಂದ ಉಂಟಾಗಬಹುದು ? ‖ ೮ ‖ ಈ ಪ್ರಕಾರವಾಗಿ ಸರ್ವಭೂತಗಳಲ್ಲಿಯೂ ಭಗವದ್ಭಾವವನ್ನು ತಿಳಿದು ಶುದ್ಧವಾದ ಭಕ್ತಿಯು ಜ್ಞಾನಿಗಳಿಂದ ಮಾಡಲ್ಪಡತಕ್ಕದ್ದಾಗಿರುವುದು. ‖ ೯ ‖ ಮಿತ್ರಾದಿಗಳನ್ನು ಸಂಪಾದಿಸಿಕೊಳ್ಳುವದರಲ್ಲಿ ಸಾಮ ದಾನ ಭೇದ ದಂಡಗಳೆಂಬ ಉಪಾಯಗಳು ಹೇಳಲ್ಪಟ್ಟವು. ಅಂತಹ ಸಾಮಾದ್ಯುಪಾಯಗಳಿಂದಲೂ ಕೂಡ ಮಿತ್ರಾದಿಗಳನ್ನು ಕಾಣದೆಹೋದೆ ಯಲ್ಲವೇ, ಆದ್ದರಿಂದ ಎಲೈ ತಂದೆಯೆ ? ಕೋಪಿಸಬೇಡ. ‖ ೧೦ ‖

ಸಾಧ್ಯಾ ಭಾವೇ ಮಹಾಬಾಹೋ ಸಾಧನೈಃ ಕಿಂ ಪ್ರಯೋಜನಂ | ಸರ್ವಭೂತಾತ್ಮಕೇ ತಾತ ಜಗನ್ನಾಥೇ ಜಗನ್ಮಯೇ ‖ ೧ ‖ ಪರಮಾತ್ಮನಿ ಗೋವಿಂದೇ ಮಿತ್ರಾ ಮಿತ್ರ ಕಥಾಕುತಃ | ಜಡಾನಾ ಮವಿವೇಕಾನಾಮ ಶೂರಾಣಾಮಪಿ ಪ್ರಭೋ ‖ ೨ ‖ ಭಾಗ್ಯಭೋಗ್ಯಾನಿ ರಾಜ್ಯಾನಿ ಸತ್ಯನೀತಿ ಮತಾನಪಿ | ತಸ್ಮಾದ್ಯತೇತ ಪುಣ್ಯೇಷು ಯ ಇಚ್ಛೇ ನ್ಮಹತೀಂ ಶ್ರಿಯಂ ‖ ೩ ‖ ಯತಿತವ್ಯಂ ಸಮತ್ವೇನ ನಿರ್ವಾಣಮಪಿಚೇಚ್ಛತಾ | ದೇವಾ ಮನುಷ್ಯಾಃ ಪಶವಃ ಪಕ್ಷಿ ವೃಕ್ಷ ಸರೀಸೃಪಾಃ ‖ ೪ ‖ ರೂಪಮೇತ ದನಂತಸ್ಯ ವಿಷ್ಣೋರ್ಭಿನ್ನ ಮಿವಸ್ಥಿತಂ | ಏತದ್ವಿಜಾನತಾ ಸರ್ವಂ ಜಗತ್ಸ್ಥಾವರ ಜಂಗಮಂ ‖ ೫ ‖ ದ್ರಷ್ಟವ್ಯ ಮಾತ್ಮ ವಿದ್ವಿಷ್ಣುರ್ಯತೋಯಂ ವಿಶ್ವರೂಪಧೃಕ್ | ಏವಂ ಜ್ಞಾತೇ ಸ ಭಗವಾ ನನಾದಿಃ ಪರಮೇಶ್ವರಃ ‖ ಪ್ರಸೀದತ್ಯಚ್ಯುತೋ ಯಸ್ಮಿ ನ್ಪ್ರಸನ್ನೇ ಕ್ಲೇಶ ಸಂಕ್ಷಯಃ ‖ ೬ ‖ ಬಹೂನಾಂ ಜನ್ಮನಾಮಂತೇ ಜ್ಞಾನವಾನ್ಮಾಂ ಪ್ರಪದ್ಯತೇ | ವಾಸುದೇವ ಸ್ಸರ್ವಮಿತಿ ಸ ಮಹಾತ್ಮಾ ಸು ದುರ್ಲಭಃ ” ‖ ೭ ‖ ಇತ್ಯಾದಿ ವಚನಗಳಿಂದ

ಹಿಂಸಾದಿ ರಹಿತನಾಗಿ ಪರಮಾತ್ಮನ ಸ್ತುತಿ ನಮಸ್ಕಾರಾದಿಗಳು ಮಾಡತಕ್ಕವುಗಳೆಂದು ತೋರಿಸುವುದಕ್ಕಾಗಿ 'ವಿಶ್ವ' ಶಬ್ದದಿಂದ ಬ್ರಹ್ಮವು ಹೇಳಲ್ಪಡುವುದು. (ಸರ್ವವು ಬ್ರಹ್ಮವಾದಮೇಲೆ ಯಾವ ವಸ್ತುವಿನಲ್ಲಿಯೂ ವೈಷಮ್ಯವಿರಬಾರದೆಂದು ಫಲಿತವಾಗುವುದು.)

(ಸಾಧನಗಳಿದ್ದರೂ ಸಾಧ್ಯ (ಫಲ)ವು ಲಭಿಸದೇ ಹೋದರೆ ಅಂತಹ ಸಾಧನಗಳಿಂದ ಪ್ರಯೋಜನವೇನು ? ಎಲೈ ತಂದೆಯೇ ? ಸಕಲ ಭೂತಗಳಿಗೂ ಆತ್ಮನೂ ಜಗನ್ನಾಥನೂ ಜಗನ್ಮಯನೂ ಆದ ಪರಮಾತ್ಮನಾಗಿರುವ ಗೋವಿಂದನಲ್ಲಿ ಮಿತ್ರನು ಅಮಿತ್ರನು ಎಂಬ ವ್ಯವಹಾರವು ಎಲ್ಲಿರುವುದು ? ಜಡರೂ ಅವಿವೇಕಿಗಳೂ ನೀತಿರಹಿತರೂ ಆದ ಅಸುರರಿಗೂ ಕೂಡ ಭಾಗ್ಯ ಭೋಗ್ಯ ರಾಜ್ಯಾದಿಗಳು ಇರುವುವು. ಆದುದರಿಂದ ಮಹತ್ತಾದ ಸಂಪತ್ತನ್ನಪೇಕ್ಷಿಸತಕ್ಕವರು ಪುಣ್ಯವನ್ನು ಮಾಡುವುದರಲ್ಲಿ ಯತ್ನಿಸಬೇಕು. ॥ ೩ ॥ ಮೋಕ್ಷವನ್ನಪೇಕ್ಷಿಸುವದಾದರೆ ಸರ್ವಸಮವಾಗಿರುವುದಕ್ಕೆ ಪ್ರಯತ್ನಿಸಬೇಕು. ದೇವತೆಗಳು ಮನುಷ್ಯರು ಪಶುಗಳು ಪಕ್ಷಿಗಳು ವೃಕ್ಷಗಳು ಸರ್ಪಗಳೇ ಮೊದಲಾದ ಸರ್ವಜಂತುಗಳೂ ಶ್ರೀಮಹಾವಿಷ್ಣುವಿನ ಸ್ವರೂಪಗಳಾಗಿಯೇ ಇರುವುವು ನೋಡುವುದಕ್ಕೆ ಮಾತ್ರ ಭಿನ್ನಪಟ್ಟಂತೆ ಇರುವುವು ಸರ್ವ ಪ್ರಪಂಚವೂ ನಾರಾಯಣನಿಂಗಿಂತಲೂ ಭಿನ್ನವಾದದ್ದಲ್ಲವು. ॥ ೪ ॥ ಶ್ರೀಮಹಾವಿಷ್ಣುವು ವಿಶ್ವರೂಪನಾಗಿರುವುದರಿಂದ ಆತ್ಮನನ್ನು ನೋಡಿದಂತೆ ನೋಡಬೇಕು. ಈ ರೀತಿಯಾಗಿ ತಿಳಿದುಕೊಂಡಮೇಲೆ ಜ್ಞಾನಶಕ್ತ್ಯಾದಿ ಷಾಡ್ಗುಣ್ಯ ಪರಿಪೂರ್ಣನೂ ಅನಾದಿಯೂ ಅಚ್ಯುತನೂ ಆದ ನಾರಾಯಣನು ಪ್ರಸನ್ನನಾಗುವನು. ಅವನು ಪ್ರಸನ್ನನಾದಮೇಲೆ ಸಮಸ್ತ ದುಃಖವೂ ನಾಶವಾಗುವುದು. ॥ ೬ ॥ ಅನೇಕ ಜನ್ಮಗಳೆತ್ತಿ ಕಡೆಯಲ್ಲಿ ವಾಸುದೇವನೆ ನನಿಗೆ ಗತಿ ಎಂಬ ಜ್ಞಾನವುಳ್ಳವನಾಗಿ ನನ್ನನ್ನು ಶರಣ ಹೊಂದುವನು. ವಾಸುದೇವನೇ ಸರ್ವವೂ ಎಂದು ತಿಳಿದ ಅಂತಹ ಮಹಾತ್ಮನು ಅತ್ಯಂತ ದುರ್ಲಭನು ॥ ೭ ॥

" ಮತ್ಕರ್ಮಕೃನ್ಮತ್ಪರಮೊ ಮದ್ಭಕ್ತಸ್ಸಂಗವರ್ಜಿತಃ । ನಿರ್ವೈರಸ್ಸರ್ವ ಭೂತೇಷು ಯಸ್ಸಮಾಮೇತಿ ಪಾಂಡವ ‖೧‖ ನಚಲತಿ ನಿಜವರ್ಣ್ಣಧರ್ಮತೋ ಯಸ್ಸಮಮತಿ ರಾತ್ಮ ಸುಹೃ ದ್ವಿಪಕ್ಷಪಕ್ಷೇ । ನಹರತಿ ನಚ ಹಂತಿ ಕಿಂಚಿ ದುಚ್ಚೈ ಸ್ಸಿತ ಮನಸಂತಮ ವೇಹಿ ವಿಷ್ಣು ಭಕ್ತಂ ‖೨‖ ವಿಮಲಮತಿ ರಮತ್ಸರಃ ಪ್ರಶಾಂತ ಶ್ಶುಚಿ (ಶುಭ) ಚರಿತೋಖಿಲ ಸತ್ವ ಮಿತ್ರ ಭೂತಃ । ಪ್ರಿಯ ಹಿತ ವಚನೊಸ್ತಮಾನ ಮಾಯೊ ವಸತಿ ಸದಾ ಹೃದಿ ತಸ್ಯ ವಾಸುದೇವಃ ‖೩‖ ವಸತಿ ಹೃದಿ ಸನಾತನೇಚ ತಸ್ಮಿನ್ಭವತಿ ಪುಮಾನ್ ಜಗತೋಸ್ಯ ಸೌಮ್ಯ ರೂಪಃ । ಕ್ಷಿತಿ ರಸ ಮತಿರಮ್ಯ ಮಾತ್ಮನೊನ್ತಃ ಕಥ ಯತಿ ಚಾರುತಯ್ಯೈವ ಸಾಲಪೋತಃ ‖ ೪ ‖ ಸಕಲಮಿದ

ಮಹಂಚ ವಾಸುದೇವಃ ಪರಮ ಪುಮಾನ್ಪರಮೇಶ್ವರ ಸ್ಸಏಕಃ । ಇತಿ ಮತಿರಚಲಾ ಭವತ್ಯನಂತೇ ಹೃದಯಗತೇ ವ್ರಜತಾನ್ವಿಹಾಯ ದೂರಾತ್॥ ॥೫॥ ಯಮ ನಿಯಮ ವಿಧೂತ ಕಲ್ಮಷಾಣಾ ಮನುದಿನ ಮಚ್ಯುತ ಸಕ್ತ ಮಾನಸಾನಾಂ । ಅಪಗತ ಮದಮಾನ ಮತ್ಸರಾಣಾಂ ವ್ರಜಭಟ ದೂರತರೇಣ ಮಾನವಾನಾಂ"॥೬॥ ಇದೇ ಮೊದಲಾದ ವಚನಗಳಿಂದ ವೈಷ್ಣವ ಲಕ್ಷಣವು ಇಂಥಾದ್ದೆಂದು ಹೇಳಲ್ಪಡುವುದರಿಂದ ಹಿಂಸಾದಿಗಳನ್ನು ಬಿಟ್ಟು ಶ್ರೀಮಹಾವಿಷ್ಣುವಿನ ಸ್ತುತಿ ನಮಸ್ಕಾರಾದಿಗಳನ್ನು ಮಾಡಬೇಕೆಂತಲೂ ಇದನ್ನು ಹೇಳುವುದಕ್ಕಾಗಿಯೇ 'ವಿಶ್ವ' ಶಬ್ದದಿಂದ ಬ್ರಹ್ಮವು ಹೇಳಲ್ಪಟ್ಟಿತೆಂತಲೂ ತಿಳಿಯಬೇಕು.

(ನನ್ನನ್ನು ಕುರಿತೆ ಕರ್ಮಗಳನ್ನು ಮಾಡುವಂತವನಾಗಿಯೂ ನನಿಗಿಂತಲೂ ಶ್ರೇಷ್ಠವಾದ ಉಪಾಸ್ಯದೇವತೆ ಇಲ್ಲದವನಾಗಿಯೂ ನನ್ನಲ್ಲಿ ಭಕ್ತಿಯುಳ್ಳವನಾಗಿಯೂ ಸರ್ವಭೂತಗಳಲ್ಲಿಯೂ ವೈರವಿಲ್ಲದವನಾಗಿಯೂ ಇರುವಂತವನು ನನ್ನನ್ನು ಹೊಂದುವನು. ॥೧॥ ತನ್ನ ವರ್ಣಾಶ್ರಮ ಧರ್ಮಗಳನ್ನು ತಪ್ಪದೇ ಅನುಷ್ಠಿಸುವಂತವನಾಗಿಯೂ ತನ್ನ ಮಿತ್ರ ಶತ್ರುಗಳಲ್ಲಿ ಸಮಚಿತ್ತನಾಗಿಯೂ ಪರದ್ರವ್ಯಾದಿಗಳನ್ನಪಹರಿಸದೆ ಅನ್ಯರನ್ನು ಪೀಡಿಸದೆ ಇರುವಂತವನಾಗಿಯೂ ಇರುವ ಅಂತಹ ಪರಿಶುದ್ಧವಾದ ಮನಸ್ಸುಳ್ಳವನನ್ನು ವಿಷ್ಣುಭಕ್ತನೆಂದು ತಿಳಿದುಕೊಳ್ಳು. ॥೨॥ ನಿರ್ಮಲವಾದ ಬುದ್ಧಿಯುಳ್ಳವನೂ ಮಾತ್ಸರ್ಯವಿಲ್ಲದವನೂ ಅತ್ಯಂತ ಶಾಂತನೂ ಪರಿಶುದ್ಧವಾದ ನಡತೆಯುಳ್ಳವನೂ ಸರ್ವಜಂತುಗಳಿಗೂ ಮಿತ್ರನೂ ಪ್ರಿಯವಾಗಿಯೂ ಮತ್ತು ಹಿತವಾಗಿಯೂ ಇರುವ ಮಾತುಗಳನ್ನಾಡತಕ್ಕವನೂ ಅಜ್ಞಾನವನ್ನತಿಕ್ರಮಿಸಿದವನೂ ಆದವನು ಯಾವನೊ ಅಂತವನ ಹೃದಯದಲ್ಲಿ ಶ್ರೀವಾಸುದೇವನು ಸದಾ ವಾಸಮಾಡುವನು. ॥ ೩ ॥ ಯಾವಾಗಲಾದರೆ ಸನಾತನನಾದ ಶ್ರೀವಾಸುದೇವನು ಇವನ ಹೃದಯದಲ್ಲಿ ವಾಸಮಾಡುವನೊ ಆವಾಗಲೆ ಇವನು ಸೌಮ್ಯರೂಪನಾಗುವನು. ಸೌಮ್ಯಾಕಾರವಾದ ಪುರುಷನ ಚಿಹ್ನವೆ ಶ್ರೀವಾಸುದೇವನು ಇವನಲ್ಲಿ ವಾಸಮಾಡುವುದನ್ನು ತೋರಿಸುವುದು. ಅದು ಹೇಗೆಂದರೆ ? ಮಾವಿನಗಿಡವು ಬೆಳೆಯುವದನ್ನು ಕಂಡಮಾತ್ರದಲ್ಲಿಯೇ ಅತಿ ರಮಣೀಯವಾದ ಭೂರಸವು ಮನಸ್ಸಿಗೆ ಗೋಚರವಾಗುವಂತೆ ? ಎಂದರಿಯಬೇಕು. ॥ ೪ ॥ ಈ ಸಮಸ್ತವೂ ವಾಸುದೇವನೇ, ನಾನೂ ವಾಸುದೇವನೇ, ಅದ್ವಿತೀಯನಾದ ಪರಮಪುರುಷನು ಅವನೊಬ್ಬನೇ, ಎಂದು ಅನಂತನಲ್ಲಿ ಯಾವನಿಗಾದರೆ ದೃಢ ಭಕ್ತಿಯುಂಟಾಗುವುದೋ ಅಂತವರನ್ನು ಬಿಟ್ಟು ದೂರವಾಗಿ ಹೋಗು. ॥ ೫ ॥ ಎಲೈ ಭಟನೇ ? ಯಮನಿಯಮಾದ್ಯನುಷ್ಠಾನಗಳಿಂದ ಪಾಪಗಳನ್ನು ಹೋಗಲಾಡಿಸಿಕೊಂಡು ಪ್ರತಿದಿನದಲ್ಲಿಯೂ ಸದಾ ಅಚ್ಯುತನಲ್ಲಾಸಕ್ತವಾದ ಮನಸ್ಸುಳ್ಳ ಮದಮಾತ್ಸರ್ಯವೇ ಮೊದಲಾದ ದೋಷಗಳಿಗೆ ದೂರವಾಗಿರುವ ವಿಷ್ಣುಭಕ್ತರ ಸಮೀಪಕ್ಕೆ ಹೋಗದೆ ದೂರವಾಗಿರು. ॥ ೬ ॥

ಮತ್ತು "ಶ್ರದ್ಧಯಾದೇಯಂ ‖ ಅಶ್ರದ್ಧಯಾದೇಯಂ ‖ ಶ್ರದ್ಧಯಾಗ್ನಿಸ್ಸಮಿಧ್ಯತೆ" ಇತ್ಯಾದಿ ಶ್ರುತಿಗಳಿಂದಲೂ "ಅಶ್ರೋತ್ರಿಯಂ ಶ್ರಾದ್ಧಮಧೀತಮವ್ರತ ಮದಕ್ಷಿಣಂ ಯಜ್ಞಮನೃತ್ವಿಜಾ ಹುತಂ| ಅಶ್ರದ್ಧಯಾದತ್ತ ಮಸಂಸ್ಕೃತಂ ಹವಿರ್ಭಾಗಾ ಷ್ಷಡೇತೆ ತವದೈತ್ಯ ಸತ್ತಮ ‖ ೧ ‖ ಪುಣ್ಯಂ ಮದ್ವೇಷಿಣಾಂ ಯಚ್ಚ ಮದ್ಭಕ್ತ ದ್ವೇಷಿಣಾಂ ತಥಾ | ಕ್ರಯ ವಿಕ್ರಯ ಸಕ್ತಾನಾಂ ಪುಣ್ಯಂ ಯಚ್ಚಾಗ್ನಿ ಹೋತ್ರಿಣಾಂ ‖ ೨ ‖ ಅಶ್ರದ್ಧಯಾಚ ಯದ್ದಾನಂ ಯಜತಾಂ ದದತಾಂ ತಥಾ | ತತ್ಸರ್ವಂ ತವ ದೈತ್ಯೇಂದ್ರ ಮತ್ಪ್ರಸಾ ದ್ಭವಿಷ್ಯತಿ ‖ ೩ ‖ ಅಶ್ರದ್ಧಯಾಹುತಂ ದತ್ತಂ ತಪಸ್ತಪ್ತಂ ಕೃತಂಚಯತ್ | ಅಸದಿತ್ಯುಚ್ಯತೇ ಪಾರ್ಥ ನಚ ತತ್ಪ್ರೇತ್ಯನೋ ಇಹ ‖ ೪ ‖" ಇತ್ಯಾದಿ ಸ್ಮೃತಿಗಳಿಂದಲೂ ಪರಮಪುರುಷನ ಸ್ತುತಿ ನಮಸ್ಕಾರಾದಿಗಳನ್ನು ಶ್ರದ್ಧಾಯುಕ್ತನಾಗಿಯೇ ಮಾಡಬೇಕೆಂದು ತೀರ್ಮಾನಿಸಲ್ಪಟ್ಟಿರುವುದು. ಶ್ರದ್ಧಾ ರಹಿತನಾಗಿ ಭಗವತ್ಸೇವೆಯನ್ನು ಮಾಡಬಾರದು.

(ಶ್ರದ್ಧೆಯಿಂದ ದಾನನ್ನು ಮಾಡತಕ್ಕದ್ದು. ಶ್ರದ್ಧೆಯಿಲ್ಲದೆ ಕೊಡಬಾರದು ಶ್ರದ್ಧೆಯಿಂದ ಅಗ್ನಿ ಮುಖವಾಗಿ ಮಾಡತಕ್ಕ ಹೋಮವೇ ಮೊದಲಾದ್ದು ಅಭಿವೃದ್ಧಿ ಹೇತುವಾಗಿರುವುದೆಂದು ಶ್ರುತ್ಯರ್ಥವು ಎಲೈ ದೈತ್ಯರಾಜನೇ? ಶ್ರೋತ್ರಿಯನಲ್ಲದವನಿಗೆ ಕೊಡಲ್ಪಡುವ ಶ್ರಾದ್ಧವೂ ವ್ರತವಿರಹಿತವಾದ ಅಧ್ಯಯನವೂ ದಕ್ಷಿಣ ರಹಿತವಾದ ಯಜ್ಞವೂ ಋತ್ವಿಕ್ಕಲ್ಲದವನಿಂದ ಹೋಮಮಾಡಲ್ಪಟ್ಟ ಹೋಮವೂ ಶ್ರದ್ಧಾವಿರಹಿತವಾಗಿ ಕೊಡಲ್ಪಟ್ಟದ್ದೂ ಸಂಸ್ಕಾರವಿಲ್ಲದ ಹವಿಸ್ಸೆಂಬೀ ಆರೂ ನಿನ್ನ ಭಾಗವಾಗಲಿ. ‖ ೧ ‖ ಎಲೈ ದೈತ್ಯೇಂದ್ರನೇ? ನನ್ನನ್ನು ದ್ವೇಷಿಸುವಂತವರ ಪುಣ್ಯವೂ ನನ್ನ ಭಕ್ತರಾದ ಭಾಗವತ ದ್ವೇಷಿಗಳ ಪುಣ್ಯವೂ ಕ್ರಯ ವಿಕ್ರಯಗಳಲ್ಲಿ ಆಸಕ್ತರಾದ ಆಹಿತಾಗ್ನಿಗಳೂ ಶ್ರದ್ಧಾ ರಹಿತವಾಗಿ ದಾನಮಾಡತಕ್ಕವರ ಪುಣ್ಯವೂ, ಶ್ರದ್ಧೆಯಿಲ್ಲದೆ ಮಾಡುವ ಹೋಮದಿಂದುಂಟಾದ ಸುಕೃತವೆಂಬ ಈ ಸಮಸ್ತವೂ ನನ್ನ ಅನುಗ್ರಹದಿಂದ ನಿನ್ನ ಪಾಲಾಗಲಿ. ‖ ೨ ‖ ೩ ‖ ಅಶ್ರದ್ಧೆಯಿಂದ, ಹೋಮಮಾಡಲ್ಪಟ್ಟದ್ದೂ ಕೊಡಲ್ಪಟ್ಟದ್ದೂ ಮಾಡಲ್ಪಟ್ಟ ತಪಸ್ಸೂ ಅಸತ್ ಎಂದು ಹೇಳಲ್ಪಡುವುದು ಅಸತ್ ಎಂದರೆ ಯೋಗ್ಯವಾದದ್ದಲ್ಲವೆಂದರ್ಥವು. ಇಂತಹ ಹೋಮಾದಿಗಳು ಇಹಲೋಕದಲ್ಲಿಯೂ ಇವನಿಗೆ ಶ್ರೇಯಸ್ಸಾಧಕಗಳಾಗಲಾರವು ಇಲ್ಲಿಯೇ ಇಂತಹ ಪರಿಣಾಮವಾದಮೇಲೆ ಪರಲೋಕಸುಖವೂ ಇದರಿಂದುಂಟಾಗಲಾರದೆಂದು ಸಿದ್ಧವು ‖ ೪ ‖

"ಓಂ ತತ್ಸದಿತಿ ನಿರ್ದೇಶೋ ಬ್ರಹ್ಮಣ ಸ್ತ್ರಿವಿಧ ಸ್ಸ್ಮೃತಃ" ಎಂಬೀ ಭಗವದ್ಗೀತಾ ವಚನಾನುಸಾರವಾಗಿ ಪರಮಾತ್ಮನ ಸ್ತುತಿ ನಮ

ಸ್ಕಾರಾದಿಯಾದ ಕರ್ಮವು ಅಸಾತ್ವಿಕವೂ ಗುಣರಹಿತವೂ ಆದರೂ ಅದನ್ನು ಶ್ರದ್ಧೆಯಿಂದ "ಓಮ್ ॥ ತತ್ ॥ ಸತ್" ಎಂಬ ಪರಮಾತ್ಮನ ಮೂರು ನಾಮಗಳನ್ನು ಪ್ರಯೋಗಿಸಿ ಅನುಷ್ಠಿಸುವುದರಿಂದ ಸಾತ್ವಿಕವೂ ಸಗುಣವೂ ಆಗುವುದೆಂದರಿಯಬೇಕು. ಮತ್ತು ಆತ್ಮನನ್ನು ವಿಷ್ಣುವೆಂತೆ ಧ್ಯಾನಿಸಿ ಸ್ತುತಿ ನಮಸ್ಕಾರಾದಿಗಳನ್ನು ಮಾಡಬೇಕು. ಮತ್ತು "ನಾ ವಿಷ್ಣುಃ ಕೀರ್ತಯೇ ದ್ವಿಷ್ಣುಂ ನಾ ವಿಷ್ಣು ರ್ವಿಷ್ಣು ಮರ್ಚಯೇತ್ । ನಾ ವಿಷ್ಣು ಸ್ಸಂಸ್ಮರೇ ದ್ವಿಷ್ಣುಂ ನಾ ವಿಷ್ಣು ರ್ವಿಷ್ಣು ಮಾಪ್ನುಯಾತ್" ಎಂಬದಾಗಿ ಶ್ರೀಮಹಾಭಾರತದ ಕರ್ಮಕಾಂಡದಲ್ಲಿಯೂ "ಸರ್ವಾಣ್ಯೇತಾನಿ ನಾಮಾನಿ ಪರಸ್ಯ ಬ್ರಹ್ಮಣೋಽನಘ। ಏವ ಮೇತಾನಿ ನಾಮಾನಿ ದೇವ ದೇವಸ್ಯ ಕೀರ್ತಯೇತ್ ॥ ಯಂ ಯಂ ಕಾಮಮಭಿಧ್ಯಾಯೇ ತ್ತಂತಮಾಪ್ನೋತ್ಯ ಸಂಶಯಂ । ಸರ್ವಾನ್ಕಾಮಾ ನವಾಪ್ನೋತಿ ಸಮಾರಾಧ್ಯ ಜಗದ್ಗುರುಂ ॥ ತನ್ಮ ಯತ್ವೇನ ಗೋವಿಂದ ಮಿತ್ಯೇ ತದ್ವಾಪ್ಯ ನಾನ್ಯಥಾ । ತನ್ಮಯೋ ವಾಂಛಿತಾ ನ್ಕಾಮಾ ನ್ಪದಮಾಪ್ನೋತಿ ಮಾನವಃ" ಎಂಬದಾಗಿ ಶ್ರೀವಿಷ್ಣು ಧರ್ಮದಲ್ಲಿಯೂ, "ಸರ್ವ ಭೂತಸ್ಥಿತಂ ಯೋಮಾಂ ಭಜತ್ಯೇಕತ್ವ ಮಾಸ್ಥಿತಃ । ಸರ್ವಥಾ ವರ್ತಮಾನೋಽಪಿ ಸಯೋಗೀ ಮಯಿ ವರ್ತತೇ॥" ಎಂಬದಾಗಿ ಶ್ರೀಭಗವದ್ಗೀತೆಯಲ್ಲಿಯೂ "ಅಹಂ ಹರಿ ಸ್ಸರ್ವಮಿದಂ ಜನಾರ್ದನೋ ನಾನ್ಯತ್ತತಃ ಕಾರಣ ಕಾರ್ಯ ಜಾತಂ । ಈದೃಙ್ಮನೊ ಯಸ್ಯ ನ ತಸ್ಯ ಭೂಯೋ ಭವೋದ್ಭವಾ ದ್ವಂದ್ವಗ ದಾ ಭವಂತಿ" ಎಂಬದಾಗಿ ಶ್ರೀವಿಷ್ಣು ಪುರಾಣದಲ್ಲಿಯೂ, "ಗುರೋರ್ಯತ್ರ ಪರೀವಾದೋ ನಿಂದಾವಾಪಿ ಪ್ರವರ್ತತೇ । ಕರ್ಣೌ ತತ್ರ ಪಿಧಾತವ್ಯೌ ಗಂ ತವ್ಯಂ ವಾ ತತೋಽನ್ಯತಃ" ಎಂಬದಾಗಿ ಮನುಸ್ಮೃತಿಯ (೩-೨೦೯) ಲ್ಲಿಯೂ, "ತಸ್ಮಾದ್ಬ್ರಹ್ಮೈವಾಚಾರ್ಯ ರೂಪೇಣಾವತಿಷ್ಠತ" ಎಂದು ವ್ಯಾಸ ಸ್ಮೃತಿಯಿಂದಲೂ, "ವರಂ ಹುತವಹಜ್ವಾಲಾ ಪಂಜರಾಂತರ್ವ್ಯವಸ್ಥಿತಿಃ । ನಶೌರಿ ಚಿಂತಾ ವಿಮುಖ ಜನಸಂವಾಸ ವೈಶಸಂ" ಎಂಬ ಕಾತ್ಯಾಯನ ವಚನದಿಂದಲೂ ಪ್ರತಿಪಾದಿಸಲ್ಪಟ್ಟಿರುವುದನ್ನು ವಿಚಾರಿಸಿ ನೋಡಿದರೆ ಯೆಲ್ಲಿಯಾದರೆ ಶ್ರೀವಾಸುದೇವನ ನಿಂದೆಯುಂಟಾಗುವುದೋ ಅಲ್ಲಿ ವಾಸವನ್ನು ಮಾಡಬಾರದೆಂದು ಗೊತ್ತಾಗುವುದು.

(ವಿಷ್ಣುವಲ್ಲದವನು (ೞ) ವಿಷ್ಣುವನ್ನು ಕೀರ್ತಿಸಲಾರನು, ಪೂಜಿಸಲಾರನು, ಸ್ಮರಿಸ ಲಾರನು, ವಿಷ್ಣುವನ್ನು ಹೊಂದಲಾರನೆಂದು ಮಹಾಭಾರತ ವಚನಾರ್ಥವು. ಹಿಂದೇ ವಿವರಿಸಲ್ಪಟ್ಟ ಈ ಸಮಸ್ತಗಳೂ ಪರಬ್ರಹ್ಮಭೂತನಾದ ಪುರುಷೋತ್ತಮನ ನಾಮಗಳಾ ಗಿರುವುವು ಆದುದರಿಂದ ದೇವದೇವನಾದ ಸ್ವಾಮಿಯು ಇಂತಹ ನಾಮಗಳನ್ನು ಈ ರೀತಿಯಾಗಿ ಕೀರ್ತನಮಾಡಬೇಕು ಜಗದ್ಗುರುವಾದ ಶ್ರೀನಾರಾಯಣನನ್ನು ಧ್ಯಾನಿಸು ವಂತವನು ಯಾವ ಯಾವ ಇಷ್ಟಾರ್ಥಗಳನ್ನಪೇಕ್ಷಿಸುತ್ತಾನೆಯೊ ; ಅವುಗಳನ್ನೆಲ್ಲಾ ನಿಸ್ಸಂಶಯವಾಗಿ ಹೊಂದುವನು ತನ್ನನ್ನು ಗೋವಿಂದಾತ್ಮಕನನ್ನಾಗಿಯೇ ತಿಳಿಯ ಬೇಕು. ಇಂತಹ ನಾರಾಯಣಾತ್ಮಕನು ಅಪೇಕ್ಷಿಸುವ ಸರ್ವೇಷ್ಟಾರ್ಥಗಳನ್ನು ಹೊಂದು ವನು. ಎಂಬದಾಗಿ ಶ್ರೀವಿಷ್ಣು ಧರ್ಮ ವಚನಾರ್ಥವು

ಸಮಸ್ತ ಭೂತಗಳಲ್ಲಿರುವ ನನ್ನನ್ನು ಅಭೇದ ಜ್ಞಾನವನ್ನು ಹೊಂದಿದವನಾಗಿ ಯಾವನಾದರೆ ಧ್ಯಾನಿಸುತ್ತಾನೆಯೊ ; ಅಂತಹ ಧ್ಯಾನಯೋಗಿಯು ಸಮನಿಷ್ಠೆಯಲ್ಲಿ ಯೂ ಅದು ಇಲ್ಲದ ಕಾಲದಲ್ಲಿಯೂ ನನ್ನಲ್ಲಿಯೇ ಇರುವನೆಂದು ಶ್ರೀಗೀತಾವಚನಾರ್ಥವು.

ನಾನೇ ನಾರಾಯಣನು, ಈ ಸರ್ವ ಜಗತ್ತೂ ನಾರಾಯಣನೇ ಎಂಬ ನಿಶ್ಚಯವಾದ ಬುದ್ಧಿಯು ಯಾವನಿಗಾದರೆ ಇರುವುದೊ ; ಅಂತವನು ಜನನ ಮರಣಾದಿ ದುಃಖಗಳಿಲ್ಲದ ವನಾಗುವನೆಂದು ಶ್ರೀವಿಷ್ಣು ಪುರಾಣ ವಚನಾರ್ಥವು.

ಗುರುವಿನ ತಿರಸ್ಕಾರವಾಗಲೀ ನಿಂದೆಯಾಗಲೀ ಎಲ್ಲಿ ನಡೆಯುವುದೊ ಅಂತಹ ಸ್ಥಲ ದಲ್ಲಿರುವಂತವನು ಅಂತಹ ತಿರಸ್ಕಾರ ನಿಂದೋಕ್ತಿಗಳು ಕಿವಿಗಳಲ್ಲಿಬೀಳದಂತೆ ಕಿವಿಗಳನ್ನಾ ದರೂ ಮುಚ್ಚಿಕೊಳ್ಳಬೇಕು. ಆ ಸ್ಥಲವನ್ನು ಬಿಟ್ಟು ಬೇರೆ ಕಡೆಗಾದರೂ ಹೋಗ ಬೇಕೆಂದು ಮನುಸ್ಮೃತಿ ವಚನಾರ್ಥವು.

ಆದುದರಿಂದ ಬ್ರಹ್ಮವೇ ಆಚಾರ್ಯ ರೂಪವಾಗಿರುವುದೆಂದು ವ್ಯಾಸಸ್ಮೃತಿ ವಚ ನಾರ್ಥವು.

“ ವರಂಹುತವಹಜ್ವಾಲಾ ” ಎಂಬ ಕಾತ್ಯಾಯನ ವಚನಾರ್ಥವನ್ನು (೬೪) ನೇ ಪೇಜಿನಲ್ಲಿ ನೋಡಬಹುದು.)

ಇದರಿಂದ ಶ್ರೀಹರಿಯಲ್ಲಿಯೂ ಗುರುವಿನಲ್ಲಿಯೂ ಸಮ ಪ್ರತಿಪತ್ತಿ ಮಾಡಬೇಕೆಂಬ ಅರ್ಥವು ಸಿದ್ಧವಾಗುವುದು. ಇದಕ್ಕೆ “ ಯಸ್ಯದೇವೇ ಪರಾಭಕ್ತಿ ರ್ಯಥಾ ದೇವೇ ತಥಾ ಗುರೌ | ತಸ್ಯೈತೇ ಕಥಿತಾಹ್ಯರ್ಥಾಃ ಪ್ರಕಾಶಂತೇ ಮಹಾತ್ಮನಃ ” ಎಂಬ ಶ್ವೇತಾಶ್ವತರ ಮಂತ್ರ ವರ್ಣವೂ ಆಧಾರವಾಗಿರುವುದು.

(ಯಾವನಿಗಾದರೆ ದೇವರಲ್ಲಿ ಶ್ರೇಷ್ಠವಾದ ಭಕ್ತಿ ಇರುವುದೊ ಅಂತಹ ದೇವಭಕ್ತಿಗೆ ಸಮವಾದ ಭಕ್ತಿಯನ್ನು ಗುರುವಿನಲ್ಲಿಯೂ ಯಾವನಾದರೆ ಮಾಡುತ್ತಾನೆಯೊ ಅಂತಹ ಮಹಾತ್ಮನಿಗೆ ಹೇಳಲ್ಪಟ್ಟ ಈ ಅರ್ಥವು ಪ್ರಕಾಶಿಸುವುದು.)

ಮತ್ತು " ಅವಶೇನಾಪಿ ಯನ್ನಾಮ್ನಿ ಕೀರ್ತಿತೇ ಸರ್ವಪಾತಕೈಃ ಪುಮಾನ್ವಿಮುಚ್ಯತೆ ಸದ್ಯಸ್ಸಿಂಹ ತ್ರಸ್ತೈ ರ್ಮೃಗೈರಿವ ‖ ಜ್ಞಾನತೋ ಜ್ಞಾನತೋ ವಾಪಿ ವಾಸುದೇವಸ್ಯ ಕೀರ್ತನಾತ್ | ತತ್ಸರ್ವಂ ವಿಲಯಂ ಯಾತಿ ತೋಯಸ್ಥಂ ಲವಣಂ ಯಥಾ ‖ ಕಲಿ ಕಲ್ಮಷ ಮತ್ಯುಗ್ರಂ ನರಕಾರ್ತಿ ಪ್ರದಂ ನೃಣಾಂ | ಪ್ರಯಾತಿ ವಿಲಯಂ ಸದ್ಯಸ್ಸಕೃದ್ಯತ್ರಾನು ಸಂಸ್ಮೃತೇ ‖ ಸಕೃತ್ಸ್ಮೃತೋಽಪಿ ಗೋವಿಂದೊ ನೃಣಾಂ ಜನ್ಮ ಶತೈಃ ಕೃತಂ | ಪಾಪರಾಶಿಂ ದಹತ್ಯಾಶು ತೂಲರಾಶಿ ಮಿವಾನಲಃ ‖ (ಸೇಯಂ ವದನ ವಲ್ಮೀಕವಾಸಿನೀ ರಸನೋರಗೀ| ಯಾ ನ ಗೋವಿಂದ ಗೋವಿಂದ ಗೋವಿಂದೇತಿ ಪ್ರಭಾಷತೇ ‖ ಪಾಪವಲ್ಲೀ ಮುಖೇತಸ್ಯ ಜಿಹ್ವಾ ರೂಪೇಣ ತಿಷ್ಠತಿ| ಯಾನವಕ್ತಿ ದಿವಾರಾತ್ರೌ ಗುಣಾ ನ್ಗೋವಿಂದ ಸಂಭವಾನ್‖) ಸಕೃದುಚ್ಚರಿತಂ ಯೇನ ಹರಿ ರಿತ್ಯಕ್ಷರ ದ್ವಯಂ | ಬದ್ಧಃ ಪರಿಕರಸ್ತೇನ ಮೋಕ್ಷಾಯ ಗಮನಂ ಪ್ರತಿ ‖ ಏಕೋಽಪಿ ಕೃಷ್ಣೇ ಸುಕೃತಃ ಪ್ರಣಾಮೋ ದಶಾಶ್ವಮೇಧಾವಭೃಥೇನ ತುಲ್ಯಃ ? ‖ ದಶಾಶ್ವಮೇಧೀ ಪುನರೇತಿ ಜನ್ಮ ಕೃಷ್ಣ ಪ್ರಣಾಮೀ ನ ಪುನರ್ಭವಾಯ ‖ " ಇತ್ಯಾದಿ ವಚನಗಳಿಂದ ಶ್ರದ್ಧಾ ಭಕ್ತಿಗಳಿಲ್ಲದೆ ಮಾಡಲ್ಪಡುವ ನಾಮ ಸಂಕೀರ್ತನವೂ ಕೂಡ ಸಮಸ್ತ ಪಾಪಗಳನ್ನು ನಾಶಪಡಿಸುವುದೆಂದು ಹೇಳಲ್ಪಡುವಾಗ ಶ್ರದ್ಧಾ ಭಕ್ತಿ ಪುರಸ್ಸರವಾಗಿ ಮಾಡುವ ಶ್ರೀಸಹಸ್ರನಾಮ ಕೀರ್ತನವು ಸರ್ವಪಾಪಗಳನ್ನು ನಾಶಪಡಿಸುವ ವಿಷಯದಲ್ಲಿ ಹೇಳಬೇಕಾದ್ದೇ ನಿರುವುದು.

" ಅವಶೇನಾಪಿ " (೬೬)ನೇ ಪೇಜಿನಲ್ಲಿಯೂ, "ಜ್ಞಾನತೋ ಜ್ಞಾನತಃ "=(೬೭)ನೇ ಪೇಜಿನಲ್ಲಿಯೂ, " ಕಲಿ ಕಲ್ಮಷ ಮತ್ಯುಗ್ರಂ " = (೬೮)ನೇ ಪೇಜಿನಲ್ಲಿಯೂ, "ಸಕೃತ್ಸ್ಮೃತೋಽಪಿ ಗೋವಿಂದಃ "=(೬೮)ನೇ ಪೇಜಿನಲ್ಲಿಯೂ, " ಸಕೃದುಚ್ಚರಿತಂ ಯೇನ " = (೪೧)ನೇ ಪೇಜಿನಲ್ಲಿಯೂ, " ಏಕೋಽಪಿ ಕೃಷ್ಣೇ " = (೩೦)ನೇ ಪೇಜಿನಲ್ಲಿಯೂ ನೋಡಬೇಕು. " ಸೇಯಂ ವದನೇತ್ಯಾದಿ " = ಯಾವ ನಾಲಿಗೆ ಯಾದರೆ ಗೋವಿಂದ ಗೋವಿಂದ ಗೋವಿಂದ ಎಂಬದಾಗಿ ಹೇಳುವುದಿಲ್ಲವೊ ; ಅಂಥಾದ್ದು ನಾಲಿಗೆಯೇ ಅಲ್ಲವು, ಬಾಯಿಯೆಂಬ ಹುತ್ತನಲ್ಲಿ ವಾಸಮಾಡುವ ಸ್ತ್ರೀ ಸರ್ಪವೆಂತಲೇ ಅದನ್ನು ತಿಳಿಯಬೇಕು. ಯಾವ ನಾಲಿಗೆ ಯಾದರೆ ರಾತ್ರಿ ಹಗಲು ಗೋವಿಂದನ ಗುಣ ಕಥನವನ್ನು ಮಾಡುವುದಿಲ್ಲವೊ ಅದು ನಾಲಿಗೆಯಂತೆ ರೂಪವನ್ನು ಧರಿಸಿರುವ ಪಾಪಬಳ್ಳಿ ಯೆಂತಲೇ ತಿಳಿಯತಕ್ಕದ್ದಾಗಿರುವುದು.)

ಈ ಪ್ರಕಾರವಾಗಿ ವಾಕ್ಕಿನಿಂದ ಭಗವನ್ನಾಮ ಸಂಕೀರ್ತನವನ್ನು ಮಾಡುವುದರಿಂದಲೇ ಸರ್ವ ಪಾಪ ಪರಿಹಾರವು ಸಿದ್ಧವಾದಮೇಲೆ ಮನೊವಾಕ್ಕಾಯ ಕರ್ಮಗಳೆಂಬ ತ್ರಿಕರಣಗಳಿಂದ ಭಗವನ್ನಾಮ ಸಂಕೀರ್ತನ ಮಾಡತಕ್ಕವನ ಪಾಪಗಳು ನಾಶಹೊಂದುವುವೆನ್ನುವುದರಲ್ಲಿ ಯಾವ ಸಂದೇಹವೂ ಇಲ್ಲವು. ಮತ್ತು "ಯದ್ಧ್ಯೈ ಮನಸಾ ಧ್ಯಾಯತಿ ತದ್ವಾಚಾ ವದತಿ" ಎಂಬದಾಗಿ ಶ್ರುತಿಯಲ್ಲಿ ಮನಸ್ಸಿನಿಂದ ಯಾವದನ್ನು ಧ್ಯಾನಿಸುವನೊ ಅದನ್ನೇ ವಾಕ್ಕಿನಿಂದ ಹೇಳುವನೆಂದು ಹೇಳಲ್ಪಟ್ಟಿರುವುದರಿಂದ ಮೊದಲು ಮನಸ್ಸಿನಿಂದ ಸಂಕಲ್ಪಿಸಿ ತದನಂತರ ವಾಕ್ಕಿನಿಂದ ಭಗವನ್ನಾಮಗಳನ್ನು ಹೇಳಬೇಕೆಂದರಿಯಬೇಕು.

ಮತ್ತು "ಯಸ್ಮಿನ್ನ್ಯಸ್ತ ಮತಿರ್ನ ಯಾತಿ ನರಕಂ ಸ್ವರ್ಗೋಪಿ ಯಚ್ಚಿಂತನೆ ವಿಘ್ನೋ ಯತ್ರ ನಿವೇಶಿತೇಚ ಮನಸಿ ಬ್ರಾಹ್ಮೋಪಿ ಲೋಕೋಲ್ಪಕಃ | ಮುಕ್ತಿಂಚೇತಸಿ ಯಸ್ಸ್ಥಿತೋಽಮಲಧಿಯಾಂ ಪುಂಸಾಂ ದದಾತ್ಯವ್ಯಯಃ ಕಿಂ ಚಿತ್ರಂ ಯದಘಂ ಪ್ರಯಾತಿ ವಿಲಯಂ ತತ್ರಾಚ್ಯುತೇ ಕೀರ್ತಿತೇ" (ಅರ್ಥವನ್ನು (೬೭)ನೇ ಪುಟದಲ್ಲಿ ನೋಡಿ) ಎಂಬದಾಗಿ ಶ್ರೀವಿಷ್ಣುಪುರಾಣದಲ್ಲಿ ಹೇಳಲ್ಪಟ್ಟಿರುವುದರಿಂದ ಭಗವನ್ನಾರಾಯಣ ಧ್ಯಾನವು ನಾಮ ಸಂಕೀರ್ತನದಲ್ಲಿಡಗಿರುವುದೆಂದರಿಯಬೇಕಲ್ಲದೇ "ಆಲೊಡ್ಯ ಸರ್ವಶಾಸ್ತ್ರಾಣಿ ವಿಚಾರ್ಯಚ ಪುನಃ ಪುನಃ | ಇದಮೇಕಂ ಸು ನಿಷ್ಪನ್ನಂ ಧ್ಯೇಯೋ ನಾರಾಯಣ ಸ್ಸದಾ" ಎಂಬದಾಗಿ ಶ್ರೀಮಹಾ ಭಾರತಾನ್ತ್ಯದಲ್ಲಿ ಶ್ರೀವೇದವ್ಯಾಸ ಮಹಾಮುನಿಗಳಿಂದ "ಸಕಲ ಶಾಸ್ತ್ರಗಳನ್ನು ಚನ್ನಾಗಿ ಪರಿಶೀಲನೆಯಿಂದ ಪುನಃ ಪುನಃ ವಿಚಾರಮಾಡಿದ್ದರಲ್ಲಿ ಜಗತ್ಕಾರಣಭೂತನಾದ ಶ್ರೀನಾರಾಯಣ ನೊಬ್ಬನೇ ಧ್ಯಾನಿಸಲ್ಪಡತಕ್ಕವನೆಂಬೀ ಅಂಶವು ಸಿದ್ಧಾಂತಪಡಿಸಲ್ಪಟ್ಟಿರುವು" ದೆಂದು ಉಪಸಂಹಾರ ಮಾಡಲ್ಪಟ್ಟು ಇರುವುದು.

ಈ ರೀತಿಯಾಗಿಯೇ "ಹರಿರೇಕ ಸ್ಸದಾ ಧ್ಯೇಯೋ ಭವದ್ಭಿ ಸ್ಸತ್ವ ಸಂಸ್ಥಿತೈಃ | ಓಮಿತ್ಯೇವಂ ಸದಾ ವಿಪ್ರಾ ಪಠತ ಧ್ಯಾತ ಕೇಶವಂ || ನಾರಾಯಣೇತಿ ಯಸ್ಯಾಸ್ತೇ ವದನೇ ನಾಮ ಮಂಗಳಂ | ನಾರಾಯಣ ಸ್ತಮನ್ವೇತಿ ವತ್ಸಂ ಗೌರಿವ ವತ್ಸಲಾ||" ಎಂಬದಾಗಿ ಶ್ರೀಹರಿ ವಂಶದಲ್ಲಿ ಕೈಲಾಸ ಯಾತ್ರಾ ಪ್ರಕರಣದಲ್ಲಿ ಶ್ರೀಮನ್ನಾರಾಯಣ ನೊಬ್ಬನೇ ಧ್ಯಾನಾರ್ಹನೆಂದು ಪರಮೇಶ್ವರನು ಹೇಳಿರುವುದರಿಂದ ಇದನ್ನು ಪರ್ಯಾ

ಲೋಚಿಸಿ ನೋಡಿದರೆ ನಾರಾಯಣನ ನಾಮ ಸಂಕೀರ್ತನವೇ ಶ್ರೇಷ್ಠವಾದ ಸರ್ವಶ್ರೇಯೊ ನಿದಾನವೆಂದು ತಿಳಿಯಬರುವುದು. ಆದುದರಿಂದಲೆ ಶ್ರೀಭೀಷ್ಮಾಚಾರ್ಯರು "ಏಷಮೇ ಸರ್ವ ಧರ್ಮಾಣಾಂ ಧರ್ಮೋಧಿಕತಮೋ ಮತಃ" ಎಂಬದಾಗಿ ಈ ಸಹಸ್ರನಾಮಾಧ್ಯಾಯದಲ್ಲಿಯೂ ಭಗವನ್ನಾಮ ಸಂಕೀರ್ತನವು ಸರ್ವ ಧರ್ಮಗಳಿಗಿಂತಲೂ ಶ್ರೇಷ್ಠವಾದದ್ದೆಂದು ಹೇಳಲ್ಪಟ್ಟಿರುವುದು. ಮತ್ತು " ಕಿಮೇಕಂ ದೈವತಂ ಲೋಕೇ? ಕಿಂವಾಪ್ಯೇಕಂ ಪರಾಯಣಂ? ಯತಸ್ಸರ್ವಾಣಿ ಭೂತಾನಿ " ಎಂಬೀ ಪ್ರಶ್ನ ವಾಕ್ಯಗಳಿಂದ ಪ್ರಸ್ತುತನಾದ ಜಗತ್ಕಾರಣನಾದ ಪರಮಪುರುಷನು " ವಿಶ್ವ " ಶಬ್ದದಿಂದ ಹೇಳಲ್ಪಟ್ಟಿರುವನು ಇಂತಹ ಬ್ರಹ್ಮವು ಎಂಥಾದ್ದು? ಎಂದರೆ ಅದಕ್ಕಾಗಿ ಯೆರಡನೆ ನಾಮವು ಪ್ರವರ್ತಿಸಿರುವುದು.

(ವಿ|| ಭಾ||) ಇನ್ನು ಮುಂದೆ ಪ್ರಕರಣಾನುಗುಣವಾಗಿ ಭಗವನ್ನಾಮಗಳಿಗೆ ಪೌನರುಕ್ತ್ಯಾದಿ ದೋಷಗಳು ಬಾರದಂತೆ ಉಚಿತವಾಗಿ ಶ್ರುತಿ ಸ್ಮೃತ್ಯಾದಿ ಸಂವಾದ ಪ್ರಮಾಣಗಳೊಡನೆ ಅರ್ಥವು ಹೇಳಲ್ಪಡುವುದು. ಮೊದಲು ಪರಮಾತ್ಮನು ಸರ್ವವಿಧದಿಂದಲೂ ಪೂರ್ಣನಾಗಿರುವಿಕೆಯನ್ನು ಹೇಳುತ್ತಾರೆ:

(ನಾ) ವಿಶ್ವಂ—ಓಮ್ ವಿಶ್ವಾಯನಮಃ. ವಿಶತಿ—ಪ್ರತಿಯೊಂದು ಅವಯವಗಳಲ್ಲಿಯೂ ಪ್ರವೇಶಿಸುತ್ತಾನೆಂಬ ಅರ್ಥದಮೇಲೆ ಬಂದಿರುವ ನಾಮವಾಗಿರುವುದು. ಈ ಪ್ರಕಾರವೇ " ವಿಶನಾದ್ವಿಶ್ವಮಿತ್ಯಾಹು ರ್ಲೋಕಾನಾಂ ಕಾಶಿ ಸತ್ತಮ | ಲೋಕಾಂಶ್ಚ ವಿಶ್ವಮೇ ವೇತಿ ಪ್ರವದಂತಿ ನರಾಧಿಪ " ಎಂಬದಾಗಿ ಮೋಕ್ಷಧರ್ಮದಲ್ಲಿಯೂ ಹೇಳಲ್ಪಟ್ಟಿರುವುದು. ಇದರಿಂದ ಸ್ವಭಾವ ಸಿದ್ಧವಾದ ಅಳವಿಲ್ಲದ ಅತಿಶಯವುಳ್ಳ ಸಮಸ್ತ ಮಂಗಳಗಳಿಗೆಲ್ಲವೂ ಮುಖ್ಯಸ್ಥಾನವಾದ ಸ್ವರೂಪ ರೂಪಗುಣ ವಿಭೂತ್ಯಾದಿಗಳಿಂದ ಪರಿಪೂರ್ಣನಾಗಿರುವನೆಂದು ಹೇಳಿದಂತೆ ಆಯಿತು. ವಿಶ್ವ ಶಬ್ದವು ಪೂರ್ಣಾರ್ಥಕವಾಗಿರುವುದರಿಂದ ಮೊದಲು ಪರಮಪುರುಷನ ಸ್ವರೂಪ ರೂಪ ಗುಣಾದಿ ಪೂರ್ತಿಯನ್ನು ಹೇಳುವುದು ಉಚಿತವೆಂದೆಣಿಸಿ ಈ ಅರ್ಥವು ಹೇಳಲ್ಪಟ್ಟಿತೆಂದರಿಯಬೇಕು.

(ಮ|| ಭಾ||) ಓಮ್—ವಿಶ್ವಮಿತಿ — ಶಬ್ದರಾಶಿಗಳಲ್ಲಿ ಪ್ರಣವಾಕ್ಷರವು ಶ್ರೇಷ್ಠವಾದುದರಿಂದಲೂ ಸರ್ವವೇದ ಸಾರಭೂತವಾಗಿರುವುದರಿಂಲೂ ಪ್ರತಿ ನಾಮಗಳೂ ಆದ್ಯಂತಗಳಲ್ಲಿ ಪ್ರಣವಾಕ್ಷರ ಸಂಯುಕ್ತಗಳಾ

ಗಿಯೇ ಇರಬೇಕು. ಈ ಪ್ರಕಾರವೇ "ಏತದ್ವೈ ಸತ್ಯಕಾಮ ಪರಂಚಾಪರಂಚ ಬ್ರಹ್ಮ ಯದೋಙ್ಕಾರಃ ॥ ಸರ್ವಸ್ಯ ಪ್ರಣವೋ ಹ್ಯಾದಿ ರ್ಮಧ್ಯ ಮನ್ತಸ್ತಥೈವಚ । ಪ್ರಣವಂ ಹೀಶ್ವರಂ ವಿದ್ಯಾ ತ್ಸರ್ವಸ್ಯ ಹೃದಯೇ ಸ್ಥಿತಂ ॥ ಅಮಾತ್ರೋಽನಂತ ಮಾತ್ರಶ್ಚ ದ್ವೈತಸ್ಯೋಪಶಮ ಶ್ಶಿವಃ । ಓಙ್ಕಾರೋ ವಿದಿತೋ ಯೇನ ಸಮುನಿರ್ನೇತರೋ ಜನಃ ॥ ಓಮಿತ್ಯೇಕಾಕ್ಷರಂ ಬ್ರಹ್ಮ ॥ ಪ್ರಣವ ಸ್ಸರ್ವ ವೇದೇಷು ॥ ಗಿರಾಮಸ್ಮ್ಯೇಕ ಮಕ್ಷರಂ ॥ ಪ್ರಣವಾದ್ಯಾ ಸ್ತಥಾ ವೇದಾಃಪ್ರಣವೇ ಪರ್ಯವಸ್ಥಿತಾಃ । ವಾಙ್ಮಯಂ ಪ್ರಣವ ಸ್ಸರ್ವಂ ತಸ್ಮಾ ತ್ಪ್ರಣವ ಮಭ್ಯಸೇತ್ ॥" ಎಂಬದಾಗಿ ಪ್ರಣವಾಕ್ಷರ ಪ್ರಭಾವವು ಶ್ರುತಿ ಸ್ಮೃತ್ಯಾದಿಗಳಲ್ಲಿ ಪ್ರಸಿದ್ಧವಾಗಿರುವುದಲ್ಲದೆ ಪ್ರಣವಾಕ್ಷರಾಭ್ಯಾಸವು ಅವಶ್ಯ ಕರ್ತವ್ಯವೆಂಬದಾಗಿಯೂ ಹೇಳಲ್ಪಟ್ಟಿರುವುದು.

ಸ್ತ್ರೀ ಪುಂ ನಪುಂಸಕ ಲಿಂಗಗಳುಳ್ಳ ನಾಮಗಳಲ್ಲಿ ಸ್ತ್ರೀಲಿಂಗ ನಾಮಗಳು ದೇವತಾ ವಿಶೇಷ್ಯಕವೆಂತಲೂ ನಪುಂಸಕಲಿಂಗ ನಾಮಗಳು ಬ್ರಹ್ಮ ವಿಶೇಷ್ಯಕವೆಂತಲೂ ಪುಲ್ಲಿಂಗ ನಾಮಗಳು ವಿಷ್ಣು ವಿಶೇಷ್ಯಕವೆಂತಲೂ (ಶಂ॥ ಭಾ॥ ದಲ್ಲಿ ಹೇಳಿರುವಂತೆಯೇ) ತಿಳಿಯಬೇಕು. ಕಲವು ಕಡೆ ಪ್ರವೃತ್ತಿನಿಮಿತ್ತಗಳು (ನಾಮಗಳು ಹುಟ್ಟುವುದಕ್ಕೆ ಕಾರಣಗಳು) ಒಂದಾಗಿದ್ದರೂ ಶಬ್ದಭೇದ ವಿರುವುದರಿಂದಲೂ, ಶಬ್ದವು ಒಂದಾಗಿದ್ದರೂ ಶಬ್ದ ಪ್ರವೃತ್ತಿ ನಿಮಿತ್ತಗಳ ಭೇದವಿರುವುದರಿಂದಲೂ; ಕೆಲವು ಕಡೆ ಈ ಯೆರಡು ಭೇದಗಳಿರುವುದರಿಂದಲೂ ನಾಮಗಳಲ್ಲಿ ಪುನರುಕ್ತ್ಯಾದಿ ದೋಷಗಳು ಕಂಡು ಬರುವುದಿಲ್ಲವೆಂದರಿಯಬೇಕು. ಮತ್ತು ಕಲವು ನಾಮಗಳು ವ್ಯಸ್ತವಾಗಿಯೂ ಕೆಲವು ಸಮಸ್ತವಾಗಿಯೂ ಕೆಲವು ಕೃದಂತಗಳಾಗಿಯೂ ಕೆಲವು ತದ್ಧಿತಾಂತಗಳಾಗಿಯೂ ಕೆಲವು ಅವ್ಯಯಗಳಾಗಿಯೂ ಇರುವುವು. ಸಮಸ್ತದಲ್ಲಿಯೂ ಪ್ರವೇಶಿಸಿರುತ್ತಾನಾದುದರಿಂದ ವಿಶ್ವಂ, "ತತ್ಸೃಷ್ಟ್ವಾ ತದೇವಾನುಪ್ರಾವಿಶತ್" ಎಂಬ ಶ್ರುತಿಯೇ ಈ ರೀತಿಯಾಗಿ ಅರ್ಥವನ್ನು ಹೇಳುವುದಕ್ಕೆ ಆಧಾರವಾಗಿರುವುದು. (ಅಥವಾ) ಸಂಹಾರ (ಪ್ರಳಯ) ಕಾಲದಲ್ಲಿ ಸಮಸ್ತ ಭೂತಗಳೂ ಯಾವ ಪರಮಾತ್ಮನಲ್ಲಿ ಪ್ರವೇಶಿಸುವುವೊ ಅಂತವನು ವಿಶ್ವಂ, "ಯತ್ಪ್ರಯಂತ್ಯಭಿ ಸಂ ವಿಶಂತಿ" ಎಂಬ ಶ್ರುತಿಯು ಈ ಅರ್ಥವನ್ನು ತೋರಿಸು

ವುದು. (ಅಥವಾ) ಜ್ಞಾನಾನಂದಾದಿ ಗುಣಗಳೆಲ್ಲವೂ ಯಾವ ಪರಮಾತ್ಮ ನಲ್ಲಿ ಪ್ರವೇಶಿಸುವುವೋ ಅಂತವನು ವಿಶ್ವಮ್, "ಸತ್ಯಂ ಜ್ಞಾನ ಮನಂತಂ ಬ್ರಹ್ಮ" ಎಂಬದಾಗಿ ಬ್ರಹ್ಮಕ್ಕೆ ಜ್ಞಾನಾನಂದಾದಿ ಪೂರ್ತಿಯನ್ನು ಶ್ರುತಿಯು ಹೇಳುವುದು. ಆದರೆ "ವಿಷ್ಣು ಸಹಸ್ರನಾಮ" ವೆಂಬ ಹೆಸರಿಗೆ ಅನುಗುಣವಾಗಿ ವಿಷ್ಣು ನಾಮಕ್ಕೇನೇ ಪ್ರಾಥಮ್ಯವು (ಮೊದಲು ಹೇಳ ಬೇಕಾಗಿರುವುದು) ಉಚಿತವಾಗಿದ್ದರೂ "ತತ್ಸೃಷ್ಟ್ವಾ ತದೇವಾನು ಪ್ರಾವಿಶತ್ ತದನು ಪ್ರವಿಶ್ಯ ಸಚ್ಚತ್ಯಚ್ಚಾ ಭವತ್" ಎಂಬ ಶ್ರುತಿ ಪರ್ಯಾಲೋಚನೆಯಿಂದ ವಿಷ್ಣು ಶಬ್ದದಿಂದ ಹೇಳಲ್ಪಡುವ ವ್ಯಾಪ್ತಿಯು ಪ್ರವೇಶೋತ್ತರಕಾಲೀನವಾಗಿರುವುದರಿಂದ ಮೊದಲು 'ವಿಶ್ವ' ಶಬ್ದವು ಪ್ರಯುಕ್ತವಾಗಿರುವುದೆಂದರಿಯಬೇಕು. ‖ ೧ ‖

## (೨ನೇ ನಾಮವು) ವಿಷ್ಣುಃ, ಓಮ್‖ ವಿಷ್ಣವೇನಮಃ.

(ಶಂ‖ ಭಾ) ವಿಷ್ಣುವೆಂದರೆ? "ಆಸ್ಯಜಾನಂತೋ ನಾಮ ಚಿದ್ವಿವಕ್ತನ ಮಹತ್ತೇ ವಿಷ್ಣೋ ಸುಮತಿಂ ಭಜಾಮಹೇ" ಎಂಬ ಋಗ್ವೇದ ಪ್ರಮಾಣವನ್ನನುಸರಿಸಿ ವಿಷ್ಣುನಾಮ ಸಂಕೀರ್ತನವು ಸಮಾಚೀನ (ಒಳ್ಳೆ) ಜ್ಞಾನ ಪ್ರಾಪ್ತಿಗೋಸ್ಕರವಾಗಿ ವಿಹಿತವಾಗಿರುವುದೆಂದು ತಿಳಿಯಬರುವುದು. ಮತ್ತು "ವೇವೇಷ್ಟಿ ವ್ಯಾಪ್ನೋತೀತಿ ವಿಷ್ಣುಃ" ಎಂಬವಾಗಿ ವ್ಯಾಪಿಸುವಂತವನಾದುದರಿಂದ ವಿಷ್ಣುವೆನ್ನಲ್ಪಡುವನು. ವ್ಯಾಪ್ತಿಯನ್ನು ಹೇಳುವಂತಾದ್ದೂ ಪ್ರತ್ಯಯಾಂತವೂ ಆದ ವಿಷ್ ಧಾತುವಿನಿಂದ ವಿಷ್ಣುಃ ಎಂಬ ರೂಪವು ಸಿದ್ಧಿಸಿ ದೇಶಕಾಲ ವಸ್ತುಗಳೆಂಬ ತ್ರಿವಿಧ ಪರಿಚ್ಛೇದ ಶೂನ್ಯನೆಂಬ ಅರ್ಥವು ಪ್ರಾಪ್ತವಾಗುವುದು. "ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣ ಸ್ಸ್ಥಿತಃ" ಇತ್ಯಾದಿ ಶ್ರುತಿಗಳಿಂದ ಸರ್ವವ್ಯಾಪಕನಾಗಿರುವುದರಿಂದ ವಿಷ್ಣುವೆನ್ನಲ್ಪಡುವನು. "ವಿಶತೇರ್ವಾನುಕ್ಪ್ರತ್ಯಯಸ್ಯರೂಪಂ ವಿಷ್ಣುರಿತಿ" ನುಕ್ಪ್ರತ್ಯಯಾಂತವಾದ ವಿಶ ಧಾತುವಿನಿಂದ ಹುಟ್ಟಿರುವ ರೂಪವು ವಿಷ್ಣುವೆಂದು ಹೇಳಲ್ಪಡುವುದು. "ಯಸ್ಮಾದ್ವಿಷ್ಟಮಿದಂ ಸರ್ವಂ ತಸ್ಯ ಶಕ್ತ್ಯಾ ಮಹಾತ್ಮನಃ। ತಸ್ಮಾದೇವೋಚ್ಯತೇ ವಿಷ್ಣು ರ್ವಿಶೇರ್ಧಾತೋಃ ಪ್ರವೇಶನಾತ್" ಎಂಬ ನಿರುಕ್ತಿ ಬಲದಿಂದ "ಮಹಾತ್ಮನಾದ ನಾರಾಯಣನ (ಶಕ್ತಿ) ಸಾಮರ್ಥ್ಯದಿಂದ ಸಮ

ಸ್ತವು ವ್ಯಾಪಿಸಲ್ಪಟ್ಟಿರುವುದರಿಂದ ವಿಶಧಾತ್ವರ್ಥಾನುಸಾರವಾಗಿ ಸಮಸ್ತ ದಲ್ಲಿಯೂ ಪ್ರವೇಶಿಸಿರುವುದರಿಂದ ವಿಷ್ಣುವೆನ್ನಲ್ಪಡುವನೆಂದು" ಶ್ರೀ ವಿಷ್ಣುಪುರಾಣವಚನ ಬಲದಿಂದ (ಸಮಸ್ತದಲ್ಲಿಯೂ ಪ್ರವೇಶಿಸಿರುವುದ ರಿಂದಲೂ) ವಿಷ್ಣುವೆನ್ನಲ್ಪಡುವನು. ಮತ್ತು "ವ್ಯಾಪ್ತೇಮೇರೋದಸೀ ಪಾರ್ಥ ಕಾಂತಿಶ್ಚಾಭ್ಯಧಿಕಾ ಸ್ಥಿತಾ । ಕ್ರಮಣಾಚ್ಚಾಪ್ಯಹಂ ಪಾರ್ಥ ವಿಷ್ಣುರಿತ್ಯಭಿ ಸಂಜ್ಞಿತಃ" (ಅತ್ಯಧಿಕವಾದ ನನ್ನ ಕಾಂತಿಯು ಭೂಮಿ ಆಕಾಶಗಳಲ್ಲಿ ವ್ಯಾಪಿಸಿರುವುದು. ಎಂದರೆ ನನ್ನ ಕಾಂತಿಯು ಸಮಸ್ತ ವನ್ನೂ ಆಕ್ರಮಿಸಿರುವುದರಿಂದಲೇ 'ವಿಷ್ಣು' ವೆನ್ನಲ್ಪಡುವನೆಂದು) ಮಹಾ ಭಾರತದ ನಿರುಕ್ತಿಯನ್ನೂ ಕಾಣಬಹುದು.

(ವಿ॥ ಭಾ) ಈ ಮೊದಲಿನ ನಾಮದಲ್ಲಿ ಹೇಳಿರುವ ಪೂರ್ತಿಯನ್ನೇ ಇತರ ನಾಮಗಳು ಪೋಷಿಸಿ ಹೇಳುವುವು. ಅವುಗಳಲ್ಲಿ ಈ ಯರಡನೇ "ವಿಷ್ಣು" ಎಂಬ ತಿರುನಾಮವು ಭಗವದ್ವಿಭೂತಿಯಾದ ಪ್ರಪಂಚದಲ್ಲಿ ಪ್ರವೇಶಿಸಿರುವ ಅರ್ಥವನ್ನು ಹೇಳುವುದು. ವಿಷ್ಣುಃ – ಚಿತ್ತು ಅಚಿತ್ತೆಂಬ ತನ್ನ ವಿಭೂತಿಗಳೆಲ್ಲವನ್ನೂ ಪ್ರವೇಶಿಸಿರುವಂತವನು. ಈ ಪ್ರಕಾರವೇ "ವಿವೇಶ ಭೂತಾನಿ ಚರಾ ಚರಾಣಿ ॥ ತದೇವಾನುಪ್ರಾವಿಶತ್ ॥ ವ್ಯಾಪ್ಯ ಸರ್ವಾ ನಿಮಾನ್ಲೋಕಾನ್ ಸ್ಥಿತ ಸ್ಸರ್ವತ್ರ ಕೇಶವಃ । ತತಶ್ಚ ವಿಷ್ಣು ನಾಮಾಸಿ ವಿಶೇರ್ಧಾತೋಃ ಪ್ರವೇಶನಾತ್" ಇತ್ಯಾದಿ ಶ್ರುತಿಗಳೂ ಹೇಳುವುವು. ಇಲ್ಲಿ "ವಿಶ್ವಂ–ವಿಷ್ಣುಃ" ಎಂಬ ಯರಡು ತಿರುನಾಮಗಳಿಂದ ವ್ಯಾಪ್ತಿಯನ್ನೇ ಹೇಳಿದರೆ ಪುನರುಕ್ತಿದೋಷವು ಪ್ರಾಪ್ತವಾಗಲಾರದೊ? ಎಂದರೆ ಒಂದು ನಾಮವು ಪೂರ್ತಿಯನ್ನೂ ಮತ್ತೊಂದು ವ್ಯಾಪ್ತಿಯನ್ನೂ ಹೇಳುವುದರಿಂದ ಅದಕ್ಕೆ ಅವಕಾಶವಿಲ್ಲವು.

(ಮ॥ ಭಾ) ಶಂಕರ ಭಾಷ್ಯೋಕ್ತಗಳಾದ ಅರ್ಥಗಳನ್ನೇ ಹೇಳಿರುತ್ತಾರೆ. ಮತ್ತು "ಅನಿರ್ದೇಶ್ಯವಪುರ್ವಿಷ್ಣುಃ" ಎಂಬ ವಾಕ್ಯದಲ್ಲಿರುವ ವಿಷ್ಣು ಶಬ್ದವು 'ವಿಶತೇ ರೂಪಂ' ಎಂಬ ಅರ್ಥ ಭೇದದಿಂದ ಪುನರುಕ್ತಿ ದೋಷಕ್ಕೆ ಆಸ್ಪದವಾಗಲಾರದು ॥ ೨ ॥

## (೩ನೇ ನಾಮವು) ವಷಟ್ಕಾರಃ,

ಓಮ್॥ ವಷಟ್ಕಾರಾಯ ನಮಃ.

(ಶಂ|| ಮ|| ಭಾ) ಯಾವ ಭಗವಂತನನ್ನುದ್ದೇಶಿಸಿ ವಷಟ್ಕಾರವು ಮಾಡಲ್ಪಡುವುದೋ ಅಂತಹ ಪರಮಾತ್ಮನು ವಷಟ್ಕಾರನೆನ್ನಲ್ಪಡುವನು. (ಶಂ|| ಭಾ) "ಯಜ್ಞೋವೈ ವಿಷ್ಣುಃ" ಎಂಬ ಶ್ರುತ್ಯನುಸಾರವಾಗಿ ಯಜ್ಞದಲ್ಲಿ ವಷಟ್ಕಾರದೊಡನೆ ಪ್ರವರ್ತಿಸುವಂತವನಾದುದರಿಂದಲೂ, ಯಜ್ಞರೂಪನಾಗಿರುವುದರಿಂದಲೂ, ವಷಟ್ಕಾರಾದಿ ಮಂತ್ರರೂಪದಿಂದ ದೇವತೆಗಳಿಗೆ ಪ್ರೀತಿಕಾರಿಯಾಗಿರುವುದರಿಂದಲೂ ವಷಟ್ಕಾರವೆಂಬ ಒಂದು ದೇವತೆಯಾಗಿರುವುದರಿಂದಲೂ ವಷಟ್ಕಾರಃ ಎನ್ನಲ್ಪಡುವನು.

(ವಿ|| ಭಾ) ಈ ವ್ಯಾಪ್ತಿಯು ಕೇವಲ ಆಕಾಶಾದಿ ವ್ಯಾಪ್ತಿಯಂತೆ ಇರದೆ ವಿಲಕ್ಷಣವಾದ ಪ್ರಯೋಜನವನ್ನುಂಟಾಗಿರುವುದೆಂದು ಮುಂದೆ ಹೇಳುತ್ತಾರೆ. ವಷಟ್ಕಾರಃ–"ಸರ್ವಸ್ಯ ವಶೀ ಸರ್ವಸ್ಯೇಶಾನಃ || ಜಗದ್ವಶೇ ವರ್ತತೇದಂ" ಇತ್ಯಾದಿ ಶ್ರುತಿ ಸ್ಮೃತಿಗಳಲ್ಲಿ ಹೇಳಿರುವಂತೆ ಸಮಸ್ತವನ್ನು ತನ್ನ ವಶಪಡಿಸಿಕೊಳ್ಳುವಂತವನು. || ೭ ||

(ಸಮಸ್ತವನ್ನೂ ವಶಮಾಡಿಕೊಂಡವನು, ಸಮಸ್ತಕ್ಕೂ ನಿಯಾಮಕನು. ಈ ಸಮಸ್ತ ಪ್ರಪಂಚವೂ ಅವನ ವಶದಲ್ಲಿರುವುದೆಂದು ಈ ವಚನಾರ್ಥವು.)

## (೮ನೇ ನಾಮವು) ಭೂತಭವ್ಯಭವತ್ಪ್ರಭುಃ,
## ಓಂ|| ಭೂತಭವ್ಯಭವತ್ಪ್ರಭವೇನಮಃ.

( ಶಂ|| ಭಾ ) ಭೂತ ಭವಿಷ್ಯದ್ವರ್ತಮಾನಗಳೆಂಬೀ ಕಾಲತ್ರಯಕ್ಕೂ ಪ್ರಭುವಾಗಿರುವುದರಿಂದ "ಭೂತಭವ್ಯ ಭವತ್ಪ್ರಭುಃ" ಎನ್ನಲ್ಪಡುವನು. ಕಾಲಭೇದವನ್ನಾದರಿಸದೆ ಸನ್ಮಾತ್ರ ಪ್ರತಿಯೋಗಿಕವಾದ ಐಶ್ವರ್ಯವು ಈ ಪರಮಾತ್ಮನಿಗಿರುವುದರಿಂದ "ಭೂತಭವ್ಯಭವತ್ಪ್ರಭುಃ" ಎನ್ನಲ್ಪಡುವನು. ಎಂದರೆ ಕಾಲಭೇದವನ್ನಪೇಕ್ಷಿಸದೆ ಇವನ ಐಶ್ವರ್ಯವು ಸತ್ತಾಮಾತ್ರವಾಗಿರುವುದೆಂದು ಭಾವವು.

(ವಿ|| ಭಾ) ಈ ಪ್ರಕಾರವಾಗಿ ಸಮಸ್ತವನ್ನು ವಶಪಡಿಸಿಕೊಳ್ಳುವುದರಿಂದ ಭೂತ ಭವಿಷ್ಯದ್ವರ್ತಮಾನಗಳೆಂಬ ತ್ರಿಕಾಲದಲ್ಲಿಯೂ ಉಂಟಾಗಿರುವ ಸಕಲ ಪದಾರ್ಥಗಳಿಗೂ ಪ್ರಭುಃ ಎಂದರೆ ಸ್ವಾಮಿಯು (ಶೇಷಿಯು) ಈ ಪ್ರಕಾರವೇ "ಪತಿಂ ವಿಶ್ವಸ್ಯ || ಪತಿಂ ಪತೀನಾಂ || ಭೂತಸ್ಯ ಜಾತಃ ಪತಿರೇಕ ಆಸೀತ್|| ತತ್ಪುರುಷಸ್ಯ ವಿಶ್ವಂ|| ಯಸ್ಯೇಮಾಃ

ದಿಶಃ ‖ ಕೃಷ್ಣಸ್ಯಹಿ ಕೃತೇ ಭೂತಮಿದಂ ವಿಶ್ವಂ ಚರಾಚರಂ ‖ ಭೂತ ಭವ್ಯ ಭವನ್ನಾಥಃ ಕೇಶವಃ ಕೇಶಿಸೂದನಃ ‖ ಜಗನ್ನಾಥಸ್ಯ ಭೂಪತೇ" ಎಂಬಿದೇ ಮೊದಲಾದ ಸಮಸ್ತ ಶಾಸ್ತ್ರಗಳೂ ಉದ್ಘೋಷಿಸುವುವು. ‖ ೪ ‖

(ಸಮಸ್ತಕ್ಕೂ ಪತಿಯಾದವನನ್ನು. ಪತಿಗಳಿಗೆ ಪತಿಯಾದವನನ್ನು ಸಮಸ್ತ ಭೂತಗಳಿಗೂ ಪತಿಯು ಒಬ್ಬನೇ ಆದನು. ಪ್ರಪಂಚವು ಆ ಪರಮಪುರುಷನದಾಗಿರುವುದು. ಈ ದಿಕ್ಕುಗಳಲ್ಲಿರುವಂಥಾ ಸಕಲವೂ ಯಾವ ಪರಮಪುರುಷನದೊ ಚರಾಚರಾತ್ಮಕವಾದ ಈ ಪ್ರಪಂಚವೆಲ್ಲವೂ ಕೃಷ್ಣನಿಗೋಸ್ಕರ ವಲ್ಲವೊ ಕೇಶಿ ಸಂಹಾರಕನಾದ ಕೇಶವನು ಭೂತ ಭವಿಷ್ಯದ್ವರ್ತಮಾನಗಳೆಂಬ ಕಾಲತ್ರಯದಲ್ಲಿರುವ ವಸ್ತುಗಳಿಗೆಲ್ಲವು ಸ್ವಾಮಿಯಾಗಿರುವನು. ಎಲೈ ರಾಜನೇ? ಜಗನ್ನಾಥನ ಎಂಬದಾಗಿ ಮೇಲಿನ ವಚನಾರ್ಥವು)

## (೫ನೇ ನಾಮವು) ಭೂತಕೃತ್,

## ಓಮ್ ‖ ಭೂತಕೃತೇನಮಃ.

(ಶಂ‖ ಭಾ) ರಜೋಗುಣವನ್ನಾಶ್ರಯಿಸಿ ಚತುರ್ಮುಖ ಬ್ರಹ್ಮರೂಪಿಯಾಗಿ ಭೂತಗಳನ್ನು ಸೃಷ್ಟಿಸುತ್ತಾನಾದುದರಿಂದ "ಭೂತಕೃತ್" ಎನ್ನಲ್ಪಡುವನು ಮತ್ತು ತಮೋಗುಣವನ್ನಾಶ್ರಯಿಸಿ ರುದ್ರರೂಪದಿಂದ ಭೂತಗಳನ್ನು ಸಂಹರಿಸುತ್ತಾನಾದುದರಿಂದ ನಾರಾಯಣನು "ಭೂತಕೃತ್" ಎನ್ನಲ್ಪಡುವನು.

(ವಿ‖ ಭಾ) ಪುನಶ್ಚ ಆ ಪರಮಪುರುಷನು ಸರ್ವಶೇಷಿಯಾಗಿರುವಿಕೆಯನ್ನು (೫) ತಿರುನಾಮಗಳು ಉಪಪಾದಿಸುವುವು ಸಕಲ ಭೂತಗಳನ್ನು ಸ್ವತಂತ್ರನಾಗಿದ್ದುಕೊಂಡು ಸೃಷ್ಟಿಸುವಂತವನು "ಭೂತಕೃತ್" ಎನ್ನಲ್ಪಡುವನು. "ಸರ್ವಂಹೇದಂ ಬ್ರಹ್ಮಣಾ ಹೈವ ಸೃಷ್ಟಂ ‖ ಯತೋವಾ ಇಮಾನಿ" ಇತ್ಯಾದಿ ಪ್ರಮಾಣಗಳು ಈ ಅರ್ಥವನ್ನು ಬೋಧಿಸುವುವು ‖ ೫ ‖

(ಸಮಸ್ತವಾದ ಈ ಪ್ರಪಂಚವು ಬ್ರಹ್ಮದಿಂದಲೆ ಯಲ್ಲವೆ ಸೃಷ್ಟಿಮಾಡಲ್ಪಟ್ಟಿರುವುದು. ಈ ಪ್ರಪಂಚವೆಲ್ಲವೂ ಯಾವ ಪರಮಾತ್ಮನಿಂದ ಉಂಟಾಗಿರುವುವೋ. ಎಂದೀ ಪ್ರಮಾಣಾರ್ಥವು)

## (೬ನೇ ನಾಮವು) ಭೂತಭೃತ್, ಓಮ್‖ ಭೂತಭೃತೇನಮಃ.

(ಶಂ॥ ಭಾ) ಸತ್ವಗುಣವನ್ನಾಶ್ರಯಿಸಿ ವಿಷ್ಣುರೂಪದಿಂದ ಭೂತಗಳನ್ನು ಪರಿಪಾಲನೆಮಾಡುವುದರಿಂದಲಾದರೂ ಧಾರಣಮಾಡುವುದರಿಂದಲಾದರೂ ಪೋಷಣ ಮಾಡುವುದರಿಂದಲಾದರೂ "ಭೂತಭೃತ್" ಎನ್ನಲ್ಪಡುವನು.

(ವಿ॥ ಭಾ) ಭೂತಗಳನ್ನು ಭರಿಸುವಂತವನು. ಇದಕ್ಕೆ "ವಿಶ್ವಂಬಿಭರ್ತಿ ಭುವನಸ್ಯ ನಾಭಿಃ ॥ ತದ್ಯಥಾ ರಥಸ್ಯಾರೇಷು ನೇಮಿರರ್ಪಿತಾ ನಾಭಾವರಾ ಅರ್ಪಿತಾಃ, ಏವಮೇವೈತಾ ಭೂತಮಾತ್ರಾ ಪ್ರಜ್ಞಾ ಮಾತ್ರಾಸ್ವರ್ಪಿತಾಃ ॥ ಪ್ರಜ್ಞಾ ಮಾತ್ರಾಃ ಪ್ರಾಣೇಷ್ವರ್ಪಿತಾಃ ॥ ಸದಾ ಧಾರ ಪೃಥಿವೀಂ ॥ ಬಿಭರ್ತ್ಯವ್ಯಯ ಈಶ್ವರಃ" ಇತ್ಯಾದಿ ಶ್ರುತಿ ಸ್ಮೃತಿ ಪ್ರಮಾಣಗಳು ಆಧಾರ ಭೂತಗಳಾಗಿರುವುವು. ॥ ೬ ॥

(ಸಮಸ್ತ ಲೋಕಗಳಿಗೂ ನಾಭಿಸ್ಥಾನವಾಗಿದ್ದುಕೊಂಡು ಸಮಸ್ತವನ್ನು ಭರಿಸುತ್ತಾನೆ. ಅದು ಹೇಗೆಂಬರೆ? ಗಾಡಿಯ ಚಕ್ರದ ಅವಯುವಗಳಾದ ಅರಗಳಲ್ಲಿ ನೇಮಿಯೆಂಬ ಸುತ್ತು ಬಳೆಯು ಸೇರಿಸಲ್ಪಟ್ಟಿರುವದೋ; ಹೇಗಾದರೆ ಚಕ್ರದ ನಾಭಿಯಲ್ಲಿ ಅರಗಳು ಸೇರಿಸಲ್ಪಟ್ಟಿರುವುದೋ ಅದರಂತೆ ಈ ಸಮಸ್ತ ಭೂತಗಳೂ ಪ್ರಜ್ಞಾ ಮಾತ್ರವಾದ ಆತ್ಮಕೋಟಿಗಳಲ್ಲಿ ಸೇರಿಸಲ್ಪಟ್ಟು ಅಂತಹ ಪ್ರಜ್ಞಾಮಾತ್ರವೆಲ್ಲವೂ ಪ್ರಾಣಸ್ವರೂಪಿಯಾದ ಪರಮಾತ್ಮನಲ್ಲಿ ಸೇರಿಸಲ್ಪಟ್ಟಿರುವುವು. ಸತ್ತನ್ನೇ ಆಧಾರವಾಗಿ ಉಳ್ಳ ಭೂಮಿಯನ್ನು ನಾಶರಹಿತನಾದ ಈಶ್ವರನು ಭರಿಸುತ್ತಾನೆಂದು ಮೇಲಿನ ಪ್ರಮಾಣಾರ್ಥವು)

## (೭ನೇ ನಾಮವು) ಭಾವಃ, ಓಮ್॥ ಭಾವಾಯನಮಃ,

(ಶಂ॥ಭಾ) ಪ್ರಪಂಚ ರೂಪದಿಂದ ಆಗುತ್ತಾನಾದುದರಿಂದಲಾದರೂ ಕೇವಲವಾಗಿ ಆಗುತ್ತಾನಾದುದರಿಂದಲಾದರೂ "ಭಾವಃ" ಎನ್ನಲ್ಪಡುವನು. ಅಥವಾ ಭವನಂ ಭಾವಃ ಸತ್ತಾತ್ಮಕೋವಾ–ಭವನವಾಗುವುದರಿಂದಲಾದರೂ ಸತ್ತಾತ್ಮಕನಾಗಿರುವುದರಿಂದಲಾದರೂ "ಭಾವಃ" ಎನ್ನಲ್ಪಡುವನು.

(ವಿ॥ ಭಾ) ಹಿಂದೇ ಹೇಳಲ್ಪಟ್ಟೂ ಮುಂದೇ ಹೇಳಲ್ಪಡುವವೂ ಆಗಿರುವ ಸಕಲ ವಿಭೂತಿಗಳಿಂದಲೂ ಕೂಡಿ ನವಿಲುಗರಿಯಲ್ಲಿರುವ ಕಣ್ಣುಗಳಿಂದ ಕೂಡಿರುವ ನವಿಲುನಂತೆ ಪ್ರಕಾಶಿಸುವಂತವನು. ಅನೇಕ ಕಣ್ಣುಗಳಿಂದ ಕೂಡಿರುವ ನವಿಲುಗರಿಗಳಿಂದ ನವಿಲು ಹೇಗಾದರೆ ಪ್ರಕಾಶಿಸುವುದೋ ಅದರಂತೆ ವಿಚಿತ್ರವಾದ ಸಕಲ ವಿಭೂತಿಗಳಿಂದ ಪ್ರಕಾಶಿಸುವಂತವ

ನೆಂದರ್ಥವು. ಸಕಲ ಭೂತಗಳೂ ಆ ಪರಮಾತ್ಮನಲ್ಲಿ ಪ್ರಕಾರ ಭೂತವಾಗಿ ಅಡಗಿರುವದರಿಂದ ಸಮಸ್ತವನ್ನೂ ಅವನ ವಿಭೂತಿಗಳೆಂದು ಹೇಳುವುದು.

(ಮ॥ ಭಾ) ಭೂತಗಳನ್ನು ಹುಟ್ಟಿಸುವುದರಿಂದ "ಭಾವಃ" ಎನ್ನಲ್ಪಡುವನು. ॥ ೭ ॥

**(೮ನೇ ನಾಮವು) ಭೂತಾತ್ಮಾ, ಓಮ್॥ ಭೂತಾತ್ಮನೇನಮಃ**

(ಶಂ॥ ಭಾ॥ ಮ॥ ಭಾ) "ಏಷತೇಽಽತ್ಮಾಂತರ್ಯಾಮೀ" ಎಂಬ ಶ್ರುತಿ ಪ್ರಮಾಣಾನುಸಾರವಾಗಿ ಭೂತಗಳಿಗೆ ಆತ್ಮಾ ಅಂತರ್ಯಾಮಿ ಯಾಗಿರುವುದರಿಂದ "ಭೂತಾತ್ಮಾ" ಎನ್ನಲ್ಪಡುವನು

(ವಿ॥ ಭಾ) ಈ ಪ್ರಕಾರವಾಗಿ ಸಕಲ ಭೂತಗಳೂ ಪರಮಪುರುಷನಿಗೆ ವಿಭೂತಿಗಳಾಗಿರುವುವೆಂದರೆ ? ಅವನಿಗೆ ಶರೀರವಾಗಿರುವುದೆಂಬ ಅರ್ಥವು ಮುಂದೆ ವಿವರಿಸಲ್ಪಡುವುದು. ಸಕಲ ಭೂತಗಳಿಗೆ ಆತ್ಮನಾಗಿರುವಂತವನು "ಭೂತಾತ್ಮಾ" ಎನ್ನಲ್ಪಡುವನು. "ಯಃ ಪೃಥಿವ್ಯಾಂ ತಿಷ್ಠನ್ ಯಸ್ಯ ಪೃಥಿವೀ ಶರೀರಂ । ಆತ್ಮನಿ ತಿಷ್ಠನ್ ಯಸ್ಯಾತ್ಮಾ ಶರೀರಂ ॥ ಏಷ ಸರ್ವಭೂತಾಂತರಾತ್ಮಾ ॥ ಜಗತ್ಸರ್ವಂ ಶರೀರಂತೇ ॥ ತಾನಿ ಸರ್ವಾಣಿ ತದ್ವಪುಃ ॥ ತತ್ಸರ್ವಂ ವೈ ಹರೇಸ್ತನುಃ ॥" ಇತ್ಯಾದಿ ಶ್ರುತಿ ಸ್ಮೃತಿಗಳು ಈ ಅರ್ಥವನ್ನು ಪ್ರತಿಪಾದಿಸುವುವು.

(ಯಾವ ಪರಮಾತ್ಮನು ಪೃಥಿವಿಯಲ್ಲಿದ್ದುಕೊಂಡು ಯಾವ ಪರಮಾತ್ಮನಿಗಾದರೆ ಪೃಥಿವಿಯು ಶರೀರವಾಗಿರುವುದೊ ಯಾವನು ಆತ್ಮನಲ್ಲಿದ್ದುಕೊಂಡು ಯಾವನಿಗಾದರೆ ಆತ್ಮನು ಶರೀರವೊ. ಇವನು ಸರ್ವ ಭೂತಗಳಿಗೂ ಶರೀರಿಯಾದ ಅಂತರ್ಯಾಮಿಯು. ಸಮಸ್ತ ಪ್ರಪಂಚವು ನಿನಿಗೆ ಶರೀರವು ಆ ಸಮಸ್ತವು ಶ್ರೀಹರಿಯು ಶರೀರವು ಎಂದಿ ಪ್ರಮಾಣಾರ್ಥವು.)

ಶರೀರವನ್ನು ವ್ಯಾಪಿಸಿ ಅದರ ಪ್ರವೃತ್ತಿ ನಿವೃತ್ತಿಗಳನ್ನು ಮಾಡುವಂತಾದ್ದನ್ನಲ್ಲವೆ ಆತ್ಮವೆನ್ನುವರು. ಆ ಪ್ರಕಾರವೆ ಪರಮಾತ್ಮನೂ ಸಕಲ ಪ್ರವೃತ್ತಿ ನಿವೃತ್ತಿಗಳನ್ನೂ ಮಾಡುತ್ತಾನೆಂದು ಅವನನ್ನು ಆತ್ಮನೆನ್ನುತ್ತಾರೆ. ಸ್ತ್ರೀ ಜನರು ಮನೇ ಬಾಗಲು ಮೊದಲಾದವುಗಳಿಗಿಂತಲೂ ಶರೀರವು ಆತ್ಮನಿಗೆ ಅತ್ಯಂತ ಪರಾಧೀನವಾಗಿರುವುದೆಂದು ಅದನ್ನು ಅತ್ಯಂತಾಂತರಂಗವಾದ ವಿಭೂತಿ ಎನ್ನುವೆವಲ್ಲವೆ? ಈ ಪ್ರಕಾರವೇ ಸಕಲ

ಭೂತಗಳೂ ಪರಮಪುರುಷನಿಗೆ ಶರೀರದಂತೆ ಅತ್ಯಂತ ಪರತಂತ್ರವಾಗಿ ಅಂತರಂಗವಾಗಿರುವುವೆಂದು ತಿಳಿಯಬೇಕು. ‖ ೮ ‖

## (೯ನೇ ನಾಮವು) ಭೂತ ಭಾವನಃ,

## ಓಮ್‖ ಭೂತಭಾವನಾಯನಮಃ.

(ಶಂ‖ ಭಾ‖ ಮ‖ ಭಾ) ಭೂತಗಳನ್ನು ಹುಟ್ಟಿಸುತ್ತಾನಾದುದರಿಂದಲಾದರೂ (ಶಂ) ಭೂತಗಳನ್ನು ವೃದ್ಧಿಪಡಿಸುವುದರಿಂದಲಾದರೂ "ಭೂತಭಾವನಃ" ಎನ್ನಲ್ಪಡುವನು.

(ವಿ‖ ಭಾ) ಈ ಪ್ರಕಾರವಾಗಿ ತನಿಗೆ ಶರೀರ ಭೂತಗಳಾದ ಸಕಲ ಭೂತಗಳಿಗೂ ಧಾರಕಪೋಷಕ ಭೋಗ್ಯಗಳನ್ನು ಕೊಟ್ಟು ವೃದ್ಧಿಪಡಿಸುತ್ತಾನೆಂದು ಹೇಳಲ್ಪಡುವುದು. ಭೂತಗಳನ್ನು ವೃದ್ಧಿಪಡಿಸುವಂತವನು "ಭೂತ ಭಾವನಃ" ಎನ್ನಲ್ಪಡುವನು ಇದಕ್ಕೆ "ಭೂತಭಾವನ ಭೂತೇಶ ‖ ವಿಷಭೂತಪಾಲಃ" ಎಂಬೀ ವಾಕ್ಯಗಳು ಪ್ರಮಾಣಗಳಾಗಿರುವುವು.

(ಭೂತಗಳನ್ನು ವೃದ್ಧಿಪಡಿಸುವಂತಹ ಎಲೈ ಭೂತಪತಿಯೆ ? ಇವನು ಭೂತಗಳನ್ನು ರಕ್ಷಿಸುವಂತವನು ಎಂದೀ ವಾಕ್ಯ ದ್ವಯದ ಅರ್ಥವು.)

ಈ ಪ್ರಕಾರವಾಗಿ 'ಸ್ವರೂಪ ಸ್ಥಿತಿ ಪ್ರವೃತ್ತಿ ಪಾಲನ' ವೆಂಬ ಇವುಗಳಿಂದ ಪರಮಪುರುಷನ ಶೇಷಿತ್ವವು ಉಪಾದಿಸಲ್ಪಟ್ಟಿತು. ಉತ್ಪತ್ತಿ ವೃದ್ಧ್ಯಾದಿಗಳಿಗೆ ವಿಷಯವು ಯಾವದೋ ಅದನ್ನು ಕುರಿತು ಉದ್ದೇಶಿಸಲ್ಪಟ್ಟವನು ಯಾವನೋ ಅವನನ್ನು ಅದಕ್ಕೆ ಶೇಷಿ ಯೆನ್ನುವರು. ಪರಮಪುರುಷನು ಈ ಪ್ರಕಾರವಾಗಿ ಸಕಲ ಭೂತಗಳಿಗೂ ಉದ್ದೇಶ್ಯನಾಗಿರುವುದರಿಂದ ಅವನು ಅವುಗಳಿಗೆ ಶೇಷಿಯಾಗುವನು. ಈ ಪ್ರಕಾರವೇ "ಶೇಷಃ ಪರಾರ್ಥತ್ವಾತ್" ಎನ್ನಲ್ಪಟ್ಟಿರುವುದು. ‖ ೯ ‖

(ಪರನಿಗೋಸ್ಕರವಾಗಿಯೇ ಇರುವುದರಿಂದ ಇವನು ಶೇಷಭೂತನೆನ್ನಲ್ಪಡುವನೆಂದರ್ಥವು)

(ಈ ಪ್ರಕಾರವಾಗಿ ಈ ಮೊದಲನೇ ಶ್ಲೋಕದಲ್ಲಿ ಹೇಳಿರುವ ಪದಗಳಿಗೆ (೧) "ವಿಶ್ವಂ ಸರ್ವತ್ರ ಪೂರ್ಣತ್ವಾ ತ್ಸ್ವರೂಪ ಗುಣ ವೈಭವೈಃ ‖ (೨) ಚರಾಚರೇಷು ಭೂತೇಷು ವಿಶನಾ ದ್ವಿಷ್ಣು ರುಚ್ಯತೇ ‖ (೩) ಸ್ವೇಚ್ಛಯಾ ಯೋವಶೇ ಸರ್ವಂ ವಷಟ್ಕಾರಃ ಕರೋತಿ ಸಃ ‖ (೪) ತ್ರಿಕಾಲವರ್ತಿನಾಂ ಶೇಷೀ ಭೂತ ಭವ್ಯ ಭವತ್ಪ್ರಭುಃ‖ (೫) ಭೂತಾನಿ ಯೋಸೌ ಸೃಜತಿ ಸ್ವಾತಂತ್ರ್ಯೇಣ ಸ ಭೂತಕೃತ್ ‖ (೬) ಭೂತ

ಶ್ಯದ್ಭೂತ ಭರಣಾತ್ (೮) ಶರೀರ ಭೂತ ಭೂತಾನಾಂ ಭೂತಾತ್ಮಾತ್ಮ ತಯಾಸ್ಥಿತಃ॥ (೯) ಧಾರಕಾದಿ ಪ್ರದಾನೇನ ಯಶ್ಚ ವರ್ಧಯತಿ ಸ್ವಯಂ । ಭೂತಾನಿ ನಿತ್ಯಂ ಝಡಿತಿ ಸತುಸ್ಯಾದ್ಭೂತ ಭಾವನಃ" ಎಂಬದಾಗಿ ಈಗ ಮುಗಿದಿರುವ (೯) ನಾಮಗಳಿಗೂ ನಿರುಕ್ತಿಯನ್ನು ಕಾಣಬಹುದು.

ಮೂ॥ ಪೂತಾತ್ಮಾ ಪರಮಾತ್ಮಾಚ ಮುಕ್ತಾ
ನಾಂ ಪರಮಾಗತಿಃ। ಅವ್ಯಯಃ ಪುರುಷಸ್ಸಾಕ್ಷೀ
ಕ್ಷೇತ್ರಜ್ಞೋಽಕ್ಷರ ಏವಚ ॥೨॥

(೧೦ನೇ ನಾಮವು) ಪೂತಾತ್ಮಾ,
ಓಮ್॥ ಪೂತಾತ್ಮನೇನಮಃ.

(ಶಂ॥ ಭಾ) ರಜೋಗುಣವನ್ನಾಶ್ರಯಿಸಿ ಭೂತಗಳನ್ನು ಸೃಷ್ಟಿ ಮಾಡುವಿಕೆ ಮೊದಲಾದವುಗಳಿಂದ ಪ್ರಾಪ್ತವಾದ ಗುಣಸಂಬಂಧವು ನಿಷೇಧಿಸಲ್ಪಡುವುದು. ಪೂತಾತ್ಮಾ–"ಕೇವಲೋ ನಿರ್ಗುಣಶ್ಚ॥ ಗುಣೋಪರಾಗಸ್ಸ್ವೇಚ್ಛಾತಃ ಪುರುಷಸ್ಯೇಹ ಕಲ್ಪ್ಯತೇ" ಎಂಬೀ ಪ್ರಮಾಣಗಳಿಂದ ಪರಿಶುದ್ಧವಾದ ಆತ್ಮಸ್ವರೂಪವುಳ್ಳವನಾಗಿರುವುದರಿಂದ ಎಂದರೆ ಗುಣ ಜನ್ಮ ಕರ್ಮದೋಷಾದಿಗಳಿಂದ ಸಂಬಂಧಿಸದ ಸ್ವಭಾವವುಳ್ಳವನು.

( ವಿ ॥ ಭಾ ) ಈ ಪ್ರಕಾರವಾಗಿ ಇವನೂ ಆತ್ಮನಾಗಿರುವುದರಿಂದ ಸಂಸಾರಿಯಾದ ಜೀವಾತ್ಮನಂತೆ ಇವನಿಗೂ ಶರೀರವಾದ ಚೇತನಾಚೇತನ ಸಂಬಂಧವಿರುವುದರಿಂದ ದೋಷಗಳುಂಟಾಗುವುವೋ ? ಎಂದರೆ ಅದು ಇಲ್ಲವೆನ್ನುತ್ತಾರೆ. ಪೂತಾತ್ಮಾ–ಪರಿಶುದ್ಧ ಸ್ವಭಾವವುಳ್ಳವನು, ಜೀವ ಪರಮಾತ್ಮರಿಬ್ಬರಿಗೂ ಶರೀರ ಸಂಬಂಧವು ಸಮವಾಗಿದ್ದರೂ ಜೀವಾತ್ಮನೊಬ್ಬನೇ ಕರ್ಮಫಲಗಳನ್ನನುಭವಿಸಿ ಪ್ರಯಾಸವನ್ನು ಹೊಂದುತ್ತಾನೆ. ಪರಮಾತ್ಮನೋ ಈ ಜೀವಾತ್ಮನಿಗೆ ಕರ್ಮಫಲಾನುಭವವನ್ನು ಮಾಡಿಸಿಕೊಂಡು ತಾನು ಸ್ವತಂತ್ರನಾಗಿರುವನು. ಅದು ಹೇಗೆಂದರೆ ? ಒಬ್ಬ ಮನುಷ್ಯನು ಮತ್ತೊಬ್ಬನನ್ನು ಬೆತ್ತದಿಂದ ಹೊಡೆದರೆ ಆ ಬೆತ್ತದ ಸಂಬಂಧವು ಇಬ್ಬರಿಗೂ ಸಮವಾಗಿದ್ದರೂ ಹೊಡೆಯಲ್ಪಟ್ಟವನು ಮಾತ್ರವೇ ದುಃಖಿಸುತ್ತಾನಲ್ಲದೆ ಹೊಡೆಯುವಂತವನಿಗೆ ಯಾವ ದುಃಖವೂ

ಇಲ್ಲವಷ್ಟೆ? ಅದರಂತೆ ಇಲ್ಲಿ ಇಬ್ಬರಿಗೂ ಶರೀರ ಸಂಬಂಧವು ಸಮವಾಗಿದ್ದರೂ ಕರ್ಮ ಬಂಧದಲ್ಲಿ ಸಿಕ್ಕಿದವನಾದ ಜೀವಾತ್ಮನಿಗೆ ಮಾತ್ರವೆ ದುಃಖ ಸಂಬಂಧವೆಂತಲೂ ಪರಮಾತ್ಮನಿಗೆ ಅದು ಇಲ್ಲವೆಂತಲೂ ತಿಳಿಯಬೇಕು. ಈ ಪ್ರಕಾರವೇ "ಜಹಾತ್ಯೇನಾಂ ಭುಕ್ತ ಭೋಗಾಮಜೋನ್ಯಃ ‖ ಅನಶ್ನನ್ನ್ಯೋ ಅಭಿಚಾ ಕಶೀತಿ ‖ ಏಷ ಸರ್ವ ಭೂತಾನ್ತರಾತ್ಮಾ ಅಪಹತ ಪಾಪ್ಮಾ ದಿವ್ಯೋ ದೇವ ಏಕೋ ನಾರಾಯಣಃ ‖ ನಮಾಂ ಕರ್ಮಾಣಿ ಲಿಂಪಂತಿ ‖ ಪಶ್ಯ ದೇವಸ್ಯ ಮಾಹಾತ್ಮ್ಯಂ ಮಹಿಮಾನಂಚ ನಾರದ | ಶುಭಾ ಶುಭೈಃ ಕರ್ಮಭಿರ್ಯೋನ ಲಿಪ್ಯತಿ ಕದಾಚನ ‖ ಸೂ ‖ ಸಂಭೋಗ ಪ್ರಾಪ್ತಿರಿತಿಚೇನ್ನ ವೈಶೇಷ್ಯಾತ್" ಇತ್ಯಾದಿ ಶ್ರುತಿ ಸ್ಮೃತಿ ಸೂತ್ರಗಳು ಪರಮಾತ್ಮನಿಗೂ ಜೀವಾತ್ಮನಿಗೂ ಶರೀರದಲ್ಲಿರುವಿಕೆ ಎಂಬ ಒಂದಂಶದಲ್ಲಿ ಸಾಮ್ಯವಿದ್ದರೂ ಜೀವಾತ್ಮನಿಗೆ ಕರ್ಮಫಲ ಭೋಕ್ತೃತ್ವವನ್ನೂ ಪರಮಾತ್ಮನಿಗೆ ಕರ್ಮಫಲ ಸಂಬಂಧರಾಹಿತ್ಯವನ್ನೂ ಹೇಳುವುವು.

(ಮ‖ ಭಾ) ಪೂತಶ್ಚಾ ಸಾವಾತ್ಮಾಚ – ಪರಿಶುದ್ಧವಾದ ಸ್ವಭಾವವುಳ್ಳವನು. ‖ ೧೦ ‖

## (೧೧ನೇ ನಾಮವು) ಪರಮಾತ್ಮಾ,
## ಓಮ್‖ ಪರಮಾತ್ಮನೇನಮಃ.

(ಶಂ‖ ಭಾ) ಕಾರ್ಯಕಾರಣ ವಿಲಕ್ಷಣವಾದ ನಿತ್ಯ ಶುದ್ಧ ಬುದ್ಧ ಮುಕ್ತ ಸ್ವಭಾವವುಳ್ಳವನಾಗಿರುವುದರಿಂದ ಪರಮಾತ್ಮಾ ಎನ್ನಲ್ಪಡುವನು.

(ವಿ‖ ಭಾ) ಸಕಲ ಭೂತಗಳಿಗೂ ಇವನು ಹೇಗಾಪರೆ ಆತ್ಮನಾಗಿರುವನೊ ಆ ಪ್ರಕಾರ ಇವನಿಗೂ ಬೇರೊಂದು ಆತ್ಮವುಂಟೊ? ಎಂದರೆ ಅದಿಲ್ಲವೆಂದು ಮುಂದೆ ಹೇಳುತ್ತಾರೆ. ಪರಮಾತ್ಮಾ–ತನಿಗೆ ಬೇರೊಂದು ಆತ್ಮವಿಲ್ಲದವನು. ಇದಕ್ಕೂ "ಆತ್ಮೇಶ್ವರಂ ‖ ತಸ್ಮಾದ್ಧಾನ್ಯಂ ನಪರಃ ಕಿಂಚನಾಸ ‖ ನ ತತ್ಸಮಶ್ಚಾ ಭ್ಯಧಿಕಶ್ಚ ದೃಶ್ಯತೆ ‖ ಯಸ್ಮಾತ್ಪರಂ ನಾಪರಮಸ್ತಿ ಕಿಂಚಿತ್ ‖ ನಪರಂ ಪುಂಡರೀಕಾಕ್ಷಾ ದ್ದೃಶ್ಯತೇ ಭರತರ್ಷಭ| ಪರಂಹಿ ಪುಂಡರೀಕಾಕ್ಷಾ ನ್ನಭೂತಂ ನಭವಿಷ್ಯತಿ ‖ ನದೈವಂ ಕೇಶವಾತ್ಪರಂ ‖ ಯಸ್ಮಾತ್ಪರಸ್ಮಾ ತ್ಪುರುಷಾ ದನಂತಾ ದನಾದಿ ಮಧ್ಯಾದಧಿಕಂ

ನಕಿಂಚಿತ್ ॥ ಮತ್ತಃ ಪರತರಂ ನಾನ್ಯ ತ್ಕಿಂಚಿ ದಸ್ತಿ ॥ ಪರಂಹ್ಯಮೃತ ಮೇತಸ್ಮಾ ದ್ವಿಶ್ವ ರೂಪಾ ನ್ನವಿದ್ಯತೇ ॥ ಪರಃ ಪರಾಣಾಂ ಪರಮಃ ಪರ ಮಾತ್ಮಾ" ಇತ್ಯಾದಿ ಪ್ರಮಾಣಗಳನೇಕಗಳಿರುವುವು ॥ ೧೧ ॥

(ತನಿಗೆ ಬೇರೊಂದು ಪ್ರಭುವಿಲ್ಲದೆ ತನಿಗೆ ತಾನೇ ಈಶ್ವರನಾದವನನ್ನು. ಅವನಿಗಿಂತಲೂ ಬೇರೊಂದು ಪರವಸ್ತುವಿಲ್ಲವು ಅವನಿಗೆ ಸಮಾನವಾದವನೊ ಅಥವಾ ಅಧಿಕನಾದವನೊ ಕಾಣಲ್ಪಡಲಿಲ್ಲವು ಯಾವ ಪರಮಪುರುಷನಿಗಿಂತಲೂ ಸಮವಾದದ್ದೊ ಅಥವಾ ಅಧಿಕವಾದದ್ದೊ ಯಾವದೊಂದೂ ಕಾಣಲ್ಪಡಲಿಲ್ಲವು ಪುಂಡರೀಕಾಕ್ಷನಿಗಿಂತಲೂ ಪರ (ಶ್ರೇಷ್ಠ) ವಾದ ವಸ್ತುವು ಬೇರೊಂದು ಕಾಣಲ್ಪಡುವುದಿಲ್ಲವು, ಪುಂಡರೀಕಾಕ್ಷನಿಗಿಂತಲೂ ಶ್ರೇಷ್ಠವಾದದ್ದು ಹಿಂದೇ ಉಂಟಾಗಲಿಲ್ಲವು, ಮುಂದೆಯೂ ಉಂಟಾಗಲಾರದು. ಕೇಶವನಿಗಿಂತಲೂ ಬೇರೊಂದು ಶ್ರೇಷ್ಠವಾದ ದೈವವಿಲ್ಲವು ಆದ್ಯಂತ ಶೂನ್ಯನಾದ ಯಾವ ಪರಮಪುರುಷನಿಗಿಂತಲೂ ಅಧಿಕವಾದದ್ದು ಯಾವದೂ ಇರಲಾರದು ನನಿಗಿಂತಲೂ ಶ್ರೇಷ್ಠವಾದದ್ದು ಯಾವದೂ ಇಲ್ಲವು ಎಲೈ ಅರ್ಜುನನೇ ವಿಶ್ವರೂಪನಾದ ಇವನಿಗಿಂತಲೂ ನಿತ್ಯವಾದ ಬೇರೊಂದು ಪರವಸ್ತು ವಿಲ್ಲವು ಆತ್ಮವರ್ಗಕ್ಕೆಲ್ಲವೂ ಶ್ರೇಷ್ಠನಾದ ತನ್ನಂತೆ ಬೇರೊಂದು ವಸ್ತುವಿಲ್ಲದೆ ಪ್ರಕಾಶಿಸುವಂತವನು ಪರಮಾತ್ಮನು. ಎಂದೀ ಪ್ರಮಾಣಾರ್ಥವು)

## (೧೨ನೇ ನಾಮವು) ಮುಕ್ತಾನಾಂಪರಮಾಗತಿಃ, ಓಮ್॥ ಮುಕ್ತಾನಾಂಪರಮಾಗತಯೇನಮಃ.

(ಶಂ॥ ಭಾ) "ಮಾಮುಪೇತ್ಯತು ಕೌಂತೇಯ ಪುನರ್ಜನ್ಮ ನವಿದ್ಯತೇ" ಎಂಬ ಗೀತಾವಚನಾನುಸಾರವಾಗಿ ಮುಕ್ತರಾದವರಿಗೆ (ಮೋಕ್ಷವನ್ನು ಹೊಂದಿದವರಿಗೆ) ಸರ್ವೋತ್ತಮವಾದ ಹೊಂದತಕ್ಕ ದೇವತೆಯಾಗಿರುವುದರಿಂದ "ಮುಕ್ತಾನಾಂ ಪರಮಾಗತಿಃ" ಎನ್ನಲ್ಪಡುವನು.

(ಎಲೈ ಅರ್ಜುನನೇ ನನ್ನನ್ನು ಹೊಂದಿದಮೇಲೆ ಅವರಿಗೆ ಪುನರ್ಜನ್ಮವಿರುವುದಿಲ್ಲವೆಂದು ಗೀತಾವಚನಾರ್ಥವು.)

(ವಿ॥ ಭಾ) ಮುಂದಿನ ನಾಮದಿಂದ ಈ ಪ್ರಕಾರವಾಗಿ ಸರ್ವಶೇಷಿಯಾದ ಅವನೇ ಪರಮಪ್ರಾಪ್ಯನೆನ್ನುತ್ತಾರೆ. ಪ್ರಕೃತಿ ಬಂಧರೂಪವಾದ 'ಅವಿದ್ಯಾ, ಕರ್ಮ, ವಾಸನಾ, ರುಚಿ, ಪರಿಪಾಕ' ವೆಂಬ ಈ ಐದನ್ನು ಚನ್ನಾಗಿ ತೊಲಗಿಸಿಕೊಂಡವರು ಮುಕ್ತರೆನ್ನಲ್ಪಡುವರು. ಇಂತವರಿಗೆ ಪರಮಗತಿಯಾದವನು "ಮುಕ್ತಾನಾಂ ಪರಮಾಗತಿಃ" ಎನ್ನಲ್ಪಡು

ವನು. ಈ ಪ್ರಕಾರವಾಗಿ " ತತ್ಸುಕೃತ ದುಷ್ಕೃತೇ ವಿಧೂನತೆ ‖ ಅಶ್ವ ಇವ ರೋಮಾಣಿ ವಿಧೂಯ ಪಾಪಂ ‖ ನಾಮ ರೂಪೇ ವಿಹಾಯ ‖ ತದಾ ವಿದ್ವಾನ್ ಪುಣ್ಯ ಪಾಪಾ ದ್ವಿಮುಕ್ತಃ ‖ ಜ್ಞಾತ್ವಾ ದೇವಂ ಮುಚ್ಯತೇ ಸರ್ವಪಾಶೈಃ " ಇತ್ಯಾದ್ಯನೇಕ ಶ್ರುತಿಗಳಿರುವುವು

(ಆ ಆತ್ಮವಸ್ತುವು ಪುಣ್ಯಪಾಪಗಳನ್ನು ಉದರಿಸುವುದು ಕುದರೆಯು ತನ್ನ ರೋಮಗಳನ್ನು ಉದರಿಸುವಂತೆ ಪಾಪವನ್ನು ಉದರಿ ನಾಮ ರೂಪಗಳನ್ನು ಬಿಟ್ಟು ಆವಾಗ ಬ್ರಹ್ಮಜ್ಞಾನಿಯಾದವನು ಪುಣ್ಯ ಪಾಪಗಳಿಂದ ಬಿಡಲ್ಪಟ್ಟವನಾಗಿ. ದೇವನನ್ನು ತಿಳಿದು ಸಕಲ ಪಾಶಗಳಿಂದ ಬಿಡಲ್ಪಡುವನು. ಇತ್ಯಾದ್ಯರ್ಥಗಳನ್ನು ಬೋಧಿಸುವ ಈ ಪ್ರಮಾಣಗಳು ಸಂಸಾರಬಂಧದಿಂದಬಿಡಲ್ಪಟ್ಟು ಮುಕ್ತರಾದ ಚೇತನರನ್ನುಹೇಳುವುವು)

ಈ ಪ್ರಕಾರವಾಗಿ ಸಂಸಾರ ಬಂಧದಿಂದ ಬಿಡಲ್ಪಟ್ಟವರಿಗೆ ಜ್ಞಾನಾನಂದ ಘನಸ್ವರೂಪವೂ ಸತ್ಯ ಸಂಕಲ್ಪತ್ವವೇ ಮೊದಲಾದ ಗುಣಾಷ್ಟಕವೂ ಭೋಗವೂ ಪರಮಾತ್ಮನೊಡನೆ ಸಮಾನವಾಗಿರುವುದೆಂತಲೂ ಶುದ್ಧ ಸತ್ವಮಯವಾದ ಶರೀರವು ಲಭಿಸುವುದೆಂತಲೂ " ದಿವ್ಯೇನ ಚಕ್ಷುಷಾ ಮನಸೈತಾನ್ಕಾಮಾನ್ ಪಶ್ಯನ್ ರಮತೆ‖ ನಿರಂಜನಃ ಪರಮಂ ಸಾಮ್ಯಮುಪೈತಿ ‖ ಮಮ ಸಾಧರ್ಮ್ಯಮಾ ಗತಾಃ ‖ ಸಏಕಧಾ ಭವತಿ ದ್ವಿಧಾ ಭವತಿ ‖ ಜಕ್ಷತ್ಕ್ರೀಡನ್ ರಮಮಾಣಃ ‖ ಕಾಮಾನ್ನೀ ಕಾಮರೂಪ್ಯನುಸಂಚರನ್ ‖ ತಂ ಬ್ರಹ್ಮ ಗಂಧಃ ಪ್ರವಿಶತಿ ‖ ತಂ ಬ್ರಹ್ಮ ರಸಃ ಪ್ರವಿಶತಿ‖ ತಂ ಬ್ರಹ್ಮಾಲಂಕಾರೇಣಾಲಂ ಕುರ್ವಂತಿ‖ ಏವಮಪ್ಯುಪನ್ಯಾಸಾ ತ್ಪೂರ್ವಭಾವಾ ದವಿರೋಧಂ ಬಾದರಾಯಣಃ ‖ " ಇತ್ಯಾದಿಗಳಲ್ಲಿ ಸಿದ್ಧಾಂತಪಡಿಸಲ್ಪಟ್ಟಿರುವುದು.

(ಈ ಪ್ರಮಾಣಾರ್ಥವು. ದಿವ್ಯ ನೇತ್ರವಾದ ಮನಸ್ಸಿನಿಂದ ಈ ಸಮಸ್ತ ಪುರುಷಾರ್ಥಗಳನ್ನು ಕಂಡನುಭವಿಸುವನು. ಹೇಯ ಸಂಬಂಧಗಳನ್ನು ಬಿಟ್ಟು ಪರಮಾತ್ಮನೊಡನೆ ಪರಮಸಾಮ್ಯವನ್ನು ಹೊಂದುವನು ನನ್ನ ಸಮಾನ ಧರ್ಮತ್ವವನ್ನು ಹೊಂದಿದವರು. ಆವನು ಏಕಪ್ರಕಾರವಾಗಿ ಆಗುತ್ತಾನೆ ದ್ವಿಪ್ರಕಾರನಾಗುತ್ತಾನೆ ಭುಜಿಸಿಯೂ ಕ್ರೀಡಿಸಿಯೂ ರಮಿಸಿಯೂ ಇರುವನು. ಇಷ್ಟವಾದ ಅನೇಕ ರೂಪಗಳನ್ನು ಪರಿಗ್ರಹಿಸಿ ಪರಮಾತ್ಮನನ್ನನುಸರಿಸುತಾ ಸರ್ವ ಕಾಮಗಳನ್ನು ಹೊಂದುತ್ತಾ ಇರುವನು ಅವನನ್ನು ಬ್ರಹ್ಮಗಂಧವು ಪ್ರವೇಶಿಸುವುದು. ಅವನನ್ನು ಬ್ರಹ್ಮ ರಸವು ಪ್ರವೇಶಿಸುವುದು. ಅವನನ್ನು ಬ್ರಹ್ಮಾಲಂಕಾರದಿಂದ ಅಲಂಕರಿಸುವರು ಈ ಪ್ರಕಾರವಾಗಿಯೂ ಉಪನ್ಯಾಸ ಮಾಡಲ್ಪಡುವುದರಿಂದ ಮೊದಲಿನಂತೆ ಶರೀರವುಂಟಾಗಿರುವುದರಲ್ಲಿ ವಿರೋಧವಿಲ್ಲವೆಂದು ಬಾದರಾಯಣರು ಹೇಳುವರು.)

ಇಲ್ಲಿ ಮುಕ್ತರಿಗೆ ಎಂಬ ಬಹುವಚನದಿಂದ ಅವರಲ್ಲಿ ಪರಸ್ಪರಭೇದ ದಿಂದ ಅನೇಕರಾಗಿರುವರೆಂಬ ಅರ್ಥವು ಸ್ಪಷ್ಟವಾಗುವುದು ಈ ಪ್ರಕಾರವೇ "ಪರಾಮೃತಾ ತ್ಪರಿಮುಚ್ಯಂತಿ ಸರ್ವೇ ‖ ಮಹಿಮಾನಸ್ಸಚಂತೆ ‖ ಸಾಧರ್ಮ್ಯಮಾಗತಾಃ ‖ ಮಾಮುಪಯಾನ್ತಿತೇ" ಎಂಬದಾಗಿ ಮುಕ್ತಾನೇಕತ್ವವನ್ನು ಹೇಳಲಿಚ್ಛೈಸಿಯೇ ಶ್ರುತಿಗಳಲ್ಲಿ ಬಹುವಚನ ಪ್ರಯೋಗವೂ ಕಾಣಲ್ಪಡುವದು.

(ಸರ್ವರಿಗೂ ಪರನಾಗಿರುವ ನಿತ್ಯನಾದ ಪರಮಾತ್ಮನಿಂದ ಬಿಡುಗಡೆಯನ್ನು ಹೊಂದುವನು. ಮಹಿಮೆಯನ್ನು ಹೊಂದಿದವರಾಗಿ ಪರಮಾತ್ಮನನ್ನು ಸೇರುವರು. ಪರಮಾತ್ಮನೊಡನೆ ಸಮಾನ ಧರ್ಮವನ್ನು ಹೊಂದುವರು. ಅವರು ನನ್ನನ್ನು ಹೊಂದುವರು ಎಂದು ಈ ಮೇಲಿನ ಪ್ರಮಾಣಾರ್ಥವು)

ಪರಮಪುರುಷನನ್ನು "ಸಾಕ್ಷೀ" ಎಂಬದಾಗಿ ಮುಂದೆ ಹೇಳುವುದರಿಂದಲೂ "ಮುಕ್ತಾನಾಂ ಪರಮಾಗತಿಃ" (ಮುಕ್ತರಿಗೆ ಗತಿ) ಎಂಬದಾಗಿ ಇಲ್ಲಿ ಹೇಳುವುದರಿಂದಲೂ ಜೀವ ಪರಮಾತ್ಮ ಭೇದವು ಸುಸ್ಪಷ್ಟವಾಗಿರುವುದು. ಇದಕ್ಕೂ "ಜುಷ್ಟಂ ಯಥಾಪಶ್ಯ ತ್ಯನ್ಯ ಮಿಶಮಸ್ಯ ಮಹಿಮಾನಮಿತಿ ವೀತ ಶೋಕಃ ‖ ಪೃಥಗಾತ್ಮಾನಂ ಪ್ರೇರಿತಾರಂಚ ಮತ್ವಾ ‖ ಪುರುಷಮುಪೈತಿ ದಿವ್ಯಂ ‖ ಸಹ ಬ್ರಹ್ಮಣಾ ವಿಪಶ್ಚಿತಾ ‖ ಪರಂಜ್ಯೋತಿರುಪಸಂಪದ್ಯ ‖ ಮುಕ್ತೋಪಸೃಪ್ಯವ್ಯಪದೇಶಾಚ್ಚ" ಇತ್ಯಾದ್ಯನಂತ ಶ್ರುತಿ ಸೂತ್ರ ಪ್ರಮಾಣಗಳಿರುವುವು.

(ಸಕಲಗುಣ ಸಂಪನ್ನನೂ ತನಿಗಿಂತಲೂ ಅನ್ಯಗಳಾದ ಸಮಸ್ತ ವಸ್ತುಗಳಿಗಿಂತಲೂ ವಿಲಕ್ಷಣನೂ ತನಿಗೇ ಶೇಷಿಯೂ (ಸ್ವಾಮಿಯೂ) ಆದ ಪರಮಾತ್ಮನನ್ನು ಕಂಡವನಾಗಿ ಶೋಕಗಳೆಲ್ಲವನ್ನು ತೀರಿಸಿಕೊಂಡು ಅವನ ಮಹಿಮೆಯನ್ನು ಹೊಂದುವನು. ಪ್ರಕೃತಿ ವಿಯುಕ್ತನಾದ ಆತ್ಮನನ್ನೂ ಅವನಿಗೆ ನಿಯಾಮಕನಾದ ಪರಮಾತ್ಮನನ್ನೂ ಬೇರೆಯಾಗಿ ತಿಳಿದು. ಪರಮಪುರುಷನನ್ನು ಹೊಂದುತ್ತಾನೆ. ವಿಧ ವಿಧವಾಗಿ ನೋಡುತಲಿರುವ ಜ್ಞಾನಶಾಲಿಯಾದ ಪರಮಾತ್ಮನೊಡನೆ ಕೂಡ ಪರಂಜ್ಯೋತಿಸ್ಸಾದ ಪರಮಾತ್ಮನನ್ನು ಹೊಂದಿ ಮುಕ್ತರು ಹೊಂದಿ ಸೇರುವಂತಹ ಪರಮಾತ್ಮ ಸ್ವರೂಪವನ್ನು ಶೋಧಿಸುವುದರಿಂದಲೂ ಎಂದು ಈ ಮೇಲಿನ ಪ್ರಮಾಣಾರ್ಥವು ಈ ಪ್ರಮಾಣಗಳಲ್ಲಿ ಹೊಂದಲ್ಪಡತಕ್ಕವನಿಗೂ ಹೊಂದುವಂತವನಿಗೂ ಭೇದವು ಸಿದ್ಧವಾಗಿರುವುದರಿಂದ ಜೀವ ಪರಮಾತ್ಮರ ಭೇದವನ್ನೇ ಈ ಪ್ರಮಾಣಗಳು ಉಪಪಾದಿಸುವುವೆಂದರಿಯಬೇಕು.)

ಈ ಸಂದರ್ಭವು "ಸಹಿ ನಾರಾಯಣೋಜ್ಞೇಯ ಸ್ಸರ್ವಾತ್ಮಾ ಪುರುಷೋಹಿಸಃ | ನಲಿಪ್ಯತೆ ಮಲೈಶ್ಚಾಪಿ ಪದ್ಮಪತ್ರ ಮಿವಾಂಭಸಾ ‖

ಕರ್ಮಾತ್ಮಾತ್ವಪರೋಯೋಽಸೌ ಮೋಕ್ಷಬಂಧೈಃ ಸ್ಸಯುಜ್ಯತೇ | ಸಸಪ್ತದಶಕೇನಾಪಿ ರಾಶಿನಾ ಯುಜ್ಯತೇ ತುಸಃ" ಎಂಬದಾಗಿ ಮೋಕ್ಷಧರ್ಮದಲ್ಲಿ ಸ್ಪಷ್ಟವಾಗಿರುವುದು.

(ಸರ್ವಾಂತರ್ಯಾಮಿಯಾಗಿ ಸರ್ವವಸ್ತು ಸಂಪೂರ್ಣನಾಗಿರುವವನನ್ನು ನಾರಾಯಣನೆಂದರಿಯಬೇಕು. ಅವನು ತಾನೇ ತಾವರೆ ಯೆಲೆಯಲ್ಲಿನ ನೀರಿನಂತೆ ಕರ್ಮಗಳಿಂದ ಲೇಪಿಸಲ್ಪಡಲಾರನು ಅವನಿಗಿಂತಲೂ ನಿಹೀನನಾಗಿ ಕರ್ಮವಶ್ಯನಾಗಿರುವ ಜೀವಾತ್ಮನೆ ಮೋಕ್ಷಬಂಧಗಳೆಂಬೀ ಯೆರಡಕ್ಕೂ ವಿಷಯನಾಗುವನು ; ಇವನು ಪ್ರಕೃತಿಯೇ ಮೊದಲಾದ ೧೭ ತತ್ವಪರಿಣಾಮವಾದ ಶರೀರ ಸಂಬಂಧವುಳ್ಳವನಾಗುವನು. ಎಂದೀ ಪ್ರಮಾಣಾರ್ಥವು.)

ಇದರಿಂದ ಸತ್ಯವಾದ ಅಥವಾ ಸುಳ್ಳಾದ ಉಪಾಧಿಯಿಂದ ಬ್ರಹ್ಮವು ಮುಚ್ಚಲ್ಪಟ್ಟು ಘಟಾಕಾಶದಂತೆ ಭೇದ ವ್ಯವಹಾರಕ್ಕೆ ವಿಷಯವಾಗುತ ಸಂಸಾರಿಯಾಗುವುದೆಂತಲೂ ಮೋಕ್ಷದಲ್ಲಿ ಜೀವ ಪರಮಾತ್ಮರಿಗೆ ಭೇದವೇ ಇಲ್ಲವೆಂತಲೂ ಹೇಳುವ ಮತವು ಶಾಸ್ತ್ರದಿಂದಲೆ ತಿರಸ್ಕರಿಸಲ್ಪಟ್ಟಿರುವಂತೆ ಕಂಡು ಬರುವುದು. ಈ ಪ್ರಕಾರವಾಗಿ ಪರಮಾತ್ಮನೊಡನೆ (ಅತ್ಯಂತ) ಪರಮಸಾಮ್ಯ ವಿರುವುದರಿಂದ ಜೀವರು ಭಿನ್ನ ಭಿನ್ನರಾಗಿದ್ದರೂ "ಬ್ರಹ್ಮವೇದ ಬ್ರಹ್ಮೈವ ಭವತಿ " ಬ್ರಹ್ಮವನ್ನು ತಿಳಿದವನು ಬ್ರಹ್ಮವೇ ಆಗುತ್ತಾನೆಂಬ ಅಭೇದವಾದಗಳೂ ಯುಕ್ತಗಳೆಂತಲೇ ತಿಳಿಯಬೇಕು. ಮತ್ತು ಜೀವ ಪರಮಾತ್ಮರು ಶರೀರ ಶರೀರಿಗಳಾಗಿರುವುದರಿಂದ ಭೇದವಿಲ್ಲದ ಏಕ ವಸ್ತುವಿನಂತೆ ವ್ಯವಹರಿಸಬಹುದು. ಶುದ್ಧವಾಗಿ ಭೇದವಿಲ್ಲವೆನ್ನುವ ಪಕ್ಷದಲ್ಲಿ ಮುಕ್ತಿದಶೆಯಲ್ಲಿ ಭೇದವನ್ನೂ ಸಾಮ್ಯವನ್ನೂ ಹೇಳುವ ವಾಕ್ಯಗಳಿಗೆ ಅರ್ಥವರ್ಣನವು ಅಸಾಧ್ಯದಲ್ಲಿ ಬರುವುದಷ್ಟೆ.

ಉಪಾಧಿವಶದಿಂದ ಭೇದವು ಬಂದಿರುವುದೆನ್ನತಕ್ಕವರು ಮುಕ್ತಸ್ವರೂಪಕ್ಕೆ ಭಂಗವನ್ನಂಗೀಕರಿಸ ಬೇಕಾಗಿರುವುದರಿಂದ ಅಂತವರಿಗೆ ಮೋಕ್ಷವೂ ಪುರುಷಾರ್ಥವಾಗಲಾರದು. ಮೋಕ್ಷದಶೆಯಲ್ಲಿ ಭೇದವಾದವೂ ಸಂಗತವಾಗಲಾರದು. ಇಂತಹ ಪರಮ ಸಾಮ್ಯವನ್ನು ತಾನೇ ಮೋಕ್ಷದಲ್ಲಿ ಅಭೇದವೆಂದು ಶ್ರೀವಿಷ್ಣುಪುರಾಣದಲ್ಲಿ " ತದ್ಭಾವ ಭಾವಮಾಪನ್ನಸ್ತದಾಸೌ ಪರಮಾತ್ಮನಾ | ಭವತ್ಯಭೇದೀ " ಎಂಬದಾಗಿ ವ್ಯಾಖ್ಯಾನ ಮಾಡಿರುತ್ತಾರೆ. ಇಲ್ಲಿ " ತದ್ಭಾವ ಭಾವಮಾಪನ್ನಃ " ಎಂಬುವುದಕ್ಕೆ, ತತ್–ಆ ಪರಮಾತ್ಮನ, ಭಾವಭಾವಂ–ಜ್ಞಾನ ಶಕ್ತ್ಯಾದಿಗಳೆಂಬ

ಯಾವ ಸ್ವಭಾವಗಳುಂಟೊ; ಅವುಗಳನ್ನು, ಆಪನ್ನ ಃ-ಆವಿರ್ಭಾವದಿಂದ ಹೊಂದಿದವನೆಂದರ್ಥವು. ಇದರಿಂದ ಪರಮಾತ್ಮನಿಗೆ ಸಮಾನವಾದ ಗುಣಗಳು ಜೀವಾತ್ಮನಿಗೆ ಆವಿರ್ಭವಿಸುವುವೆಂದು ಹೇಳಿದಂತೆ ಆಯಿತು ಇಲ್ಲಿ ಭೇದವಿಲ್ಲವೆಂದು ಸಿದ್ಧಾಂತವಾಗುವ ಪಕ್ಷದಲ್ಲಿ ಯರಡನೆ ಭಾವ ಶಬ್ದವು ನಿಷ್ಫಲವಾಗುವುದು. ಮತ್ತು ಮೋಕ್ಷದಲ್ಲಿ ಭೇದವಿಲ್ಲವೆನ್ನುವುದಕ್ಕೆ ದೇವನೆಂತಲೂ ಮನುಷ್ಯನೆಂತಲೂ ಹೇಳುವ ವೈಷಮ್ಯವು (ಭೇದವು) ಆತ್ಮನಲ್ಲಿ ಇಲ್ಲವೆಂಬುವ ಅರ್ಥವನ್ನು ಕೂಡ "ದೇವಾದಿಭೇದೇಽಪಧ್ವಸ್ತೇ ನಾಸ್ತ್ಯೇವಾ ವರಣೋಹಿಸಃ" ಎಂಬದಾಗಿ ಶ್ರೀವಿಷ್ಣು ಪುರಾಣದಲ್ಲಿ ಬೋಧಿಸಿರುತ್ತಾರೆ.

(ದೇವ ಮನುಷ್ಯಾದಿ ಭೇದಗಳು ಹೋದಮೇಲೆ ಆತ್ಮಗಳಿಗೆ ತಾರತಮ್ಯವೇ ಇಲ್ಲವು. ಏತಕ್ಕೆಂದರೆ ಅವು ಶರೀರವನ್ನಾಶ್ರಯಿಸಿ ಆತ್ಮನಿಗೆ ಆವರಣ (ಮುಚ್ಚಳ) ವಾಗಿ ಯಲ್ಲವೇ ಇರುವುದು ಎಂದು ಶ್ರೀವಿಷ್ಣು ಪುರಾಣ ವಚನಾರ್ಥವು.)

ಮತ್ತು ಇಲ್ಲಿ 'ಮುಕ್ತರಿಗೆ ಗತಿ' ಎಂಬುವುದರಿಂದ ಈ ಗತಿ ಶಬ್ದವು ಅಪೇಕ್ಷಿಸಿ ಹೊಂದಲ್ಪಡುವದನ್ನು ಹೇಳುವುದು ಇದರಿಂದ ಪರಮಾತ್ಮನಿಗೂ ಜೀವಾತ್ಮನಿಗೂ ಶೇಷ ಶೇಷಿ ಭಾವವು ತೋರಿಸಲ್ಪಟ್ಟಂತೆ ಆಗುವುದು. ಈ ಪ್ರಕಾರವೇ "ಏತಮಾನಂದ ಮಯ ಮಾತ್ಮಾನ ಮುಪಸಂಕ್ರಮ್ಯ ‖ ಅನು ಸಂಚರರ್ ‖ ಯೇನ ಯೇನ ಧಾತಾ ಗಚ್ಛತಿ ತೇನ ತೇನ ಸಹ ಗಚ್ಛತಿ ತದ್ಯಥಾ ತರುಣ ವತ್ಸಾ ವತ್ಸಂ ವತ್ಸೋವಾ ಮಾತರಂ ಛಾಯಾವಾ ಸತ್ವಮನು ಗಚ್ಛೇ ತ್ತಥಾ ಪ್ರಕಾರಂ" ಎಂಬದಾಗಿ ಶ್ರುತಿಗಳಲ್ಲಧೀತವಾಗಿರುವದು.

(ಆನಂದ ಮಯನಾದ ಈ ಆತ್ಮನನ್ನು ಸಮೀಪದಲ್ಲಿ ಸೇರಿ ಅನುಸರಿಸಿ ಸಂಚರಿಸುತ. ಯಾವ ಯಾವ ರೀತಿಯಲ್ಲಿ ತನ್ನ ಸ್ವಾಮಿಯು ಹೋಗುವನೊ ಆಯಾ ಪ್ರಕಾರವಾಗಿ ಅವನೊಡನೆ ಹೋಗುವನು; ಅದು ಹೇಗೆಂದರೆ? ಯಳೇ ಕರುವಿನ ತಾಯಿಯಾದ ಹಸುವು ತನ್ನ ಕರುವನ್ನೂ ಆ ಕರುವು ತನ್ನ ತಾಯಿಯನ್ನೂ ಹೇಗಾದರೆ ಅನುಸರಿಸಿ ಹೋಗುವುದೋ ಅದರಂತೆ ಎಂದರಿಯಬೇಕು ನೆರಳು ಹೇಗಾದರೆ ತನ್ನನ್ನು ಅನುಸರಿಸಿ ಬರುವುದೊ ಅದರಂತೇ ಶುದ್ಧ ಸತ್ವನಾದ ಪರಮಾತ್ಮನನ್ನು ಅನುಸರಿಸುವನು ಅವನು ಹೇಗೆಯೊ ಅದರಂತೆಯೇ ಎಂದರ್ಥವು)

ಜೀವಾತ್ಮನ ಸ್ವಾಭಾವಿಕವಾದ ಶೇಷತ್ವವು ಜ್ಞಾನಾದಿ ಗುಣಗಳಂತೆ ಮೋಕ್ಷದಶೆಯಲ್ಲಿಯೂ ನಿವೃತ್ತವಾಗತಕ್ಕದ್ದಲ್ಲವು ಇದಕ್ಕೆ ಪ್ರತಿಬಂಧಕವಾದ ಅವಿದ್ಯಾದಿಗಳು ಕಳದುಹೋಗುವುದರಿಂದ ಮಾತ್ರ ಚನ್ನಾಗಿ

ಪ್ರಕಾಶಿಸುವುವು. ಈ ಪ್ರಕಾರವೇ " ಸ್ವೇನರೂಪೇಣಾಭಿ ನಿಷ್ಪದ್ಯತೆ ‖ ಯಥಾನ ಕ್ರಿಯತೆ ಜ್ಯೋತ್ಸ್ನಾ ಮಲ ಪ್ರಕ್ಷಾಳನಾನ್ಮಣೇಃ | ದೋಷ ಪ್ರಹಾಣಾನ್ನ ಜ್ಞಾನಮಾತ್ಮನಃ ಕ್ರಿಯತೆ ತಥಾ ‖ ಯಥೋದಪಾನ ಕರಣಾ ತ್ಕ್ರಿಯತೆ ನ ಜಲಾಂಬರಂ | ಸದೇವ ನೀಯತೆ ವ್ಯಕ್ತಿಮ ಸತಸ್ಸಂಭವಃ ಕುತಃ ‖ ತಥಾ ಹೇಯ ಗುಣಧ್ವಂ ಸಾದವ ಬೋಧಾದಯೋ ಗುಣಾಃ | ಪ್ರಕಾಶ್ಯಂತೆ ನಜನ್ಯಂತೆ ನಿತ್ಯಾ ಏವಾತ್ಮನೋಹಿತೇ ‖ ಜ್ಞಾನಂ ವೈರಾಗ್ಯ ಮೈಶ್ವರ್ಯಂ ಧರ್ಮಶ್ಚ ಮನುಜೇಶ್ವರ | ಆತ್ಮನೋ ಬ್ರಹ್ಮ ಭೂತಸ್ಯ ನಿತ್ಯಮೇತ ಚ್ಚತುಷ್ಟಯಂ ‖ ಸೂ ‖ ಸಂಪದ್ಯಾ ವಿರ್ಭಾವಸ್ಸ್ವೇನಶಬ್ದಾತ್ " ಇತ್ಯಾದಿ ಪ್ರಮಾಣಗಳು ಹೇಳುವುವು.

(ಸ್ವಸ್ವರೂಪದೊಡನೆ ಕೂಡಿ ಪ್ರಕಾಶಿಸುವನು. ರತ್ನಗತವಾದ ಬಾಹ್ಯ ಮಲಿನ್ಯವನ್ನು ಹೋಗಲಾಡಿಸುವುದಲ್ಲದೆ ಕಾಂತಿಯು ಹೇಗಾದರೇ ವುಂಟುಮಾಡಲ್ಪಡಲಾರದೊ; ಭಾವಿಯನ್ನು ತೋಡುವುದು ಮಾತ್ರವಲ್ಲದೆ ಹೇಗಾದರೆ ಜಲವನ್ನೂ ಆಕಾಶವನ್ನು ಮಾಡಲಾರನೊ ; ಆ ಪ್ರಕಾರವಾಗಿ ; ಇರುವಂಥಾ ಜ್ಞಾನಾದಿ ಗುಣಗಳ ಆವಿರ್ಭಾವವಲ್ಲದೇ ಇಲ್ಲದೇ ಇರುವುದಕ್ಕೆ ಉತ್ಪತ್ತಿ ಇಲ್ಲವು ಆದುದರಿಂದ ಮಣಿ ಜಲಾಕಾಶಗಳಂತೆ ಹೇಯ ಗುಣಗಳ ನಾಶದಿಂದ ಜ್ಞಾನಾದಿ ಗುಣಗಳು ಪ್ರಕಾಶಿಸುವುವಲ್ಲದೆ ಹುಟ್ಟಲಾರವು ಅದು ಏತಕ್ಕೆಂದರೆ ಅವು ಆತ್ಮನಿಗೆ ನಿತ್ಯಗಳಾಗಿರುವುವು. ಎಲೈ ರಾಜನೆ ? ಜ್ಞಾನ ವೈರಾಗ್ಯ ಐಶ್ವರ್ಯ ಧರ್ಮಗಳೆಂಬೀ ನಾಲ್ಕೂ ಬ್ರಹ್ಮ ಭೂತನಾದ ಆತ್ಮನಿಗೆ ನಿತ್ಯವಾಗಿರುವುವು. ಪರಮಾತ್ಮನೊಡನೆ ಸಾಧರ್ಮ್ಯ (ಸಮಾನ ಧರ್ಮವತ್ತ್ವ) ವುಂಟಾಗುವುದೆಂದು ಶ್ರುತಿಯು ಹೇಳುವುದರಿಂದ ಪರಮಾತ್ಮನನ್ನು ಇವನು ಸೇರುವಾಗ ಗುಣಾಷ್ಟಕ (ಯೆಂಟು ಗುಣಗಳು) ವೆಲ್ಲವೂ ಆವಿರ್ಭವಿಸುವುವು. ಎಂದೀ ಪ್ರಮಾಣಾರ್ಥವು.)

ಒಳ್ಳೇದು " ಸ್ವಾರಾಜ್ಯ ಮಧಿಗಚ್ಛತಿ ‖ ಸಸ್ವರಾಡ್ಭವತಿ " (ಸ್ವಾರಾಜ್ಯವನ್ನು ಹೊಂದುತ್ತಾನೆ, ಅವನು ಸ್ವರಾಟ್ಟಾಗುವನು) ಎಂಬೀ ಶ್ರುತಿಗಳನ್ನುದಾಹರಿಸಿ ಸೂತ್ರಕಾರರು " ಅತಏವಚಾನನ್ಯಾಧಿಪತಿಃ " ಎಂಬದಾಗಿ ಆತ್ಮನನ್ನು ಸ್ವತಂತ್ರನೆಂದು ನಿರ್ಣಯಿಸಿರುತ್ತಾರಷ್ಟೆ; ಈ ಪ್ರಕಾರವಾಗಿರುವಲ್ಲಿ ಪರತಂತ್ರನೆಂದು ಹೇಳುವುದು ಹೇಗೆ ? ಮತ್ತು ಪರತಂತ್ರನಿವನಾದರೆ ಅದು ಪುರುಷಾರ್ಥವಾಗುವುದೊ? ಎಂದರೆ ಇದು ಅನುಪಯುಕ್ತವಾದ ಪ್ರಶ್ನವು. ಅದು ಹೇಗೆಂದರೆ? "ಅನನ್ಯಾಧಿಪತಿಃ ' ಎಂಬ ಸೂತ್ರವು ತನಿಗೆ ಅಧಿಪತಿಯಾದ ಪರಮಪುರುಷನಲ್ಲದೆ ಬೇರೊಂದು ಕ್ಲೇಶ ಕರ್ಮಾದಿಗಳಿಂದ ಪಾರತಂತ್ರ್ಯ ರಹಿತನೆಂದು ಹೇಳುವುದಲ್ಲದೆ ಇವನಿಗೆ ಸ್ವಾಮಿಯೇ ಇಲ್ಲವೆನ್ನುವ ಅರ್ಥವನ್ನು ಹೇಳಲಿಲ್ಲವು. ಸ್ವಾಮಿಯೇ

ಇಲ್ಲವೆನ್ನುವುದು ಅರ್ಥವಾಗುವ ಪಕ್ಷದಲ್ಲಿ "ಅನಧಿಪತಿಃ" (ಅಧಿಪತಿ ಯಿಲ್ಲದವನು) ಎಂದು ಹೇಳಬೇಕಾಗುವುದಲ್ಲದೆ "ಅನನ್ಯಾಧಿಪತಿಃ" (ಬೇರೊಂದು ಅಧಿಪತಿ ಇಲ್ಲದವನೆಂದು) ಹೇಳಿರುವುದು ಅಸಂಗತವಾಗುವುದಷ್ಟೆ.

ಮತ್ತೂ, ಅತ್ಯಂತ ಪ್ರಿಯನಾದ ತನ್ನ ಪತಿಯಲ್ಲಿ ಅತ್ಯಂತ ಪರತಂತ್ರವಾಗಿರುವಿಕೆಯನ್ನು ಪುರುಷಾರ್ಥವಲ್ಲ ವೆನ್ನುವುದೂ ಉಚಿತವಲ್ಲವು. ರಾಜನಿಗೆ ಮಹಿಷಿಗಳು ಪತ್ನಿಗಳಾಗಿರುವುದರಲ್ಲಿ ಪರತಂತ್ರವಾಗಿರುವಿಕೆಯನ್ನು ಪುರುಷಾರ್ಥವೆಂದು ಪ್ರಾರ್ಥಿಸುವರಲ್ಲದೆ ಬೇರೆ ಇಲ್ಲವಷ್ಟೆ.

ಕಿಂಚ; ಇವನು ಗುಣಗಳಿಂದ ಪರಮಪುರುಷನಿಗೆ ಸಮಾನನಾಗಿರುವನೆಂಬುವುದನ್ನು ಕಂಡು ಇವನಿಗೆ ಪ್ರಾಧಾನ್ಯವನ್ನು ಹೇಳುವ ಸ್ಥಳದಲ್ಲಿಯೂ ಶೇಷ ಶೇಷಿ ಭಾವವನ್ನಲ್ಲದೆ ಇತರ ವಿಷಯದಲ್ಲಿ ಭೋಗ ಮಾತ್ರ ಸಾಮ್ಯವನ್ನು ಈ ಜೀವೇಶ್ವರ ರಿಬ್ಬರಿಗೂ "ಜಗದ್ವ್ಯಾಪಾರ ವರ್ಜಂ ॥ ಭೋಗಮಾತ್ರ ಸಾಮ್ಯ ಲಿಂಗಾಚ್ಚ ॥ ಪಾರತಂತ್ರ್ಯಂ ಪರೇ ಪುಂಸಿ ಪ್ರಾಪ್ಯ ನಿರ್ಗತ ಬಂಧನಃ । ಸ್ವಾತಂತ್ರ್ಯ ಮತುಲಂ ಪ್ರಾಪ್ಯತೇನೈವ ಸಹ ಮೋದತೇ" ಇತ್ಯಾದಿ ಶಾಸ್ತ್ರಗಳು ಹೇಳುವುವು.

(ಪ್ರಪಂಚದ ಸೃಷ್ಟಿ ಸ್ಥಿತಿ ಲಯಗಳೆಂಬ ವ್ಯಾಪಾರ ಮಾತ್ರವನ್ನು ವರ್ಜಿಸಿ ಕಡಿಮೆ ವಿಷಯದಲ್ಲಿ ಈ ಜೀವೇಶ್ವರರಿಗೆ ಸಾಮ್ಯವುಂಟು. ಭೋಗ ಮಾತ್ರದಲ್ಲಿ ಇವನೊಡನೆ ಅವನಿಗೆ ಸಾಮ್ಯವು ಪರಮಪುರುಷನಲ್ಲಿ ಪಾರತಂತ್ರ್ಯವನ್ನು ಹೊಂದಿ ಎಂದರೆ ಪರಮಪುರುಷನಲ್ಲಿ ದಾಸ್ಯಭಾವವನ್ನು ವಹಿಸಿ ಅದರಿಂದ ಕರ್ಮ ಬಂಧದಿಂದ ಬಿಡಲ್ಪಟ್ಟು ಅನ್ಯಾದೃಶವಾದ ಅಂತಹ ಅಕರ್ಮವಶ್ಯತೆಯನ್ನು ಹೊಂದಿ ಆ ಪರಮಾತ್ಮನೊಡನೆಯೇ ಆನಂದಿಸುವನು. ಎಂದೀ ಮೇಲಿನ ಪ್ರಮಾಣಾರ್ಥವು)

ಇಷ್ಟು ಮಾತ್ರವಲ್ಲದೆ ಶ್ರೀನಾರಾಯಣೀಯಾದಿಗಳಲ್ಲಿ ಶ್ವೇತದ್ವೀಪವಾಸಿಗಳು ದಿವ್ಯರೂಪವನ್ನು ಧರಿಸಿ ಭಗವದ್ದಾಸ್ಯದಲ್ಲಿ ತಮ್ಮಿಷ್ಟಿಗೆ ತಾವೇ ರುಚಿಯುಳ್ಳವರಾಗಿರುವರೆಂದು ವಿಸ್ತಾರವಾಗಿ ಹೇಳಿ ಇದು ತಾನೆ ಮುಕ್ತರಿಗೂ ಲಕ್ಷಣವೆಂದು ಹೇಳಲ್ಪಟ್ಟಿರುವುದು.

ಇಲ್ಲಿ 'ಪರಮಾಗತಿಃ' ಎಂಬದಾಗಿ 'ಗತಿ' ಶಬ್ದಕ್ಕೆ 'ಪರಮ' ಎಂಬ ವಿಶೇಷಣ ಪ್ರಯೋಗದಿಂದ ಮೋಕ್ಷವನ್ನು ಹೊಂದುವ ಕೆಲವರಿಗೆ ಇದಕ್ಕಿಂತಲೂ ಬೇರೆಯಾದ ಸಾಮಾನ್ಯ ಗತಿಯೊಂದಿರುವಂತೆ ತಿಳಿಯಬರುವುದು. ಅದು ತಾನೇ ಜರಾಮರಣಾದಿಗಳನ್ನು ಕಳೆದು ಕೇವಲ

ಆತ್ಮಾನುಭವವೇ ಪುರುಷಾರ್ಥವೆಂದು ತಿಳಿದು ಅಪೇಕ್ಷಿಸುವಂತವರಿಗೆ ಗತಿಯಾಗಿ ಕೈವಲ್ಯವೆಂದು ಪ್ರಕೃತಿ ಮಣ್ಡಲಕ್ಕೂ ಪರಮಪದಕ್ಕೂ ಮಧ್ಯದಲ್ಲೊಂದಿರುವದು. "ಜರಾಮರಣ ಮೋಕ್ಷಾಯ ಮಾಮಾಶ್ರಿತ್ಯಯತಂತಿಯೇ‖ ಯೋಗಿನಾಮಮೃತಂ ಸ್ಥಾನಂ ಸ್ವಾತ್ಮ ಸಂತೋಷಕಾರಿಣಾಂ" ಇತ್ಯಾದಿ ಪ್ರಮಾಣಗಳು ಈ ಅರ್ಥವನ್ನು ತೋರಿಸುವುವು. ಭಗವತ್ಪ್ರಾಪ್ತಿ ಎಂಬ ಪರಮ ಗತಿಗೂ "ಸಾಕಾಷ್ಠಾ ಸಾಪರಾಗತಿಃ ‖ ವಿಶ್ವಾತ್ಮಾನಂ ಪರಾಯಣಂ ‖ ಮಾಮೇವಾ ನುತ್ತಮಾಂ ಗತಿಂ ‖ ಸೋಧ್ವನಃ ಪಾರಮಾಪ್ನೋತಿ ‖ ಆತ್ಮಲಾಭಾ ನ್ನಪರಂ ವಿದ್ಯತೇ" ಇತ್ಯಾದಿ ಪ್ರಮಾಣಗಳು ಪ್ರದರ್ಶಕಗಳಾಗಿರುವುವು.

(ಜರಾ ಮರಣಗಳ ಆತ್ಯಂತಿಕ ನಿವೃತ್ತಿಗಾಗಿ ನನ್ನನ್ನಾಶ್ರಯಿಸಿ ಯಾರಾಪರೆಯತ್ನಿಸುವರೊ. ತಮ್ಮಗಳ ಆತ್ಮ ಸಂತೋಷವನ್ನು ಅಪೇಕ್ಷಿಸುವ ಯೋಗಿಗಳಿಗೆ ಶಾಶ್ವತವಾದ ಸ್ಥಾನವು. ಈ ಯರಡು ಪ್ರಮಾಣಗಳು ಕೈವಲ್ಯಗತಿ ಪ್ರದರ್ಶಕಗಳಾಗಿರುವುವು. ಅದು ಅವಧಿಯಾಗಿರುವುದು, ಅದು ಪರಗತಿಯು. ಸರ್ವ ಪ್ರಪಂಚಕ್ಕೂ ಆತ್ಮನಾಗಿ ಪರಮ ಪುರುಷಾರ್ಥ ಭೂತನಾದವನನ್ನು. ನನ್ನನ್ನೇ ಶ್ರೇಷ್ಠವಾದ ಗತಿಯಾಗಿ. ಅವನು ಸಂಸಾರ ಮಾರ್ಗದ ಧಡವನ್ನು ಹೊಂದುವನು ಆತ್ಮಲಾಭಕ್ಕಿಂತಲೂ ಬೇರೊಂದು ಪುರುಷಾರ್ಥ ವಿಲ್ಲವು. ಎಂದು ಭಗವತ್ಪ್ರಾಪ್ತಿ ಎಂಬ ಪರಮ ಗತಿ ಪ್ರದರ್ಶಕ ಪ್ರಮಾಣಾರ್ಥವು

(ಮ‖ ಭಾ) ಮುಕ್ತಾನಾಂ ಪರಮಾಗತಿಃ–ಎಂಬೀ ಮೂರು ವ್ಯಸ್ತ ಪದಗಳು ಸೇರಿ ಒಂದು ನಾಮವಾಗಿರುವುದು. ಗತಿಃ ಎಂದರೆ ಹೊಂದಲ್ಪಡತಕ್ಕ ದೇವತೆಯು, ಮುಕ್ತಾತ್ಮರುಗಳಿಗೆ ಪ್ರಾಪ್ಯವಾಗಿರುವ ಶ್ರೇಷ್ಠವಾದ ದೇವತೆಯು. ಇಲ್ಲಿ ಹೇಳಿರುವ ಗಂತೃಗಮ್ಯಭಾವ (ಎಂದರೆ ಪರಮಾತ್ಮನು ಹೊಂದಲ್ಪಡತಕ್ಕವನೆಂತಲೂ ಜೀವಾತ್ಮನು ಹೊಂದುವಂತವನೆಂತಲೂ ಹೇಳಿರುವುದರಿಂದ) ದಿಂದ ಜೀವ ಪರಮಾತ್ಮರ ಭೇದವು ಸಿದ್ಧವಾಗುವುದು. ಈ ಇಬ್ಬರಿಗೂ ಭೇದ ವಿಲ್ಲದ ಪಕ್ಷದಲ್ಲಿ ಗಂತೃಗಮ್ಯಭಾವವು ಇವರಿಗೆ ಉಂಟಾಗಲಾರದಷ್ಟೆ. ಆದರೆ "ಅಹಂ ಬ್ರಹ್ಮಾಸ್ಮಿ ‖ ತತ್ವಮಸಿ" ಇತ್ಯಾದಿ ವಾಕ್ಯಗಳು ಅಭೇದವನ್ನು ಪ್ರತಿಪಾದಿಸುವುದರಿಂದ ಇವುಗಳಿಗೆ ಯೇನು ಗತಿ? ಎಂದರೆ ಈ ವಾಕ್ಯಗಳು ಬ್ರಹ್ಮಸಾದೃಶ್ಯವನ್ನು ಜೀವನಿಗೆ ತೋರಿಸುವುದರಿಂದ ಭೇದೋಕ್ತಿಗೆ ಯಾವ ಬಾಧಕವೂ ವುಂಟಾಗಲಾರದು. ಆದರೆ ಬ್ರಹ್ಮ ಸಾದೃಶ್ಯವನ್ನು ಶ್ರುತಿ

ಯು ತೋರಿಸಬೇಡವೊ? ಎಂದರೆ "ನಿರಂಜನಃ ಪರಮಂ ಸಾಮ್ಯ ಮು ಪೈತಿ" ಎಂಬ ಶ್ರುತಿಯು ಪರಮಾತ್ಮನೊಡನೆ ಮುಕ್ತರಿಗೆ ಪರಮ ಸಾಮ್ಯವನ್ನು ತೋರಿಸುವುದು. "ಅಥ ಯೋನ್ಯಾಂ ದೇವತಾಂ" ಎಂಬ ಶ್ರುತಿಯು ಭೇದ ನಿಷೇಧಕವೊ ಅಲ್ಲವು. ಅಲ್ಲಿನ ಅನ್ಯ ಶಬ್ದವು ಅನ್ಯಾದೃಶ (ಅಸದೃಶ) ವೆಂಬ ಅರ್ಥವನ್ನು ಪ್ರತಿಪಾದಿಸುವುದು. "ಬ್ರಹ್ಮದಾಶಾಃ" ಎಂಬ ಶ್ರುತಿಗೂ ಇದೇ ಅರ್ಥವನ್ನು ಸ್ವೀಕರಿಸಬೇಕು. "ಸರ್ವಂ ಖಲ್ವಿದಂ ಬ್ರಹ್ಮ ॥ ವಾಸುದೇವ ಸ್ಸರ್ವಂ" ಎಂಬೀ ಶ್ರುತಿ ಸ್ಮೃತಿಗಳೂ ಅಂದರೆ "ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ" ಎಂಬ ಗೀತಾ ವ್ಯಾಖ್ಯಾನದಿಂದಲೇ ವ್ಯಾಖ್ಯಾನ ಮಾಡಲ್ಪಟ್ಟಿರುವುವು. ಯಾವ ಕಾರಣದಿಂದ ಸಮಸ್ತವನ್ನು ವ್ಯಾಪಿಸಿರುವನೊ ಆ ಕಾರಣದಿಂದ ಸರ್ವ ಶಬ್ದದಿಂದ ಪರಮಾತ್ಮನು ಹೇಳಲ್ಪಡುವನು. "ನೇಹನಾ ನಾಸ್ತಿ ಕಿಂಚನ॥ ಮೃತ್ಯೋ ಸ್ಸಮೃತ್ಯು ಮಾಪ್ನೋತಿ ಯ ಇಹ ನಾನೇವ ಪಶ್ಯತಿ॥ ಯದಾಹ್ಯೇ ವೈಷ ಏತಸ್ಮಿ ನ್ನುದರಮಂತರಂ ಕುರುತೆ ಅಥ ತಸ್ಯ ಭಯಂ ಭವತಿ" ಇತ್ಯಾದಿ ಶ್ರುತಿಗಳು ಸರ್ವ ಪದಾರ್ಥಗಳಲ್ಲಿಯೂ ಇರುವ ಪರಮಾತ್ಮನ ಭೇದವನ್ನು ನಿಷೇಧಿಸುವುವು. ಆದರೆ ಜಾಬಾಲರು "ತ್ವಂ ವಾ ಅಹಮಸ್ಮಿ ಭಗವೊ ದೇವತೇ ಅಹಂ ವೈತ್ವಮಸಿ ದೇವತೆ" ಎಂದು ಹೇಳುತ್ತಾರಲ್ಲವೆ; ಅಲ್ಲಿ ಅಭೇದಾರ್ಥವನ್ನು ನಿರಾಕರಿಸಿ ಸಾದೃಶ್ಯಾರ್ಥ ವರ್ಣನವನ್ನು ಮಾಡುವ ಪಕ್ಷದಲ್ಲಿ ವಾಕ್ಯ ದ್ವಯವೈಯರ್ಥ್ಯವು ಪ್ರಾಪ್ತವಾಗಲಾರದೋ? ಎಂದರೆ ಅಭೇದಾರ್ಥ ವರ್ಣನವನ್ನು ಮಾಡುವ ಪಕ್ಷದಲ್ಲಿಯೂ ವಾಕ್ಯ ದ್ವಯವೈಯರ್ಥ್ಯವು ಸಮಾನವಾಗಿಯೇ ಇರುವುದರಿಂದ ನಿಮ್ಮ ದೂಷಣಕ್ಕೆ ಅವಕಾಶವಿಲ್ಲವು. "ಸರ್ವಂ ತಂ ಪರಾದಾದ್ಯೋನ್ಯತಾತ್ಮನಃ" ಎಂಬ ಶ್ರುತಿಯೊ ಎಂದರೆ ಪರಮಾತ್ಮನಿಗಿಂತಲೂ ಬೇರೆಯಾದ ಪ್ರದೇಶದಲ್ಲಿ ಸರ್ವ ವಸ್ತುಗಳಿಗೂ ಸ್ಥಿತಿಯನ್ನು ನಿಷೇಧಿಸುವುದೆಂದರಿಯಬೇಕು. "ಪರೇ ವ್ಯಯೇ ಸರ್ವ ಏಕೀ ಭವಂತಿ" ಎಂಬ ಶ್ರುತಿಯು ಐಕ್ಯವನ್ನು ಬೋಧಿಸುವುದಿಲ್ಲವು. ಈ ಶ್ರುತಿಯು ಮುಕ್ತರೊಡನೆ ಪರಮಾತ್ಮನಿಗೆ ಏಕಸ್ಥಾನ ಸ್ಥಿತಿಯನ್ನು ಬೋಧಿಸುವುದು. ಈ ಪ್ರಕಾರ ಸ್ಫುಟವಾಗಿ ಅದ್ವೈತವನ್ನು ಬೋಧಿಸುವ ಶ್ರುತಿಗಳಿಗೆ ಅನ್ಯಥಾ ಅರ್ಥ ವರ್ಣನವನ್ನು ಮಾಡುವುದು ಯುಕ್ತವೊ? ಎಂದರೆ ಈಗ ಹೇಳಿ

ರುವಂತೆ ಅರ್ಥ ವರ್ಣ್ಣನವನ್ನು ಮಾಡದೆ ಹೋದರೆ "ಅನಶ್ನನ್ನನ್ಯೋ ಅಭಿಚಾ ಕಶತಿ ॥ ಜಹಾತ್ಯೇನಾಂ ಭುಕ್ತ ಭೋಗಾಮಜೋನ್ಯಃ ॥ ಜುಷ್ಟಂ ಯದಾಪಶ್ಯ ತ್ಯನ್ಯ ಮೀಶಂ ॥ ಪೃಥಗಾತ್ಮಾನಂ ಪ್ರೇರಿತಾರಂಚ ಮತ್ವಾ" ಎಂಬೀ ಶ್ರುತಿಗಳಲ್ಲಿ ಜೀವಾತ್ಮ ಪರಮಾತ್ಮರಿಗೆ ಸ್ಫುಟವಾಗಿ ಹೇಳಲ್ಪಡುವ ಭೇದೋಕ್ತಿಗೆ ಯೇನು ಗತಿ? ಆದುದರಿಂದ ಇಲ್ಲಿ ಹೇಳಿರುವ ಅರ್ಥವೆ ಯುಕ್ತವಾಗಿರುವುದೆಂದರಿಯಬೇಕು. "ಸರ್ವ ಭೂತೇಷು ಯೇನೈಕಂ ಭಾವ ಮವ್ಯಯ ಮೀಕ್ಷತೆ । ಅವಿಭಕ್ತಂ ವಿಭಕ್ತೇಷು ತಧ್ಜ್ಞಾನಂ ವಿದ್ಧಿ ಸಾತ್ವಿಕಂ" ಎಂಬ ಗೀತಾ ವಚನವು ಸರ್ವಸ್ಥಾನ ಗತನಾದ ಪರಮಾತ್ಮನಿಗೆ ಸ್ಥಾನ ಭೇದದಿಂದ ಪ್ರಾಪ್ತವಾದ ಪರಮಾತ್ಮ ಗತವಾಗಿರುವ ಭೇದವನ್ನು ನಿಷೇಧಿಸುವುದು. "ಸಿತ ನೀಲಾದಿ ಭೇದೇನ ಯಥೈಕಂ ದೃಶ್ಯತೇ ನಭಃ । ಭ್ರಾಂತ ದೃಷ್ಟಿಭಿರಾತ್ಮಾಪಿ ತಥೈಕಸ್ಸನ್ ಪೃಥಕ್ಪೃಥಕ್" ಎಂಬ ಶ್ರೀವಿಷ್ಣು ಪುರಾಣೋಕ್ತಿಯು; ಸರ್ವ ಜೀವರು ಜ್ಞಾನಾನಂದೈಕ ರೂಪವಾಗಿರುವಾಗ ಸ್ವರೂಪದಲ್ಲಿ ಸ್ಥೂಲ್ಯ ಕಾರ್ಶ್ಯಾದಿಕೃತವಾದ ವೈಜಾತ್ಯವನ್ನು ಮಿಥ್ಯೆ ಎಂಬದಾಗಿ ಹೇಳುವುದೆಂದರಿಯಬೇಕು. ಆದರೆ "ಸಿತನೀಲಾದಿ ಭೇದೇನ" ಎಂಬ ವಾಕ್ಯದಲ್ಲಿ ದೃಷ್ಟಾಂತ (ಆಕಾಶ) ದಲ್ಲಿ ಐಕ್ಯದಿಂದ ಏಕ ಜಾತೀಯತ್ವವೂ ದಾರ್ಷ್ಟಾಂತಿಕವಾದ ಆತ್ಮ ವಿಷಯದಲ್ಲಿ ಪರಸ್ಪರ ಭೇದವಿದ್ದರೂ ಏಕಜಾತೀಯತ್ವವೆಂಬೀ ವೈಶ್ಯಾಸ ಮಾತ್ರವನ್ನೇ ಸ್ವೀಕರಿಸಬೇಕು. "ಏಕಸ್ಸಮಸ್ತಂ ಯದಿಹಾಸ್ತಿ ಕಿಂಚಿತ್" ಇತ್ಯಾದಿ ವಚನಗಳು ಸರ್ವಸ್ಥಾನ ಸ್ಥಿತನಾಗಿರುವ ಅಚ್ಯುತ ರೂಪನಾದ ಒಬ್ಬನೆ ಪರವಸ್ತುವಲ್ಲದೆ ಬೇರೊಂದು ವಸ್ತುವಿಲ್ಲವೆನ್ನುವ ಅರ್ಥವನ್ನು ಹೇಳುವುದಲ್ಲದೆ ಜೀವಪರಮಾತ್ಮರ ಭೇದ ನಿಷೇಧಕವಾಗಲಾರವು. "ನಾಸ್ತಿಪರಂ ತತೋನ್ಯತ್" ಎಂಬುವುದರಿಂದಲೂ ಈ ಅರ್ಥವೆ ಕಂಠೋಕ್ತವಾಗಿರುವುದು. ಇದೇ ಮೊದಲಾದ ವಿಶೇಷಾರ್ಥವನ್ನು ಭಾಷ್ಯದಲ್ಲಿಯೇ ಕಾಣಬಹುದು. ॥೧೨॥

## (೧೩ನೇ ನಾಮವು) ಅವ್ಯಯಃ,

## ಓಮ್॥ ಅವ್ಯಯಾಯನಮಃ.

(ಶಂ॥ ಭಾ) "ಅಜರೋಮರೋವ್ಯಯಃ" ಎಂಬ ಶ್ರುತ್ಯನುಸಾರವಾಗಿ ಈ ನಾರಾಯಣನು ನಾಶವಿಲ್ಲದವನಾದುದರಿಂದ ಅಥವಾ ವಿಕಾರ ರಹಿತನಾಗಿರುವುದರಿಂದ ಅವ್ಯಯನೆನ್ನಲ್ಪಡುವನು.

(ವಿ॥ ಭಾ) ಹಿಂದೇ ಹೇಳಿರುವ ಅರ್ಥವನ್ನೇ ಐದು ದಿವ್ಯನಾಮಗ ಳಿಂದ ಉಪಾದಿಸುತ್ತಾರೆ. ಅವ್ಯಯಃ-"ನವೀಯತೆನವ್ಯಪಗವ್ಯೇತೆ ಅಸ್ಮಾ ದಿತಿ" ಅವ್ಯಯಃ, ಇವನನ್ನು ಹೊಂದಿದವನು ಪುನಃ ಇವನನ್ನು ಬಿಟ್ಟು ಪುನರಾವೃತ್ತಿಯನ್ನು ಹೊಂದುವುದಿಲ್ಲವಾದುದರಿಂದ ಅವ್ಯಯನೆನ್ನಲ್ಪ ಡುವನು. ಸಂಸಾರ ಸಮುದ್ರವನ್ನು ದಾಟಿ ಭಗವಚ್ಚರಣಾರವಿಂದ ವನ್ನು ಸೇರಿರುವ ಪುರುಷನಿಗೆ ಪರಮಪುರುಷನು ಪುನರಾವೃತ್ತಿಯನ್ನು ಕೊಡಲಾರನಷ್ಟೆ. ಆದುದರಿಂದಲೇ "ಏತೇನ ಪ್ರತಿಪದ್ಯಮಾನಾ" ಇತ್ಯಾದಿ ಶ್ರುತಿಗಳು ಪರಮಾತ್ಮನನ್ನು ಹೊಂದಿದವನಿಗೆ ಅಪುನರಾವೃ ತ್ತಿಯನ್ನು ಹೇಳುವುವು.

## (೧೪ನೇ ನಾಮವು) ಪುರುಷಃ, ಓಮ್॥ ಪುರುಷಾಯನಮಃ.

(ಶಂ ॥ ಭಾ ॥ ಮ) "ನವದ್ವಾರಂ ಪುರಂ ಪುಣ್ಯಮೇತೈರ್ಭಾವೈ ಸ್ಸಮನ್ವಿತಂ । ವ್ಯಾಪ್ಯಶೇತೇ ಮಹಾತ್ಮಾಯ ಸ್ತಸ್ಮಾತ್ಪುರುಷ ಉ ಚ್ಯತೆ" ಎಂಬೀ ಭಾರತ ಪ್ರಮಾಣಾನುಸಾರವಾಗಿ ನವದ್ವಾರ ಪುರವಾದ ಈ ಶರೀರವನ್ನು ವ್ಯಾಪಿಸಿರುವ ಮಹಾತ್ಮನಾದುದರಿಂದ ಪುರುಷನೆನ್ನ ಲ್ಪಡುವನು. ಎಂದರೆ ಶರೀರವೆಂಬ ಬ್ರಹ್ಮಪುರದಲ್ಲಿ ಶಯನಮಾಡಿರು ವಂತವನಾದುದರಿಂದ ಪುರುಷನೆನ್ನಲ್ಪಡುವನಂದರ್ಥವು. (ಶಂ॥ ಭಾ) ಅಥವಾ ಅಕ್ಷರವ್ಯತ್ಯಯವುಳ್ಳ ಅಸಧಾತುವಿನ ರೂಪವನ್ನಾಗಿ ನಿರ್ಣಯಿಸಿ ನೋಡಿದರೆ "ಪೂರ್ವಮೇವಾಹಮಿಹಾಸಂ" ಎಂಬ ಶ್ರುತ್ಯನುಸಾರವಾಗಿ ಮೊದಲೇ ಇದ್ದವನಾದ್ದರಿಂದಲೂ ಪುರುಷನೆನ್ನಲ್ಪಡುವನು. ಅಥವಾ "ತತ್ಪುರುಷಸ್ಯ ಪುರುಷತ್ವಂ" ಎಂಬೀ ಶ್ರುತ್ಯನುಸಾರವಾಗಿ ಪುರಗಳೆ ನ್ನಲ್ಪಡುವ ಉತ್ಕರ್ಷಶಾಲಿಗಳಲ್ಲಿ, ಸೀದತಿ-ಇರುತ್ತಾನಾದುದರಿಂದ ಪುರು ಷನೆಂತಲಾದರೂ, "ಪೂರಣಾತ್ಸದನಾಚ್ಚೈವ ತತೋಽಸೌ ಪುರುಷೋ ತ್ತಮಃ" ಎಂಬ ಶ್ರೀಮಹಾಭಾರತ ವಚನಾನುಸಾರವಾಗಿ ; ಪುರಾಣಿ- ಫಲಾನಿ, ಸನೋತಿ-ದದಾತೀ, ತಿವಾ ; ಪುರುಷಃ-ಅಪೇಕ್ಷಿತ ಫಲಗಳನ್ನು ಕೊಡುವಂತವನಾಗಿರುವುದರಿಂದಲೂ ಪುರುಷನೆನ್ನಲ್ಪಡುವನು. ಸಂಹಾರ ಸಮಯದಲ್ಲಿ ಲೋಕಗಳಿಗೆ ಅಂತವನ್ನು ಎಂದರೆ ನಾಶವನ್ನು ಹೊಂದಿಸು ವಂತವನಾಗಿರುವುದರಿಂದಲೂ ಪುರುಷನೆನ್ನಲ್ಪಡುವನು. ಈ ಪ್ರಕಾರ

ವಾಗಿ ಪೂರಣದಿಂದಲಾದರೂ ಸದನದಿಂದಲಾದರೂ ಪುರುಷನೆನ್ನಲ್ಪಡುವ ನೆಂದರಿಯಬೇಕು.

(ವಿ॥ ಭಾ) ಪುರುಷಃ-ಮುಕ್ತರಿಗೆ ತನ್ನ ಪರ್ಯಂತವಾದ ಸರ್ವವನ್ನು ಕೊಡುವಂತವನಾದುದರಿಂದ "ಪುರುಷಃ" ಎನ್ನಲ್ಪಡುವನು. ಪರಮಪುರುಷನು ವಾಕ್ಕಿನಿಂದಲೂ ಮನಸ್ಸಿನಿಂದಲೂ ಅಳವಿಡಲ್ಪಡದ ತನ್ನ ಗುಣಾನುಭವವನ್ನು ಮುಕ್ತಾತ್ಮರಿಗೆ ಕೊಡುತ್ತಾನಷ್ಟೆ. ಈ ಅರ್ಥವನ್ನು ಈ (೧೪)ನೇ ನಾಮವು ಹೇಳುವುದು. ಈ ವಿಷಯದಲ್ಲಿ "ಏಷಹ್ಯೇವಾನಂದಯಾತಿ" ಇತ್ಯಾದ್ಯನಂತ ಪ್ರಮಾಣಗಳಿರುವುವು. ಅವುಗಳನ್ನು ಭಾಷ್ಯದಲ್ಲಿಯೇ ಕಾಣಬಹುದು. ‖ ೧೪ ‖

## (೧೫ನೇ ನಾಮವು) ಸಾಕ್ಷೀ. ಓಮ್ ‖ ಸಾಕ್ಷಿಣೇನಮಃ.

(ಶಂ॥ ಭಾ॥ ಮ) ಸಾಕ್ಷೀ-ಸಾಕ್ಷಾತ್ತಾಗಿ ಸ್ವರೂಪಬೋಧದಿಂದ ಸಮಸ್ತವನ್ನು ನೋಡುವಂತವನು ಸಾಕ್ಷೀ ಎನ್ನಲ್ಪಡುವನು.

(ವಿ॥ ಭಾ) ಈ ಪ್ರಕಾರವಾಗಿ ಮುಕ್ತರನ್ನು ಆನಂದಯುಕ್ತರನ್ನಾಗಿ ಮಾಡಿಕೊಂಡು ತಾನೂ ತೃಪ್ತಿಯನ್ನು ಹೊಂದಿ ಕಟಾಕ್ಷಿಸುವಂತವನಾಗಿರುವನೆಂದು ಮುಂದಿನ ಈ ನಾಮವು ಹೇಳುವುದು. ಸಾಕ್ಷೀ-ಕಾಣುವಂತವನು. ಪ್ರತ್ಯಕ್ಷವಾಗಿ ನೋಡುವಂತವನು. ಮುಕ್ತಪ್ರಾಪ್ಯನಾದ ಪರಮಪುರುಷನು ಈ ಪ್ರಕಾರ ಸಾಕ್ಷಿಯಾಗಿರುವನೆಂದು "ಬ್ರಹ್ಮಣಾ ವಿಪಶ್ಚಿತಾ" ಇತ್ಯಾದ್ಯನೇಕ ಶ್ರುತಿಗಳು ಹೇಳುವುವು. ‖ ೧೫ ‖

## (೧೬ನೇ ನಾಮವು) ಕ್ಷೇತ್ರಜ್ಞಃ, ಓಮ್॥ ಕ್ಷೇತ್ರಜ್ಞಾಯನಮಃ.

(ಶಂ॥ ಭಾ) "ಕ್ಷೇತ್ರಂಜಾನಾತೀತಿ ಕ್ಷೇತ್ರಜ್ಞಃ," ಕ್ಷೇತ್ರವೆನ್ನಲ್ಪಡುವ ಶರೀರವನ್ನು ತಿಳಿಯುವಂತವನಾದ್ದರಿಂದ ಕ್ಷೇತ್ರಜ್ಞನೆನ್ನಲ್ಪಡುವನು. "ಕ್ಷೇತ್ರಜ್ಞಂ ಚಾಪಿಮಾಂ ವಿದ್ಧಿ" ಎಂಬದಾಗಿ ಭಗವದ್ಗೀತಾ ೧೩ನೇ ಅಧ್ಯಾಯದ ಯರಡನೇ ಶ್ಲೋಕದಲ್ಲಿಯೂ "ಕ್ಷೇತ್ರಾಣಿ ಶರೀರಾಣಿ ತೇಷಾಂ ಚೈವ ಯಥಾ ಸುಖಂ। ತಾನಿವೇತ್ತಿ ಸ ಯೋ

ಗಾತ್ಮಾ ತತಃ ಕ್ಷೇತ್ರಜ್ಞ ಉಚ್ಯತೇ" ಎಂಬದಾಗಿ ಬ್ರಹ್ಮಾಂಡ ಪುರಾಣ ದಲ್ಲಿಯೂ ಈ ಅರ್ಥವು ಹೇಳಲ್ಪಟ್ಟಿರುವುದು.

(ನನ್ನನ್ನು ಕ್ಷೇತ್ರಜ್ಞನೆಂತಲೂ ತಿಳಿದುಕೊಳ್ಳುವಂತವನಾಗು. ಕ್ಷೇತ್ರಗಳೆನ್ನ ಲ್ಪಡುವ ಶರೀರಗಳನ್ನು ಅನಾಯಾಸದಿಂದ ಯಾವನಾದರೇ ತಿಳದುಕೊಳ್ಳುವನೋ ಆ ಕಾರಣದಿಂದ ಆ ಪರಬ್ರಹ್ಮನು ಕ್ಷೇತ್ರಜ್ಞನೆನ್ನಲ್ಪಡುವನು)

(ವಿ॥ ಭಾ) ಕ್ಷೇತ್ರಜ್ಞಃ-ಶರೀರವನ್ನು ತಿಳಿಯುವಂತವನೆಂದರ್ಥವು. ಇದರಿಂದ ಈ ಪ್ರಕಾರವಾಗಿ ಭಕ್ತರಿಗೆ ತನ್ನ ಅನುಭವವನ್ನು ಕೊಡುವು ದಕ್ಕಾಗಿ ಅದಕ್ಕೆ ತಕ್ಕ ಶರೀರವು ಇದು ತಾನೆ ಯೆಂದು ಕಂಡರಿಯುವಂ ತವನೆಂದು ಹೇಳಿದಂತೆ ಆಯಿತು. ಅಥವಾ ತನ್ನ ಭೋಗ ಸಮೃದ್ಧಿ ಯುಂಟಾಗುವ ಭೂಮಿಯಾದ್ದರಿಂದ ಕ್ಷೇತ್ರ ಶಬ್ದದಿಂದ ಪರಮಾಕಾಶ ವನ್ನು ಹೇಳಿ ಅದನ್ನು ಶರೀರವಾಗಿಯುಳ್ಳವನೆಂತಲಾದರೂ ಅರ್ಥವಾಗ ಬಹುದು. ಇದಕ್ಕೂ (೧) "ಆಕಾಶ ಶರೀರಂ ಬ್ರಹ್ಮ" ಇತ್ಯಾದಿ ತೈತ್ತಿರೀಯ ಶ್ರುತಿ ಪ್ರಮಾಣಗಳು ಅನೇಕಗಳಿರುವುವು ಈ ಪ್ರಕಾ ರವೇ ಶ್ರೀನಾರಾಯಣೀಯದಲ್ಲಿ ಮುಕ್ತಾತ್ಮನಿಂದ ಹೊಂದಲ್ಪಡುವ ಪರ ಮ ಪುರಮಪುರುಷನನ್ನು "ಮುಕ್ತಾನಾಂತು ಗತಿರ್ಬ್ರಹ್ಮನ್ ಕ್ಷೇತ್ರಜ್ಞ ಇತಿ ಕಲ್ಪ್ಯತೆ" ಎಂಬದಾಗಿ (೨) ಕ್ಷೇತ್ರಜ್ಞನೆಂಬ ಹೆಸರಿನಿಂದ ಹೇಳಿ ರುತ್ತಾರೆ.

(ಪರಮಾಕಾಶವನ್ನೇ ಶರೀರವಾಗಿಯುಳ್ಳ ಪರಬ್ರಹ್ಮನು (೧) ಮುಕ್ತರಿಂದ ಹೊಂದಲ್ಪಡುವ ಪರಮಪುರುಷನು ಕ್ಷೇತ್ರಜ್ಞನೆಂದು ಹೇಳಲ್ಪಡುವನೆಂದು ಶ್ರೀನಾರಾಯ ಣೀಯ ವಚನಾರ್ಥವು. ನಾರಾಯಣೀಯ ವೆಂದರೆ ಶ್ರೀಭಾರತದ ಶಾಂತಿಪರ್ವಾಂತರ್ಗತ ವಾಗಿ ಮೋಕ್ಷಧರ್ಮಪರ್ವದಲ್ಲಿರುವ ಒಂದು ಭಾಗವು)

ಮುಕ್ತರು ಭಗವಂತನನ್ನು ಅನುಭವಿಸುವುದುಕ್ಕೆಂತಲೇ ಯೇರ್ಪ ಟ್ಟ ಸ್ಥಾನವು ಪರಮಾಕಾಶವೆಂದು "ಪರಮೇವ್ಯೋಮನ್ ಸೋಶ್ನುತೆ (೧) ತೇಹನಾಕಂ ಮಹಿಮಾನಸ್ಸಚಂತೆ (೨) ನಾಕಪೃಷ್ಠೇ ವಿರಾಜತಿ (೩) ಸಮೋದೇತ ತ್ರಿ ವಿಷ್ಟಪೆ (೪) ಯತ್ಪುರಾಣ ಮಾಕಾಶಂ ತತ್ರ ಮೇ ಸ್ಥಾನಂ ನ ಪುನರ್ಭವಾಯ (೫) ಯದ್ಗತ್ವಾನ ನಿವರ್ತಂತೆ ತದ್ಧಾಮ ಪರಮಂ ಮಮ" (೬) ಇತ್ಯಾದಿ ಶ್ರುತಿ ಸ್ಮೃತಿಗಳಲ್ಲಿಯೂ, "ಶ್ರುತಿ ಪ್ರಮಾಣಾಗಮ ಮಂಗಳೈಸ್ತು ಯುಕ್ತೋ ಜರಾ ಮೃತ್ಯು ಭಯಾದತೀತಃ। ತತೋ ನಿಮಿತ್ತೇಚ ಫಲೇ ವಿನಷ್ಟೇ ಅ ಲಿಂಗ ಮಾಕಾಶ ಮಲಿಂಗ ವಿಷಃ" (೭) ಏಕಾನ್ತಿನ ಸ್ಸದಾ ಬ್ರಹ್ಮ ಧ್ಯಾಯಿನೊ

ಯೋಗಿನೋಹಿಯೇ | ತೇಷಾಂ ತತ್ಪರಮಂ ಸ್ಥಾನಂ ಯದ್ವೈ ಪಶ್ಯಂತಿ ಸೂರಯಃ" (೮) ಎಂದು ಮೋಕ್ಷ ಧರ್ಮದಲ್ಲಿಯೂ, "ಯತ್ತನ್ನ ಕಿಂಚಿದಿತ್ಯುಕ್ತಂ ಮಹಾವ್ಯೋಮ ಯ ದಚ್ಯುತೇ" (೯) ಎಂದು ಬ್ರಹ್ಮ ಪುರಾಣದಲ್ಲಿಯೂ "ತನ್ಮೋಕ್ಷಸ್ತತ್ಪರಂ ತೇಜೋ ವಿಷ್ಣೋರಿತಿ ವಿನಿಶ್ಚಯಃ| ಪಶ್ಯಲೋಕ ಮಿಮಂಮಹ್ಯಂ ಯೋನವೈಸ್ತು ದೃಶ್ಯತೇ‖ ತ್ವತ್ಪ್ರಿಯಾರ್ಥಮಯಂ ಲೋಕೇ ದರ್ಶಿತಸ್ತೇ ದ್ವಿಜೋತ್ತಮ" (೧೦) ಎಂಬದಾಗಿ ಶ್ರೀವರಾಹ ಪುರಾಣದಲ್ಲಿಯೂ, "ಕಾರ್ಯಾಣಾಂ ಕಾರಣಂ ಪೂರ್ವಂ ವಚಸಾಂ ವಾಚ್ಯ ಮುತ್ತಮಂ | ಯೋಗಿನಾಂ ಪರಮಂ ಸ್ಥಾನಂ ಪರಮಂತೆ ಪದಂ ವಿದುಃ" (೧೧) ಎಂಬದಾಗಿ ಋಗ್ವಿಧಿಯಲ್ಲಿಯೂ, "ಬ್ರಹ್ಮಣಸ್ಸದನಾತ್ತಸ್ಯ ಪರಂ ಸ್ಥಾನಂ ಪ್ರಕಾಶತೆ" (೧೨) ಎಂಬದಾಗಿ ಆರಣ್ಯಪರ್ವವೇ ಮೊದಲಾದ ಸ್ಥಲಗಳಲ್ಲಿಯೂ ಈ ವಿಷಯದಲ್ಲಿ ನಾನಾ ಪ್ರಕಾರವಾಗಿ ಹೇಳಲ್ಪಟ್ಟಿರುವುದು.

(ಪರಮಾಕಾಶದಲ್ಲಿ ಅವನು ಅನುಭವಿಸುವನು. (೧) ಅವರುಗಳು ಸುಖ ಸ್ವರೂಪವಾದ ಪರಮಪದದಲ್ಲಿ ಮಹಿಮೆಯನ್ನು ಹೊಂದಿದವರಾಗಿ ಪ್ರಕಾಶಿಸುವರು. (೨) ಸ್ವರ್ಗಕ್ಕಿಂತಲೂ ಮೇಲಾದ ಪ್ರದೇಶದಲ್ಲಿ ಪ್ರಕಾಶಿಸುವನು. ಅಥವಾ ನಾಕಸ್ವರ್ಗಾದಿ ಶಬ್ದ ವಾಚ್ಯವಾದ ಪರಮಪದದಮೇಲೆ ಪ್ರಕಾಶಿಸುವನು. (೩) ಅವನು ತ್ರಿಪಿಷ್ಟಪವೆನ್ನಲ್ಪಡುವ ಪರಮಾಕಾಶದಲ್ಲಿ ಆನಂದಿಸುವನು. (೪) ಪುರಾತನವಾದ ಯಾವ ಪರಮಾಕಾಶವುಂಟೊ ಅದು ನನ್ನ ಸ್ಥಾನವು, ಅಲ್ಲಿ ಹೋದವರಿಗೆ ಪುನರ್ಜನ್ಮ ವಿಲ್ಲವು (೫) ಯಾವ ಪರಮಪದ ಸ್ಥಾನವನ್ನು ಹೊಂದಿದಮೇಲೆ ಪುನಃ ಈ ಸಂಸಾರ ಮಂಡಲಕ್ಕೆ ಬರಲಾರರೊ ಅಂತಹ ಪರಮಾಕಾಶವು ನನ್ನ ಶ್ರೇಷ್ಠವಾದ ನಿಯಮನ ಸ್ಥಾನವು (೬) ಶ್ರುತ್ಯಾದಿಗಳಲ್ಲಿ ಹೇಳಲ್ಪಟ್ಟಿರುವಂತೆ ಮೋಕ್ಷಾಧಿಕಾರಿಯಾದವನು ತನಗೆ ಅಪೇಕ್ಷಿತವಾದ ಅಮಾನಿತ್ವಾದಿ ಕಲ್ಯಾಣಗುಣಗಳಿಂದೊಪ್ಪಿದವನಾಗಿ ಭಗವದುಪಾಸನವನ್ನು ಮಾಡಿ ಅದರಿಂದ ಜರಾಮರಣಾದಿಗಳನ್ನು ಅತಿಕ್ರಮಿಸಿದವನಾಗಿ, ಅನಂತರದಲ್ಲಿ ಬಂಧಹೇತುವಾದ ಅವಿದ್ಯಾದಿಗಳಿಂದಲೂ, ಅದರ ಫಲವಾದ ಬಂಧದಿಂದಲೂ ಬಿಡಲ್ಪಟ್ಟು ದೇವಮನುಷ್ಯಾದಿಗಳೊಡನೆ ಸಮಾನವಾಗಿ ತಿಳಿಯುವಂತಹ ಲಕ್ಷಣಗಳೆಲ್ಲವೂ ನಾಶವಾದಮೇಲೆ ಕೇವಲ ಜ್ಞಾನಾನಂದಾದಿ ಮಾತ್ರ ಸ್ವರೂಪನಾಗಿ ಪ್ರಕೃತಿ ಸಂಬಂಧವಿಲ್ಲದ ಪರಮಾಕಾಶವನ್ನು ಹೊಂದಿ ನಿತ್ಯವಾಗಿ ಸುಖಿಸುವನು. (೭) ದೇವತಾಂತರ ಸಂಬಂಧ ಶೂನ್ಯರಾಗಿ ಸದಾ ಬ್ರಹ್ಮ ಧ್ಯಾನಶೀಲರಾದ ಯೋಗಿಗಳಿಗೆ ಅದು ಶ್ರೇಷ್ಠವಾದ ಹೊಂದತಕ್ಕ ಸ್ಥಾನವು. ಯಾವ ಸ್ಥಾನವನ್ನಾದರೇ ನಿತ್ಯರೂ ಮುಕ್ತರೂ ಸದಾ ನೋಡುತಲಿರುವರೊ? (೮) ಅನಿರ್ವಚನೀಯ ಇಂತಹ ಪ್ರಭಾವವುಳ್ಳದ್ದೆಂತಲೂ ಅಳಿವಿಡಲಶಕ್ಯವಾದ ಪರಮಾಕಾಶವೆಂದು ಹೇಳಲ್ಪಡುವ ಯಾವಸ್ಥಾನವುಂಟೊ ಅದು ತಾನೇ ಮೋಕ್ಷಸ್ಥಾನವು, ಶ್ರೀಮಹಾ

ವಿಷ್ಣುವಿನ ತೇಜೋಮಯವಾದ ದಿವ್ಯ ಸ್ಥಾನವು ಅದೆಂತಲೇ ವೇದಾಂತಗಳಲ್ಲಿ ನಿಶ್ಚಿತವಾಗಿರುವುದು. ಯಾವದಾದರೆ ವೇದಗಳಿಂದಲೂ ತಿಳಿಯಲಶಕ್ಯವಾಗಿ ಪ್ರಕಾಶಿಸುವುದೊ ಆ ಈ ಲೋಕವು ನಿಮ್ಮಲ್ಲಿರುವ ಪ್ರೀತಿಯಿಂದ ಎಲೈ ಬ್ರಾಹ್ಮಣೋತ್ತಮನೆ ನಿನಿಗೂ ತೋರಿಸಲ್ಪಟ್ಟಿತು. ಎಲೈ ಪರಮಪುರುಷನೇ ? ಸಕಲ ಲೋಕಗಳಿಗೂ ಶ್ರೇಷ್ಠವಾದ ಈ ಲೋಕವು ನಿಮ್ಮ ಸ್ವರೂಪವಾಗಿರುವುದು. (೯॥ ೧೦) ಕಾರ್ಯಗಳಿಗೆಲ್ಲಕ್ಕೂ ಕಾರಣವಾಗಿಯೂ ವಾಕ್ಕುಗಳಿಗೆಲ್ಲವೂ ಶ್ರೇಷ್ಠವಾದ ತಾತ್ಪರ್ಯ ಸೀಮಾ ಭೂಮಿಯಾಗಿಯೂ ಸಮಸ್ತ ಯೋಗಿಗಳಿಗೂ ಶ್ರೇಷ್ಠವಾದ ಸಿದ್ಧಿಯಾಗಿಯೂ ಇರುವ ನಿಮ್ಮ ಸ್ಥಾನವನ್ನು ಪರಮಪದವೆನ್ನುವರು. (೧೧) ಚತುರ್ಮುಖ ಬ್ರಹ್ಮನ ಗೃಹವಾದ ಸತ್ಯಲೋಕಕ್ಕಿಂತಲೂ ಮೇಲೆ ಶ್ರೇಷ್ಠವಾದ ಆ ಪರಮಪದವು ಇರುವುದು. (೧೨) ಎಂದೀ ಪ್ರಮಾಣಾರ್ಥವು)

"ಪ್ರಕೃತಿರ್ಮ್ಯೇ ಮಮ ಪರಾವ್ಯಕ್ತಾ ವ್ಯಕ್ತಾಚ ಭಾರತ | ತಾಂ ಪ್ರವಿಶ್ಯ ಭವಂತೀಹ ಮುಕ್ತಾ ಭರತ ಸತ್ತಮ" ಎಂಬದಾಗಿ ಶ್ರೀಹರಿ ವಂಶದಲ್ಲಿ ಶ್ರೀಕೃಷ್ಣನು ವೈದಿಕ ಪುತ್ರರನ್ನು ಕರದುಕೊಂಡು ಬರುವಾಗ ಹೇಳಿರುತ್ತಾನೆ. "ಶುದ್ಧ ಸ್ಫಟಿಕಸಂಕಾಶಂ ನಿರ್ವಾಣಂ ಪರಮಂ ಪದಂ | ತತ್ಪದಂ ಪ್ರಾಪ್ಯ ತತ್ವಜ್ಞಾ ಮುಚ್ಯನ್ತೇಚ ಶುಭಾ ಶುಬಾತ್" ಎಂಬದಾಗಿ ಬ್ರಹ್ಮಸಂಹಿತೆಯಲ್ಲಿ ತತ್ವಕ್ರಮವೆನ್ನು ಹೇಳಿ ಮುಂದೆಯೂ ಇದು ಪ್ರಸಿದ್ಧವಾಗಿ ಹೇಳಲ್ಪಟ್ಟಿರುವುದು.

(ಎಲೈ ಭರತಶ್ರೇಷ್ಠನೇ ? ಶ್ರೇಷ್ಠವಾದ ನನ್ನ ಪ್ರಕೃತಿಯು ಗೋಪುರ ಮಂಡಪ ಪ್ರಾಕಾರಾದಿ ಪರಿಣಾಮವನ್ನು ಹೊಂದಿ ವ್ಯಕ್ತವಾಗಿಯೂ ಆಕಾಶಾದಿ ರೂಪದಿಂದ ಅವ್ಯಕ್ತವಾಗಿಯೂ ಇರುವುದು. ಅಂತಹ ದಿವ್ಯ ಸ್ಥಲವನ್ನು ಮುಕ್ತರೆಲ್ಲರೂ ಪ್ರವೇಶಿಸಿ ಸ್ವಸ್ವರೂಪಾವಿರ್ಭಾವದಿಂದ ಪ್ರಕಾಶಿಸುವರೆಂದು ಶ್ರೀಹರಿವಂಶ ಪ್ರಮಾಣಾರ್ಥವು ಪರಿಶುದ್ಧವಾದ ಸ್ಫಟಿಕ ಶಿಲೆಯಂತೆ ಸ್ವಚ್ಛವಾಗಿಯೂ ಸುಖರೂಪವಾಗಿಯೂ ಪರಮಪದವಿರುವುದು ಇಂತಹ ಆ ಪರಮಾತ್ಮನ ಸ್ಥಾನವನ್ನು ಹೊಂದುವುದಕ್ಕೆ ಸಾಧನವಾದ ತತ್ವಜ್ಞಾನದಿಂದ ಕೂಡಿದವರಾಗಿ ಅಂತಹ ದಿವ್ಯವಾದ ಪರಮಪದವನ್ನು ಹೊಂದಿದವರು ಪುನಶ್ಚ ಶುಭಾ ಶುಭಾತ್ಮಕವಾದ ಸಂಸಾರಕ್ಕೆ ಬಾರದೆ ವಿಮುಕ್ತರಾಗುವರೆಂದು ಬ್ರಹ್ಮಸಂಹಿತಾ ವಚನಾರ್ಥವು)

ಈ ಪರಮಾಕಾಶದಲ್ಲಿ ಅಪರಾಜಿತಾ ಎಂಬ ಒಂದು ಪಟ್ಟಣವೂ, ಅದರಲ್ಲಿ ಸಹಸ್ರ ಸ್ತಂಭಗಳೊಡನೆ ಕೂಡಿರುವ ಒಂದು ರತ್ನ ಮಂಡಪವೂ ಅದರಲ್ಲಿರುವ ದಿವ್ಯ ಪರ್ಯಂಕದಲ್ಲಿ ಲಕ್ಷ್ಮೀಸಮೇತನಾಗಿರುವ ಪರಮಪುರುಷನು ನಿತ್ಯ ಮುಕ್ತರುಗಳಿಂದ ಅನುಭವಿಸಲ್ಪಡುವನೆಂದು ಛಾಂ

ದೋಗ್ಯ ತೈತ್ತಿರೀಯ ಕೌಷೀತಕೀ ಮೊದಲಾದ ಶ್ರುತಿಗಳಲ್ಲಿ ಪ್ರಸಿದ್ಧ ವಾಗಿರುವುದು. ಅಲ್ಲಿರುವ ಪ್ರಮಾಣಗಳನ್ನಿಲ್ಲಿ ಅನುಸಂಧಿಸಬೇಕು.‖೧೬‖

## (೧೭ನೇ ನಾಮವು) ಅಕ್ಷರಃ,

### ಓಮ್‖ ಅಕ್ಷರಾಯನಮಃ.

(ಶಂ‖ ಭಾ) ಅಕ್ಷರಃ–ನಕ್ಷರತೀತ್ಯಕ್ಷರಃ–ಪರಮಾತ್ಮಾ, ನಾಶವಿಲ್ಲ ದವನಾಗಿರುವುದರಿಂದ ಅಕ್ಷರವೆಂದು ಪರಮಾತ್ಮನು ಹೇಳಲ್ಪಡುವನು. ಆದರೆ ಪರಮಾರ್ಥ ದೃಷ್ಟಿಯಿಂದ ನೋಡಿದರೆ "ತತ್ತ್ವಮಸಿ" ಇತ್ಯಾದಿ ಶ್ರುತಿಗಳಿಂದ (ಜೀವವಾಚಕವಾದ) ಕ್ಷೇತ್ರಜ್ಞ ಶಬ್ದಕ್ಕೂ (ಪರಮಾತ್ಮ ವಾಚಕವಾದ) ಅಕ್ಷರ ಶಬ್ದಕ್ಕೂ ಭೇದವಿಲ್ಲದೇ ಇದ್ದರೂ ವ್ಯಾವಹಾರಿಕ ಭೇದವಿರುವದಾಗಿ ತಿಳಿಯಬೇಕು. ವ್ಯವಹಾರ ಪ್ರಸಿದ್ಧಿಯು ಭೇದ ಸಾಧಕವಾಗಲಾರದೊ? ಎಂದರೆ ಪ್ರಸಿದ್ಧಿಯು ಅಪ್ರಮಾಣವಾದ್ದರಿಂದ ಅಭೇದ ಸಿದ್ಧಿಗೇ ಯಾವ ಬಾಧಕವೂ ಇಲ್ಲವೆಂದರಿಯಬೇಕು.

(ವಿ‖ ಭಾ) ಮೋಕ್ಷಸ್ಥಾನದಲ್ಲಿ ಮುಕ್ತಾತ್ಮರುಗಳಿಂದ ಸರ್ವಕಾಲ ದಲ್ಲಿಯೂ ವಿರಾಮವಿಲ್ಲದೆ ಅನುಭವಿಸಲ್ಪಟ್ಟರೂ ಮೇಲ್ ಮೇಲೇ ಗುಣ ಗಳು ಅತಿಶಯಿಸಿರುವುದರಿಂದ ಭೋಗ್ಯತೆಯಿಂದ ಅತ್ಯಂತವಾಗಿ ಅತಿಶಯ ವನ್ನು ಹೊಂದಿರುತ್ತಾನೆಂದು ಈ ಮುಂದಿನ ನಾಮವು ಹೇಳುವುದು.

ಅಕ್ಷರಃ–ನಕ್ಷರತೀತ್ಯಕ್ಷರಃ, ಕಮ್ಮಿಯಾಗದವನು. ನ್ಯೂನತೆಯನ್ನು ಹೊಂದದವನೆಂದರ್ಥವು. ಇದಕ್ಕೇ "ನಿರವದ್ಯಃ ಪರಂಪ್ರಾಪ್ತೇರ್ನಿರಧಿ ಷ್ಠೋಽಕ್ಷರ ಕ್ರಮಃ" ಎಂಬ ಪ್ರಮಾಣವನ್ನನುಸಂಧಿಸಬೇಕು.

(ಪರಮಪುರುಷನನ್ನು ಹೊಂದಿದವನಾಗಿರುವುದರಿಂದ ಸಮಸ್ತ ದೋಷಗಳಿಂದಲೂ ಬಿಡಲ್ಪಟ್ಟು ಪ್ರಕೃತ್ಯಧಿಷ್ಠಾನ ಶೂನ್ಯನಾಗಿ, (ಎಂದರೇ ಪ್ರಕೃತಿ ಪರಿಣಾಮವಾದ ದೇಹ ಸಂಬಂಧ ಶೂನ್ಯನಾಗಿ) ನಿರ್ವಿಕಾರನಾಗಿರುವನೆಂದು ಈ ಪ್ರಮಾಣಾರ್ಥವು)

ಇಂತಹ ಕ್ರಮವನ್ನನುಸರಿಸಿಯೇ ಶಾರೀರಕಶಾಸ್ತ್ರದ ನಾಲ್ಕನೇ ಅಧ್ಯಾಯದಲ್ಲಿ ಮೋಕ್ಷಸ್ವರೂಪವು ನಿರ್ಣಯಿಸಲ್ಪಟ್ಟಿರುವುದು. ಈ ನಾಲ್ಕನೇ ಅಧ್ಯಾಯದಲ್ಲಿ ಹೇಳಿರುವ ಫಲವು ಮೋಕ್ಷವಲ್ಲವೆಂತಲೂ ಇದು ಸಾಮಾನ್ಯ ಫಲ ವಿಷಯವೆಂತಲೂ ಕೆಲವರು ಹೇಳುತ್ತಾರೆ. ಅದು ಯುಕ್ತವಲ್ಲವು. ಏತಕ್ಕೆಂದರೆ? ಇದಕ್ಕೆ ಮೊದಲು ಮೂರು ಅಧ್ಯಾಯ

ಗಳಲ್ಲಿ ಹೇಳಿರುವ ಸಾಧನಗಳೂ ಅವುಗಳಲ್ಲಿ ಉದಾಹರಿಸಲ್ಪಟ್ಟ ಶ್ರುತಿ ಮೊದಲಾದವುಗಳೂ ಸಾಮಾನ್ಯ ಫಲ ವಿಷಯವೆಂದು ವ್ಯವಸ್ಥಿತವಾದ ಮೇಲೆ ಈ ಅಧ್ಯಾಯಕ್ಕೂ ಅದೇ ವಿಷಯವೆಂದರೆ ಮೋಕ್ಷ ರೂಪ ಫಲ ಪ್ರಸಕ್ತಿಯು ಈ ಶಾರೀರಕ ಶಾಸ್ತ್ರದಲ್ಲಿ ಹೇಳಲಿಲ್ಲವೆಂತಲೇ ಪ್ರಾಪ್ತವಾಗುವುದು. ಆದುದರಿಂದ ಇದು ಸಾಮಾನ್ಯ ಫಲ ವಿಷಯವಾಗಲಾರದೆಂದರಿಯಬೇಕು. ‖ ೧೭ ‖

ಈ ಪ್ರಕಾರವಾಗಿ ಈ ಯೆರಡನೇ ಶ್ಲೋಕದಲ್ಲಿ ವಿವರಿಸಲ್ಪಟ್ಟ (೯) ನಾಮಗಳಿಗೂ "ಶರೀರತ್ವಾಚ್ಚ ಜಗತಸ್ತು ದೋಷೈರ್ನ ಕದಾಚನ| ಲಿಪ್ಯತೇಯಸ್ಸ "ಪೂತಾತ್ಮಾ''(೧೦) ನಭುಂಕ್ತೇಚ ಫಲಾನಿಯಃ‖ ಯೇನ ಭೂತಾನ್ಯಾತ್ಮವನ್ತಿ ನಾಯಮನ್ಯೇನ ಚಾತ್ಮವಾನ್ | ಅತೋಹ್ಯಾತ್ಮೇಶ್ವರತ್ವಾಚ್ಚ "ಪರಮಾತ್ಮಾ''(೧೧)ಪ್ರಕೀರ್ತಿತಃ‖ ಬ್ರಹ್ಮ ಸಾಧರ್ಮ್ಯಮಾಪನ್ನಾ ಮುಕ್ತಾಸ್ತೇಷಾಂ ಪರಾಗತಿಃ | ಮುಖ್ಯಪ್ರಾಪ್ಯ ಸ್ತತಶ್ಚೈಷೀ "ಮುಕ್ತಾನಾಂ ಪರಮಾಗತಿಃ'' ‖ (೧೨) ನವೀಯತೇಚ ವೈಕುಂಠಾನ್ಮ ಕ್ಲೋ ಧಸ್ತಾ ದತೋ"ಽವ್ಯಯಃ'' ‖ (೧೩) ಮುಕ್ತೇಭ್ಯ ಸ್ವಾತ್ಮ ಪರ್ಯಂತ ದಾನಾ "ತ್ಪುರುಷ'' ಈರಿತಃ ‖ (೧೪) ಸ್ವಯಮಾನಂದಯನ್ ತೃಪ್ಯನ್"ಸಾಕ್ಷೀ''(೧೫)ಸಾಕ್ಷಾತ್ಕರೋತಿಸಃ| ಕ್ಷೇತ್ರಂತು ಪರಮಂವ್ಯೋಮ ಮುಕ್ತೇಭ್ಯೋವೇತ್ತಿ ನಿತ್ಯಶಃ | ದಾತುಂ ಸ್ವಾನುಭವಂ ಯಶ್ಚ "ಕ್ಷೇತ್ರಜ್ಞ'' (೧೬) ಸ್ಸತುಕಥ್ಯತೇ‖ ಸದಾಽನುಭೂಯ ಮಾನೋಪಿ ನಿಸ್ಸೀಮ ಗುಣ ಗೌರವಾತ್ | ಮುಕ್ತೈಃ ಕ್ವಚಿನ್ನ ಕ್ಷರತೀ "ತ್ಯಕ್ಷರಃ'' (೧೭) ಪರಿಕೀರ್ತಿತಃ '' ಎಂಬ ವಿವೃತಿಯನ್ನು ಕಾಣಬಹುದು. (ನಾಮಗಳು (೧೭) ಪೂರ್ಣಗಳಾದವು. ‖ ಶ್ಲೋ ‖ ೨ ‖

ಮೂ‖ ಯೋಗೋ ಯೋಗವಿದಾಂನೇತಾ ಪ್ರಧಾನಪುರುಷೇಶ್ವರಃ | ನಾರಸಿಂಹವಪು ಶ್ರೀಮಾನ್ಕೇಶವಃ ಪುರುಷೋತ್ತಮಃ ‖೩‖

(೧೮ನೇ ನಾಮವು) ಯೋಗಃ, ಓಂ‖ ಯೋಗಾಯನಮಃ.

(ಶಂ‖ ಭಾ) ಯೋಗಃ-" ಜ್ಞಾನೇಂದ್ರಿಯಾಣಿ ಸರ್ವಾಣಿ ನಿಗೃಹ್ಯ ಮನಸಾ ಸಹ | ಏಕತ್ವ ಭಾವನಾ ಯೋಗಃ ಕ್ಷೇತ್ರಜ್ಞ ಪರಮಾ

ತ್ಮನೋಃ " ಎಂಬೀ ಪ್ರಮಾಣಾನುಸಾರವಾಗಿ ಮನಸ್ಸಿನೊಡನೆ ಸಕಲವಾದ ಜ್ಞಾನೇಂದ್ರಿಯಗಳನ್ನು ನಿಗ್ರಹಿಸಿ ಕ್ಷೇತ್ರಜ್ಞ ಪರಮಾತ್ಮರ ಏಕತ್ವಭಾವನೆಯೇ ಯೋಗವೆನ್ನಲ್ಪಡುವುದು. ಇಂತಹ ಯೋಗದಿಂದ ಹೊಂದುವುದಕ್ಕೆ ಯೋಗ್ಯನಾಗಿರುವುದರಿಂದ "ಯೋಗಃ" ಎನ್ನಲ್ಪಡುವನು.

(ವಿ|| ಭಾ) ಈ ಪ್ರಕಾರವಾಗಿ ಮುಕ್ತಪ್ರಾಪ್ಯನಾದವನು ಯಾವ ಪರಮಪುರುಷನೊ ಅವನು ತಾನೇ ಮೋಕ್ಷಕ್ಕೆ ನಿರುಪಾಧಿಕವಾದ ಉಪಾಯವೆಂದು ಈ ನಾಮದಿಂದ ಹೇಳಲ್ಪಡುವುದು. ಯೋಗಃ-ಹೊಂದಿಸುವಂತವನು. ಎಂದರೆ ಜೀವಾತ್ಮರಿಗೆ ಸಾಯುಜ್ಯವನ್ನು ಕೊಡುವುದಕ್ಕೆ (ಇವರ ಅಪೇಕ್ಷಾದಿಗಳನ್ನಪೇಕ್ಷಿಸದೆ) ಸ್ವತಃ ಉಪಾಯವಾಗಿರುವಂತವನೆಂದರ್ಥವು. ಈ ಅರ್ಥವು "ಏಷಹ್ಯೇವಾನಂದಯಾತಿ || ತದ್ಧೇತುವ್ಯಪದೇಶಾಚ್ಚ || ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾಶುಚಃ" ಇತ್ಯಾದಿ ಪ್ರಮಾಣಗಳಲ್ಲಿ ವ್ಯಕ್ತವಾಗಿರುವುದು.

(ಇವನೇಯಲ್ಲವೊ ಆನಂದಪಡಿಸುವಂತವನು, ಅವನು ಕಾರಣನೆಂದು ಹೇಳಲ್ಪಡುವುದರಿಂದಲೂ. ನಾನು ನಿನ್ನನ್ನು ಸಕಲ ಪಾಪಗಳ ದಶೆಯಿಂದ ಬಿಡಿಸುವೆ ನೆಂದೀ ಪ್ರಮಾಣಾರ್ಥವು)

(ಮ|| ಭಾ) ಯುಜ್ಯತೇ-ಸಮಾಧತ್ತೇ, ಇತಿಯೋಗಃ, ಈ ಅರ್ಥವೊ (ವಿ|| ಭಾ) ಅರ್ಥವನ್ನೇ ಅನುಸರಿಸಿ ಜೀವಾತ್ಮರಿಗೆ ಪ್ರಕೃತಿ ವಿಮೋಚನದಿಂದ ಸಮಾಧಾನಪಡಿಸುವಂತವನೆಂಬ ಅರ್ಥವನ್ನು ತಿಳಿಯಬೇಕು.||೧೮||

## (೧೯ನೇ ನಾಮವು) ಯೋಗವಿದಾಂನೇತಾ,

ಓಮ್|| ಯೊಗವಿದಾಂನೇತ್ರೇನಮಃ.

(ಶಂ|| ಭಾ) ಯೋಗವಿದಾಂನೇತಾ-"ತೇಷಾಂ ನಿತ್ಯಾಭಿ ಯುಕ್ತಾನಾಂ ಯೋಗ ಕ್ಷೇಮಂ ವಹಾಮ್ಯಹಂ" ಎಂಬ ಗೀತಾ ವಚನಾನುಸಾರವಾಗಿ "ಸರ್ವಕಾಲದಲ್ಲಿಯೂ ಅವಿಚ್ಛಿನ್ನವಾಗಿ ಧ್ಯಾನಿಸುವಂತವರಯೋಗಕ್ಷೇಮವನ್ನು ವಹಿಸುವೆನೆಂಬ ಭಗವದುಕ್ತಿಯಿಂದ, ಯೋಗವನ್ನು ವಿಚಾರಿಸುವಂತವರು (ಯದ್ವಾ) ತಿಳಿದವರು (ಅಥವಾ) ಹೊಂದಿದವರು 'ಯೋಗವಿತ್' ಎನ್ನಲ್ಪಡುವರು, ಅಂತವರಿಗೆ ಯೋಗ ಕ್ಷೇಮವಹನವೇ ಮೊದಲಾ

ದವುಗಳಿಂದ ನಾಯಕನಾಗಿರುವುದರಿಂದ "ಯೋಗವಿದಾಂನೇತಾ" ಎನ್ನಲ್ಪಡುವನು.

(ವಿ॥ ಭಾ) ಯೋಗವಿದಾಂ-ಈ ಪ್ರಕಾರವಾಗಿ ತನ್ನನ್ನು ಉಪಾಯುವನ್ನಾಗಿ ಆಶ್ರಯಿಸದೆ ಕೇವಲ ಕರ್ಮ ಜ್ಞಾನಾದಿಗಳನ್ನೇ ಉಪಾಯವನ್ನಾಗಿ ಅವಲಂಬಿಸಿರುವಂತವರಿಗೂ, ನೇತಾ-ಫಲಸಿದ್ಧಿ ಯಾಗುವವರಿಗೂ ನಿರ್ವಾಹಕನಾಗಿರುವಂತವನು "ಉಪಾಯ ಭಕ್ತಿ ನಿಷ್ಠಾಯೇ ತೇಚ ಯೋಗವಿದ ಸ್ಸ್ಮೃತಾಃ | ತೇಷಾಂಚ ಫಲ ಪರ್ಯಂತಂ ನೇತಾ ನಿರ್ವಾಹಕ ಶ್ಚಯಃ" ಎಂಬೀ ವಿವರಣವೂ ಈ ಅರ್ಥವನ್ನು ಬೋಧಿಸುವುದು.

ಮತ್ತು "ತೇಷಾಮೇವಾನುಕಂ ಪಾರ್ಥ ಮಹಮಜ್ಞಾನಜಂ ತಮಃ| ನಾಶಯಾಮಿ ॥ ತೇಷಾಮಹಂ ಸಮುದ್ಧರ್ತಾ ॥ ಸಂಸಾರಪಾರಂ ಪರಮಿಪ್ಸನಾನ್ಯೈ ರಾರಾಧನೀಯೊ ಹರಿರೇಕ ಏವ॥ ಪರಾಮೃತಾ ತ್ಪರಿಮುಚ್ಯಂತಿ ಸರ್ವೇ ॥ ಜುಷ್ಟಸ್ತತಸ್ತೇನಾಮೃತ ತ್ವಮೇತಿ ॥"

(ಅವರುಗಳನ್ನು ಅನುಗ್ರಹಿಸುವುದಕ್ಕಾಗಿಯೇ ಅಜ್ಞಾನದಿಂದುಂಟಾದ ತಮಸ್ಸನ್ನು ನಾಶಪಡಿಸುವೆನು. ಅವರುಗಳಿಗೆ ನಾನು ಉದ್ಧಾರಕನಾಗಿರುವೆನು. ಸಂಸಾರ ಸಮುದ್ರದ ದಡವನ್ನು ಸೇರಬೇಕೆಂದಪೇಕ್ಷಿಸುವಂತವರಿಂದ ಆರಾಧಿಸಲ್ಪಡತಕ್ಕವನು ಶ್ರೀಹರಿಯೊಬ್ಬನೆ. ಸಂಸಾರವನ್ನು ಬಿಟ್ಟು ಪರಮಾತ್ಮನನ್ನು ಹೊಂದಿ ಬಂಧದ್ದಶೆಯಿಂದ ಬಿಡಲ್ಪಟ್ಟವರಾಗುವರು. ಅಂತಹ ಪರಮಾತ್ಮ ಧ್ಯಾನದಿಂದ ಕೂಡಿದವರು ಅವನಿಂದಲೇ ಅನಂತರದಲ್ಲಿ ಮೋಕ್ಷವನ್ನು ಹೊಂದಿದವರಾಗುವರು.)

ಇತ್ಯಾದಿ ಪ್ರಮಾಣಗಳು ಈ ಅರ್ಥವನ್ನು ಹೇಳುವುವು. ॥ ೧೯ ॥

## (೨೦ನೇ ನಾಮವು) ಪ್ರಧಾನಪುರುಷೇಶ್ವರಃ,

### ಓಮ್॥ ಪ್ರಧಾನಪುರುಷೇಶ್ವರಾಯನಮಃ.

(ವಿ॥ ಬಾ) ಈ ಹಿಂದಿನ ಅರ್ಥವನ್ನೇ ಈ ನಾಮವೂ ಹೇಳುವುದು ಬಂಧ ಕಾರಣವಾದ ಪ್ರಕೃತಿಯನ್ನೂ ಅದರಿಂದ ಬಂಧವನ್ನು ಹೊಂದಿರುವ ಜೀವಕೋಟಿಗಳನ್ನೂ ಸರ್ವವಿಧದಲ್ಲಿಯೂ ಆಳುವಂತವನು. ಇದಕ್ಕೆ ಸಂಯುಕ್ತಮೇತತ್ ಕ್ಷರ ಮಕ್ಷರಂಚ ವ್ಯಕ್ತಾ ವ್ಯಕ್ತಂ ಭರತೇ ವಿಶ್ವಮೇಕಃ ॥ ಪ್ರಧಾನ ಕ್ಷೇತ್ರಜ್ಞ ಪತಿರ್ಗುಣೇಶಃ | ಕ್ಷರಾತ್ಮಾನಾವೀಶತೇ ದೇವ ಏಕಃ॥" ಇತ್ಯಾದಿ ಪ್ರಮಾಣಗಳು ಆಧಾರಭೂತಗಳಾಗಿರುವುವು.

(ಒಂದರೊಡನೆ ಒಂದು ಸೇರಿ ವ್ಯಕ್ತವಾಗಿಯೂ ಅವ್ಯಕ್ತವಾಗಿಯೂ ಇರುವ ಚೇತನಾಚೇತನ ರೂಪವಾದ ಸಕಲ ಪ್ರಪಂಚವನ್ನೂ ಸರ್ವ ನಿಯಾಮಕನಾದ ಪರಮ ಪುರುಷನು ಧರಿಸುತ್ತಾನೆ. (ಅವರಲ್ಲಿ ಜೀವಾತ್ಮನು ಕರ್ಮವಶನಾಗಿ ಅಂತಹ ಕರ್ಮ ಫಲ ವನ್ನು ಅನುಭವಿಸುತ ಪರವಶನಾಗಿರುವುದರಿಂದ ಬಂಧಕ್ಕೆ ಸಿಕ್ಕಿರುವನು. ಅನಂತರದಲ್ಲಿ ಪರಬ್ರಹ್ಮನನ್ನು ತಿಳಿದುಕೊಂಡವನಾದರೆ ಸಮಸ್ತ ಪಾಪಗಳಿಂದ ಬಿಡಲ್ಪಡುವನು.) ಪ್ರಧಾನವೆನ್ನಲ್ಪಡುವ ಅಚೇತನಕ್ಕೂ ಕ್ಷೇತ್ರಜ್ಞನೆನ್ನಲ್ಪಡುವ ಚೇತನನಿಗೂ ಪತಿಯಾದ ವನು. ಗುಣಗಳಿಗೆ ಸ್ವಾಮಿಯು. ಕ್ಷರವೆನ್ನಲ್ಪಡುವ ಅಚೇತನವನ್ನೂ ಆತ್ಮಗಳನ್ನೂ ಸ್ವಯಂ ಪ್ರಕಾಶನಾದ ಪರಮಪುರುಷನೊಬ್ಬನೇ ಆಳುವನು. ಎಂದೀ ಪ್ರಮಾಣಾರ್ಥವು.)

(ಶಂ॥ ಮ) ಪ್ರಧಾನವೆಂಬ ಪ್ರಕೃತಿಗೂ (ಶಂ॥ ಮಾಯೆಗೂ) ಪುರುಷನೆಂಬ ಜೀವನಿಗೂ ಪ್ರಭುವಾದವನು. ‖ ೨೦ ‖

## (೨೧ನೇ ನಾಮವು) ನಾರಸಿಂಹವಪುಃ,
## ಓಮ್॥ ನಾರಸಿಂಹವಪುಷೇನಮಃ.

(ಶಂ॥ ಮ) ನಾರಸಿಂಹವಪುಃ-ಯಾವ ಪರಮಪುರುಷನ ಶರೀರದಲ್ಲಿ ಮನುಷ್ಯನ ಮತ್ತು ಸಿಂಹದ ಅವಯವಗಳು ಕಾಣಲ್ಪಡುವುವೋ ಅವನು “ನಾರಸಿಂಹವಪುಃ” ಎನ್ನಲ್ಪಡುವನು

(ವಿ॥ ಭಾ) ತನ್ನಲ್ಲಿ ಭಕ್ತಿಮಾಡತಕ್ಕವರಿಗೆ ಪ್ರಾಪ್ತವಾಗುವ ಪ್ರತಿ ಬಂಧಕಗಳನ್ನು ಹೋಗಲಾಡಿಸುವನೆಂದು ಈ ನಾಮವು ಹೇಳುವುದು. ನಾರಸಿಂಹವಪುಃ-ಭಕ್ತನಾದ ಪ್ರಹ್ಲಾದನಿಗೆ ಭಯವನ್ನು ನಿವಾರಣ ಮಾಡುವುದಕ್ಕಾಗಿ ಅವನು ಅಪೇಕ್ಷಿಸಿದ ಕ್ಷಣದಲ್ಲಿಯೇ ‘ನರಸಿಂಹ’ ವೆಂಬುವ ದಿವ್ಯವಾದ ಶರೀರವನ್ನು ಧರಿಸಿದವನು. ‖ ೨೧ ‖

## (೨೨ನೇ ನಾಮವು) ಶ್ರೀಮಾನ್, ಓಮ್॥ ಶ್ರೀಮತೇನಮಃ.

(ಶಂ॥ ಭಾ) ಶ್ರೀಮಾನ್-ಯಾವ ಪರಮಪುರುಷನ ವಕ್ಷಸ್ಸ್ಥಲದಲ್ಲಿ ಸರ್ವಕಾಲದಲ್ಲಿಯೂ ಶ್ರೀದೇವಿಯು ವಾಸಮಾಡುವಳೋ; ಅಂತವನು “ಶ್ರೀಮಾನ್” ಎನ್ನಲ್ಪಡುವನು.

(ವಿ॥ ಭಾ) ಈ ಪ್ರಕಾರವಾಗಿ ಪರಸ್ಪರ ವಿರುದ್ಧವಾಗಿರುವ ನರ ಮತ್ತು ಸಿಂಹ ಶರೀರಗಳೊಡನೆ ಸೇರಿದ ಅವತಾರವನ್ನು ಮಾಡಿದ್ದರೂ

(ನೋಡುವದಕ್ಕೆ ಜುಗುಪ್ಸಾವಹವಾದ ವೈರೂಪ್ಯವನ್ನು ಹೊಂದದೆ) ಸೌಂದರ್ಯ ಲಾವಣ್ಯಾದಿಗಳಿಂದ ಅತಿಮನೋಹರನಾಗಿರುವಂತವನು "ಶ್ರೀಮಾನ್" ಎನ್ನಲ್ಪಡುವನು. ‖ ೨೨ ‖

## (೨೩ನೇ ನಾಮವು) ಕೇಶವಃ, ಓಮ್‖ ಕೇಶವಾಯನಮಃ.

(ಶಂ ‖ ಭಾ ‖ ವಿ) ಅಭಿರೂಪಗಳಾದ (ಅತ್ಯಂತ ಸುಂದರಗಳಾದ) ಕೂದಲುಗಳು ಯಾವನಿಗೆ ಇರುವವೋ; ಅವನು 'ಕೇಶವ' ನೆಂತಲಾದರೂ (ಅಥವಾ) (ಶಂ) ಕಶ್ಚ ಅಶ್ಚ ಈಶಶ್ಚ ಕೇಶಾಃ-ಬ್ರಹ್ಮ ವಿಷ್ಣು ಶಿವರೆಂಬ ತ್ರಿಮೂರ್ತಿಗಳು ಕೇಶರೆನ್ನಲ್ಪಡುವರು ಅವರು ಯಾವನ ವಶದಲ್ಲಿರುವರೊ ಅಂತವನು 'ಕೇಶವ' ನೆಂತಲಾದರೂ, (ಯದ್ವಾ) (ಶಂ‖ ಮ) "ಯಸ್ಮಾತ್ತ್ವಯೈವ ದುಷ್ಟಾತ್ಮಾ ಹತಃ ಕೇಶೀ ಜನಾರ್ದನ | ತಸ್ಮಾತ್ಕೇಶವ ನಾಮ್ನಾ ತ್ವಂ ಲೋಕೇಜ್ಞೇಯೊ ಭವಿಷ್ಯಸಿ" ಎಂಬ ವಿಷ್ಣುಪುರಾಣ ವಚನದಲ್ಲಿ ಎಲೈ ಜನಾರ್ದನನೇ? ಯಾವ ಕಾರಣದಿಂದ ದುಷ್ಟಾತ್ಮನಾದ ಕೇಶಿ ಎಂಬ ಅಸುರನು ನಿನ್ನಿಂದ ಕೊಲ್ಲಲ್ಪಟ್ಟನೊ; ಆ ಕಾರಣದಿಂದ ನೀನು 'ಕೇಶವ' ನೆಂದು ಲೋಕದಲ್ಲಿ ಪ್ರಖ್ಯಾತನಾಗು" ಎಂದು ಹೇಳಿರುವ ಕಾರಣದಿಂದ 'ಕೇಶವ' ನೆಂತಲಾದರೂ ಹೇಳಲ್ಪಡುವನು.

(ವಿ‖ ಬಾ) ಇಂತಹ ಸೌಂದರ್ಯಾದಿಗಳಿಗೆ ತಕ್ಕ ಲಕ್ಷಣವು ಇದೆಂದು ಈ ನಾಮದಿಂದ ಹೇಳುತ್ತಾರೆ. ಅತ್ಯಂತವಾಗಿ ಕೊಂಡಾಡುವುದಕ್ಕೆ ಯೋಗ್ಯವಾಗಿರುವಂತೆ ನೀಲ ವರ್ಣದೊಡನೆ ಅತಿ ಸುಂದರವಾಗಿ ಪ್ರಕಾಶಿಸುವ ಕುಟಿಲ ಕುಂತಲಗಳಿಂದೊಪ್ಪಿದವನು ‖೨೩‖

## (೨೪ನೇ ನಾಮವು) ಪುರುಷೋತ್ತಮಃ, ಓಮ್‖ ಪುರುಷೋತ್ತಮಾಯನಮಃ.

(ಶಂ‖ ಮ‖ ಭಾ) "ಯಸ್ಮಾತ್ಕ್ಷರ ಮತೀತೋಽಹ ಮಕ್ಷರಾದಪಿ ಚೋತ್ತಮಃ| ಅತೋಽಸ್ಮಿಲೋಕೇ ವೇದೇಚಪ್ರಥಿತಃ ಪುರುಷೋತ್ತಮಃ" ಎಂಬೀ ಭಗವದ್ಗೀತಾ (೧೬)ನೇ ಅಧ್ಯಾಯದ ಕಡೆಯಲ್ಲಿ ಹೇಳಿರುವ ಪ್ರಕಾರವಾಗಿ ಕ್ಷರಾಕ್ಷರ ಶಬ್ದದಿಂದ ಹೇಳಲ್ಪಡುವ ಪುರುಷರುಗಳಿಗಿಂತಲೂ ಶ್ರೇಷ್ಠನಾದುದರಿಂದ "ಪುರುಷೋತ್ತಮಃ" ಎನ್ನಲ್ಪಡುವನು.

(ವಿ| ಭಾ) ಲೋಕದಲ್ಲಿ ಕಾಣಲ್ಪಡುವ ಲಕ್ಷಣಮುಳ್ಳವನೆಂದು ಪರಮ ಪುರುಷನನ್ನು ಹೇಳಿದರೆ ಯೆಲ್ಲರಂತೆಯೆ ಇವನನ್ನು ನೋಡುವರೆಂದು ನೆನಸಿ ಅಂತಹ ಕೊರತೆಯನ್ನು ನಿವೃತ್ತಿಸುವುದಕ್ಕಾಗಿ ಅವನು ಲೋಕ ವಿಲಕ್ಷಣನೆಂದು ಈ ನಾಮವು ಹೇಳುವುದು. ಸರ್ವಪುರುಷರಿಗಿಂತಲೂ ಅತ್ಯಂತ ಶ್ರೇಷ್ಠನಾದವನು 'ಪುರುಷೋತ್ತಮ' ನೆನ್ನಲ್ಪಡುವನು.||೨೪||

ಈ ಪ್ರಕಾರವಾಗಿ ಈ ಮೂರನೇ ಶ್ಲೋಕದಲ್ಲಿ ವಿವರಿಸಲ್ಪಟ್ಟ (೭) ನಾಮಗಳಿಗೂ

" ಉಕ್ತಂಹಿ ಮುಕ್ತಪ್ರಾಪ್ಯತ್ವಮಥೋಪಾಯತ್ವ ಮುಚ್ಯತೇ | ಸಾಕ್ಷಾನ್ಮೋಕ್ಷೈಕ ಹೇತುತ್ವಾತ್ " ಯೋಗ " (೧೮) ಇತ್ಯಭಿ ಧೀಯತೇ || ಉಪಾಯ ಭಕ್ತಿ ನಿಷ್ಠಾಯೇ ತೇಚ "ಯೋಗವಿದಃ" ಸ್ಮೃತಾಃ| ತೇಷಾಂ ಚ ಫಲ ಪರ್ಯಂತಂ 'ನೇತಾ' (೧೯) ನಿರ್ವಾಹ ಕತ್ವಯಃ|| ಬಂಧಹೇತೋಃ ಪ್ರಧಾನಸ್ಯ ಬದ್ಧ್ಯಮಾನ ನೃಣಾಂಚಯಃ | ನಿಯಾಮಕ ಸ್ಸರ್ವದಾಸಃ " ಪ್ರಧಾನಪುರುಷೇಶ್ವರಃ " (೨೦) || ನರವತ್ಸಿಂಹ ವದ್ರೂಪಂ ಯೋಬಿಭರ್ತ್ಯ ಭಯಪ್ರದಂ | ಯಥಾಕಾಮಂತು ಭಕ್ತಾನಾಂ " ನಾರಸಿಂಹ ವಪುಶ್ಚ " (೨೧) ಸಃ|| ವಿರುದ್ಧಾಕಾರವತ್ತ್ವೇಪಿ "ಶ್ರೀಮಾನ್" (೨೨) ಸರ್ವಮನೋಹರಃ | ಪ್ರಶಸ್ತ ನೀಲಕೇಶತ್ವಾತ್ " ಕೇಶವಃ " (೨೩) ಪರಿಕೀರ್ತಿತಃ || ಬದ್ಧಾದಿ ಪುರುಷೇಭ್ಯೋಯೋ ಹ್ಯುತ್ಕೃಷ್ಟಃ "ಪುರುಷೋತ್ತಮಃ " (೨೪) ||

ಎಂಬ ವಿವೃತಿಯನ್ನು ಕಾಣಬಹುದು. ಈ ರೀತಿಯಾಗಿ (೨೪) ನಾಮಗಳು ವಿವರಿಸಲ್ಪಟ್ಟವು.

ಮೂ|| ಸರ್ವ ಶ್ಶರ್ವ ಶ್ಶಿವ ಸ್ಸ್ಥಾಣು ರ್ಭೂತಾದಿ ರ್ನಿಧಿರವ್ಯಯಃ | ಸಂಭವೋ ಭಾವನೋ ಭರ್ತಾ ಪ್ರಭವಃ ಪ್ರಭು ರೀಶ್ವರಃ ||೪||

(೨೫ನೇ ನಾಮವು) ಸರ್ವಃ, ಓಮ್ || ಸರ್ವಸ್ಮೈ ನಮಃ-

(ಶಂ || ಮ || ಭಾ) " ಅಸತಶ್ಚ ಸತಶ್ಚೈವ ಸರ್ವಸ್ಯ ಪ್ರಭವಾಪ್ಯಯಾತ್ | ಸರ್ವಸ್ಯ ಸರ್ವದಾ ಜ್ಞಾನಾ ತ್ಸರ್ವಮೇನಂ ಪ್ರಚಕ್ಷತೇ " ಎಂಬ

ದಾಗಿ ಶ್ರೀಭಗವದ್ವ್ಯಾಸ ದೇವರು ಹೇಳಿರುವಂತೆ ಸದಸತ್ತುಗಳೆಂಬ ಸಮಸ್ತಕ್ಕೂ ಜನನ ಮರಣಗಳನ್ನುಂಟುಮಾಡತಕ್ಕವನಾಗಿರುವುದರಿಂದಲೂ ಸರ್ವಕಾಲಗಳಲ್ಲಿಯೂ ಸರ್ವವಿಷಯ ಜ್ಞಾನವುಳ್ಳವನಾದುದರಿಂದಲೂ ಅಥವಾ ಸರ್ವಕಾಲದಲ್ಲಿಯೂ ಸಮಸ್ತ ವಸ್ತುಗಳಿಗೂ ಜ್ಞಾನವನ್ನುಂಟು ಮಾಡುವಂತವನಾಗಿರುವುದರಿಂದಲೂ ಭಗವಂತನನ್ನು " ಸರ್ವಃ " ಎಂದು ಹೇಳುವರು. (ಮ) ಸರ್ವಾತ್ಮಕನಾಗಿರುವದರಿಂದ 'ಸರ್ವಃ' ಎಂದು ಹೇಳಕೂಡದು. ಚಿದ್ವಸ್ತುವಿಗೂ ಜಡವಸ್ತುವಿಗೂ ಅಭೇದವು ಸೇರಲಾರದಾದುದರಿಂದ ಅದು ಯುಕ್ತವಲ್ಲವು.

(ವಿ॥ ಭಾ) ಈ ಪ್ರಕಾರವಾಗಿ ಯಾವದನ್ನೂ ಅಪೇಕ್ಷಿಸದೆ ಲೋಕ ವಿಲಕ್ಷಣನಾಗಿರುವ ತನ್ನ ಸ್ಥಿತಿಗೆ ತಕ್ಕಂತೆ ಉಪೇಕ್ಷಿಸದೆ ಸಕಲವನ್ನೂ ಶರೀರದಂತೆ ಅಭಿಮಾನಿಸಿರುವನೆಂದು ಈನಾಮವು ಹೇಳುವುದು. ಸರ್ವಃ– ಸಮಸ್ತದಲ್ಲಿಯೂ ವ್ಯಾಪಿಸಿರುವಂತವನು. ಇಂತಹ ವ್ಯಾಪ್ತಿಯಿಂದಲೇ ತಾನೆ ಪರಮಪುರುಷನನ್ನು ಸರ್ವ ಸ್ವರೂಪನೆಂದು ಹೇಳುವುದು. ಇದಕ್ಕೆ "ಅಸತಶ್ಚ ಸತಶ್ಚೈವ ಸರ್ವಸ್ಯ ಪ್ರಭವಾಪ್ಯಯಾತ್| ಸರ್ವಸ್ಯ ಚ ಸದಾ ಜ್ಞಾನಾ ತ್ಸರ್ವಮೇನಂ ಪ್ರಚಕ್ಷತೇ ॥ ಯೇನ ಸರ್ವಮಿದಂ ತತಂ ॥ ಸರ್ವೈ ಸರ್ವಮಿಥಂ ॥ ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ " ಇತ್ಯಾದಿ ವಚನಗಳು ಆಧಾರಗಳಾಗಿರುವುವು. ॥ ೨೫ ॥

(ಅಸತಶ್ಚೇತ್ಯಾದಿ (ಶಂ॥ ಭಾ) ದಲ್ಲಿ ನೋಡಿ ಯಾವ ಪರಮಪುರುಷನಿಂದ ಈ ಪ್ರಪಂಚವೆಲ್ಲವೂ ವ್ಯಾಪ್ತವಾಗಿರುವುದೊ, ಅವನೇ ಈ ಪ್ರಪಂಚವೆಲ್ಲವೂ ಸಮಸ್ತವನ್ನೂ ವ್ಯಾಪಿಸಿರುತ್ತೀರಾದುದರಿಂದ ಸರ್ವ ಶಬ್ದ ವಾಚ್ಯರಾಗಿರುತ್ತೀರೆಂದೀ ಪ್ರಮಾಣಾ

## (೨೬ನೇ ನಾಮವು) ಶರ್ವಃ, ಓಮ್ ॥ ಶರ್ವಾಯನಮಃ.

(ಶಂ॥ ಮ॥ ಭಾ) ಸಂಹಾರ ಸಮಯದಲ್ಲಿ ಸಕಲ ಪ್ರಜೆಗಳನ್ನು ಸಂಹರಿಸುವುದರಿಂದಲಾದರೂ (ಶಂ) ಸಂಹಾರವನ್ನು ಮಾಡಿಸುವುದರಿಂದಲಾದರೂ " ಶರ್ವಃ " ಎನ್ನಲ್ಪಡುವನು. 'ಶೃಣಾತೀತಿ ಶರ್ವಃ' ಎಂದು ವಿಗ್ರಹವು.

(ವಿ॥ ಭಾ) ಶೃಣಾತೀತಿ ಶರ್ವಃ–ನಾಶಪಡಿಸುವಂತವನು. ಎಂದರೆ ತನಿಗೆ ಶರೀರ ಭೂತರಾದ ಪ್ರಾಣಿಗಳ ಅನಿಷ್ಟಗಳನ್ನು ನಾಶಪಡಿಸುವಂತವನೆಂದರ್ಥವು. ॥ ೨೬ ॥

## (೨೭ನೇ ನಾಮವು) ಶಿವಃ, ಓಮ್ ॥ ಶಿವಾಯನಮಃ.

॥ ಭಾ) "ಸಬ್ರಹ್ಮಾ ಸ ಶಿವಃ" ಎಂಬೀ ಪ್ರಮಾಣವನ್ನನುಸರಿಸಿ ಅಭೇದೋಪದೇಶದಿಂದ ಶಿವಾದಿ ನಾಮಗಳಿಂದ ಶ್ರೀಮನ್ನಾರಾಯಣನೇ ಸ್ತುತಿಸಲ್ಪಡುತ್ತಾನೆ. ಆದಕಾರಣ ತ್ರೈಗುಣ್ಯರಹಿತನಾಗಿರುವುದರಿಂದ ಪರಿಶುದ್ಧನಾದ ಕಾರಣ "ಶಿವಃ" ಎನ್ನಲ್ಪಡುವನು.

(ವಿ॥ ಭಾ) ಅನಿಷ್ಟನಾಶಕನಾಗಿರುವುದು ಮಾತ್ರವಲ್ಲದೆ ಶುಭವನ್ನು ಕೂಡಾ ಕೊಡುವನೆಂದೀ ನಾಮವು ಪ್ರತಿಪಾದಿಸುವುದು. ಶಿವಃ–ಮಂಗಳಕರನು. ಇದಕ್ಕೆ "ಶಾಶ್ವತಂ ಶಿವ ಮಚ್ಯುತಂ ॥ ಸ್ಮೃತೇ ಸಕಲ ಕಲ್ಯಾಣ ಭಾಜನಂ ॥ ಮಂಗಳಂ ಭಗವಾನ್ವಿಷ್ಣುಃ ॥ ಮಂಗಳಾಯತನಂ ಹರಿಃ॥ ಮಂಗಳಾನಾಂಚ ಮಂಗಳಂ ॥ ಮಂಗಲ್ಯಂ ಮಂಗಳಂ ವಿಷ್ಣುಂ" ಇತ್ಯಾದಿ ಪ್ರಮಾಣಗಳನ್ನರಿಯಬೇಕು.

(ಈ ಪ್ರಮಾಣಗಳು ಪರಮಾತ್ಮನನ್ನು ಸರ್ವಮಂಗಳ ಸ್ವರೂಪನೆಂತಲೂ ಸರ್ವಮಂಗಳ ನಿಕೇತನ ನೆಂಬಿದೇ ಮೊದಲಾದ ಅರ್ಥವನ್ನು ತೋರಿಸುವುವು.)

(ಮ॥ ಭಾ) ಮಂಗಲತ್ವಾಚ್ಛಿವಃ–ಮಂಗಲಕರನಾಗಿರುವುದರಿಂದ "ಶಿವಃ" ಎನ್ನಲ್ಪಡುವನು. ॥ ೨೭ ॥

## (೨೮ನೇ ನಾಮವು) ಸ್ಥಾಣುಃ,
## ಓಮ್ ॥ ಸ್ಥಾಣವೇನಮಃ.

(ಶಂ॥ ಮ॥ ಭಾ) ಸ್ಥಿರತ್ವಾ ತ್ಸ್ಥಾಣುಃ–ಸ್ಥಿರನಾಗಿರುವುದರಿಂದ "ಸ್ಥಾಣುಃ" ಎನ್ನಲ್ಪಡುವನು.

(ವಿ॥ ಭಾ) ಕೇವಲ ಶುಭಪ್ರದತ್ವಮಾತ್ರವಲ್ಲದೆ ಶುಭ ಪ್ರದಾನಾದ್ಯನುಗ್ರಹವನ್ನು ಮಾಡುವುದರಲ್ಲಿ ಸ್ಥಿರನಾಗಿರುವುದರಿಂದ "ಸ್ಥಾಣುಃ" ಎನ್ನಲ್ಪಡುವನು.

ಭಗವತ್ಸಂಬಂಧವು ಪ್ರಾಯಶ್ಚಿತ್ತವೇ ಮೊದಲಾದ ಸಾಮಾನ್ಯ ಧರ್ಮಗಳಂತೆಯಾದರೂ, ಚಿತ್ರಾ ದರ್ಶ ಪೂರ್ಣ ಮಾಸಾದಿಗಳಂತೆಯಾದರೂ ಇತರ ದೇವತೆಗಳಂತೆಯಾದರೂ ಅಪೇಕ್ಷಿತವಾದ ವಸ್ತುವು ಯಾವದೋ ಅದೊಂದನ್ನು ಮಾತ್ರವೇ ಕೊಟ್ಟುಬಿಟ್ಟು ಅಷ್ಟುಮಾತ್ರದಿಂದಲೆ ತನ್ನ ಸಾಲವು ತೀರಿತೆಂದು ಸುಮ್ಮನಿರತಕ್ಕದ್ದಲ್ಲವು. ಪ್ರಬಲವಾದ ವಿಘ್ನಗಳಿಂದ ತಡೆಯಲ್ಪಡತಕ್ಕದ್ದೂ ಅಲ್ಲವು. ಮತ್ತು ಸಕಲವಾದ ಅಶುಭಗಳನ್ನೂ ಹೋಗಲಾಡಿಸಿ ಸರ್ವಾಭೀಷ್ಟಗಳನ್ನು ಸರ್ವವಿಧದಿಂದಲೂ ಕೊಟ್ಟು ಆಗಲೂ ವಿರಾಮವನ್ನು ಹೊಂದದೆ ಸ್ಥಿರತಮವಾಗಿರುವುದು. ಈ ವಿಷಯದಲ್ಲಿ "ಏಕೋ ಬಹೂನಾಂ ಯೊ ವಿದಧಾತಿ ಕಾಮಾನ್ ‖ ತಸ್ಮಿನ್ ಪ್ರಸನ್ನೇಕಿ ಮಿಹಾಸ್ತ್ಯಲಭ್ಯಂ ‖ ಸಕಲ ಫಲಪ್ರದೋಹಿ ವಿಷ್ಣುಃ ‖ ರತ್ನ ಪರ್ವತ ಮಾರುಹ್ಯ ಯಥಾ ರತ್ನಂ ನರೋಮುನೆ | ಸತ್ವಾರೂಪಮಾದತ್ತೆ ತಥಾ ಕೃಷ್ಣಾನ್ಮನೋರಥಾನ್" ಇತ್ಯಾದಿ ಪ್ರಮಾಣಗಳು ಜಾಕರೂಕಗಳಾಗಿರುವುವು. ‖ ೨೮ ‖

(ತಾನೊಬ್ಬನಾಗಿಯೇ ಅನೇಕರ ಇಷ್ಟಾರ್ಥಗಳನ್ನು ಯಾವನು ಕೊಡುತ್ತಾನೆಯೊ. ಅಂತಹ ಹರಿಯು ಪ್ರಸನ್ನನಾದಮೇಲೆ ದುರ್ಲಭವಾದದ್ದು ಯಾವದು. ಶ್ರೀವಿಷ್ಣುವು ಸಕಲ ಫಲಪ್ರದ ನಲ್ಲವೆ. ರತ್ನಗಿರಿಯನ್ನೇರಿದ ಮನುಷ್ಯನು ತನ್ನ ಶಕ್ತ್ಯನುಗುಣವಾಗಿ ತಂದುಕೊಳ್ಳುವಂತೆ ಅವರವರ ಶಕ್ತ್ಯನುಗುಣವಾಗಿ ಶ್ರೀಕೃಷ್ಣನಿಂದ ಮನೋರಥಗಳನ್ನು ಸಂಪಾದಿಸಿಕೊಳ್ಳುವನೆಂದೀ ಪ್ರಮಾಣಾರ್ಥಗಳು.)

## (೨೯ನೇ ನಾಮವು) ಭೂತಾದಿಃ,

### ಓಮ್‖ ಭೂತಾದಯೇನಮಃ.

(ಶಂ‖ ಭಾ) ಭೂತಗಳಿಗೆ ಆದಿಕಾರಣನಾದ ಕಾರಣದಿಂದ "ಭೂತಾದಿಃ" ಎನ್ನಲ್ಪಡುವನು.

( ವಿ ‖ ಭಾ ) ಮತ್ತು ಅತ್ಯಂತ ಪ್ರಿಯನಾಗಿರುವುದರಿಂದ ಸರ್ವಭೂತಗಳಿಂದಲೂ ಸ್ವೀಕರಿಸಲ್ಪಡುವನೆಂದೀ ನಾಮವು ಹೇಳುವುದು. ಭೂತಗಳಿಂದ ಗ್ರಹಿಸಲ್ಪಡತಕ್ಕವನು "ಭೂತಾದಿಃ" ಎನ್ನಲ್ಪಡುವನು. ಇದಕ್ಕೆ "ಕಿಂ ಪ್ರಜಯಾ ಕರಿಷ್ಯಾಮೊ ಯೇಷಾಂ ನೋಽಯಮಾತ್ಮಾ

ಏತೇವಯಂ ಸರ್ವ ಸಮೃದ್ಧಕಾಮಾ ಯೇಷಾಮಯಂನೊ ಭವಿತಾ ಪ್ರಕಾಸ್ತಾ || " ಇತ್ಯಾದಿ ಪ್ರಮಾಣಗಳಿರುವುವು. || ೨೯ ||

(ನಮ್ಮಗಳಿಗೆ ಈ ಪರಮಾತ್ಮನು ಇಲ್ಲದೇ ಹೋದಮೇಲೆ ಪ್ರಜೆಗಳಿಂದ ಮಾಡತಕ್ಕದ್ದೇನಿರುವುದು. ನಮ್ಮೆಲ್ಲರಿಗೂ ಇವನು ಈಶ್ವರನಾಗಿರುವುದರಿಂದ ನಾವುಗಳು ಸರ್ವಸಮೃದ್ಧರಾಗಿ ಸರ್ವಾಪೇಕ್ಷಿತಗಳನ್ನು ಹೊಂದಿದವರಾಗುತ್ತೇವೆಂದು ಅರ್ಥವು)

## (೩೦ನೇ ನಾಮವು) ನಿಧಿರವ್ಯಯಃ,

## ಓಮ್ || ಅವ್ಯಯಾಯನಿಧಯೇನಮಃ.

(ವಿ|| ಭಾ) ಆದುದರಿಂದಲೆ ಅಧಿಕವಾದ ಮಮತೆಯಿಂದ ಆಪದ್ಧನದಂತೆ ಭದ್ರವಾಗಿ ಇಡಲ್ಪಡುವನೆಂದೀ ನಾಮವು ಹೇಳುವುದು. ಅವ್ಯಯಃ ನಿಧಿಃ–ಸಕಲ ವಿಧದಿಂದಲೂ ಸರ್ವದಾ ಅನುಭವಿಸಲ್ಪಟ್ಟರೂ ಸ್ವಲ್ಪಮಟ್ಟಿಗೂ ಕೂಡಾ ನ್ಯೂನ (ಕಮ್ಮಿ) ವಾಗದ ನಿಧಿಯಂತೆ ಪ್ರಕಾಶಿಸುವಂತವನು. ಈ ಪ್ರಕಾರವಾಗಿಯೇ ಛಾಂದೋಗ್ಯದಲ್ಲಿ "ತದ್ಯಥಾ ಹಿರಣ್ಯನಿಧಿಂ ನಿಹಿತಂ " ಎಂಬದಾಗಿ ಪರಮಾತ್ಮನನ್ನು ನಿಧಿಯನ್ನಾಗಿ ಹೇಳಿರುತ್ತಾರೆ. ಇದರಿಂದ ನಾಶವಿಲ್ಲದ ನಿಧಿಯಾಗಿರುವಂತವನು " ಅವ್ಯಯಃ ನಿಧಿಃ " ಎನ್ನಲ್ಪಡುವನೆಂದರಿಯಬೇಕು. 'ಅವ್ಯಯಃ ನಿಧಿಃ' ಈ ಯುರಡೂ ಸೇರಿ ಏಕನಾಮವಾಗಿರುವುದು, ಭಿನ್ನವೆಂದರೆ " ಅವ್ಯಯಃ ಪುರುಷಃ " ಎಂಬದಾಗಿ ಮುಂದೇ ಹೇಳಲ್ಪಡುವ ನಾಮದೊಡನೆ ಪೌನರುಕ್ತ್ಯವು ಉಂಟಾಗುವುದು.

(ಮ|| ಭಾ) ನಿಧೀಯತೇಽಸ್ಮಿನ್ಸರ್ವಮಿತಿ ನಿಧಿಃ–ಸಮಸ್ತವು ಇವನಲ್ಲಿಡಲ್ಪಡುವುದರಿಂದ " ನಿಧಿಃ " ಎನ್ನಲ್ಪಡುವನು. ಈ ನಿಧಿ ಶಬ್ದಕ್ಕೆ ವಿಶೇಷಣವಾಗಿರುವುದು " ಅವ್ಯಯ " ಶಬ್ದವು. ನಾಶರಹಿತವಾದ ನಿಧಿಯು ಪರಮಾತ್ಮನೆಂದರಿಯಬೇಕು.

ಭಾ) " ನಿಧಿಃ–ಅವ್ಯಯಃ " ಎಂಬದಾಗಿ ಯರಡು ನಾಮಗಳಾಗಿರುತ್ತವೆ. ಪ್ರಳಯಕಾಲದಲ್ಲಿ ಈ ಪರಮಾತ್ಮನಲ್ಲಿ ಸಕಲವು ಇಡಲ್ಪಡುವುದರಿಂದ " ನಿಧಿಃ " ಎನ್ನಲ್ಪಡುವನು. ನಾಶವಿಲ್ಲದವನಾಗಿರುವುದರಿಂದ "ಅವ್ಯಯಃ" ಎನ್ನಲ್ಪಡುವನು. || ೩೦ ||

# (೩೧ನೇ ನಾಮವು) ಸಂಭವಃ,

## ಓಮ್|| ಸಂಭವಾಯನಮಃ.

( ಶಂ || ಮ || ಭಾ ) " ಧರ್ಮ ಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ || ತಥಾ ದುಷ್ಟ ವಿನಾಶಾಯ ಸಾಧೂನಾಂ ರಕ್ಷಣಾಯಚ | ಸ್ವೇಚ್ಛಯಾ ಸಂಭವಾಮ್ಯೇವ ಗರ್ಭ ದುಃಖ ವಿವರ್ಜಿತಃ || ಎಂಬೀ ಪ್ರಮಾಣಾನುಸಾರವಾಗಿ ಧರ್ಮ ಸಂಸ್ಥಾಪನಾರ್ಥವಾಗಿಯೂ ಧರ್ಮಮಾರ್ಗಕ್ಕೆ ವಿರೋಧಿಗಳಾದ ದುಷ್ಟಸಂಹಾರಾರ್ದವಾಗಿಯೂ ಬೇರೊಂದು ಕರ್ಮವಶದಿಂದ ಅವತರಿಸುವನೆಂಬ ಕಾರಣವಿಲ್ಲದೆ ಸ್ವೇಚ್ಛಾಮಾತ್ರದಿಂದಲೆ ಗರ್ಭವಾಸಾದಿಗಳಿಂದುಂಟಾಗುವ ಕ್ಲೇಶ ಸಂಬಂಧವಿಲ್ಲದ ಹುಟ್ಟುವಿಕೆಯುಳ್ಳವನಾಗಿರುವುದರಿಂದ " ಸಂಭವಃ " ಎನ್ನಲ್ಪಡುವನು.

(ವಿ|| ಭಾ) ಈ ಪ್ರಕಾರವಾಗಿ ನಿಧಿಯಂತೆ ಇಡಲ್ಪಟ್ಟಿದ್ದಾಗ್ಯೂ ಭಕ್ತಾನುಗ್ರಹಾರ್ಥವಾಗಿ ತಾನು ಮತ್ಸ್ಯ ಕೂರ್ಮಾದಿ ರೂಪದಿಂದ ಅವತಾರಗಳನ್ನು ಮಾಡಿ ಪ್ರಕಾಶಿಸುವನೆಂದೀ ನಾಮವು ಹೇಳುವುದು. ಸಂಭವಃ-ಎಲ್ಲೆಲ್ಲಿಯೂ ಆವಿರ್ಭವಿಸುವಂತವನು, ಅಲ್ಲಲ್ಲಿ ಸರ್ವದೇಶಗಳಲ್ಲಿಯೂ ಸರ್ವಕಾಲಗಳಲ್ಲಿಯೂ ಸರ್ವಾವಸ್ಥೆಗಳಲ್ಲಿಯೂ ಮತ್ಸ್ಯ ಕೂರ್ಮ ವರಾಹ ನರಸಿಂಹ ವಾಮನ ರಾಮಕೃಷ್ಣಾದಿ ರೂಪಗಳಾದ ಅವತಾರಗಳೆಲ್ಲೊಂದೊಂದನ್ನೂ ಅನೇಕಸಲವಾಗಿ ಸ್ವೀಕರಿಸಿ ಪುನಃ ಪುನಃ ಆವಿರ್ಭವಿಸುವಂತವನೆಂದರ್ಥವು.

" ಬಹುಧಾ ವಿಜಾಯತೆ || ಬಹೂನಿಮೇವ್ಯತೀತಾನಿ || ಯದಾಯದಾಹಿ ಧರ್ಮಸ್ಯ || " ಇತ್ಯಾದಿ ಪ್ರಮಾಗಳು ಈ ಅರ್ಥವನ್ನು ಹೇಳುವುವು. || ೩೧ ||

(ನರದೇವತಿರ್ಯಗೃಷಿ ಮೊದಲಾದ ಜಾತಿಗಳಲ್ಲಿ ನಾನಾವಿಧವಾಗಿ ಆವಿರ್ಭವಿಸುವನು. ನನ್ನ ಆವಿರ್ಭಾವ ಜನ್ಮಗಳು ಅನೇಕಗಳು ಕಳದವು. ಯಾವ ಯಾವ ಕಾಲದಲ್ಲಿ ಧರ್ಮಕ್ಕೆ ಲೋಪ ಉಂಟಾಗುವುದೊ ಆವಾಗ ಅಧರ್ಮವು ವೃದ್ಧಿ ಹೊಂದುಬುವುದರಿಂದ ಅದನ್ನಡಗಿಸುವುದಕ್ಕಾಗಿ ಅವತಾರವನ್ನು ಮಾಡುವೆನೆಂದೀ ಪ್ರಮಾಣಾರ್ಥವು. ಬಹುಧಾ ವಿಜಾಯತೆ-(ಪು|| ಸೂ|| ೨೧) ಬಹೂನಿಮೇ (ಗೀ|| ೪|| ೫) ಯದಾಯದಾ (ಗೀ|| ೪|| ೭)

## (೩೨ನೇ ನಾಮವು) ಭಾವನಃ,
## ಓಮ್ ॥ ಭಾವನಾಯನಮಃ.

ಶಂ॥ ಮ॥ ಭಾ) "ಫಲಮತ ಉಪಪತ್ತೇಃ" (ಬ್ರ॥ ಸೂ॥ ೩॥ ೨॥ ೩೮) ಎಂದು ಹೇಳಿರುವಂತೆ ಸರ್ವ ಫಲಪ್ರದನಾಗಿರುವುದರಿಂದ "ಭಾವನಃ" ಎನ್ನಲ್ಪಡುವನು. ಭಾವಯತೀತಿ ಭಾವನಃ.

(ವಿ॥ ಭಾ) "ಪರಿತ್ರಾಣಾಯ ಸಾಧೂನಾಂ" (ಗೀ ॥ ೪ ॥ ೮) ಎಂಬಂತೆ ಸಾಧು ಸಂರಕ್ಷಣಾರ್ಥವಾಗಿ ಅವತರಿಸಿ ಭಕ್ತರನ್ನು ಕಾಯು ವಂತವನು "ಭಾವನಃ" ಎನ್ನಲ್ಪಡುವನು ॥ ೩೨ ॥

## (೩೩ನೇ ನಾಮವು) ಭರ್ತಾ, ಓಮ್ ॥ ಭರ್ತ್ರೇನಮಃ.

(ಶಂ॥ ಭಾ) ಪ್ರಪಂಚಕ್ಕೆ ಅಧಿಷ್ಠಾತಾ ಆಗಿ ಸರ್ವ ಪ್ರಪಂಚವನ್ನೂ ಧರಿಸುವಂತವನಾದುದರಿಂದ "ಭರ್ತಾ" ಎನ್ನಲ್ಪಡುವನು. ಭರಣಾದ್ಭರ್ತಾ.

(ವಿ॥ ಭಾ) ಭಕ್ತರನ್ನು ಆತ್ಮ ಪ್ರದಾನದಿಂದ ಪೋಷಿಸುವಂತವನು "ಭರ್ತಾ" ಎನ್ನಲ್ಪಡುವನು. ॥ ೩೩ ॥

## (೩೪ನೇ ನಾಮವು) ಪ್ರಭವಃ,
## ಓಮ್॥ ಪ್ರಭವಾಯನಮಃ.

(ಶಂ॥ ಮ॥ ಭಾ) ಅಧಿಕವಾಗಿ ಸಕಲ ಭೂತಗಳೂ ಇವನಿಂದ ಹುಟ್ಟುವುವಾದ್ದರಿಂದ "ಪ್ರಭವಃ" ಎನ್ನಲ್ಪಡುವನು. ಅಥವಾ ಪ್ರಕೃಷ್ಟವಾದ (ಶ್ರೇಷ್ಠವಾದ) ಅವತಾರ ಜನ್ಮಗಳುಳ್ಳವನಾಗಿರುವುದರಿಂದ "ಪ್ರಭವಃ" ಎನ್ನಲ್ಪಡುವನು.

(ವಿ ॥ ಭಾ) ಶ್ರೇಷ್ಠವಾದ ಅವತಾರ ಜನ್ಮಗಳುಳ್ಳವನು ಎಂದರೆ ದೋಷಗಂಧವಿಲ್ಲದೆಯೂ ಈ ಅವತಾರ ರಹಸ್ಯವನ್ನು ತಿಳಿದ ಮಾತ್ರದಲ್ಲಿಯೇ ಬಂಧಕವಾದ ಜನ್ಮವನ್ನು ನಿವೃತ್ತಿಸುವಂತಹ ಸ್ವಭಾವವುಳ್ಳವಿಕೆಯೂ ಶ್ರೇಷ್ಠ ಶಬ್ದಾರ್ಥವಾಗುವುದು.

ಈ ಪ್ರಕಾರವೇ "ಅಜಾಯಮಾನಃ॥ ತಸ್ಯಧೀರಾಃ ಪರಿಜಾನಂತಿ ಯೊನಿಂ" (ಪು॥ ಸೂ॥ ೨೧) ನೈಷಗರ್ಭ ತ್ವಮಾಪೇದೇ ನಯೊನ್ಯಾ ಮವಸತ್ಪ್ರಭುಃ । ಆತ್ಮನಸ್ತೇಜಸಾ ಕೃಷ್ಣ ಸ್ಸರ್ವೇಷಾಂ ಕುರುತೆ ಗತಿಂ" (ಭಾರತ ಸಭಾಪರ್ವ ೬೨॥ ೩೪) ಅಪ್ರಮೇಯ ಮನಾದ್ಯಂತಂ ಕಾಮಾಜ್ಜಾತ ಮಜಂ ನೃಷು। ಪಾಂಡವಸ್ತ್ವರ್ಕಯಾಮಾಸ ಕರ್ಮಭಿರ್ದೇವ ಸಮ್ಮಿತೈಃ" (ಭಾರತ) ಜನ್ಮ ಕರ್ಮಚ ಮೇ ದಿವ್ಯಮೇವಂ ಯೋವೇತ್ತಿ ತತ್ವತಃ । ತ್ಯಕ್ತ್ವಾ ದೇಹಂ ಪುನರ್ಜನ್ಮನೇತಿ ಮಾಮೇತಿಸೋರ್ಜುನ ॥ (ಗೀ॥ ೪॥ ೯) ಎಂಬಿದೇ ಮೊದಲಾದ ಪ್ರಮಾಣಗಳಲ್ಲಿ ಅವತಾರ ರಹಸ್ಯಜ್ಞಾನಕ್ಕೆ ಮೋಕ್ಷಪರ್ಯಂತವಾದ ಸಿದ್ಧಿ ಪ್ರದತ್ವವು ಹೇಳಲ್ಪಟ್ಟಿರುವುದು. ॥ ೩೩ ॥

(ಕರ್ಮದಿಂದ ಹುಟ್ಟದೇ ಇದ್ದರೂ ಭಕ್ತ ಸಂರಕ್ಷಣಾರ್ಥವಾಗಿ ಅನೇಕಾವತಾರಗಳನ್ನು ಮಾಡುವನು. ತತ್ವತ್ರಯ ವಿವೇಚನ ಚತುರರಾದ ಮಹಾನುಭಾವರುಗಳು ಆ ಪರಮಪುರುಷನ ಅವತಾರ ರಹಸ್ಯವನ್ನರಿಯುವರೆಂದು ಪುರುಷಸೂಕ್ತ ಪ್ರಮಾಣಾರ್ಥವು ಇವನು ಗರ್ಭವಾಸವನ್ನು ಹೊಂದಲಿಲ್ಲವು, ಯೋನಿಯಲ್ಲಿ ವಾಸಮಾಡಲೂ ಇಲ್ಲವು. ಇವನು ಅನ್ಯಾದೃಶವಾದ ತನ್ನ ತೇಜಸ್ಸಿನಿಂದ ಸರ್ವರಿಗೂ ಗತಿ ಪ್ರದನಾಗಿರುವನೆಂದು ಭಾರತ ಸಭಾಪರ್ವ ಶ್ಲೋಕಾರ್ಥವು ಇಷ್ಟೆಂದು ಅಳವಿಡಲಶಕ್ಯವಾದ ಮಹಾಪ್ರಭಾವಶಾಲಿಯನ್ನಾಗಿಯೂ ಆದ್ಯಂತರಹಿತನನ್ನಾಗಿಯೂ ಕರ್ಮದಿಂದ ಹುಟ್ಟದೇ ಕೇವಲ ತನ್ನ ಇಚ್ಛಾಮಾತ್ರದಿಂದ ಮನುಷ್ಯರಲ್ಲಿ ಅವತರಿಸಿದವನನ್ನಾಗಿಯೂ ಯುಧಿಷ್ಠಿರರು ಶ್ರೀಕೃಷ್ಣನನ್ನು ತಿಳಿದರು. ಅದು ಹೇಗೆಂದರೆ ಅತಿಮಾನುಷವಾಗಿರುವ ದೇವಾರ್ಹವಾದ ಇವನ ಚೇಷ್ಟಿತಗಳು ಆ ರೀತಿಯಾಗಿ ತಿಳಿಯುವಂತೆ ಮಾಡಿತೆಂದು ಶ್ರೀಭಾರತ ವಚನಾರ್ಥವು. ನನ್ನ ಶ್ರೇಷ್ಠವಾದ ಜನ್ಮ ಕರ್ಮ ರಹಸ್ಯವನ್ನು ಯಾರಾದರೆ ತಿಳಿಯುವರೋ ಅವರು ಪುನರ್ಜನ್ಮವನ್ನು ಹೊಂದದೆ ಈಪ್ರಾಕೃತ ದೇಹವನ್ನುಬಿಟ್ಟು ನನ್ನನ್ನು ಸೇರುವರೆಂದು ಗೀತಾ ವಚನಾರ್ಥವು)

## (೩೪ನೇ ನಾಮವು) ಪ್ರಭುಃ, ಓಮ್ ॥ ಪ್ರಭವೇನಮಃ.

(ಶಂ॥ ಭಾ) ಸರ್ವವ್ಯಾಪಾರಗಳಲ್ಲಿಯೂ ನಿರತಿಶಯ ಸಾಮರ್ಥ್ಯವುಳ್ಳವನು "ಪ್ರಭುಃ" ಎನ್ನಲ್ಪಡುವನು.

ಬಾ) ಈ ರೀತಿಯಾಗಿ ಅತ್ಯಂತ ಪರತಂತ್ರರಾದ ಮನುಷ್ಯಾದಿಸಾಮ್ಯದಿಂದ ಅವತರಿಸಿದವನಾದರೂ ಪ್ರಭುವಾಗಿಯೇ ಇರುವಂತವನು "ಪ್ರಭುಃ" ಎನ್ನಲ್ಪಡುವನು. ಬ್ರಹ್ಮೇಂದ್ರ ರುದ್ರಾದಿಗಳಿಗೆ ಅತಿದು

ರ್ಹವಾದ ಭೋಗವನ್ನೂ ಮೋಕ್ಷವನ್ನೂ ಕೊಡುವುದಕ್ಕೆ ಸಮರ್ಥನಾದವನು ಪ್ರಭುವೆನ್ನಲ್ಪಡುವನೆಂದರ್ಥವು. ಈ ವೃತ್ತಾಂತವು ಶಿಶುಪಾಲ ಚೆಂತಯಂತೀ ಮೊದಲಾದವರಿಗೆ ಕೃಷ್ಣಾವತಾರದಶೆಯಲ್ಲಿ ಮೋಕ್ಷಪ್ರದಾನವನ್ನು ಮಾಡಿರುವ ವೃತ್ತಾಂತದಿಂದ ವ್ಯಕ್ತವಾಗುವುದು. ‖೩೪‖

## (೩೫ನೇ ನಾಮವು) ಈಶ್ವರಃ, ಓಮ್ ‖ ಈಶ್ವರಾಯ ನಮಃ.

(ಶಂ‖ ಭಾ) "ಏಷ ಸರ್ವೇಶ್ವರಃ" ಎಂಬ ಶ್ರುತ್ಯನುಸಾರವಾಗಿ ನಿರುಪಾಧಿಕವಾದ ಐಶ್ವರ್ಯವುಳ್ಳವನು " ಈಶ್ವರಃ " ಎನ್ನಲ್ಪಡುವನು.

(ವಿ ‖ ಭಾ) ಪರಮಪದದಲ್ಲಿ ಪರಮೇಷ್ಠಿಯಾಗಿರುವುದಕ್ಕಿಂತಲೂ ಅವತಾರ ದಶೆಯಲ್ಲಿ ತನ್ನ ಐಶ್ವರ್ಯವು ಅಧಿಕತಮ ಪ್ರಯೋಜನಕಾರಿಯಾಗಿರುವುದರಿಂದ "ಈಶ್ವರಃ" ಎನ್ನಲ್ಪಡುವನು. ಅವತಾರದಲ್ಲಿಯೂ ಐಶ್ವರ್ಯ (ಈಶ್ವರ ಭಾವ) ವುಳ್ಳವನು ಈಶ್ವರನು. " ಮಾನುಷೀಂತನುಮಾಶ್ರಿತಂ ‖ ಪರಂ ಭಾವಮಜಾನಂತಃ ‖ (ಗೀ ‖ ೯ ‖ ೧೧) ಭೂತಾನಾಮೀಶ್ವರೋಪಿಸನ್ " (ಗೀ‖ ೪‖ ೬) ಇತ್ಯಾದಿ ಪ್ರಮಾಣಗಳು ಈ ಅರ್ಥವನ್ನು ಹೇಳುವುವು. ‖ ೩೫ ‖

(ಮಾನುಷ್ಯ ಶರೀರವನ್ನು ಹೊಂದಿರುವ ನನ್ನ ಪರತ್ವವನ್ನರಿಯದವರಾಗಿ. ಸರ್ವ ಭೂತಗಳಿಗೂ ಈಶ್ವರನಾಗಿದ್ದರೂ. ಎಂದೀ ಪ್ರಮಾಣಾರ್ಥವು)

ಈ ಪ್ರಕಾರವಾಗಿ ಈನಾಲ್ಕನೇ ಶ್ಲೋಕದಲ್ಲಿರುವ (೧೨) ನಾಮಗಳಿಗೂ ವಿವೃತಿಯನ್ನು "ಚರಾಚರ ಶರೀರೇಷು ವ್ಯಾಪ್ತಿಮಾನ್ "ಸರ್ವ" (೨೫) ಈರಿತಃ ‖ ಸ್ವಶರೀರ ಜಗದ್ದುಃಖಂ "ಶರ್ವ" (೨೬) ಸ್ಸಸ್ಯಾಚ್ಛಖ್ಯಾತಿಯಃ| ಶುಭಾವಹತ್ವಾದ್ಭಕ್ತಾನಾಂ"ಶಿವ"(೨೭)ಇತ್ಯಭಿಧೀಯತೇ‖ ಸಂಕಮಯ್ಯಾಶಿವಂ ಸರ್ವಂ ವಿಶಾಖ್ಯಾಪಿ ಶಿವಂಬಹು| ಸ್ವಯಂ ನ ವಿಶಾಮ್ಯತಿ ಯಸ್ಸ"ಸ್ಥಾಣುಃ" (೨೮) ಪರಿಕೀರ್ತಿತಃ‖ ಭೂತೈರ್ಯಃ ಪ್ರಾಣಿಭಿರ್ನಿತ್ಯಂ ಸ್ಪೃಹಣೀಯ ತಮತ್ವತಃ| ಉಪಾದಾನಾದ್ಧಿ"ಭೂತಾದಿ"(೨೯) ರುಚ್ಯತೇ ಸುಂದರಾ ಕೃತಿಃ ‖ ಯಸ್ಸದಾಪ ದ್ಧನಮಿವ ನಿಧೇಯತ್ವಾ 'ನ್ನಿಧಿ' ಸ್ಸ್ಮೃತಃ | ಸದೋಪ ಭುಜ್ಯಮಾನೋಽಪಿ ಕಲಯಾಪ್ಯನು ಪಕ್ಷಯಾತ್ ‖ ಅವ್ಯಯಸ್ಯಾನ್ನಿಧೇರೇತ ದ್ವಿಶೇಷಣ ಮುದಾಹೃತಂ | ಅತೋ"ಽವ್ಯಯ ನಿಧಿ"(೩೦) ರಿತ್ಯೇಕ ನಾಮ ಪ್ರಕೀರ್ತಿತಮ್‖ ನಿಧಿವಚ್ಛಾತಿ ಗೂಢೋಽಪಿ ರಾಮಕೃಷ್ಣಾದಿ ಭೇದತಃ | ಸಮಂತಾ ದ್ಭಹುಧಾ

ಜಾತ "ಸ್ಸಂಭವಃ" (೩೧) ಪರಿಕೀರ್ತಿತಃ॥ ಜನಿತ್ವೋ ಜ್ಜೀವ ಯತಿಯೋಜ ನಾರ್ ಸ್ವಾರ್ "ಭಾವನಸ್ತು" (೩೦) ಸಃ । ಯಸ್ಮಾತ್ಪುಷ್ಣಾತ್ಯಾತ್ಮ ದಾನಾತ್ಸ "ಭರ್ತಾ" (೩೩) ಪರಿಕೀರ್ತಿತಃ ॥ ದೇವಾದಿ ಜನ ವೈಜಾತ್ಯಾ ತ್ಪ್ರಕೃಷ್ಟೋತ್ಪತ್ತಿ ಮತ್ತ್ವತಃ । ಅವಿದ್ಯಾ ದೋಷ ವೈಧುರ್ಯಾತ್ "ಪ್ರ ಭವಃ" (೩೪) ಪರಿಕೀರ್ತಿತಃ ॥ ಬ್ರಹ್ಮಾದೀನಾಂಚ ಸರ್ವೇಷಾಂ ಭೋಗ ಮೋಕ್ಷ ಸಮರ್ಪಣೆ। ಸಮರ್ಥಃ "ಪ್ರಭು" (೩೫) ರಿತ್ಯುಕ್ತ ಸ್ಸರ್ವೇಷ್ಟ ಫಲದೋ ಮನುಃ ॥ ಮನುಷ್ಯಾ ದ್ಯವತಾರೇಪಿ ಬ್ರಹ್ಮಾದೀಂಶ್ಚ ಪ್ರಯೋ ಜನೆ । ನಿಯಂತಾ "ತೀಶ್ವರಃ" (೩೬) ಪ್ರೋಕ್ತಃ ಪ್ರಾಧಾನ್ಯ ಫಲದೋ ಮನುಃ ॥ " ಎಂಬೀ ರೀತಿಯಾಗಿ ವಿವೃತಿಯನ್ನು ಕಾಣಬಹುದು.

ಮೂ॥ ಸ್ವಯಂಭೂ ಶ್ಶಂಭು ರಾದಿತ್ಯಃ ಪುಷ್ಕ ರಾಕ್ಷೋ ಮಹಾಸ್ವನಃ । ಅನಾದಿ ನಿಧನೋ ಧಾ ತಾ ವಿಧಾತಾ ಧಾತುರುತ್ತಮಃ

## (೩೭ನೇ ನಾಮವು) ಸ್ವಯಂಭೂಃ,
## ಓಮ್॥ ಸ್ವಯಂಭುವೇನಮಃ.

( ಶಂ॥ ಮ॥ ಭಾ ) ಸ್ವಯಮೇವ ಭವತೀತಿ ಸ್ವಯಂಭೂಃ–ಆ ಪರ ಮಾತ್ಮನು ತಾನಾಗಿಯೇ ಆಗಿರುವನು. ಇನ್ನೊಬ್ಬರೂ ಅವನನ್ನು ಸೃಷ್ಟಿಸಿರುವುದಿಲ್ಲವು. (ಶಂ) "ಸಏವ ಸ್ವಯಮುದ್ಬಭೌ" ಆ ಪರ ಮಾತ್ಮನು ತಾನಾಗಿಯೇ ಹುಟ್ಟಿರುವನೆಂದು ಹೇಳುವ (ಮನು ೧॥ ೭) ವಚನವೆ ಈ ಅರ್ಥವನ್ನು ಹೇಳುವುದು. "ಪರಿಭೂ ಸ್ಸ್ವಯಂ ಭೂಃ" ಎಂಬ ಮಂತ್ರವರ್ಣಾನುಸಾರವಾಗಿ ಎಲ್ಲರಿಗೂ ಅಥವಾ ಯಾವನು ಮೇಲೆ ಇರತಕ್ಕವನೋ ಅವನು 'ಸ್ವಯಂ ಭೂಃ' ಎನ್ನಲ್ಪಡುವನು. "ಪರಾಂಚಿಖಾ ನಿವ್ಯತೃಣ ತ್ಸ್ವಯಂ ಭೂಃ" ಎಂಬ ಉಪನಿಷತ್ಪ್ರಮಾಣಾನುಸಾರವಾಗಿ ತಾನಾಗಿಯೇ ಸ್ವತಂತ್ರನಾಗಿರುತ್ತಾನಲ್ಲದೆ ಸರ್ವಕಾಲದಲ್ಲಿಯೂ ಪರತಂ ತ್ರನು (ಪರಾಧೀನನು) ಅಲ್ಲವಾದುದರಿಂದಲೂ 'ಸ್ವಯಂ ಭೂಃ' ಎನ್ನ ಲ್ಪಡುನೆಂದರಿಯಬೇಕು.

(ವಿ॥ ಭಾ) ಇಷ್ಟು ವೈಭವವೂ ಯಾವದರಿಂದ ಬಂದದ್ದೆಂದರೆ ? ಸ್ವಯಂ ಭೂಃ–ತಾನಾಗಿ ಹುಟ್ಟತಕ್ಕವನು. ಎಂದರೆ ಲೀಲಾದಿ ಸ್ವಪ್ರ

ಯೋಜನಾರ್ಥವಾಗಿಯೇ ತನ್ನ ಇಚ್ಛೆಯಿಂದ ತನಿಗೆ ಮಾತ್ರವೇ ಅಸಾಧಾರಣವಾದ ಪರಮ (ಶುದ್ಧ) ಸತ್ವಮಯವಾದ ಪ್ರಕೃತಿಯನ್ನು ದೇವತಿರ್ಯಙ್ಮನುಷ್ಯಾದಿ ಸಜಾತೀಯವನ್ನಾಗಿ ಮಾಡಿಕೊಂಡು ತಾನಾಗಿಯೇ ಅವತಾರವನ್ನು ಮಾಡಿ ಬ್ರಹ್ಮಾದಿಗಳಂತೆ ಇತರ ಪ್ರಭುಗಳಿಗೆ ವಶನಾಗದೆ ಇರುವುದರಿಂದ ಇಷ್ಟು ಮಹಿಮೆಯೂ ಪ್ರಾಪ್ತವಾಯಿತೆಂದರ್ಥವು. ಇದಕ್ಕೆ "ಸ್ವಯಂಭೂ ರ್ಬ್ರಹ್ಮ ಪರಮಂ ಕವೀನಾಂ ‖ ಪ್ರಕೃತಿಂ ಸ್ವಾಮಧಿಷ್ಠಾಯ ಸಂಭವಾಮ್ಯಾತ್ಮಮಾಯಯಾ" ( ಗೀ ‖ ೪ ‖ ೬ ) ಇತ್ಯಾದಿ ಪ್ರಮಾಣಗಳಿರುವುವು.

ಈ ಪ್ರಕಾರವೇ ಶ್ರೀಹರಿವಂಶದಲ್ಲಿ ವೈದಿಕ ಪುತ್ರರನ್ನು ತರುವ ಸಂದರ್ಭದಲ್ಲಿ ಲೋಕೋಪಕರಣಗಳಾದ ಪ್ರಕೃತಿ ದ್ವಯೋಪನ್ಯಾಸವನ್ನು ಮಾಡಿದಮೇಲೆ "ಬ್ರಹ್ಮ ತೇಜೋಮಯಂ ದಿವ್ಯ ಮಾಶ್ಚರ್ಯಂ ದೃಷ್ಟವಾನಸಿ | ಅಹಂ ಸ ಭರತ ಶ್ರೇಷ್ಠ ಮತ್ತೇಜಸ್ತ ತ್ಸನಾತನಂ ‖ ಪ್ರಕೃತಿರ್ಸಾ ಮಮಪರಾ ವ್ಯಕ್ತಾ ವ್ಯಕ್ತಾಚ ಭಾರತ | ತಾಂ ಪ್ರವಿಶ್ಯ ಭವಂತೀಹ ಮುಕ್ತಾ ಭರತ ಸತ್ತಮ ‖" ಎಂದು ಹೇಳಿರುವುದಲ್ಲದೆ ಶ್ರೀವಿಷ್ಣುತತ್ವದಲ್ಲಿ ವ್ಯಕ್ತವಾಗಿಯೇ ಪರಮಾತ್ಮನ ಪಂಚ ಶಕ್ತಿಗಳನ್ನು ಹೇಳಿ "ಮತ್ಸ್ಯ ಕೂರ್ಮ ವರಾಹಾಣಾಮಾವಿರ್ಭಾವೋ ಮಹಾತ್ಮನಃ | ಅನಯೈವ ದ್ವಿಜ ಶ್ರೇಷ್ಠ ನಾನ್ಯಥಾ ತದ್ವಿರೋಧತಃ" ಎಂತಲೂ "ಸಮಸ್ತಾಶ್ಶಕ್ತಯಶ್ಚೈತಾಃ" ಎಂದು ಶ್ರೀವಿಷ್ಣುಪುರಾಣ (೬‖ ೭‖ ೭೦) ದಲ್ಲಿಯೂ ಹೇಳಿರುವುದೇ ಮೊದಲಾದವುಗಳಿಂದ ಭಗವತಾರ ಪ್ರಯೋಜನವೂ ಅದಕ್ಕೆ ತಕ್ಕ ಕಾರಣವೂ ಮತ್ತು ಕಾಲ ಸಂಖ್ಯಾದಿ ವೈಲಕ್ಷಣ್ಯವೂ ಪ್ರಕಾಶಿತವಾಯಿತು. ಶ್ರೀಮದ್ರಾಮಾಯಣದಲ್ಲಿಯೂ "ಸರ್ವಲೋಕೇಶ್ವರ ಸ್ಸಾಕ್ಷಾ ಲ್ಲೋಕಾನಾಂ ಹಿತ ಕಾಮ್ಯಯಾ" ಎಂತಲೂ "ಸಹಿದೇವೈರುದೀರ್ಣಸ್ಯ ರಾವಣಸ್ಯ ವಧಾರ್ಥಿಭಿಃ | ಅರ್ಥಿತೋ ಮಾನುಷೇ ಲೋಕೇ ಜಜ್ಞೇ ವಿಷ್ಣು ಸ್ಸನಾತನಃ" ( ಅ ‖ ೧ ‖ ೭ ) "ಸ ಏಷ ಸ್ವಯ ಮುದ್ಬಭೌ" ಇತ್ಯಾದಿಗಳಲ್ಲಿಯೂ ಈ ಅರ್ಥವು ವ್ಯಕ್ತಪಡಿಸಲ್ಪಟ್ಟಿರುವುದು. ‖೩೭‖

(ಪರಬ್ರಹ್ಮದ ತೇಜೋ ರೂಪವಾಗಿರುವ ದಿವ್ಯವಾದ ಆಶ್ಚರ್ಯವನ್ನು ಕಂಡೆಯೊ? ಎಲೈ ಭರತಶ್ರೇಷ್ಠನೇ? ನಾನೇ ಅದು, ನನ್ನ ತೇಜಸ್ಸುತಾನೆ ಆ ಸನಾತನವಾದ

ತೇಜಸ್ಸು, ಓ ಭರತಕುಲ ತಿಲಕನೇ ? ಶ್ರೇಷ್ಠವಾಗಿ ಪ್ರಕಾಶಿಸುತಲಿರುವ ನನ್ನ ಯಾವ ಪ್ರಕೃತಿಯು ವ್ಯಕ್ತವಾಗಿಯೂ ಅವ್ಯಕ್ತವಾಗಿಯೂ ಇರುವುದು, ಎಲೈ ಭರತಕುಲ ಶ್ರೇಷ್ಠನೇ ಅದನ್ನು ಪ್ರವೇಶಿಸಿಯೇ ಮುಕ್ತರಾಗುವರೆಂದು ಶ್ರೀಹರಿವಂಶ ವಚನಾರ್ಥವು. ಮತ್ಸ್ಯ ಕೂರ್ಮ ವರಾಹಾದಿಗಳಾದ ಪರಮಪುರುಷನ ಅವತಾರಗಳೆಲ್ಲವೂ ಈ ಪ್ರಕಾರವೇ ಸತ್ಯವಾಗಿಯೂ ಸ್ವಸ್ವಭಾವಗಳನ್ನು ಬಿಡದೆ ಇರುವುದಾಗಿಯೂ ಶುದ್ಧ ಸತ್ವಮಯವಾಗಿಯೂ ಸ್ವೇಚ್ಛಾಮಾತ್ರಕಾರಣಕವಾಗಿಯೂ ಧರ್ಮಲೋಪಕಾಲವೇ ಅವತಾರ ಕಾಲವಾಗಿಯೂ ಸಾಧು ಸಂರಕ್ಷಣವನ್ನೇ ಪ್ರಯೋಜನವನ್ನಾಗಿ ಯುಳ್ಳದ್ದಾಗಿಯೂ ಇರುವುದೆಂಬೀರೀತಿಯಿಂದಲೆ ಅವತಾರ ರಹಸ್ಯವನ್ನು ತಿಳಿಯಬೇಕಲ್ಲದೆ ಇದಕ್ಕೆ ವಿರುದ್ಧವಾದ ಬೇರೇ ರೀತಿಯಾಗಿ ತಿಳಿಯಬಾರದೆಂದು ಶ್ರೀವಿಷ್ಣುತತ್ವ ವಚನಾರ್ಥವು. ಸಮಸ್ತಗಳಾದ ಶಕ್ತಿಗಳೆಲ್ಲವೂ ಯಾವ ಪರಮಾತ್ಮನಲ್ಲಿ ಪ್ರತಿಷ್ಠಿಸಲ್ಪಟ್ಟಿರುವುವೊ ? ಎಂದು ಶ್ರೀವಿಷ್ಣು ಪುರಾಣ ವಚನಾರ್ಥವು ಸರ್ವಲೋಕೇಶ್ವರನಾದ ಶ್ರೀಭಗವದ್ವ್ಯಾಸದೇವನು ಲೋಕ ಹಿತಾರ್ಥವಾಗಿ ಶ್ರೀರಾಮನಾಗಿ ಅವತರಿಸಿರುವನು ಶ್ರೀಮಹಾವಿಷ್ಣುವೊ ಗರ್ವಿತನಾದ ರಾವಣನ ವಧವನ್ನಪೇಕ್ಷಿಸತಕ್ಕ ದೇವತೆಗಳಿಂದ ಪ್ರಾರ್ಥಿಸಲ್ಪಟ್ಟು ಮಾನುಷಲೋಕದಲ್ಲಿ ಸಾಕ್ಷಾತ್ಸನಾತನಮೂರ್ತಿಯಾದ ಶ್ರೀರಾಮನಾಗಿ ಅವತರಿಸಿದನೆಂದು ಶ್ರೀರಾಮಾಯಣ ವಚನಾರ್ಥವು ಆಯಾ ಶ್ರೀಮಹಾವಿಷ್ಣುವು ಸ್ವಯಮೇವ ಆವಿರ್ಭವಿಸಿರುವನಲ್ಲದೆ ಅವನ ಅವತಾರಕ್ಕೆ ಕರ್ಮಾದಿಗಳು ಕಾರಣವಲ್ಲವೆಂದರ್ಥವು ಈ ಪ್ರಮಾಣಗಳಲ್ಲಿ ಭಗವದವತಾರ ಪ್ರಯೋಜನಾದಿಗಳನ್ನು ಸ್ಪಷ್ಟವಾಗಿ ಕಾಣಬಹುದು.)

(ತನಗೆ ತಾನೇ ಉಂಟಾದ ಪರಬ್ರಹ್ಮವು ಕವಿಗಳಾದ ನಿತ್ಯಸೂರಿಗಳಿಗಿಂತಲೂ ಶ್ರೇಷ್ಠವಾದದ್ದೆಂದು ಭಾವವು. ನನ್ನ ಅಧೀನವಾದ ಪ್ರಕೃತಿಯನ್ನು ಅಧಿಷ್ಠಾನಮಾಡಿ ಅವತರಿಸುವೆನೆಂದು ಗೀತಾ ವಚನಾರ್ಥವು)

## (೩೮ನೇ ನಾಮವು) ಶಂಭುಃ, ಓಮ್ ‖ ಶಂಭವೇನಮಃ.

(ಶಂ‖ ಮ‖ ಭಾ) ಶಂ–ಸುಖಂ, ಭಕ್ತಾನಾಂ ಭಾವಯತೀತಿ ಶಂಭುಃ, ಶಂ–ಸುಖವನ್ನು, ಭಕ್ತರಿಗೆ ಉಂಟುಮಾಡುತ್ತಾನಾದುದರಿಂದ "ಶಂಭುಃ" ಎನ್ನಲ್ಪಡುವನು.

(ವಿ‖ ಭಾ) ಈ ರೀತಿಯಾಗಿ ಅವತರಿಸಿ ತನ್ನ ಸೌಂದರ್ಯ ಶೀಲಾದಿ ಗುಣಗಳನ್ನು ತೋರಿಸುವುದರಿಂದ ಸುಖವನ್ನು ಕೊಡುವ ಅರ್ಥವನ್ನು ಈ ನಾಮವು ಹೇಳುವುದು. ಶಂಭುಃ–ಸುಖವನ್ನುಂಟುಮಾಡತಕ್ಕವನು. ಇದಕ್ಕೆ " ವಿಶ್ವಾಕ್ಷಂ ವಿಶ್ವ ಶಂಭುವಂ ‖ ರೂಪೌದಾರ್ಯ ಗುಣೈಃ ಪುಂಸಾಂ ದೃಷ್ಟಿ ಚಿತ್ತಾಪಹಾರಿಣಂ | ಚಂದ್ರಕಾಂತಾನನಂ ರಾಮ ಮತೀವ ಪ್ರಿಯ ದರ್ಶನಂ " ಇತ್ಯಾದಿ ಪ್ರಮಾಣಗಳನ್ನರಿಯಬೇಕು. ‖ ೩೮ ‖

(ಸರ್ವತ್ರ ಕಾಣತಕ್ಕ ಕಣ್ಣುಳ್ಳವನಾಗಿಯೂ ಎಂದರೆ ಸರ್ವದರ್ಶಿಯಾಗಿಯೂ ಸರ್ವ ಮಂಗಳಗಳಿಗೂ ಉತ್ಪತ್ತಿ ಸ್ಥಾನ ಭೂತನಾಗಿಯೂ ಇರುವವನನ್ನು. ರೂಪವು, ಔದಾರ್ಯವೇ ಮೊದಲಾದ ಗುಣಗಳಿಂದ ಪುರುಷರಿಗೂಕೂಡ ಕಣ್ಣು ಮನಸ್ಸು ಇವುಗಳನ್ನು ಆಕರ್ಷಿಸತಕ್ಕ ಸೌಂದರ್ಯವುಳ್ಳವನು. ಚಂದ್ರನಂತೆ ಅಭಿರಾಮವಾದ ಮುಖವುಳ್ಳವನೂ, ನಾಮೋಚ್ಚಾರಣ ಮಾತ್ರದಿಂದಲೆ ಸರ್ವ ಮನೋಹರನೂ, ಆದುದರಿಂದಲೇ ಅತ್ಯಂತ ಪ್ರಿಯವಾದ ದರ್ಶನವನ್ನು ಕೊಡುವಂತವನೂ ಆದ ಶ್ರೀರಾಮನನ್ನು. ಈ ಯರಡೂ ಶ್ರೀಮದ್ರಾಮಾಯಣ ಅಯೋಧ್ಯಾಕಾಂಡ ವಚನವು. ಮೊದಲಿನದು ನಾರಾಯಣವಲ್ಲೀ ವಾಕ್ಯವು.)

## (೩೭ನೇ ನಾಮವು) ಆದಿತ್ಯಃ, ಓಮ್‖ ಆದಿತ್ಯಾಯನಮಃ.

(ಶಂ‖ ಮ‖ ಭಾ) ಆದಿತ್ಯಮಂಡಲಾಂತರ್ಗತನಾದ ಹಿರಣ್ಮಯ ಪುರುಷನಾದುದರಿಂದ "ಆದಿತ್ಯಃ" ಎನ್ನಲ್ಪಡುವನು. "ಆದಿತ್ಯಾನಾಮಹಂ ವಿಷ್ಣುಃ" ಎಂಬ (ಗೀತಾ‖೧೦ನೆ ಅ) ವಚನಾನುಸಾರವಾಗಿ ದ್ವಾದಶಾದಿತ್ಯರಲ್ಲಿ ವಿಷ್ಣುವೆನ್ನಲ್ಪಡುವವನಾದುದರಿಂದ 'ಆದಿತ್ಯ' ನೆನ್ನಲ್ಪಡುವನು. (ಶಂ) (ಅಥವಾ) ಅದಿತೇರಯಮಾದಿತ್ಯಃ, "ಇಯಂ ವಾ ಅದಿತಿಃ‖ ಮಹೀಂ ದೇವೀಂ ವಿಷ್ಣು ಪತ್ನೀಂ" ಎಂಬ ಶ್ರುತಿಗಳಲ್ಲಿ ಅದಿತಿ ಎನ್ನಲ್ಪಡುವ ಭೂದೇವಿಯನ್ನು ವಿಷ್ಣು ಪತ್ನಿಯನ್ನಾಗಿ ಹೇಳಿ ಅಖಂಡಿತಳಾದ ಇಂತಹ ಭೂದೇವಿಗೆ ಪತಿಯಾಗಿರುವುದರಿಂದ "ಆದಿತ್ಯಃ" ಎನ್ನಲ್ಪಡುವನು. (ಯದ್ವಾ) ಹೇಗಾದರೆ ಸೂರ್ಯನೊಬ್ಬನೇ ಅನೇಕ ಜಲ ಪಾತ್ರಗಳಲ್ಲಿ ಕಾಣುವನೊ ಅದರಂತೆ ಅನೇಕ ಶರೀರಗಳಲ್ಲಿ ಪರಮಾತ್ಮನೊಬ್ಬನೆ ಅನೇಕರಂತೆ ಕಾಣಲ್ಪಡುತ್ತಾನಾಗಿ ಇಂತಹ ಆದಿತ್ಯ ಸಾದೃಶ್ಯದಿಂದ "ಆದಿತ್ಯಃ" ಎನ್ನಲ್ಪಡುವನು.

( ವಿ‖ ಭಾ ) ಅನಂತರದಲ್ಲಿ ಈ ಅವತಾರಗಳಿಗೆಲ್ಲವೂ ಉದಾಹರಣವಾಗಿ ಆದಿತ್ಯ ಮಂಡಲಾಂತರ್ವರ್ತಿಯಾದ ಪರಮಪುರುಷನನ್ನು ಹೇಳುತ್ತಾರೆ. ಆದಿತ್ಯಃ–ಸೂರ್ಯಮಂಡಲದಲ್ಲಿರುವಂತವನು. ಈ ಪ್ರಕಾರವಾಗಿ ಪರಮಪುರುಷನು ಸೂರ್ಯಮಂಡಲದಲ್ಲಿರುವನೆಂದು ಬ್ರಹ್ಮಮೀಮಾಂಸೆಯಲ್ಲಿ "ಅಂತಸ್ತದ್ಧರ್ಮೋಪದೇಶಾತ್ ‖ (ಬ್ರ‖ ಸೂ‖ ೧‖ ೧‖ ೨೦) ಯ ಏಷೋಽನ್ತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೆ ‖ ಸಯಶ್ಚಾಯಂ ಪುರುಷೆ ‖ ಯಶ್ಚಾಸಾವಾದಿತ್ಯೇ ಸ ಏಕಃ ‖ (ತೈ‖ ಆ‖ ೨‖

೮॥ ೫) " ಧ್ಯೇಯಸ್ಸದಾ ಸವಿತೃ ಮಂಡಲ ಮಧ್ಯವರ್ತೀ " (ಬೃಹತ್ಪಾರಾಶರೀಯ) ಎಂದುದಾಹರಿಸಿ ಆದಿತ್ಯಾಂತರ್ಗತನಾದ ಆ ಪರಮ ಪುರುಷನಿಗೆ " ತಸ್ಯ ಯಥಾಕಪ್ಯಾಸಂ ಪುಂಡರೀಕಮೇವ ಮಕ್ಷಿಣೀ " (ಛಾಂದೋ॥ ೧॥ ೬॥ ೭) ಎಂಬದಾಗಿ ಶ್ರುತಿಯಲ್ಲಿ ಹೇಳಲ್ಪಟ್ಟಿತು. ॥೫॥

(ಕಣ್ಣಿನೊಳಗೆ ಇರುವಂತವನೂ ಆದಿತ್ಯಮಂಡಲದೊಳಗಿರುವಂತವನೂ ಎಂದು ಹೇಳಲ್ಪಟ್ಟ ಪುರುಷನು ಜೀವನಿಗಿಂತಲೂ ಅನ್ಯನಾದ ಪರಮಾತ್ಮನೆ, ಕುತಃ—ಏತಕ್ಕೆಂದರೆ ? ತದ್ಧರ್ಮೋಪದೇಶಾತ್'—ಶ್ರುತ್ಯಂತರ ಪ್ರಸಿದ್ಧಗಳಾದ ಅಪಹತಪಾಪ್ಮತ್ವ ಸರ್ವಲೋಕ ನಿಯಂತೃತ್ವ ಪುಂಡರೀಕಾಕ್ಷತ್ವ ದಿವ್ಯಮಂಗಳ ವಿಗ್ರಹಯುಕ್ತನಾಗಿರುವಿಕೆಯೇ ಮೊದಲಾದ ಧರ್ಮಗಳು ಉಪದೇಶಿಸಲ್ಪಡುವುದರಿಂದ, ಎಂದರಿಯಬೇಕು. ಆದುದರಿಂದ ಜೀವ ವಿಲಕ್ಷಣನಾದ ಶ್ರಿಯಃಪತಿಯೇ ಆದಿತ್ಯಮಂಡಲಾಂತರ್ವರ್ತಿ ಪುರುಷನು. ಪರಮಾತ್ಮನಿಗೆ ದಿವ್ಯಮಂಗಳ ವಿಗ್ರಹ ಪ್ರತಿಪಾದಕವಾದ ಶ್ರುತಿಯು ಇಂತಹ ಪರಮಾತ್ಮ ಶರೀರವನ್ನು ಧರ್ಮ ನಿಮಿತ್ತಕವಾದ ಹೇಯಶರೀರವಲ್ಲವೆಂತಲೂ ಮುಮುಕ್ಷುಗಳಿಗೆ ಹೇಯನಿವರ್ತಕನಾಗಿರುವವನ ಶುದ್ಧ ಸತ್ವಮಯವಾದ ದಿವ್ಯ ಮಂಗಳ ವಿಗ್ರಹವಿದೆಂತಲೂ ಹೇಳುವುದು. " ಯತೋವಾ ಇಮಾನಿ ಭೂತಾನಿ ಜಾಯಂತೆ ॥ ಸತ್ಯಂ ಜ್ಞಾನ ಮನಂತಂ ಬ್ರಹ್ಮ" ಇತ್ಯಾದಿ ಪ್ರಮಾಣಬಲದಿಂದ ಸತ್ಯತ್ವ ಜ್ಞಾನತ್ವಾನಂ ತತ್ವಾನಂ ದತ್ವ ಕಾರಣತ್ವ ಜ್ಞಾನ ಶಕ್ತ್ಯಾದಿಗಳು ಸಿದ್ಧಿಸುವಂತೆ " ವಿದ್ಯುತಃ ಪುರುಷಾದಧಿ ॥ ಅಜಾಯಮಾನೊ ಬಹುಧಾ ವಿಜಾಯತೆ ॥ ಅಜೋಪಿಸನ್ನವ್ಯಯಾತ್ಮಾ ॥ ಸಂಭವಾಮ್ಯಾತ್ಮಮಾಯಯಾ " ಇತ್ಯಾದಿ ಪ್ರಮಾಣ ಬಲದಿಂದ ಆಶ್ರಿತಾನುಗ್ರಹಾರ್ಥವಾದ ದಿವ್ಯಮಂಗಳ ವಿಗ್ರಹವತ್ತ್ವರೂಪ ಧರ್ಮವೂ " ತದ್ಧರ್ಮೋಪದೇಶಾತ್ " ಎಂಬ ಪದದಿಂದ ವಿವಕ್ಷಿತವೆಂದು ಈ (ಬ್ರ॥ ಸೂ॥ ೧॥ ೧॥ ೨೧॥) ಸೂತ್ರಾರ್ಥವನ್ನರಿಯಬೇಕು.

ಯಾವ ಈ ಪರಮಪುರುಷನು ಮಹಾ ತೇಜೋರೂಪಿಯಾಗಿ ಆದಿತ್ಯಮಂಡಲಾಂತರ್ವರ್ತಿಯಾಗಿ ಕಾಣಲ್ಪಡುವನೊ ; ಆ ಯಾವ ಈ ಪರಮಪುರುಷನು ಜೀವನಲ್ಲಿಯೊ ; ಯಾವನಾದರೆ ಆದಿತ್ಯನಲ್ಲಿಯೊ , ಅಂತಹ ಪರಮಾತ್ಮನು ಒಬ್ಬನೆಂದು ತೈತ್ತಿರೀಯ ಶ್ರುತ್ಯರ್ಥವು

ಸೂರ್ಯಮಂಡಲಾಂತರ್ವರ್ತಿಯಾದ ಪರಮಪುರುಷನು ಸದಾ ಧ್ಯಾನಾರ್ಹನಾಗಿರುವನೆಂದು ಬೃಹತ್ಪಾರಾಶರೀಯ ವಚನಾರ್ಥವು. ಆ ಪರಮಪುರುಷನು ಸೂರ್ಯನಿಂದ ವಿಕಸಿತವಾದ ಕಮಲದಂತಿರುವ ಕಣ್ಣುಗಳುಳ್ಳವನೆಂದು ಕಪ್ಯಾಸ ಶ್ರುತ್ಯರ್ಥವು)

## (೪೦ನೇ ನಾಮವು) ಪುಷ್ಕರಾಕ್ಷಃ,

ಓಮ್॥ ಪುಷ್ಕರಾಕ್ಷಾಯನಮಃ,

(ಶಂ|| ಮ|| ಭಾ) ಪುಂಡರೀಕಕ್ಕೆ ಸಮಾನವಾದ ನೇತ್ರಗಳುಳ್ಳವನು (ಕಮಲಾಕ್ಷನು.) ಪುಂಡರೀಕವೆಂದರೆ ಕಮಲ ಪುಷ್ಪವು.

( ವಿ || ಭಾ ) ಸರ್ವೇಶ್ವರ ಲಕ್ಷಣವಾದ ಪುಂಡರೀಕಾಕ್ಷತ್ವವನ್ನೇ ಹೇಳುವುದೀನಾಮವು. ಪುಷ್ಕರಾಕ್ಷಃ-(ಶಂ|| ಮ||) ಅರ್ಥದಂತೆಯೇ. || ೪೦ ||

## (೪೧ನೇ ನಾಮವು) ಮಹಾಸ್ವನಃ,
## ಓಮ್ || ಮಹಾಸ್ವನಾಯನಮಃ.

( ಶಂ || ಭಾ ) " ಅಸ್ಯಮಹತೋ ಭೂತಸ್ಯ ನಿಶ್ವಸಿತ ಮೇತದ್ಯ ದೃಗ್ವೇದೊ ಯಜುರ್ವೇದಃ " ಎಂಬೀ ಶ್ರುತ್ಯನುಸಾರವಾಗಿ ಅತ್ಯಂತಾಧಿಕವಾದ ಶ್ರುತಿ ಲಕ್ಷಣವಾಗಿರುವ ಧ್ವನಿಯುಳ್ಳವನಾದಕಾರಣದಿಂದ " ಮಹಾ ಸ್ವನಃ " ಎನ್ನಲ್ಪಡುವನು. ( ಮ ) ಮಹಾನ್ ಸ್ವನೊಯಸ್ಯ ಸ ಮಹಾಸ್ವನಃ–ಮಹತ್ತಾದ ಧ್ವನಿಯುಳ್ಳವನುಯಾವನೊ ಅವನು "ಮಹಾ ಸ್ವನಃ " ಎನ್ನಲ್ಪಡುವನು.

(ವಿ|| ಭಾ) ಅವನಿಗೇನೆ ಬೇರೊಂದು ಲಕ್ಷಣವನ್ನೀನಾಮವು ಹೇಳುವುದು. ಮಹಾಸ್ವನಃ–ಅಧಿಕವಾದ ಶಬ್ದವುಳ್ಳವನು ಎಂದರೆ "ತಸ್ಯೋದಿತಿ ನಾಮ " ಎಂದು ಶ್ರುತಿಯಲ್ಲಿ ಹೇಳುವಂತೆ 'ಉತ್' ಎಂಬ ತಿರು ನಾಮವುಳ್ಳವನೆಂದು ಹೇಳಬಹುದು. ಮತ್ತು ಸೂರ್ಯಮಂಡಲಾಂತರ್ವರ್ತಿಯಾದ ಪರಮಪುರುಷನ ನಾಮವೂ ರೂಪವೂ " ಸೈಷಾತ್ರಯ್ಯೇವ ವಿದ್ಯಾತಪತಿ ಯಏಷೊನ್ತರಾದಿತ್ಯೇ ಹಿರಣ್ಮಯಃ ಪುರುಷಃ " ಎಂಬೀ ಶ್ರುತಿಯಲ್ಲೋದಲ್ಪಡುವುದರಿಂದ ವೇದವೆಂಬ ಪೂಜ್ಯವಾದ ಶಬ್ದವುಳ್ಳವನೆಂತಲೂ ಆಗಬಹುದು. ಅಥವಾ ಸಾವಿತ್ರೀ ಶಬ್ದಕ್ಕೆ ಪ್ರತಿಪಾದ್ಯನಾಗಿರುವುದರಿಂದ ಪೂಜ್ಯತಮನೆಂತಲೂ ಹೇಳಬಹುದು. ಆದುದರಿಂದಲೆ ಮೋಕ್ಷಧರ್ಮದಲ್ಲಿ " ವಿದ್ಯಾ ಸಹಾಯವಂತಂಮಾ ಮಾ ದಿತ್ಯಸ್ಥಂ ಸನಾತನಂ " ಎಂದು ಹೇಳಿರುತ್ತಾರೆ. ||೪೧||

(ತಸ್ಯೋದಿತಿನಾಮ–(ಛಾಂದೋ|| ೧|| ೬|| ೭) ಅವನಿಗೆ 'ಉತ್' ಎಂದು ನಾಮವು. ಸೈಷಾತ್ರಯ್ಯೇತಿ–(ತೈ|| ನಾ|| ೧೪) ಸೂರ್ಯಮಂಡಲದಲ್ಲಿ ಸ್ವರ್ಣಮಯವಾದ ಪುರುಷನಾಗಿ ಪ್ರಕಾಶಿಸುವಂತವನು ಸಾಕ್ಷಾದ್ವೇದ ಸ್ವರೂಪವಾದ ಪರವಿದ್ಯೆಯು ಎಂದ

ರ್ಥವು. ತಸ್ಯೋದಿತಿನಾಮ ” ಎಂಬ ಶ್ರುತಿಯಲ್ಲಿ ಈ (೩೧) ನಾಮದಲ್ಲಿರುವ ಮಹ ಚ್ಛಬ್ದವನ್ನು “ ಉತ್ ” ಎಂಬುವದರಿಂದ ಹೇಳಿ “ ಸ್ವನಃ ” ಎಂಬ ಶಬ್ದವನ್ನು ವೇದ ವೆಂಬ ಪೂಜ್ಯವಾದ ಶಬ್ದದಿಂದಲೂ ಸಾವಿತ್ರೀ ಪ್ರತಿಪಾದ್ಯತೆಯಿಂದಲೂ ವಿವರಿಸಿರುತ್ತಾ ರೆಂದರಿಯಬೇಕು. ಸಾವಿತ್ರೀ ವಿದ್ಯಾ ಪ್ರತಿಪಾದ್ಯನಾದ ನನ್ನನ್ನು ಆದಿತ್ಯಮಂಡಲಾಂತ ರ್ಗತನನ್ನಾಗಿ ಕಾಣುವರೆಂದು ಮೋಕ್ಷಧರ್ಮ ವಚನಾರ್ಥವು.)

## (೪೨ನೇ ನಾಮವು) ಅನಾದಿ ನಿಧನಃ,

## ಓಮ್|| ಅನಾದಿನಿಧನಾಯನಮಃ.

ಭಾ) ಜನ್ಮವಿನಾಶಗಳಿಲ್ಲದವನು “ ಅನಾದಿ ನಿಧನಃ ” ಎನ್ನ ಲ್ಪಡುವನು.

(ವಿ|| ಭಾ) ಈ ಪ್ರಕಾರವಾಗಿ ದಿವ್ಯವಾದ ನಾಮರೂಪಗಳೊಡನೆ ಶಾಶ್ವತವಾಗಿ ಪ್ರಕಾಶಿಸುವನೆಂದೀ ನಾಮವು ಪ್ರತಿಪಾದಿಸುವುದೆಂದರಿಯ ಬೇಕು. ಅನಾದಿ ನಿಧನಃ–ಆದ್ಯಂತ ಶೂನ್ಯನು, ಎಂದರೆ ನಿತ್ಯ ಯೌವನ ಮುಳ್ಳವನಾದುದರಿಂದ ಈ ಜನ್ಮ ಜರಾದಿ ದೋಷಗಳ ಸಂಬಂಧವಿಲ್ಲದೆ ನಿತ್ಯವಾಗಿರುವ ದಿವ್ಯಮಂಗಳ ವಿಗ್ರಹಮುಳ್ಳವನೆಂದು ಭಾವವು. (ವಿಗ್ರಹ ವೆಂದರೆ ಶರೀರವು.)

ಈ ನಾಮವು ಪರಮಪುರುಷನ ಆತ್ಮ ಸ್ವರೂಪವನ್ನು ಕುರಿತು ಹೇಳುವುದಕ್ಕಾಗಿ ಪ್ರಾಪ್ತವೆನ್ನಬಾರದು ; ಆತ್ಮ ಸ್ವರೂಪವು ಆದ್ಯಂತ ಶೂನ್ಯವೆಂಬ ವಿಷಯವು ಬ್ರಹ್ಮಾದಿಗಳಾದ ಸರ್ವರಿಗೂ ಸಮಾನವಾಗಿರು ವುದರಿಂದ ಅದನ್ನು ಹೇಳುವುದರಲ್ಲಿ ಸ್ವಲ್ಪವೂ ಪ್ರಯೋಜನವಿಲ್ಲವಾದ ಕಾರಣ ಇದು ದಿವ್ಯಮಂಗಳ ವಿಗ್ರಹವನ್ನು ಹೇಳಿತೆಂತಲೇ ತಿಳಿಯ ಬೇಕು. ಈ ಪ್ರಕಾರವೆ “ ಭಾರೂಪ ಸ್ಸತ್ಯ ಸಂಕಲ್ಪಃ || (ಛಾಂದೋ|| ೩|| ೧೪|| ೨) ಹಿರಣ್ಮಯಃ ಪುರುಷಃ (ತೈ|| ನಾ|| ೬|| ೧೩) ವಿದ್ಯುತಃ ಪುರುಷಾದಧಿ (ತೈ|| ನಾ|| ೧|| ೮) ಆದಿತ್ಯ ವರ್ಣಂ ತಮಸಃ ಪರಸ್ತಾತ್ (ಪು|| ಸೂ|| ೨೦) ಸರ್ವ ಕರ್ಮಾ ಸರ್ವ ಗಂಧ ಸ್ಸರ್ವ ರಸಃ (ಛಾಂದೋ|| ೩|| ೧೪|| ೨) ರುಕ್ಮಾಭಂ ಸ್ವಪ್ನಧೀಗಮ್ಯಂ ವಿದ್ಯಾತ್ತಂ ಪುರುಷಂ ಪರಂ (ಮನುಸ್ಮೃ|| ೧೨|| ೧೨೨) ಪುರುಷಃ ಪುಂಡರೀಕಾಕ್ಷಃ ” (ವರಾಹ ಪು) ಇತ್ಯಾದಿ ಶ್ರುತಿ ಸ್ಮೃತಿ ಸಹಸ್ರಗಳಿಂದ ಪರಮಪುರುಷನಿಗೆ ಅತ್ಯಂತ

ನಿರ್ಮಲವಾಗಿಯೂ ನೀಲವರ್ಣವಾಗಿ ಪ್ರಕಾಶಿಸುವುದಾಗಿಯೂ ಅತ್ಯಂತ ಸೌಂದರ್ಯ ಲಾವಣ್ಯ ಯೌವನವೇ ಮೊದಲಾದ ಅವನಿಗೆ ಅಭಿಮತಗಳಾದ ಗುಣಗಳೆಲ್ಲವೂ ಸೇರಿರುವುದರಿಂದ ಅವನು ಕೂಡ ಬಿಡಲಾರದೆ ನಿತ್ಯವಾಗಿ ಸ್ವೀಕರಿಸಿರುವಂತಾದ್ದಾಗಿಯೂ ಇರುವ ದಿವ್ಯಮಂಗಳ ವಿಗ್ರಹ ವಿರುವಂತೆ ಹೇಳಲ್ಪಡುವುದು. ಮತ್ತು " ಸದೈಕ ರೂಪ ರೂಪಾಯ (ವಿ|| ಪು|| ೧|| ೨|| ೧) ಶ್ರೀವತ್ಸವಕ್ಷಾ ನಿತ್ಯ ಶ್ರೀಃ (ರಾಮಾ|| ಯು|| ೧೧೪|| ೧೫) ಸ ಏವ ಭಗವಾ ನ್ಕಾಲ ಸ್ಸರ್ವಮಾತ್ಮವಶಂ ನ ಯೇತ್ || (ಪಾರಾಶರ್ಯ) ನಾಸ್ತಿ ವಿಷ್ಣೋಃ ಪರಂತತ್ವಂ ತಸ್ಯಕಾಲಾ ತ್ಪರಾತನುಃ " ಇತ್ಯಾದಿ ಸ್ಥಲಗಳಲ್ಲಿ ಪ್ರಸಿದ್ಧವಾಗಿ ಹೇಳಲ್ಪಡುವುದರಿಂದಲೂ ಸದಾ ಕಾರಣತ್ವ ವಿರುವುದರಿಂದಲೂ ಜ್ಞಾನಾದಿಗಳಂತೆ ಭಗವತ್ಸ್ವರೂಪಕ್ಕೆ ನಿರೂಪಕವಾಗಿರುವುದರಿಂದಲೂ ತಮಸ್ಸಿಗೆ ಮೇಲಾದ ಪ್ರದೇಶದಲ್ಲಿ ಇರುವುದರಿಂದ ಜನ್ಮಾದಿ ವಿಕಾರ ರಹಿತನಾಗಿಯೂ ಅಕ್ಷರನೆಂತಲೂ ಕಾಲಾತೀತನೆಂತಲೂ ಹೇಳಲ್ಪಡುವುದರಿಂದಲೂ ಈ ದಿವ್ಯ ಮಂಗಳ ವಿಗ್ರಹದೊಡನೆ ಕೂಡಿರುವ ಪರಮಪುರುಷನನ್ನು ಉಪಾಸನ ಮಾಡುವಂತವರಿಗೆ ಇಂತಹ ನಿತ್ಯವಾದ ದಿವ್ಯಮಂಗಳ ವಿಗ್ರಹವು ಲಭಿಸುವುದೆಂದು ತತ್ಕ್ರತುನ್ಯಾಯವಿರುವುದರಿಂದಲೂ ಈ ದಿವ್ಯ ಶರೀರವು ನಿತ್ಯವಾಗಿರುವುದೆಂದು ದೃಢವಾಗಿ ಯೇರ್ಪಡುವುದು. (ತತ್ಕ್ರತುನ್ಯಾಯ ವಿವರಣವು—" ಯಥಾಕ್ರತು ರಸ್ಮಿನ್ ಲೋಕೇ ಪುರುಷೋ ಭವತಿ ತಥೇತಃ ಪ್ರೇತ್ಯ ಭವತಿ " ಎಂಬ ಶ್ರುತ್ಯನುಸಾರವಾಗಿ ಯೆಂತಹ ಗುಣ ವಿಶಿಷ್ಟನಾದ ಪರಬ್ರಹ್ಮನನ್ನು ಉಪಾಸನಮಾಡುತ್ತಾನೆಯೊ ಅಂತಹ ಗುಣ ವಿಶಿಷ್ಟ ಬ್ರಹ್ಮ ಸಾಧರ್ಮ್ಯವನ್ನು ಹೊಂದುವುದೇ ತತ್ಕ್ರತು ನ್ಯಾಯವು) ಈ ಪ್ರಕಾರವಾಗಿ ಈ ವಿಷಯದಲ್ಲಿ " ನಭೂತ ಸಂಘ ಸಂಸ್ಥಾನೊ ದೇಹೊಸ್ಯ ಪರಮಾತ್ಮನಃ | ನತಸ್ಯ ಪ್ರಾಕೃತಾ ಮೂರ್ತಿ ರ್ಮಾಂಸಮೇದೊಸ್ಥಿ ಸಂಭವಾ " (ವಿ|| ಪು) ಇತ್ಯಾದಿ ಶ್ರುತಿ ಸ್ಮೃತಿಗಳು ಪ್ರಬಲವಾಗಿರುವಾಗ ಈ ದಿವ್ಯ ರೂಪಕ್ಕೆ ಆಗಂತುಕವೆಂತಲೂ ಅನಿತ್ಯವೆಂತಲೂ ಹೇಳುವ ಯುಕ್ತಿಗಳು ಸ್ವಲ್ಪವೂ ಅಂಕುರಿಸಲವಕಾಶವಿಲ್ಲವು. ಇದಕ್ಕನುಸಾರವಾಗಿಯೇ ಕೆಲವು ಕಡೆ ಪರಮಾತ್ಮನಿಗೆ ರೂಪವಿಲ್ಲವೆನ್ನುವ ವಚನಗಳಿಗೂ ಹೇಯವಾದ ಪ್ರಾಕೃತ ರೂಪವಿಲ್ಲವೆನ್ನುವ ತಾತ್ಪರ್ಯವು ಸ್ವೀಕರಿಸಲ್ಪಡುವುದು. ಸೂತ್ರಕಾರ

ರಂತೆ ವಾಕ್ಯಕಾರ ಭಾಷ್ಯಕಾರರೂ ಆದಿತ್ಯಮಂಡಲಾಂತರ್ವರ್ತಿಯಾದ ಪರಬ್ರಹ್ಮಕ್ಕೆ ನಿತ್ಯವಾದ ಶರೀರವುಂಟೆಂದು "ರೂಪಂವಾತೀಂದ್ರಿಯ ಮಂತಃ ಕರಣ ಪ್ರತ್ಯಕ್ಷ ನಿರ್ದೇಶಾತ್(ವಾಕ್ಯೆ) ‖ ಅಂಜಸ್ಯೈವ ವಿಶ್ವಸೃಜೊ ರೂಪಂ" (ದ್ರಮಿಡ ಭಾಷ್ಯೆ) ಇತ್ಯಾದಿಗಳಿಂದ ನಿರೂಪಿಸಿರುತ್ತಾರೆ. ಆದುದರಿಂದ ಅವತಾರಗಳಲ್ಲಿಯೂ ಕೂಡ ದಿವ್ಯ ಮಂಗಳ ವಿಗ್ರಹಕ್ಕೆ ಆದ್ಯಂತವಿಲ್ಲವು. ಹೇಗಾದರೆ ಲೋಕದಲ್ಲಿ ತೆರೆಯೊಳಗಿರುವ ಒಬ್ಬನು ಅಲ್ಲಿಂದ ಹೊರಗೆ ಬರುವನೊ ಅದರಂತೆ ಪರಮಪದದಿಂದ ಬರುವುದು ಹೋಗುವುದೆಂಬ ಇಷ್ಟು ಮಾತ್ರವಲ್ಲದೆ ಬೇರೆ ಯಿಲ್ಲವು ಈ ಪ್ರಕಾರ ವಾಗಿಯೇ ಮಹರ್ಷಿಗಳೂ "ಭುಜೈಶ್ಚತುರ್ಭಿಸ್ಸಮುಪೇತ ಮೇತ ದ್ರೂಪಂ ವಿಶಿಷ್ಟಂ ದಿವಿ ಸಂಸ್ಥಿತಂಚ | ಭೂಮೌ ಗತಂ ಪೂಜಯತಾ ಪ್ರಮೇಯಂ ಸದಾಪಿ ತಸ್ಮಿನ್ನಿವಸಾಮಿ ದೇವಃ ‖ ಸ್ವರ್ಲ್ಲೋಕಮಾ (ಗಚ್ಛ) ಗಾಚ್ಛಗತಜ್ವರಶ್ಚಿರಂ ಸುರೇಂದ್ರ ಗುಪ್ತಂ ಗತದೋಷ ಕಲ್ಬಿಷಂ ‖ ವಿವೇಶ ವೈಷ್ಣವಂ ತೇಜ ಸ್ಸಶರೀರ ಸ್ಸಹಾನುಗಃ" ಇತ್ಯಾದಿಗಳಿಂದ ಈ ಅಂಶವನ್ನು ರಹಸ್ಯವಾಗಿ ಹೇಳಿರುವರು. ‖ ೪೦ ‖

(ಈ ನಾಮದ ವ್ಯಾಖ್ಯಾನದಲ್ಲಿ ಉದಾಹರಿಸಲ್ಪಟ್ಟ ವಚನಗಳ ಅರ್ಥವು. ಭಾರೂಪ ಇತ್ಯಾದಿ—ಕಾಂತಿರೂಪನೂ ಸತ್ಯ ಸಂಕಲ್ಪನೂ. ಸ್ವರ್ಣಮಯನಾದ ಪುರುಷನು. ಮಿಂಚಿನಂತೆ ಪ್ರಕಾಶವುಳ್ಳ ಪುರುಷನ ಮೇಲೆ. ತಮಸ್ಸಿಗೆ ಮೇಲೆ ಆದಿತ್ಯವರ್ಣವಾಗಿ ಪ್ರಕಾಶಿಸುವಂತವನು. ಸಕಲ ಕಾರ್ಯಗಳನ್ನು ಮಾಡುವಂತವನು, ಸಕಲ ಗಂಧ ಸ್ವರೂಪನು, ಸಕಲ ರಸ ಸ್ವರೂಪನು ಸ್ವರ್ಣದಂತೆ ಕಾಂತಿಯುಳ್ಳವನೂ, ಸ್ವಪ್ನದಲ್ಲಿ ಬುದ್ಧಿಗೆ ವಿಷಯನಾದವನೂ ಆದ ಪರಮಪುರುಷನನ್ನು ತಿಳಿಯಬೇಕು. ಪರಮಪುರುಷನು ಪುಂಡರೀಕದಂತೆ (ಕಮಲದಂತೆ) ಕಣ್ಣುಗಳುಳ್ಳವನು, ಎಂದು ವರಾಹ ಪುರಾಣ ಪ್ರಮಾಣದ ವರಿಗೂ ಅರ್ಥವು

ಸದೈಕರೂಪ ರೂಪಾಯ—ಯಾವಾಗಲೂ ಏಕವಿಧವಾದ ರೂಪವುಳ್ಳವನು. ಶ್ರೀವತ್ಸವೆಂಬ ಗುರ್ತನ್ನು ವಕ್ಷಸ್ಥಲದಲ್ಲಿ ಉಳ್ಳವನಾಗಿ ನಿತ್ಯವೂ ಶ್ರೀದೇವಿಯೊಡನೆ ಪ್ರಕಾಶಿಸುವಂತವನು ಕಾಲ ಸ್ವರೂಪಿಯಾದ ಆ ಪರಮಪುರುಷನೆ ಸಕಲವನ್ನೂ ತನ್ನ ಸ್ವಾಧೀನಪಡಿಸಿಕ್ಕೊಳ್ಳುವಂತವನು ವಿಷ್ಣುವಿಗಿಂತಲೂ ಬೇರೆಯಾದ ಪರತತ್ವವು ಯಾವುದೂ ಇಲ್ಲವು, ಅವನ ದಿವ್ಯ ಶರೀರವು ಕಾಲಕೃತವಾದ ಪರಿಣಾಮಕ್ಕೆ ಸಿಕ್ಕುವಂತಾದ್ದಲ್ಲವು ಎಂದು "ನಾಸ್ತಿ ವಿಷ್ಣೋಃ" ಎಂಬೀವರಿಗೂ ಇರುವ ಪ್ರಮಾಣಾರ್ಥವು

ನಭೂತಸಂಘೇತ್ಯಾದಿ—ಪರಮಾತ್ಮನ ಈ ದೇಹವು ಪೃಥಿವ್ಯಾದಿ ಪಂಚ ಭೂತಗಳ

ಸಮುದಾಯಾತ್ಮಕ ವಲ್ಲವು ; ಏತಕ್ಕೆಂದರೆ ? ಮಾಂಸ ಮೇದಸ್ಸು ಮೊದಲಾದವುಗಳಿಂ ದುಂಟಾದ ಪ್ರಾಕೃತ ಶರೀರವು ಅವನಿಗಿಲ್ಲವು.

ರೂಪಂವಾ–ಇಂದ್ರಿಯಗಳಿಗೆ ವಿಷಯವಾಗದ ಶರೀರವು ; ಏತಕ್ಕೆಂದರೆ ಅಂತಃ ಕರಣದಿಂದ ಪ್ರತ್ಯಕ್ಷೀಕರಿಸಲ್ಪಡುವಂತೆ ಹೇಳುವುದರಿಂದ. ಅಂಜಸ್ಯೈವೇತ್ಯಾದಿ–ಜಗತ್ಸೃಷ್ಟಿ ಕರ್ತನಿಗೆ ರೂಪವನ್ನು ಅಂಗೀಕರಿಸುವುದು ಯುಕ್ತವಷ್ಟೆ.

ಭುಜೈಶ್ಚತುರ್ಭಿರಿತ್ಯಾದಿ–ಚತುರ್ಭುಜಗಳೊಡನೆ ಕೂಡಿರುವ ಈ ನನ್ನ ಶರೀರವು ವಿಲಕ್ಷಣವಾಗಿ ದಿವ್ಯಲೋಕದಿಂದ ಭೂಮಿಯಲ್ಲಿ ಈಗ ಅವತರಿಸಿ ಅವಾಙ್ಮನೋಗೋಚರ ವಾದ ಪ್ರಭಾವವುಳ್ಳದ್ದಾಗಿರುವುದು ನಾನು ಸದಾ ಅಂತಹ ಶರೀರದಲ್ಲಿ ವಾಸಮಾಡುವೆನು. ಇಂತಹ ದಿವ್ಯರೂಪವನ್ನು ನೀವು ಪೂಜಿಸಬೇಕು ಸ್ವರ್ಲೋಕಮಾಗಚ್ಛೇತ್ಯಾದಿ–ದೇವತೆ ಗಳ ಪ್ರಾರ್ಥನದಿಂದ ರಾವಣ ವಧಾದಿ ವ್ಯಾಪಾರಗಳನ್ನು ಪೂರೈಸಿಕೊಂಡು ರಜಸ್ತಮ ಸ್ಸಂಬಂಧವಿಲ್ಲದೇ ಇರುವುದೂ ನಿತ್ಯಸೂರಿ ಸಮೂಹದಿಂದ ಕೂಡಿರುವುದೂ ಆದ ನಿನ್ನ ಲೋಕವನ್ನು ಕುರಿತು ಬಾ ಎಂದರ್ಥವು ಈ ಶ್ಲೋಕವು ಶ್ರೀರಾಮಾವತಾರಕ್ಕೆ ಪೂರ್ವವೇ ದೇವತೆಗಳು ಶ್ರೀಮಹಾವಿಷ್ಣುವನ್ನು ರಾವಣ ವಧಾರ್ಥವಾಗಿ ಪ್ರಾರ್ಥಿಸುವಾಗ ಹೇಳು ವಂತಾದ್ದಾಗಿರುವುದು. ವಿವೇಶೇತ್ಯಾದಿ–ಸಪರಿವಾರನಾಗಿಯೂ ಸಶರೀರನಾಗಿಯೂ ತನ್ನ ಸಾಕ್ಷಾದ್ವೈಷ್ಣವ ತೇಜಸ್ಸನ್ನು ಪ್ರವೇಶಿಸಿದನು.)

## (೪೩ನೇ ನಾಮವು) ಧಾತಾ, ಓಮ್‖ ಧಾತ್ರೇನಮಃ.

(ಶಂ‖ ಭಾ) ಧಾತಾ–ಅನಂತಾದಿ ರೂಪದಿಂದ ಪ್ರಪಂಚವನ್ನು ಧರಿಸುವಂತವನು. (ಮ) ಲೋಕಗಳಿಗೆ ಧಾರಕನು 'ಧಾತಾ' ಎನ್ನಲ್ಪಡುವನು.

( ವಿ ‖ ಭಾ ) ಪರಮಪುರುಷನು ಜಗತ್ಕಾರಣನಾದಮೇಲೆ ಅವನಿಗೆ ಬ್ರಹ್ಮಾದಿಗಳಿಗಿಂತಲೂ ವೈಲಕ್ಷಣ್ಯವನ್ನು ಈ ನಾಮವು ಹೇಳುವುದು. ಸಕಲಕ್ಕೂ ಕಾರಣವಾಗಿ ಅಚೇತನ ಸಮಷ್ಟಿಯಾದ ಪ್ರಕೃತಿಯಲ್ಲಿ ಚೇತನ ಸಮಷ್ಟಿ ಭೂತವಾದ ಚತುರ್ಮುಖನೆಂಬ ಗರ್ಭವನ್ನು ಧರಿಸುತ್ತಾನಾಗಿ "ಧಾತಾ" ಎನ್ನಲ್ಪಡುವನು. ಈ ಅರ್ಥವನ್ನು "ಮಮಯೊನಿರ್ಮಹ ದ್ಬ್ರಹ್ಮ ತಸ್ಮಿನ್ ಗರ್ಭಂ ದಧಾಮ್ಯಹಂ ‖ ಧಾತಾ ಕ್ಷೇತ್ರಕರ್ಮ ಬೀಜ ಭೂತಂ ಗರ್ಭಂ ದಧಾತಿ ‖ ಅಪ ಏವ ಸ ಸರ್ಜಾದೌತಾಸುವೀರ್ಯ ಮಪಾಸೃಜತ್" ಇತ್ಯಾದಿ ಗೀತಾ ಮನ್ವಾದಿ ಸ್ಮೃತಿ ವಾಕ್ಯಗಳು ಹೇಳುವುವು, ‖೪೩‖

(ಪ್ರಕೃತಿಯು ನಾನು ಮಾಡುವ ಪ್ರಾಣಿಗಳ ಸೃಷ್ಟಿಗೆ ಕಾರಣವಾಗಿರುವುದು, ಅದರಲ್ಲಿ ನಾನು ನನ್ನ ಚೇತನ ಪ್ರಕೃತಿಯನ್ನು ಗರ್ಭವಾಗಿ ಧರಿಸುವೆನು. ಸರ್ವ ಸೃಷ್ಟಿ ಕರ್ತಾ ಆದವನು ಕ್ಷೇತ್ರವೆಂಬ ಕರ್ಮಕ್ಕೆ ಬೀಜವಾದ ಗರ್ಭವನ್ನು ಧರಿಸುವನು. ಮೊದಲು ಜಲವನ್ನೇ ಸೃಷ್ಟಿಸಿದನು, ಅವುಗಳಲ್ಲಿ ವೀರ್ಯವನ್ನು ಬಿಟ್ಟನು.)

## (೪೪ನೇ ನಾಮವು) ವಿಧಾತಾ, ಓಮ್॥ ವಿಧಾತ್ರೇನಮಃ.

(ಶಂ॥ ಭಾ) ಕರ್ಮಗಳಿಗೂ ಕರ್ಮಫಲಗಳಿಗೂ ಕರ್ತಾ ಆದ ಕಾರಣ "ವಿಧಾತಾ" ಎನ್ನಲ್ಪಡುವನು (ಅಥವಾ) ಲೋಕಧಾರಕರಾದ ಅನಂತಾದಿಗಳಿಗೂ ಕೂಡಾ ಧಾರಕನಾಗಿರುವುದರಿಂದ 'ವಿಧಾತಾ' ಎಂತಲಾದರೂ (ಶಂ ॥ ಮ ), ವಿಶೇಷಾಕಾರದಿಂದ ಸಮಸ್ತವನ್ನು ಧರಿಸುವಂತವನು 'ವಿಧಾತಾ' ಎಂತಲಾದರೂ ತಿಳಿಯಬಹುದು.

(ವಿ॥ ಭಾ) ಅಂತಹ ಗರ್ಭವನ್ನು ವಿಕಾರಪಡಿಸಿ ಆವಿರ್ಭವಿಸುವಂತೆ ಮಾಡತಕ್ಕವನೆಂದೀ ನಾಮವು ಹೇಳುವುದು. ವಿಧಾತಾ-ಆವಿರ್ಭವಿಸುವಂತೆ ಮಾಡುವಂತವನು, ಈ ಅರ್ಥವನ್ನು "ಯೊ ಬ್ರಹ್ಮಾಣಂ ವಿದಧಾತಿ ಪೂರ್ವಂ॥ ಅಥ ಪುನರೇವ ನಾರಾಯಣಃ॥ ತತ್ರ ಬ್ರಹ್ಮಾ ಚತುರ್ಮುಖೋಽ ಜಾಯತ ॥ ಹಿರಣ್ಯ ಗರ್ಭಂ ಪಶ್ಯತಜಾಯಮಾನಂ ॥ ತಸ್ಮಾದ್ವಿರಾಡಜಾಯತ " ಇತ್ಯಾದಿ ಪ್ರಮಾಣಗಳು ಹೇಳುವುವು. ॥ ೪೪ ॥

(ಯಾವನಾದರೆ ಸೃಷ್ಟ್ಯಾದಿಯಲ್ಲಿ ಚತುರ್ಮುಖನನ್ನು ಮಾಡುತ್ತಾನೆಯೊ, ಅನಂತರದಲ್ಲಿ ಪುನಶ್ಚ ನಾರಾಯಣನು. ಅವನಲ್ಲಿ ಚತುರ್ಮುಖ ಬ್ರಹ್ಮನು ಹುಟ್ಟಿದನು. ಹಿರಣ್ಯಗರ್ಭನು ಹುಟ್ಟುತ್ತಾನೆ ನೋಡಿ. ಅವನಿಂದ ವಿರಾಟ್ಟು ಹುಟ್ಟಿದನು. ಎಂದರ್ಥವು.)

## (೪೫ನೇ ನಾಮವು) ಧಾತುರುತ್ತಮಃ,
## ಓಮ್॥ ಧಾತುರುತ್ತಮಾಯನಮಃ.

( ಶಂ॥ ಭಾ ) ಇದು ವಿಶೇಷಣ ಯುಕ್ತವಾದ ಒಂದೇ ನಾಮವಾಗಿರುವುದು. ಪೃಥಿವ್ಯಾದಿ ಸರ್ವ ಅಚೇತನ ತತ್ವ ಅಥವಾ ಅಚೇತನ ಪ್ರಕೃತಿಗಳಿಗಿಂತಲೂ ಶ್ರೇಷ್ಠವಾದ ಚೇತನ ತತ್ವ ಅಥವಾ ಚೇತನ ಪ್ರಕೃತಿಯಾಗಿರುವೆನು. ಚಿತ್ ಎಂದರೆ ಜ್ಞಾನವಸ್ತುವು. (ಶಂ॥ ಮ) ಧಾತೃ ಶಬ್ದವನ್ನು ಪಂಚಮೀ ವಿಭಕ್ತಿಯನ್ನಾಗಿ ಮಾಡಿ ಚತುರ್ಮುಖ ಬ್ರಹ್ಮನಿಗಿಂತಲೂ ಶ್ರೇಷ್ಠನೆಂದು ಅರ್ಥವು. (ಶಂ) ಅಥವಾ ಧಾತುಃ, ಉತ್ತಮಃ,

ಎಂಬದಾಗಿ ಯರಡು ನಾಮಗಳಾಗಿಯೂ ಆಗಬಹುದು. ಆವಾಗ ಕಾರ್ಯ ಕಾರಣ ಪ್ರಪಂಚವನ್ನು ಧರಿಸುವುದರಿಂದ ಚಿದ್ವಸ್ತುವೇ 'ಧಾತುಃ' ಎನ್ನಲ್ಪಡುವುದು. ಉತ್ತಮಃ-ಉದ್ಗತಗಳಾದ ಸಮಸ್ತಗಳಲ್ಲಿಯೂ ಅಧಿಕವಾಗಿ ಉದ್ಗತನಾಗಿರುವುದರಿಂದ "ಉತ್ತಮಃ" ಎನ್ನಲ್ಪಡುವನು. ಎಂದರೆ ಲೋಕದಲ್ಲಿ ಶ್ರೇಷ್ಠ ವಸ್ತುತ್ವೇನ ಪರಿಗಣಿತವಾದ ಸಮಸ್ತ ವಸ್ತುಗಳಿಗಿಂತಲೂ ಅತ್ಯಂತ ಶ್ರೇಷ್ಠವಾದವನೆಂದರ್ಥವು.

(ವಿ॥ ಭಾ) ಈ ಸೃಷ್ಟಿಸುವಂತಹ ಸ್ವಭಾವವು ಬ್ರಹ್ಮಾದಿಗಳಿಗೂ ಸಮಾನವಾಗಿರುವಾಗ ಇವನೂ ಅವರುಗಳಲ್ಲಿ ಒಬ್ಬನೊ ? ಎಂದರೆ ಇವನು ಅವರುಗಳಿಗಿಂತಲೂ ವಿಲಕ್ಷಣನೆಂದೀ ನಾಮವು ಹೇಳುವುದು. ಅರ್ಥವು (ಶಂ॥ ವು॥ **ಈ ಇಬ್ಬರು ಸೇರಿ ಹೇಳಿರುವುದೆ.**) ಚತುರ್ಮುಖ ಬ್ರಹ್ಮನಿಗಿಂತಲೂ ಅವನಿಂದ ಸೃಷ್ಟರಾದ ಪ್ರಜಾಪತಿಗಳಿಗಿಂತಲೂ ಶ್ರೇಷ್ಠನು. ಈ ಅರ್ಥವು "ತತ್ವಂ ನಾರಾಯಣಃ ಪರಃ॥ ಏತೇಷಾಂ ಕತಮೋ ದೇವಃ ಪರಃ ಕೋವಾಽಥವಾ ಪರಃ" ಎಂಬ ಪ್ರಶ್ನಕ್ಕೆ "ಪರೋ ನಾರಾಯಣೋ ದೇವ ಸ್ತಸ್ಮಾ ಜ್ಜಾತ ಶ್ಚತುರ್ಮುಖಃ" ಎಂಬೀ ಪ್ರತ್ಯುತ್ತರವು ವರಾಹ ಪುರಾಣದಲ್ಲಿರುವ ಬ್ರಹ್ಮ ರುದ್ರ ಸಂವಾದದಿಂದಲೂ ಯಜ್ಞಾಗ್ರಹರಾಧ್ಯಾಯಾದಿಗಳಲ್ಲಿಯೂ ಸ್ಪಷ್ಟವಾಗಿರುವುದು. ॥೩೫॥

(ತತ್ವಮಿತ್ಯಾದಿ-(ತೈ॥ ನಾ॥ ೬॥ ೧೧॥) ನಾರಾಯಣನೇ ಪರತತ್ವವು ಏತೇಷಾಮಿತ್ಯಾದಿ-ಇವರುಗಳಲ್ಲಿ ಪರತತ್ವವೆನ್ನಲ್ಪಡುವ ಶ್ರೇಷ್ಠವಾದ ದೇವತೆಯು ಯಾರು ? ಸಾಮಾನ್ಯವಾದವರು ಯಾರು ? ಎಂಬ ಪ್ರಶ್ನಕ್ಕೆ ಪರೋ ನಾರಾಯಣ ಇತ್ಯಾದಿ ಪ್ರತ್ಯುತ್ತರವು ಶ್ರೀಮನ್ನಾರಾಯಣನೆ ಪರದೇವತೆಯು ಅವನಿಂದ ಚತುರ್ಮುಖನು ಹುಟ್ಟಿರುವನೆಂದು ಪ್ರತ್ಯುತ್ತರವನ್ನು ಹೇಳಿರುವುದರಿಂದ ಚತುರ್ಮುಖನಿಗಿಂತಲೂ ಶ್ರೇಷ್ಠನಾದವನೆಂದರಿಯಬೇಕು )

ಈ ಪ್ರಕಾರವಾಗಿ ಈ (೫ನೆ) ಶ್ಲೋಕದಲ್ಲಿರುವ (೯) ನಾಮಗಳಿಗೂ

"ಭವತಿ ಸ್ವೇಚ್ಛಯಾ ಯೊಸಾ "ಸ್ವಯಂ ಭೂಃ" (೩೭) ಪರಿಕೀರ್ತಿತಃ॥
ಸೌಂದರ್ಯಾದಿ ಗುಣಾನಾಂಯೋ ಹ್ಯಾ ವಿಷ್ಕಾರೇಣ ಶಂ ಸುಖಂ ।
ಪುಂಸಾಂ ಸಮ್ಯಗ್ಭಾವಯತಿ ಸ "ಶಂಭುಃ" (೩೮) ಪರಿಕೀರ್ತಿತಃ ।
ನಿವಾಸೆ ಸ್ಸವಿತಾ ಯಸ್ಯ ಸ "ಆದಿತ್ಯಃ" (೩೯) ಪ್ರಕೀರ್ತಿತಃ ॥
ಅಕ್ಷಿಣೀ ಪುಂಡರೀಕೇವ ಭಕ್ತಾನುಗ್ರಹಕಾರಿಣೀ ।
ಯಸ್ಯಾಸೌ "ಪುಷ್ಕರಾಕ್ಷಸ್ಸ್ಯ" (೪೦) ದುಷ್ಟನರ್ಮಸ್ತು ಪಾವಕಃ ॥

ಮಹಾನ್ಪೂಜ್ಯಸ್ತ್ರಯೀ ರೂಪಸ್ಸ್ವನೋ ಯಸ್ಯ "ಮಹಾಸ್ವನಃ"(೪೦)॥
ಯಸ್ಯಾದಿ ನಿಧನಂ ನಾಸ್ತಿ "ಅನಾದಿ ನಿಧನ" (೪೧) ಸ್ಸತು ॥
ಅನಾದಿ ನಿಧನೋ ಪಾಸ್ಯೋ ನಿತ್ಯ ಯೌವನ ವಿಗ್ರಹಃ ।
ಅಚಿತ್ಸಮಷ್ಟಿ ಭೂತಾಯಾಂ ಪ್ರಕೃತೌಚಿತ್ಸಮಷ್ಟಿಕಂ ॥
ಗರ್ಭಂ ವೇಧಾತ್ಮಕಂ ಧತ್ತೇಯಸ್ತು "ಧಾತೇ" (೪೨) ತಿಚಕ್ಷತೇ ।
ತದ್ಗರ್ಭ ಪರಿಣಾಮೇಸ್ಯಾ ದಾವಿರ್ಭಾವ ಯತಿಸ್ವಯಂ ॥
ಧರಣಾ ಲ್ಲೀಲಯಾ ಯಸ್ಮಾತ್ "ವಿಧಾತಾ" (೪೩) ಉಯಂಪ್ರಕೀರ್ತಿತಃ ।
ಯೋವೈಸ್ಯಾ ದ್ಧಾತುರುತ್ಕೃಷ್ಟ ಸ್ಸಚಸ್ಯಾ "ದ್ಧಾತುರುತ್ತಮಃ"(೪೫)

ಎಂಬೀ ಪ್ರಕಾರವಾಗಿ ವಿವೃತಿಯನ್ನು ಕಾಣಬಹುದು. ॥೫॥

ಮೂ॥ ಅಪ್ರಮೇಯೊ ಹೃಷೀಕೇಶಃ ಪದ್ಮನಾ
ಭೋ ಉಮರಪ್ರಭುಃ । ವಿಶ್ವಕರ್ಮಾ ಮನು ಸ್ತ್ವ
ಷ್ಟಾ ಸ್ಥವಿಷ್ಠಂ ಸ್ಥವಿರೊ ಧ್ರುವಃ ॥೬॥

(೪೬ನೇ ನಾಮವು) ಅಪ್ರಮೇಯಃ,

ಓಮ್ ॥ ಅಪ್ರಮೇಯಾಯನಮಃ.

(ಶಂ॥ ಭಾ) ಅಪ್ರಮೇಯಃ–ಶಬ್ದಾದಿಗಳಿಲ್ಲದವನಾದ್ದರಿಂದ ಪ್ರತ್ಯಕ್ಷ ಪ್ರಮಾಣದಿಂದ ಗ್ರಹಿಸಲ್ಪಡತಕ್ಕವನಲ್ಲವು; ವ್ಯಾಪ್ತಿಲಿಂಗಾದಿಗಳಿಲ್ಲದೇ ಇರುವುದರಿಂದ ಅನುಮಾನ ಪ್ರಮಾಣದಿಂದ ತಿಳಿಯಲ್ಪಡತಕ್ಕವನಲ್ಲವು; ಭಾಗ ರಹಿತನೆಂದರೆ ನಿರ್ಭಾಗನಾಗಿರುವುದರಿಂದ ಸಾದೃಶ್ಯವಿಲ್ಲದವನಾದಕಾರಣ ಉಪಮಾನ ಪ್ರಮಾಣವೇದ್ಯನಲ್ಲವು; ಆ ಭಗವಂತನಲ್ಲದೆ ಅನುಪಪದ್ಯಮಾನವಾದ ಪದಾರ್ಥವು ಇಲ್ಲವಾದುದರಿಂದ ಅರ್ಥಾಪತ್ತಿ ಪ್ರಮಾಣದಿಂದ ಗ್ರಾಹ್ಯನಾಗುವುದಿಲ್ಲವು; ಭಾವರೂಪನೂ ಅಭಾವ ಸಾಕ್ಷಿಯೂ ಆಗಿರುವುದರಿಂದ ಅಭಾವ ಗೋಚರನಲ್ಲವು; ಪ್ರಮಾಣಜನ್ಯವಾದ ಅತಿಶಯವಿಲ್ಲದವನಾದ ಕಾರಣ ಶಾಸ್ತ್ರ ಪ್ರಮಾಣ ವೇದ್ಯನಲ್ಲವು; ಆದರೆ ಯಾವ ಪ್ರಮಾಣದಿಂದಲೂ ತಿಳಿಯಲ್ಪಡದವನಾದಮೇಲೆ ಶಾಸ್ತ್ರಯೊನಿತ್ವಾಧಿ ಕರಣದಲ್ಲಿ ಹೇಳುವ ಶಾಸ್ತ್ರ ಯೊನಿತ್ವವು ಹೇಗೆ

ಸಿದ್ಧಿಸುವುದು? ಎಂದರೆ ಹೇಳುವೆನು; ಪ್ರಮಾಣಾದಿ ಸಾಕ್ಷಿತ್ವೇನ ಪ್ರಕಾಶ ಸ್ವರೂಪಕ್ಕೆ ಪ್ರಮಾಣಾ ವಿಷಯತ್ವವು ಪ್ರಾಪ್ತವಾಗಿದ್ದರೂ ಶಾಸ್ತ್ರವು ಆ ಪರಮಾತ್ಮನಲ್ಲಿ ಅಧ್ಯಸ್ತವಾದ ಅಲ್ಲದ ರೂಪವನ್ನು ನಿವೃತ್ತಿ ಮಾಡಿಸುವುದರಿಂದ ಪ್ರಮಾಣವಾಗಿರುವುದು, ಇದರಿಂದ ಶಾಸ್ತ್ರಯೊನಿತ್ವವು ಯುಕ್ತವೆಂತಲೇ ತಿಳಿಯಬೇಕು. ಶಾಸ್ತ್ರಂ ಯೋನಿಃ ಕಾರಣಂ ಸ ಶಾಸ್ತ್ರ ಯೊನಿಃ-ಯಾವ ಪರಮಾತ್ಮನನ್ನು ತಿಳಿಯುವುದಕ್ಕೆ ಶಾಸ್ತ್ರವು ಕಾರಣವಾಗಿರುವುದೊ ಅಂತವನು ಶಾಸ್ತ್ರ ಯೊನಿಯು, (ಪ್ರಮಾಣದಿಂದ ಗ್ರಹಿಸಲ್ಪಡದವನಿಗೆ ಶಾಸ್ತ್ರ ಯೊನಿತ್ವವು ಯುಕ್ತವಲ್ಲವೆಂದರೆ ಅದಕ್ಕಾಗಿ ಪರಮಾತ್ಮನಲ್ಲಿ ಅಧ್ಯಸ್ತವಾದ ಅತದ್ರೂಪ ನಿರಸನ ಮುಖದಿಂದ ಇದು ಪ್ರಮಾಣವಾಗುವುದರಿಂದ ಶಾಸ್ತ್ರ ಯೊನಿತ್ವವು ಯುಕ್ತವೆಂದು ಭಾವವು) ಇದರಿಂದ "ಪ್ರತ್ಯಕ್ಷ-ಅನುಮಾನ-ಉಪಮಾನ-ಶಬ್ದ-ಅರ್ಥಾಪತ್ತಿ"ಯೇ ಮೊದಲಾದ ಪ್ರಮಾಣಗಳಿಂದ ಯಾವ ಪರಮಾತ್ಮನು ತಿಳಿಯಲ್ಪಡತಕ್ಕವನಲ್ಲವೊ ಅವನು " ಅಪ್ರಮೇಯಃ " ಎನ್ನಲ್ಪಡುವನೆಂದು ಈ ನಾಮಕ್ಕೆ ಅರ್ಥವು.

(ವಿ॥ ಭಾ) ಅಂತಹ ಬ್ರಹ್ಮಾದಿಗಳ ಚಕ್ಷುರಾದೀಂದ್ರಿಯಗಳಿಂದ ಇಂತವನೆಂದು ಅಳವಿಡಲ್ಪಡುವುದಕ್ಕ ಅಶಕ್ಯನಾದ ಪರಮಾತ್ಮನು "ಅಪ್ರಮೇಯಃ" ಎನ್ನಲ್ಪಡುವನು. ಇದಕ್ಕೆ "ಯಂ ನಾಯಂ ಭಗವಾನ್ ಬ್ರಹ್ಮಾ ಜಾನಾತಿ ಪುರುಷೋತ್ತಮಂ" ಎಂಬಿದೆ ಮೊದಲಾದ ಅನೇಕ ಪ್ರಮಾಣಗಳಿರುವುವು. ॥೪೬॥

(ಈ ಚತುರ್ಮುಖ ಬ್ರಹ್ಮನು ಯಾವ ಪರಮಪುರುಷನನ್ನು ಅರಿಯಲಾರನೋ ಎಂದರ್ಥವು)

## (೪೭ನೇ ನಾಮವು) ಹೃಷೀಕೇಶಃ,

### ಓಮ್॥ ಹೃಷೀಕೇಶಾಯನಮಃ.

(ಶಂ॥ ಭಾ) ಸಾಕ್ಷಿಯಾಗಿರುವುದರಿಂದ ಇಂದ್ರಿಯಗಳಿಗೆ ಈಶನಾದ ಕಾರಣ (ಕ್ಷೇತ್ರಜ್ಞ ರೂಪವನ್ನು ಹೊಂದಿದವನಾದ ಕಾರಣ) ಹೃಷೀಕೇಶ ನೆನ್ನಲ್ಪಡುವನು. ಇಂದ್ರಿಯಗಳು ಯಾವ ಪರಮಾತ್ಮನ ಅಧೀನವಾಗಿರುವುವೊ ಆದಕಾರಣ ಹೃಷೀಕೇಶನೆಂತಲಾದರೂ ಹೇಳಬಹುದು. ಅಥವಾ "ಸೂರ್ಯಾ ಚಂದ್ರಮಸಾ ಶಶ್ವ ದಂಶುಭಿಃ ಕೇಶ ಸಂಜ್ಞಿತೈಃ |

ಬೋಧಯನ್ ಸ್ವಾಪಯಂಶ್ಚೈವ ಜಗದುತ್ಪಿಷ್ಠತೇ ಪೃಥಕ್|| ಬೋಧನಾ ತ್ಸ್ವಾಪನಾಚ್ಚೈವ ಜಗತೋ ಹರ್ಷಣಂ ಭವೇತ್ | ಅಗ್ನೀಷೋಮ ಕೃತ್ಯೈರೇವಂ ಕರ್ಮಭಿಃ ಪಾಂಡುನಂದನ || ಹೃಷೀಕೇಶೋಽಹಮೀಶಾನೋ ವರದೋ ಲೋಕ ಭಾವನಃ '' ಎಂಬ ಮೋಕ್ಷಧರ್ಮವಚನದಂತೆ ಸೂರ್ಯ ಚಂದ್ರ ರೂಪನಾದ ಪರಮಾತ್ಮನು ಜಗತ್ಪ್ರೀತಿಕರಗಳಾದ ಆ ಸೂರ್ಯ ಚಂದ್ರರ ಕಿರಣಗಳೆಂಬ ಕೇಶಗಳುಳ್ಳವನಾಗಿರುವುದರಿಂದ "ಹೃಷೀಕೇಶಃ" ಎನ್ನಲ್ಪಡುವನು.

(ಕೇಶಗಳೆನ್ನಲ್ಪಡುವ ಸೂರ್ಯ ಚಂದ್ರರ ಕಿರಣಗಳಿಂದ ಜಗತ್ತನ್ನು ನಿದ್ರಿಸಿದ್ದನ್ನಾಗಿಯೂ ಜಾಗ್ರದ್ದಶೆಯನ್ನು ಹೊಂದಿದ್ದನ್ನಾಗಿಯೂ ಮಾಡುವನು. ಇಂತಹ ನಿದ್ರಾ ಬೋಧನೆಗಳಿಂದ ಪ್ರಪಂಚಕ್ಕೆ ಹರ್ಷವುಂಟಾಗುವುದು. ಇಂತಹ ಹರ್ಷವು ಅಗ್ನಿ ಸೋಮರೆಂಬೀ ದೇವತೆಗಳ ಕಾರ್ಯವಾಗಿರುವುದರಿಂದ ಇವರಿಂದ ಜಗತ್ತಿಗೆ ಸಂತೋಷಪಡಿಸುವುದರ ಮೂಲಕವಾಗಿ ಲೋಕ ಪೂಜ್ಯನಾಗಿಯೂ ಆದುದರಿಂದಲೆ ಸರ್ವರಿಗೂ ಇಷ್ಟಾರ್ಥಗಳನ್ನು ಕೊಡುವಂತವನಾಗಿಯೂ ಇರುವನೆಂಡು ಈ ಮೋಕ್ಷಧರ್ಮ ವಚನಾರ್ಥವು.)

(ವಿ|| ಭಾ) ಅಂತಹ ಬ್ರಹ್ಮಾದಿಗಳ ಇಂದ್ರಿಯಗಳಿಗೂ ಕೂಡ ನಿಯಾಮಕನು. ಎಂದರೆ ಬ್ರಹ್ಮಾದಿ ದೇವತೆಗಳ ಇಂದ್ರಿಯಗಳು ಇವನ ವಶವಾದಮೇಲೆ ಅವರುಗಳು ಇವನನ್ನು ಅಳವಿಡುವುದು ಹೇಗೆ? ಎಂದರ್ಥವು. ಈ ಅರ್ಥವು " ಹೃಷೀಕಾಣೀಂದ್ರಿಯಾಣ್ಯಾಹು ಸ್ತೇಷಾಮೀಶೋ ಯತೋ ಭವಾನ್ | ಹೃಷೀಕೇಶಸ್ತತೋ ವಿಷ್ಣೋ ಖ್ಯಾತೋ ವೇದೇಷು ಕೇಶವಃ '' ಎಂಬದಾಗಿ ಶ್ರೀಹರಿವಂಶದಲ್ಲಿ ಹೇಳಲ್ಪಟ್ಟಿರುವುದು.

(ಹೃಷೀಕಗಳನ್ನು ಇಂದ್ರಿಯಗಳೆನ್ನುವರು. ಆ ಇಂದ್ರಿಯಗಳಿಗೆ ಯಾವ ಕಾರಣದಿಂದ ನೀನು ಈಶನಾಗಿರುವಿಯೊ ಆ ಕಾರಣದಿಂದ ಹೃಷೀಕೇಶನೆಂದು ವೇದಗಳಲ್ಲಿ ಕೇಶವನು ಪ್ರಖ್ಯಾತನಾಗಿರುವನೆಂದೀ ಶ್ಲೋಕಾರ್ಥವು)

ಅಥವಾ " ಹರ್ಷಾತ್ ಸೌಖ್ಯಾ ತ್ಸುಖೈಶ್ವರ್ಯಾ ದ್ಧೃಷೀಕೇಶತ್ವ ಮಶ್ನುತೆ'' ಎಂಬೀ ರೀತಿಯಾಗಿ ಹರ್ಷದಿಂದಲೂ ಸೌಖ್ಯದಿಂದಲೂ ಸುಖವಾದ ಐಶ್ವರ್ಯವುಳ್ಳವನಾಗಿರುವುದರಿಂದಲೂ ಹೃಷೀಕೇಶನೆಂತಲಾದರೂ ಆಗಬಹುದು.

(ಮ|| ಭಾ) ಇಂದ್ರಿಯಗಳಿಗೆ ಈಶನಾದವನು ಹೃಷೀಕೇಶನೆನ್ನಲ್ಪಡುವನು. ||೪೭||

## (೪೮ನೇ ನಾಮವು) ಪದ್ಮನಾಭಃ.

### ಓಮ್॥ ಪದ್ಮನಾಭಾಯನಮಃ.

(ಶಂ॥ ಮ॥ ಭಾ) "ಅಜಸ್ಯ ನಾಭಾವಧ್ಯೇಕ ಮರ್ಪಿತಂ" ಎಂಬೀ ಪ್ರಮಾಣಾನುಸಾರವಾಗಿ ಜಗತ್ಕಾರಣವಾದ ಪದ್ಮವನ್ನು ನಾಭಿಯಲ್ಲಿ ಉಳ್ಳವನು "ಪದ್ಮನಾಭಃ" ಎನ್ನಲ್ಪಡುವನು.

( ವಿ ॥ ಭಾ ) ಹಿಂದೇ ಹೇಳಿರುವ ಅರ್ಥಗಳನ್ನೇ ವಿವರಿಸುವುದು. ಚತುರ್ಮುಖ ಬ್ರಹ್ಮನ ಉತ್ಪತ್ತಿಗೆ ಕಾರಣವಾದ ಪದ್ಮವನ್ನು ನಾಭಿಯಲ್ಲುಳ್ಳವನು "ಪದ್ಮನಾಭಃ" ಎನ್ನಲ್ಪಡುವನು. ಇದಕ್ಕೆ "ಧಾತುರ್ನಾಭ್ಯಾಂ ಪುಷ್ಕರಂ ಪ್ರಾದುರ್ಭವತಿ ॥ ಅಜಸ್ಯ ನಾಭಾವಧ್ಯೇಕ ಮರ್ಪಿತಂ" ಇತ್ಯಾದಿ ಪ್ರಮಾಣಗಳಿರುವುವು. ॥೪೮॥

(ಸರ್ವ ಜಗತ್ಕಾರಣನಾದ ಪರಮಪುರುಷನ ನಾಭಿಯಲ್ಲಿ ಚತುರ್ಮುಖನ ಉತ್ಪತ್ತಿಗೆ ಕಾರಣವಾದ ಪದ್ಮವು ಪ್ರಾದುರ್ಭವಿಸುವುದು. ಅಜನೆಂದರೆ ಕರ್ಮಾಯತ್ತವಾದ ಹುಟ್ಟುವಿಕೆ ಇಲ್ಲದವನು, ಇಂತವನ ನಾಭಿಯಲ್ಲಿ ಅದ್ವಿತೀಯವಾದ ಒಂದು ಕಮಲವು ಇರುವುದೆಂದು ಈ ವಾಕ್ಯಗಳ ಅರ್ಥವು.)

## (೪೯ನೇ ನಾಮವು) ಅಮರಪ್ರಭುಃ,

### ಓಮ್॥ ಅಮರಪ್ರಭವೇನಮಃ.

(ಶಂ॥ ಮ॥ ಭಾ) ದೇವತೆಗಳಿಗೆ ಪ್ರಭುವಾದವನು "ಅಮರಪ್ರಭುಃ" ಎನ್ನಲ್ಪಡುವನು.

(ವಿ॥ ಭಾ) ಆ ಬ್ರಹ್ಮಾದಿ ದೇವತೆಗಳಿಗೆ ಸೃಷ್ಟ್ಯಾದಿ ಮೊದಲಾದ ಅಧಿಕಾರಗಳನ್ನು ಕೊಟ್ಟು ನಿರ್ವಹಿಸುವಂತವನು "ಅಮರಪ್ರಭುಃ" ಎನ್ನಲ್ಪಡುವನು. ಇದಕ್ಕೆ ಶ್ರೀಮದ್ರಾಮಾಯಣದಲ್ಲಿ "ಮಹಾರ್ಣವೇ ಶಯನೋಪ್ಸುಮಾಂ ತ್ವಂ ಪೂರ್ವಮ ಜೀಜನಃ । ಪ್ರಾಜಾಪತ್ಯಂ ತ್ವಯಾ ಕರ್ಮ ಸರ್ವಂ ಮಯಿ ನಿವೇಶಿತಂ" ಎಂಬ ಪ್ರಮಾಣವು ಆಧಾರವಾಗಿರುವುದು. ॥೪೯॥

(ಮಹಾಸಮುದ್ರದ ಜಲದಲ್ಲಿ ಶಯನಿಸಿಕೊಂಡಿರುವ ನೀನು ಮೊದಲು ನನ್ನನ್ನು ಸೃಷ್ಟಿಸಿ ಸಮಸ್ತವಾದ ಪ್ರಜಾಸೃಷ್ಟಿ ಎಂಬ ಕಾರ್ಯವನ್ನು ನನ್ನಲ್ಲಿಟ್ಟಿರುವಿ ಎಂದರ್ಥವು)

ಮಹಾಭಾರತದಲ್ಲಿಯೂ " ಏತೌದ್ವೌ ವಿಬುಧ ಶ್ರೇಷ್ಠೌ ಪ್ರಸಾದ ಕ್ರೋಧಜೌ ಸ್ಮೃತೌ । ತದಾದರ್ಶಿತ ಪಂಥಾನೌ ಸೃಷ್ಟಿ ಸಂಹಾರಕಾರಕೌ " (ಮೋಕ್ಷಧ॥ ೧೭೯॥ ೧೯॥) ಇತ್ಯಾದಿ ಪ್ರಮಾಣಗಳನ್ನರಿಯಬೇಕು. ॥೪೯॥

(ಪರಮಾತ್ಮನ ಪ್ರಸಾದದಿಂದ ಹುಟ್ಟಿದವನು ಚತುರ್ಮುಖನು, ಕ್ರೋಧದಿಂದುಂಟಾದವನು ರುದ್ರನು, ಎಂಬದಾಗಿ ದೇವಶ್ರೇಷ್ಠರಾದ ಇವರ ವಿಷಯದಲ್ಲಿ ಪುರಾಣ ವಚನಗಳು ಈ ಅರ್ಥವನ್ನು ಹೇಳುವುವು ಆ ಪರಮಾತ್ಮನಿಂದ ತೋರಿಸಲ್ಪಟ್ಟ ಸೃಷ್ಟಿ ಸಂಹಾರ ಕಾರ್ಯಗಳನ್ನು ಬ್ರಹ್ಮ ರುದ್ರರು ಮಾಡುವರೆಂದೀ ವಚನಾರ್ಥವು)

## (೫೦ನೇ ನಾಮವು) ವಿಶ್ವಕರ್ಮಾ,
## ಓಮ್॥ ವಿಶ್ವಕರ್ಮಣೇನಮಃ.

(ಶಂ॥ ಭಾ) ಪ್ರಪಂಚವೇ ಕ್ರಿಯೆಯಾಗಿ ಉಳ್ಳವನು, ಅಥವಾ ಜಗತ್ಕಾರ್ಯ ವುಳ್ಳವನು, ಅಥವಾ ವಿಶ್ವಕರ್ಮನೊಡನೆ ಸಮಾನನಾಗಿರುವಂತವನು " ವಿಶ್ವಕರ್ಮಾ " ಎನ್ನಲ್ಪಡುವನು.

(ವಿ॥ ಭಾ) ವಿಶ್ವಕರ್ಮಾ–ಸಕಲ ಕಾರ್ಯಗಳನ್ನು ಮಾಡತಕ್ಕವನು, ಎಂದರೆ ಚತುರ್ಮುಖ ಬ್ರಹ್ಮ ಸೃಷ್ಟಿಗೆ ಹಿಂದೆಯೂ ಮುಂದೆಯೂ ಇರುವ ಸಕಲ ವ್ಯಾಪಾರಗಳನ್ನೂ ಮಾಡತಕ್ಕವನೆಂದರ್ಥವು. " ವಿಶ್ವಕರ್ಮಣಸ್ಸಮವರ್ತತಾಧಿ " ಎಂಬಿ(ಪುರುಷ ಸೂ॥ ೧೯)ದೇ ಮೊದಲಾದ ಅನೇಕ ಪ್ರಮಾಣಗಳು ಈ ಅರ್ಥವನ್ನು ಹೇಳುವುವು.

(ಮ॥ ಭಾ) ವಿಶ್ವಂ ಕರೋತೀತಿ ವಿಶ್ವಕರ್ಮಾ–ಸಮಸ್ತವನ್ನು ಮಾಡುವಂತವನು. ॥ ೫೦ ॥

## (೫೧ನೇ ನಾಮವು) ಮನುಃ, ಓಮ್ ॥ ಮನವೇನಮಃ.

(ಶಂ॥ ಮ॥ ಭಾ) ಮನನಾನ್ಮನುಃ–ಮನನದಿಂದ ಮನುವೆನ್ನಲ್ಪಡುವನು. (ಶಂ) " ನಾನ್ಯೋತೋಽಸ್ತಿ ಮಂತಾ " ಎಂಬ ಶ್ರುತಿಯು ಈ ಆತ್ಮನಿಗಿಂತಲೂ ಮನನಮಾಡತಕ್ಕವನು ಬೇರೊಬ್ಬನಿಲ್ಲವೆಂಬ ಈ ಅರ್ಥವನ್ನು ಹೇಳುವುದು. ಮಂತ್ರ ಸ್ವರೂಪನಾಗಿರುವುದರಿಂದಲೂ ಮನು

ಪ್ರಜಾಪತಿ ರೂಪನಾಗಿರುವುದರಿಂದಲಾದರೂ "ಮನುಃ" ಎನ್ನಲ್ಪಡುವನು.

(ವಿ॥ ಭಾ) ಸಂಕಲ್ಪಲೇಶಮಾತ್ರದಿಂದ (ಹಿಂದೆ ವಿವರಿಸಿರುವ) ಇಷ್ಟು ವ್ಯಾಪಾರಗಳನ್ನೂ ಮಾಡತಕ್ಕವನು" ಮನುಃ" ಎನ್ನಲ್ಪಡುವನು. ॥೫೧॥

## (೫೨ನೇ ನಾಮವು) ತ್ವಷ್ಟಾ.

ಓಮ್॥ ತ್ವಷ್ಟ್ರೇನಮಃ.

(ಶಂ॥ ಭಾ) ಸಂಹಾರ ಸಮಯದಲ್ಲಿ ಸಮಸ್ತ ಭೂತಗಳನ್ನು ಕೃಶವನ್ನಾಗಿ ಮಾಡುವುದರಿಂದ "ತ್ವಷ್ಟಾ" ಎನ್ನಲ್ಪಡುವನು.

(ವಿ॥ ಭಾ) ಈ ಪ್ರಕಾರವಾಗಿ ನಿರ್ಮಾಣಮಾಡಲ್ಪಟ್ಟ ನಾಮ ರೂಪಗಳಿಂದ ದೇವನೆಂತಲೂ ಮನುಷ್ಯನೆಂತಲೂ ತಿರ್ಯಕ್ಕೆಂತಲೂ ಸ್ಥಾವರವೆಂತಲೂ ವಿಭಕ್ತವಾಗಿರುವ ವೈಚಿತ್ರ್ಯವನ್ನು ಹೇಳುವುದೀ ನಾಮವು. ನಾಮ ರೂಪಗಳಿಂದ ವಿಭಾಗವನ್ನು ಮಾಡತಕ್ಕವನು "ತ್ವಷ್ಟಾ" ಎನ್ನಲ್ಪಡುವನು. "ತ್ವಷ್ಟಾರಂ ರೂಪಾಣಿ ವಿ ಕುರ್ವಂತಂ" ಎಂಬದಾಗಿ ಪ್ರಮಾಣವಿರುವುದು. ॥೫೨॥

(ವಿಶೇಷವಾಗಿ ನಾಮ ರೂಪಗಳನ್ನು ಮಾಡುವುದರಿಂದ ತ್ವಷ್ಟಾ ಎನ್ನಲ್ಪಡುವವನನ್ನು ಎಂದರ್ಥವು.)

## (೫೩ನೇ ನಾಮವು) ಸ್ಥವಿಷ್ಠಃ.

ಓಮ್॥ ಸ್ಥವಿಷ್ಠಾಯನಮಃ.

(ಶಂ॥ ಮ॥ ಭಾ) ಅತಿಶಯೇನ ಸ್ಥೂಲಃ-ಸ್ಥವಿಷ್ಠಃ; ಅತಿಶಯದಿಂದ ಸ್ಥೂಲವಾಗಿರುವಂತವನಾದುದರಿಂದ "ಸ್ಥವಿಷ್ಠಃ" ಎನ್ನಲ್ಪಡುವನು.

(ವಿ॥ ಭಾ) ಆದುದರಿಂದಲೆ ಸ್ಥೂಲನಾದವನು. ಎಂದರೆ ತನ್ನ ಸಂಕಲ್ಪಾನುಗುಣವಾಗಿ ಬಹು ಪ್ರಕಾರದಿಂದ ತಾನು ವಿಸ್ತಾರವನ್ನು ಹೊಂದುವುದಾಗಿ ಉದ್ದೇಶಿಸಿ ಸೂಕ್ಷ್ಮವಾದ ಅವ್ಯಕ್ತವ್ಯಕ್ತವೇ ಮೊದಲಾದ ಕ್ರಮದಿಂದ ದೇವ ಮನುಷ್ಯ ತಿರ್ಯಕ್ ಸ್ಥಾವರವೆಂತಲೂ, ಅವುಗಳಿಗೆ

ಶಬ್ದ ಸ್ಪರ್ಶ ರೂಪ ರಸಾದಿ ಗುಣಗಳೆಂತಲೂ, ಅವುಗಳಿಗೆ ವಾಸಸ್ಥಾನ ವಾದ ಹದಿನಾಲ್ಕು ಲೋಕಗಳನ್ನು ಅಡಗಿಸಿಕೊಂಡಿರುವ ಬ್ರಹ್ಮಾಂಡ ವೆಂತಲೂ, ಇದಕ್ಕೆ ಆವರಣ ವಾದ ಸ್ಥೂಲ ವ್ಯಕ್ತವಾದ ವ್ಯಷ್ಟಿಕಾ ರ್ಯವೆಂತಲೂ, ಈ ರೀತಿಯಾಗಿ ವಿಸ್ತಾರದಿಂದ ಸ್ಥೂಲನಾಗಿರುವಂತವನು "ಸ್ಥವಿಷ್ಠಃ" ಎನ್ನಲ್ಪಡುವನು. (ಸ್ಥೂಲ ಚಿದಚಿಚ್ಛರೀರಕನಾದ ವನು ಸ್ಥವಿಷ್ಠನೆಂದು ಏರ್ಪಡುವುದು. ಈ ನಾಮಕ್ಕೆ - (ಶಂ॥ ಮ॥ ವಿ) ಎಂಬ ಮೂರು ಭಾಷ್ಯವೂ ಏಕಾರ್ಥಕವಾಗಿದ್ದರೂ (ಶಂ॥ ಮ) ಇವರ ಭಾಷ್ಯಕ್ಕೆ ವ್ಯಾಖ್ಯಾನರೂಪವಾಗಿರುವುದು (ವಿ) ಭಾಷ್ಯವೆಂದರಿಯ ಬೇಕು)

ಇದಕ್ಕೆ "ನಾಸ್ತ್ಯಂತೋ ವಿಸ್ತರಸ್ಯಮೇ ॥ ವಿಸ್ತಾರ ಸ್ಸರ್ವಭೂ ತಸ್ಯ ವಿಷ್ಣೋಸ್ಸರ್ವಮಿದಂಜಗತ್" ಎಂಬಿದೇ ಮೊದಲಾದ ಪ್ರಮಾಣ ಗಳು ಇರುವುವು ॥ ೫೭ ॥

(ನನ್ನ ವಿಸ್ತಾರಕ್ಕೆ ಕೊನೆಯೇ ಇಲ್ಲವು. (ಗೀ॥ ೧೦ನೆ ಅ) ಈ ಸಮಸ್ತ ಪ್ರಪಂ ಚವೂ ಸಮಸ್ತ ಭೂತಗಳನ್ನು ಶರೀರವಾಗಿ ಉಳ್ಳ ಶ್ರೀಮಹಾವಿಷ್ಣುವಿನ ವಿಸ್ತಾರವಾಗಿ ರುವುದೆಂದರ್ಥವು)

## (೫೮ನೇ ನಾಮವು) ಸ್ಥವಿರಃ, ಓಮ್॥ ಸ್ಥವಿರಾಯನಮಃ.

(ಶಂ॥ ಮ॥ ಭಾ) "ತ್ವೇಷಗ್ಂಹ್ಯಸ್ಯ ಸ್ಥವಿರಸ್ಯನಾಮ" ಎಂಬ ಋಗ್ವೇದ ಪ್ರಮಾಣಾನುಸಾರವಾಗಿ ಪ್ರಾಚೀನ (ಹಳಬ) ನಾದಕಾರ ಣದಿಂದ "ಸ್ಥವಿರಃ" ಎನ್ನಲ್ಪಡುವನು. ಆದರೆ 'ಸ್ಥವಿರಃ ಧ್ರುವಃ' ಎಂಬೀ ಯರಡೂ ಸೇರಿ ಒಂದೇನಾಮವಾಗಿರುವುದು. ಸ್ಥಿರವಾಗಿರತಕ್ಕ ಪುರಾಣ ಪುರುಷನೆಂಬ ವಿಶೇಷಣ ಯುಕ್ತವಾದ ಶಬ್ದವು.

(ವಿ॥ ಭಾ) ಈ ಪ್ರಕಾರದಿಂದ ಸಂಕಲ್ಪಮೂಲವಾಗಿ ಕಾರಣನಾಗಿ ದ್ದರೂ ಲೋಕದಲ್ಲಿ ಕಾಣಲ್ಪಡುವ ಮಣ್ಣು ಮೊದಲಾದ ಕಾರಣಗಳಿಗಿಂ ತಲೂ ವೈಲಕ್ಷಣ್ಯವನ್ನು ತೋರಿಸುವುದೀ ನಾಮವೆಂದರಿಯಬೇಕು. ಸ್ಥವಿರಃ—ಸಮಸ್ತ ವಸ್ತುವಿನಲ್ಲಿಯೂ ಇರತಕ್ಕವನು. ಎಂದರೆ ಲೀಲೆಯಿಂದ ಕಾಲವನ್ನು ಅಪೇಕ್ಷಿಸಿದರೂ ಅದಕ್ಕೆ ವಶಪಟ್ಟವನಲ್ಲವೆಂದರ್ಥವು. ಇದ

ರಿಂದ ಕಾಲ ವಿಶೇಷವನ್ನಪೇಕ್ಷಿಸುವ ಮೊಸರು ಹಾಲು ಮೊದಲಾದ ಕಾರಣ ದ್ರವ್ಯಗಳಿಗಿಂತಲೂ ಇವನಿಗೆ ವೈಲಕ್ಷಣ್ಯವು ಹೇಳಲ್ಪಟ್ಟಿತು. ಏತಕ್ಕೆಂದರೆ? ಸರ್ವಪ್ರಕಾರದಿಂದಲೂ ಇವನಿಗೆ ಕಾಲವು ಅಧೀನವಾಗಿ ತಾನೇ ಇರುವುದು. ಇದಕ್ಕೆ "ಕಾಲಚಕ್ರಂ ಜಗಚ್ಚಕ್ರಂ ಯುಗಚಕ್ರಂಚ ಕೇಶವಃ | ಆತ್ಮಯೋಗೇನ ಭಗವಾನ್ ಪರಿವರ್ತಯತೇಽನಿಶಂ" ಎಂಬ ಪ್ರಮಾಣವನ್ನು ತಿಳಿಯಬೇಕು. ‖ ೫೪ ‖

(ಕಾಲ ಚಕ್ರವು ಜಗಚ್ಚಕ್ರವು ಯುಗಚಕ್ರವೆಂಬೀ ಸಮಸ್ತವನ್ನು ಕೇಶವನು ತನ್ನ ಸಂಕಲ್ಪದಿಂದ ಯಾವಾಗಲೂ ಕಳಿಯುತ್ತಾ (ಅಥವಾ ತಿರಿಗಿಸುತ್ತಾ) ಬರುವ ಸಂದರ್ಭವು.)

## (೫೫ನೇ ನಾಮವು) ಧ್ರುವಃ,
## ಓಮ್ ‖ ಧ್ರುವಾಯನಮಃ.

(ಶಂ‖ ಭಾ) ವಯಸ್ಸಾದರೂ ವಚನವಾದರೂ ಸ್ಥಿರವಾದದ್ದಾಗಿ ವುಳ್ಳವನು "ಧ್ರುವ" ನೆನ್ನಲ್ಪಡುವನು.

(ವಿ‖ ಭಾ) ಅಳವಿಲ್ಲದ ಪರಿಣಾಮ ವುಳ್ಳವನಾದರೂ ವಿಕಾರರಹಿತನಾಗಿರುವುದರಿಂದ ಸ್ವರೂಪ ವಿಚ್ಛೇದವಿಲ್ಲದೇ ಸ್ಥಿರನಾಗಿರತಕ್ಕವನು "ಧ್ರುವಃ" ಎನ್ನಲ್ಪಡುವನು. "ಅಜಯ್ಯ ಶ್ಶಾಶ್ವತೋಧ್ರುವಃ" ಎಂಬದಾಗಿ ಇದಕ್ಕೆ ಪ್ರಮಾಣವಿರುವುದು. ‖ ೫೫ ‖

ಈ ಪ್ರಕಾರವಾಗಿ ಈ (೬) ನೇ ಶ್ಲೋಕದಲ್ಲಿ ವಿವರಿಸಲ್ಪಟ್ಟ (೧೦) ನಾಮಗಳಿಗೂ

"ಬ್ರಹ್ಮಾದೀನಾಂಚ ಕರಣೈ ರ್ನೋಮಾತು ಮಪಿಶಕ್ಯತೇ | ದೃಷ್ಟುಂಹ್ಯಸೌ "ಪ್ರಮೇಯೊ" (೪೬) ವಚಸಾಮಪ್ಯಗೋಚರಃ‖ ಇಂದ್ರಿಯಾಣಾಂನಿಯಂತೃತ್ವಾತ್ "ಹೃಷೀಕೇಶಃ" (೪೭)ಪ್ರಕೀರ್ತಿತಃ| ಕಾಲಾತ್ಮಕಂತು ಯತ್ಪದ್ಮಂ ನಾಭೌಯಸ್ಯೈಸ ಉಚ್ಯತೇ ‖ "ಪದ್ಮನಾಭ" (೪೮) ಶ್ಶಾಷ್ಟವರೋ ಮಹಾಸಂತಾನದೋಮನುಃ | ಸೃಷ್ಟ್ಯಾದಿಷ್ವಪಿ ದೇವಾನಾ ಮಧಿಕಾರ ಪ್ರದಾನತಃ ‖ "ಅಮರಪ್ರಭು" (೪೯) ರಿತ್ಯುಕ್ತೋನವಾರ್ಣಸ ಸ್ಸರ್ವದೋಮನುಃ | ವಿಶ್ವಸ್ಯ ಜಗತಃಕರ್ಮ ವ್ಯಾಪಾರೊ ಯಸ್ಯಲಕ್ಷಣಂ ‖ ಪ್ರಾಗ್ಬ್ರಹ್ಮ ಸೃಷ್ಟೇರೂರ್ಧ್ವಂಚ "ವಿಶ್ವ

ಕರ್ಮೀ" (೫೦) ತಿಕಥ್ಯತೆ | ಸಂಕಲ್ಪ ಲವಮಾತ್ರಶ್ಚ ಮನನಾ "ನ್ಮನು" (೫೧) ರುಚ್ಯತೆ ॥ ನಾಮರೂಪ ವ್ಯಾಕರಣಾತ್ "ತ್ವಷ್ಟಾ" (೫೨) ಸೃಷ್ಟಸ್ಯಗದ್ಯತೆ | ಬಹೂಭವಂಶ್ಚ ಸೂಕ್ಷ್ಮಾಣಾಂ ಸ್ಥೂಲಾ ವಸ್ಥತಯಾಚಸಃ | ವಿಸ್ತಾರವತ್ವಾದ್ಯ ಸ್ಥೂಲಃ "ಸ್ಥವಿಷ್ಠಃ" (೫೩) ಪರಿಕೀರ್ತಿತಃ ॥ ಕಾಲತಂತ್ರ ತಯಾದುಗ್ಧ ದಧ್ಯಾದಿಭ್ಯೋ ವಿಲಕ್ಷಣಃ | ವಿದ್ಯತೇಯ ಸರ್ವಕಾಲಂ " ಸ್ಥವಿರಃ " (೫೪) ಪರಿಕೀರ್ತಿತಃ ॥ ಅಪ್ರಚ್ಯಾವ್ಯ ಸ್ವಸ್ವರೂಪಾ ತ್ಸದಾಯೋಸಾ "ಧ್ರುವಃ" (೫೫) ಸ್ಮೃತಃ" ಎಂಬ ರೀತಿಯಿಂದ ವಿವೃತಿಯನ್ನು ಕಾಣಬಹುದು.

ಮೂ॥ ಅಗ್ರಾಹ್ಯ ಶ್ಶಾಶ್ವತಃಕೃಷ್ಣೋ ಲೋಹಿ
ತಾಕ್ಷಃ ಪ್ರತರ್ದನಃ | ಪ್ರಭೂತಸ್ತ್ರಿಕಕು
ಬ್ಧಾಮಾ ಪವಿತ್ರಂ ಮಂಗಳಂಪರಂ ॥೭॥

(೫೬ನೇ ನಾಮವು) ಅಗ್ರಾಹ್ಯಃ,
ಓಮ್ ॥ ಅಗ್ರಾಹ್ಯಾಯನಮಃ.

(ಶಂ॥ ಭಾ) " ಯತೋವಾಚೊ ನಿವರ್ತಂತೆ ಅಪ್ರಾಪ್ಯ ಮನಸಾ ಸಹ " ಎಂಬ ಶ್ರುತ್ಯನುಸಾರವಾಗಿ ಕರ್ಮೇಂದ್ರಿಯಗಳಿಂದ ಗ್ರಹಿಸಲ್ಪಡ ದವನು " ಅಗ್ರಾಹ್ಯಃ " ಎನ್ನಲ್ಪಡುವನು. (ವ) ಇಂದ್ರಿಯೈರ ಗ್ರಾಹ್ಯಃ-ಇಂದ್ರಿಯಗಳಿಂದ ಗ್ರಹಿಸಲ್ಪಡದವನು.

(ವಿ॥ ಭಾ) ಮಣ್ಣು ಕುಂಬಾರನಿಗೂ, ಧಾರವು ತಂತುವಾಯ (ನೇಯುವಂತವ) ನಿಗೂ, ವಶಪಟ್ಟಿರುವಂತೆ ಇವನೂ ಕಾರಣನಾಗಿರುವುದ ರಿಂದ ಯಾರಿಗಾದರೂ ಅಧೀನನಾಗಿರಬೇಕೂ? ಎಂದರೆ; ಅಗ್ರಾಹ್ಯಃ ಯಾರಿಂದಲೂ ಗ್ರಹಿಸ ಲಶಕ್ಯನು (ಮಣ್ಣು ಘಟ (ಮಡಿಕೆಗೂ) ಕ್ಕೂ ಧಾರವು ವಸ್ತ್ರಕ್ಕೂ ಕಾರಣವಾಗಿ ಅದನ್ನು ಮಾಡತಕ್ಕವರಿಗೆ ಅಧೀನವಾ ಗಿರುವುದು ಲೋಕ ಪ್ರಸಿದ್ಧವಾಗಿರುವುದು. ಅವುಗಳಂತೆ ಜಗತ್ಸೃಷ್ಟ್ಯಾದಿ ಕಾರ್ಯಕ್ಕೆ ಇವನೂ ಕಾರಣನಾಗಿರುವುದರಿಂದ ಬೇರೊಂದು

ಕಾರಣಾಧೀನತ್ವವನ್ನು ಶಂಕಿಸಿ ಸಮಾಧಾನಪಡಿಸುವುದು ಈ ನಾಮವೆಂದರಿಯಬೇಕು ) ಈ ಅರ್ಥವನ್ನು "ನೈನಮೂರ್ಧ್ವಂ ನತಿರ್ಯಂಚಂ ನಮಧ್ಯೇ ಪರಿಜಗ್ರಭತ್" (ತೈ|| ನಾ|| ೬|| ೧|| ೯) "ಬ್ರಹ್ಮಾದ್ಯತಿಷ್ಠತ್" (೨|| ಅ|| ೮|| ಪ್ರ|| ೨|| ಅ) "ಅಧಿತಿಷ್ಠತ್ಯೇಕಃ" (ಶ್ವೇತಾಶ್ವ|| ೪|| ೧೧) ಇತ್ಯಾದಿ ಪ್ರಮಾಣಗಳು ಹೇಳುವುವು, || ೫೬ ||

(ಏನಂ—ಈ ಪರಮಾತ್ಮನನ್ನು, ಊರ್ಧ್ವಂ-ಮೇಲ್ಭಾಗದಲ್ಲಿಯೂ, ತಿರ್ಯಂಚಂ—ಕೆಳಗಿನಭಾಗದಲ್ಲಿಯೂ, ಮಧ್ಯೇ—ಮಧ್ಯದಲ್ಲಿಯೂ, ನಪರಿಜಗ್ರಭತ್—ಯಾರೂ ಕಾಣಲಾರರು. ಬ್ರಹ್ಮ—ಪರಬ್ರಹ್ಮವು, ಅಧ್ಯತಿಷ್ಠತ್—(ಸಮಸ್ತವನ್ನೂ) ವ್ಯಾಪಿಸಿರುವುದು. ಏಕಃ—ಅದ್ವಿತೀಯನಾದ ಪರಮಪುರುಷನು, ಅಧಿತಿಷ್ಠತಿ—(ಸಮಸ್ತವನ್ನು) ವ್ಯಾಪಿಸುತ್ತಾನೆ, ಸಮಸ್ತವನ್ನು ವ್ಯಾಪಿಸಿರುವುದರಿಂದ ವ್ಯಾಪ್ಯವಾದ (ವ್ಯಾಪಿಸಲ್ಪಡುವ) ವಸ್ತುಗಳಿಂದ ತಿಳಿಯಲ್ಪಡತಕ್ಕವನಲ್ಲವೆಂದು ಫಲಿತವಾಗುವುದು.

## (೫೭ನೇ ನಾಮವು) ಶಾಶ್ವತಃ,
## ಓಮ್ || ಶಾಶ್ವತಾಯನಮಃ.

(ಶಂ|| ಭಾ) ಶಶ್ವದ್ಭವತೀತಿ ಶಾಶ್ವತಃ—"ಶಾಶ್ವತಂ ಶಿವಮಚ್ಯುತಂ" ಎಂಬ ಪ್ರಮಾಣಾನುಸಾರವಾಗಿ ಸರ್ವಕಾಲದಲ್ಲಿಯೂ ಆಗುವಂತವನು "ಶಾಶ್ವತಃ" ಎನ್ನಲ್ಪಡುವನು.

(ವಿ|| ಭಾ||) ಈ ಪ್ರಕಾರವೇ ಪ್ರವಾಹದಂತೆ ಯಾವಾಗಲೂ ಜಗದ್ವ್ಯಾಪಾರವನ್ನು ಮಾಡಿಕೊಂಡಿರುವ ಅಂಶವು ಶ್ರೀವಿಷ್ಣುಪುರಾಣದಲ್ಲಿ "ಅವ್ಯುಚ್ಛಿನ್ನಾಸ್ತತಸ್ತ್ವೇತೇ ಸರ್ಗಸ್ಥಿತ್ಯಂತಸಂಯಮಾಃ" (೧|| ೨|| ೨೬) ಎಂಬದಾಗಿ ಹೇಳಲ್ಪಟ್ಟಿರುವುದು.

(ಈ ಸೃಷ್ಟಿಸ್ಥಿತಿ ಸಂಹಾರರೂಪಗಳಾದ ಜಗದ್ವ್ಯಾಪಾರಗಳು ವಿರಾಮವಿಲ್ಲದೇ ಅನವರತವಾಗಿರುವುವು).

(ಮ|| ಭಾ) ಶಾಶ್ವತಃ—ಏಕರೂಪನಾಗಿರುವಂತವನು. ||೫೭||

## (೫೮ನೇ ನಾಮವು) ಕೃಷ್ಣಃ,
## ಓಮ್ || ಕೃಷ್ಣಾಯನಮಃ.

(ಶಂ|| ಭಾ) "ಕೃಷಿರ್ಭೂವಾಚಕಶ್ಶಬ್ದೋ ಣಶ್ಚನಿರ್ವೃತಿವಾಚಕಃ| ವಿಷ್ಣುಸ್ತದ್ಭಾವಯೋಗಾಚ್ಚ ಕೃಷ್ಣೋಭವತಿ ಶಾಶ್ವತಃ" ಎಂಬೀ

ಪ್ರಮಾಣಾನುಸಾರವಾಗಿ ಸಚ್ಚಿದಾನಂದಾತ್ಮಕನಾದ ಕಾರಣದಿಂದಲಾದರೂ; "ಕೃಷ್ಣೋವರ್ಣಶ್ಚಮೇಯಸ್ಮಾತ್ತಸ್ಮಾತ್ಕೃಷ್ಣೋ ಹಮರ್ಜುನ" (ಭಾರ|| ಶಾನ್ತಿ|| ೩೪೩) ಎಂಬೀ ಪ್ರಮಾಣಾನುಸಾರವಾಗಿ ಕೃಷ್ಣವರ್ಣನಾಗಿರುವುದರಿಂದಲಾದರೂ "ಕೃಷ್ಣಃ" ಎನ್ನಲ್ಪಡುವನು.

(ಕೃಷಿ ಶಬ್ದವು ಭೂವಾಚಕವಾಗಿರುವುದು. ಣಕಾರವು ಮೋಕ್ಷ ಸುಖವನ್ನು ಹೇಳುವುದು. ಈ ಯರಡು ಸಂಯೋಗದಿಂದ ಕೃಷ್ಣನೆನ್ನಲ್ಪಡುವನು. ಯಾವಕಾರಣದಿಂದ ವರ್ಣವೂ ಕೂಡ ಕಪ್ಪಾಗಿರುವುದೊ ಅದರಿಂದ "ಕೃಷ್ಣಃ" ಎನ್ನಲ್ಪಡುವನು ಎಲೈ ಅರ್ಜುನನೆ ಎಂದೀ ಶ್ಲೋಕದ್ವಯಾರ್ಥವು)

(ವಿ|| ಭಾ) ಇಂತಹ ಜಗದ್ವ್ಯಾಪಾರ ರೂಪವಾದ ಲೀಲಾರಸದಿಂದ ಆನಂದಪಡುವಂತವನು "ಕೃಷ್ಣಃ" ಎನ್ನಲ್ಪಡುವನು. ಇದಕ್ಕೆ ಋಷಿಗಳು ಮಾಡಿರುವ "ಕೃಷಿರ್ಭೂವಾಚಕಶ್ಶಬ್ದೋಣಶ್ಚ ನಿರ್ವೃತಿ ವಾಚಕಃ | ವಿಷ್ಣುಸ್ತದ್ಭಾವಯೋಗಾಚ್ಚ" (ಭಾರ|| ಉ|| ೬೯|| ೫) ಎಂಬ ನಿರುಕ್ತಿಯೇ ಇರುವುದು. (ಮ) ಇದನ್ನೇ ಆದರಿಸಿ ಹೇಳಿರುತ್ತಾರೆ. ||೫೭||

## (೫೮ನೇ ನಾಮವು) ಲೋಹಿತಾಕ್ಷಃ,

### ಓಮ್ || ಲೋಹಿತಾಕ್ಷಾಯನಮಃ.

(ಶಂ|| ಮ|| ಭಾ) "ಸಮಾವೃಷಭೋ ಲೋಹಿತಾಕ್ಷಃ" ಎಂಬ ಶ್ರುತ್ಯನುಸಾರವಾಗಿ ಕೆಂಪಾದ ಕಣ್ಣುಗಳುಳ್ಳವನು "ಲೋಹಿತಾಕ್ಷಃ" ಎನ್ನಲ್ಪಡುವನು.

(ವಿ|| ಭಾ) ಇಂತಹ ಆನಂದವನ್ನು ಸೂಚಿಸುವಂತಹ ರಮಣೀಯವಾದ ಕೆಂಪು ತಾವರೆಗೆ ಸಮಾನವಾಗಿರುವ ಕಣ್ಣುಗಳುಳ್ಳವನು "ಲೋಹಿತಾಕ್ಷಃ" ಎನ್ನಲ್ಪಡುವನು. ||೫೮||

## (೫೯ನೇ ನಾಮವು) ಪ್ರತರ್ದನಃ,

### ಓಮ್ || ಪ್ರತರ್ದನಾಯನಮಃ.

(ವಿ|| ಭಾ) ಈ ಪ್ರಕಾರವಾಗಿ ಸಮಸ್ತವನ್ನೂ ಸೃಷ್ಟಿಸುವಂತವನಾದ ತಾನೇ ಸಮಸ್ತವನ್ನೂ ಸಂಹರಿಸುತ್ತಾನೆಂದೀ ನಾಮವು ಹೇಳು

ವುದು. (ವಿ॥ ಶಂ॥ ಮ) ಪ್ರತರ್ದನಃ–ಪ್ರಲಯೇ ಭೂತಾನಿ ಪ್ರತರ್ದಯತಿ ಹಿನಸ್ತೀತಿ, ಪ್ರತರ್ದನಃ; ಪ್ರಲಯಕಾಲದಲ್ಲಿ ಸಮಸ್ತ ಭೂತಗಳನ್ನು ಸಂಹರಿಸುವಂತವನು. (ವಿ) ಇದಕ್ಕೆ "ಯಸ್ಯಬ್ರಹ್ಮಚಕ್ಷತ್ರಂಚ ಉಭೇ ಭವತಿ ಓದನಃ (ಕಠೋಪ॥ ೨॥ ೨೫) "ಅತ್ತಾಚರಾಚರ ಗ್ರಹಣಾತ್" (ಬ್ರ॥ ಸೂ॥ ೧॥ ೨॥ ೯) ಎಂಬೀ ಪ್ರಮಾಣಗಳನ್ನರಿಯಬೇಕು. ॥೬೦॥

(ಬ್ರಾಹ್ಮಣ ಕ್ಷತ್ರಿಯರೆಂಬ ಜಾತಿಯೊಡನೆ ಸೇರಿಕೊಂಡಿರುವ ಚರಾಚರಾತ್ಮಕಗಳಾದ ಸಮಸ್ತವನ್ನೂ ಯಾವ ಪರಮಾತ್ಮನಾದರೆ ಅನ್ನವನ್ನಾಗಿ ಸ್ವೀಕರಿಸಿರುವನೊ; ಎಂದರೆ ಈ ಸಮಸ್ತವನ್ನೂ ಯಾವನಾದರೆ ಸಂಹರಿಸುವನೊ ಎಂದು ಕಠೋಪನಿಷದರ್ಥವು. ಬ್ರಾಹ್ಮಣ ಕ್ಷತ್ರಿಯಾದಿಯಾದ ಸಮಸ್ತ ಚರಾಚರ ರೂಪವಾಗಿರುವ ಜಗತ್ತನ್ನು ಅನ್ನವನ್ನಾಗಿ ಗ್ರಹಿಸುವುದರಿಂದ ಇಂತಹ ಅನ್ನವನ್ನು ಭುಜಿಸುವಂತವನು ಪರಮಪುರುಷನೆ ಎಂದು (೧॥ ೨॥ ೯)ನೇ ಸೂತ್ರಾರ್ಥವು

## (೬೧ನೇ ನಾಮವು) ಪ್ರಭೂತಃ,

## ಓಮ್ ॥ ಪ್ರಭೂತಾಯನಮಃ.

(ಶಂ॥ ಮ॥ ಭಾ) ಜ್ಞಾನೈಶ್ವರ್ಯಾದಿ ಗುಣಗಳಿಂದ ಕೂಡಿ (ತುಂಬಿ) ರುವಂತವನು "ಪ್ರಭೂತಃ" ಎನ್ನಲ್ಪಡುವನು.

(ವಿ॥ ಭಾ) ಈ ಪ್ರಕಾರವಾಗಿ ಸರ್ವ ಸಂಹಾರಕನಾಗಿದ್ದರೂ ಯಾವಕಾಲದಲ್ಲಿಯೂ ನಾಶವನ್ನು ಹೊಂದದೆ ನಿತ್ಯವಾಗಿಯೂ ಅನಂತಗಳಾದ ಭೋಗ ಸಾಮಗ್ರಿಗಳಿಂದ ಪೂರ್ಣವಾಗಿಯೂ ಇರುವ ಪರಮಪದವುಳ್ಳವನಾಗಿರುವುದರಿಂದ ಸಮೃದ್ಧಿಯುಳ್ಳವನು "ಪ್ರಭೂತಃ" ಎನ್ನಲ್ಪಡುವನು. (ಸಮೃದ್ಧಿಯುಳ್ಳವನೆಂದರೆ ತುಂಬಿರುವಂತವನು.) ॥೬೧॥

## (೬೨ನೇ ನಾಮವು) ತ್ರಿಕಕುಬ್ಧಾಮಾ,

## ಓಮ್ ॥ ತ್ರಿಕಕುಬ್ಧಾಮ್ನೇನಮಃ.

(ಶಂ॥ ಮ॥ ಭಾ) ಊರ್ಧ್ವಭಾಗವು, ಮಧ್ಯ ಭಾಗವು, ಅಧೋಭಾಗವೆಂಬ ಮೂರು ದಿಕ್ಕುಗಳಿಗೂ ಆಧಾರಭೂತನಾಗಿರುವಂತವನು "ತ್ರಿಕಕುಬ್ಧಾಮಾ" ಎನ್ನಲ್ಪಡುವನು.

(ವಿ॥ ಭಾ) ಈ ಪ್ರಕಾರವಾಗಿ ಸಮಸ್ತ ಪ್ರಪಂಚವನ್ನು ಸೃಷ್ಟಿಸುವುದೂ ಸಂಹರಿಸುವುದೂ ಎಂಬದಾಗಿ ಹೇಳಿರುವುದೆಲ್ಲವೂ ಆ ಪರಮಾತ್ಮನ ವಿಭೂತಿಗಳಲ್ಲಿ ಅತಿ ಸ್ವಲ್ಪವಾದ ಲೀಲಾವಿಭೂತಿ ಮಾತ್ರವನ್ನು ತಾನೆ; ಅದನ್ನು ವಿವರಿಸುವುದೀನಾಮವು. ತ್ರಿಕಕುದ್ಧಾಮಾ–"ಪಾದೋಸ್ಯವಿಶ್ವಾಭೂತಾನಿ ತ್ರಿಪಾದಸ್ಯಾಮೃತಂದಿವಿ" ಎಂಬ ಪ್ರಮಾಣಾನುಸಾರವಾಗಿ ಕಾಲುಭಾಗವಾದ ಈ ಲೀಲಾವಿಭೂತಿಗಿಂತಲೂ ಮುಕ್ಕಾಲುಭಾಗದಿಂದ ಅಧಿಕವಾಗಿರುವ ನಿತ್ಯವಾದ ಪರಮಪದವನ್ನು ಸ್ಥಾನವಾಗಿ ಉಳ್ಳವನು.

ಇದರಿಂದ ಈ ಲೀಲಾವಿಭೂತಿಯು ಅಣುಮಾತ್ರವೆಂತಲೂ ನಿತ್ಯವಿಭೂತಿಯೆಂಬ ಪರಮಪದವು ಪರಮ ಮಹತ್ತಾದ ಎಂದರೆ ದೊಡ್ಡದಾದ ಪರಿಮಾಣ (ಅಳತೆ)ವುಳ್ಳದ್ದೆಂತಲೂ ಹೇಳಿದಂತೆ ಆಯಿತು. ಈ ವಿಷಯದಲ್ಲಿ "ಯಸ್ಯಾಯುತಾಯುತಾಂಶಾಂಶೇವಿಶ್ವಶಕ್ತಿರಿಯಂಸ್ಥಿತಾ | ಮೇರೋರಿವಾಣುರ್ಯಸ್ಯೇತತ್" ಎಂಬ ಶ್ರೀವಿಷ್ಣುಪುರಾಣಾದಿ ವಚನಗಳು ಪ್ರಮಾಣಗಳಾಗಿರುವುವು. (ಅಥವಾ) ತ್ರಿಕಕುತ್ ಎಂಬದಾಗಿ 'ಜ್ಞಾನ, ಬಲ, ಐಶ್ವರ್ಯ, ವೀರ್ಯ, ಶಕ್ತಿ, ತೇಜಸ್ಸು, ಎಂಬ ಮೂರೆರಡಾದ ಆರು ಗುಣಗಳನ್ನು ಹೇಳಿ ಅದಕ್ಕೆ ಧರ್ಮಿಯಾಗಿರುವನೆಂತಲಾದರೂ ಆಗಬಹುದು. ಅದಕ್ಕೆ ಧರ್ಮಿ ಎಂದರೆ ಜ್ಞಾನ ಬಲೈಶ್ವರ್ಯಾದಿಗಳಾದ ಆರು ಗುಣಗಳಿಂದ ಪೂರ್ಣನಾಗಿರುವನೆಂದರ್ಥವು. ಆದುದರಿಂದಲೆ ಇವನನ್ನು ತ್ರಿಯುಗನೆನ್ನುವರು. ಅಥವಾ "ತ್ರಯೈವಾಸತ್ತ್ರಿಕಕುದೋ ವಾರಾಹಂ ರೂಪಮಾಸ್ಥಿತಃ | ತ್ರಿಕಕುತ್ತೇನವಿಖ್ಯಾತ ಶ್ಶರೀರಸ್ಯ ಪ್ರಮಾಪಣಾತ್" (ಭಾರ॥ ಮೊ॥ ನಾ॥ ೩೪೩॥ ೬೩) ಎಂಬ ಋಷಿಗಳ ನಿರುಕ್ತಿಯಂತೆ ಶ್ರೀವರಾಹಾವತಾರದಲ್ಲಿ ಮೂರು ಗುಣಗಳುಳ್ಳವನಾದುದರಿಂದ 'ತ್ರಿಕಕುತ್' ಎಂದು ಹೇಳಬಹುದು. ಈ ಪಕ್ಷದಲ್ಲಿ 'ಧಾಮ' ಎಂದು ಭಿನ್ನನಾಮವಾಗಿ ತೇಜಸ್ಸೆಂದರ್ಥವಾಗುವುದು. ॥ ೬೦ ॥

(ಯಾವ ಪರಮಪುರುಷನ ಅನೇಕ ಕೋಟಿ ಅಂಶಾಂಶಗಳ ಏಕದೇಶದಲ್ಲಿ ಈ ಜಗಚ್ಛಕ್ತಿಯು ಇರುವುದೊ; ಮಹಾಮೇರು ಪರ್ವತದಲ್ಲಿ ಅಣುಮಾತ್ರದಂತೆ ತ್ರಿಪಾದ್ವಿಭೂತಿ ಎಂಬ ಪರಮಪದದಲ್ಲಿ ಈಲೀಲಾ ವಿಭೂತಿಯು ಅಣುಮಾತ್ರವಾಗಿರುವುದೊ ಎಂದು ಶ್ರೀವಿಷ್ಣುಪುರಾಣ (೧॥ ೯॥ ೫೩ನೇ ವಚನಾರ್ಥವು

ನಾನು ಶ್ರೀವರಾಹರೂಪವನ್ನು ಸ್ವೀಕರಿಸಿ ಮೂರು ಕಕುತ್ ಎಂದರೆ ಗೊಳಿಗಳುಳ್ಳವನಾಗಿರುವೆನೊ ಆದಕಾರಣ ಶ್ರೀವರಾಹರೂಪಿಯಾದ ಪರಮಪುರುಷನು 'ತ್ರಿಕಕುತ್' ಎನ್ನಲ್ಪಡುವನು ಎಂದು ಮಹಾಭಾರತ ಮೋಕ್ಷಧರ್ಮ ವಚನಾರ್ಥವು)

## (೬೩ನೇ ನಾಮವು) ಪವಿತ್ರಂ,

## ಓಮ್॥ ಪವಿತ್ರಾಯನಮಃ.

(ಶಂ॥ ಭಾ) ಋಷಿಯೋ ಆಗಲಿ, ದೇವತೆಯೋ ಆಗಲಿ, ಯಾವ ಪರಮಾತ್ಮನಿಂದ ಪಾವನವಾಗುವುದೊ; ಅಥವಾ ಯಾವ ಪರಮಾತ್ಮನು ಪವಿತ್ರವನ್ನಾಗಿ ಮಾಡುವನೊ ಅವನು 'ಪವಿತ್ರಂ' ಎನ್ನಲ್ಪಡುವನು. (ಕೆಲವು ಕೋಶಗಳಲ್ಲಿ) ಪವಿನಾತ್ರಾಯತಇತಿ ಪವಿತ್ರಂ – ಇಂದ್ರರೂಪಿಯಾಗಿ ವಜ್ರಾಯುಧದಿಂದ ಸತ್ವ ಪ್ರಕೃತಿಗಳಾದ ದೇವತೆಗಳನ್ನು ರಕ್ಷಿಸುವಂತವನು 'ಪವಿತ್ರಂ' ಎನ್ನಲ್ಪಡುವನು.

(ವಿ॥ ಭಾ) ಈ ರೀತಿಯಾಗಿ ಗುಣ ವಿಭವರೂಪವಾದ ನಿರೂಪಕ ಧರ್ಮಗಳನ್ನು ಹೇಳಿ ಆ ಮಾರ್ಗವಾಗಿಯೇ ಅವುಗಳಿಂದ ನಿರೂಪಿಸಲ್ಪಡುವ ಸ್ವರೂಪವು ಹೇಳಲ್ಪಡುವುದು. ಪವಿತ್ರಮ್ – ಸಮಸ್ತ ಹೇಯ ಪ್ರತಿಭಟವಾದ ಪರಿಶುದ್ಧ ಸ್ವರೂಪವುಳ್ಳವನಾದಕಾರಣ 'ಪವಿತ್ರಂ' ಎನ್ನಲ್ಪಡುವನು.

## (೬೪ನೇ ನಾಮವು) ಮಙ್ಗಲಂಪರಂ,

## ಓಮ್॥ ಪರಾಯ ಮಙ್ಗಲಾಯನಮಃ.

(ಶಂ॥ ಭಾ) "ಅಶುಭಾನಿ ನಿರಾಚಷ್ಟೇ ತನೋತಿ ಶುಭಸಂತತಿಂ | ಸ್ಮೃತಿಮಾತ್ರೇಣಯತ್ಪುಂಸಾಂ ಬ್ರಹ್ಮತನ್ಮಂಗಲಂವಿದುಃ" ಎಂಬ ಶ್ರೀವಿಷ್ಣುಪುರಾಣ ವಚನಾನುಸಾರವಾಗಿ 'ಸ್ಮರಣ ಮಾತ್ರದಿಂದ ಅಶುಭಗಳನ್ನು ಹೋಗಲಾಡಿಸುವಂತವನೂ ಶುಭವನ್ನುಂಟುಮಾಡತಕ್ಕವನೂ ಆದ ಪರಮಪುರುಷನನ್ನು 'ಮಂಗಲಂ' ಎನ್ನುವರು. ಮತ್ತು ಸರ್ವ ಭೂತಗಳಿಗಿಂತಲೂ ಅಧಿಕವಾದ ಮಂಗಳನಾದಕಾರಣ 'ಪರಂ' ಎಂಬ ವಿಶೇಷಣವು ಸೇರಿಸಲ್ಪಟ್ಟಿರುವುದು. ಆದುದರಿಂದ 'ಮಙ್ಗಲಂಪರಂ' ಎಂಬುವುದು ಸವಿಶೇಷಣವಾದ ಒಂದೇ ನಾಮವಾಗಿರುವುದು,

(ವಿ॥ ಭಾ) ಪರಂಮಂಗಲಂ-ಅತ್ಯಂತ ಮಂಗಳನು. ಎಂದರೆ ಸ್ವಯಂ ಪ್ರಕಾಶಾನಂದ ರೂಪವಾದ ಕಲ್ಯಾಣೈಕ ರೂಪವುಳ್ಳವನು. ಸ್ವಭಾವ ಸಿದ್ಧವಾಗಿಯೂ ; ನಿತ್ಯವಾಗಿಯೂ ; ದೋಷ ಗಂಧರಹಿತವಾಗಿಯೂ ; ಅವಧಿರಹಿತವಾಗಿರುವುದರಿಂದ ಅಸಂಖ್ಯಾಕಗಳಾದ * ಗುಣ ವಿಭವ ಪ್ರಭಾವಾದಿ ವೈಭವಗಳು ಪರಮಪುರುಷನಿಗೆ ಯಾವಾಗಲೂ ಇರುವಂತ ವುಗಳಾದರೂ ತನಿಗೆತಾನೆ ಸಮಸ್ತದೋಷಗಳಿಗೂ ಪ್ರತಿಭಟವಾಗಿಯೂ; ನಿಸ್ಸಮತ್ವೇನ ಅತ್ಯಂತಾನುಕೂಲವಾಗಿಯೂ ; ಸ್ವಯಂಪ್ರಕಾಶವಾಗಿಯೂ ಇರುವ ಆತ್ಮಾನುಭವದಿಂದುಂಟಾದ ನಿರಂಕುಶವಾದ ಆನಂದ ದಿಂದ ಅಮೃತಾಬ್ಧಿಯನ್ನು ತಿರಸ್ಕರಿಸುವಂತೆ ಪ್ರಕಾಶಿಸುತಲಿರುವ ಪರಾವಸ್ಥಾ ಮಾತ್ರದಿಂದ ಪರಮಪುರುಷನು ಯಾವದೊಂದನ್ನೂ ಅಪೇಕ್ಷಿಸದೆ ನಿತ್ಯತೃಪ್ತನಾಗಿರುವನೆಂದು ನಿರೂಪಿಸುವಿಕೆಯು ಉಚಿತವಾಗಿಯೇ ಇರುವುದಷ್ಟೆ ; ಆದುದರಿಂದಲೆ ವೇದಾಂತ ಸೂತ್ರಕಾರರೂ " ಆನಂದ ಮಯೋಭ್ಯಾಸಾತ್ " (೧॥ ೧॥ ೧೩) " ಆನಂದಾದಯಃ ಪ್ರಧಾನಸ್ಯ " (೩॥ ೩॥ ೧೧) " ಅಕ್ಷರಧಿಯಾಂತ್ವವರೋಧಃ " (೩॥ ೩॥ ೩೩) ಎಂಬದಾಗಿ ಹೇಳಿರುವರು. ಮತ್ತು " ಸತ್ಯಂಜ್ಞಾನಮನಂತಂ " (ತೈ॥ ಆ॥ ೨॥ ೧॥ ೧) " ಆನಂದೋಬ್ರಹ್ಮ " (ತೈ॥ ಭೃ॥ ೬) " ಶಾನ್ತಿಸಮೃದ್ಧ ಮಮೃತಂ " (ತೈ॥ ಶೀ॥ ೬॥ ೨) ಇತ್ಯಾದಿ ತೈತ್ತಿರೀಯ ಶ್ರುತಿಯೇ ಮೊದಲಾದ ಪ್ರಮಾಣಗಳೂ ಈ ಅರ್ಥವನ್ನು ಹೇಳುವುವು.

( * ಗುಣಗಳು ಜ್ಞಾನಾದಿಗಳೆಂತಲೂ, ರಾಮಕೃಷ್ಣಾದ್ಯವತಾರಗಳು ವಿಭವಗಳೆಂತಲೂ, ಅವನ ಮಹಾತ್ಮ್ಯವೇ ಪ್ರಭಾವವೆಂತಲೂ ತಿಳಿಯಬೇಕು. ಆನಂದಮಯೋಭ್ಯಾಸಾತ್'—ಪರಮಪುರುಷನು ಆನಂದಮಯನು, ಏತಕ್ಕೆಂದರೆ ? ಅಭ್ಯಾಸಾತ್'— ತೈತ್ತಿರೀಯದಲ್ಲಿ '' ಸೈಷಾನಂದಸ್ಯಮೀಮಾಗ್ಂಸಾಭವತಿ '' ಎಂದಾರಂಭಿಸಿ '' ಯತೋ ವಾಚೋ ನಿವರ್ತಂತೆ '' ಎಂಬೀವರಿವಿಗೂ ಮನುಷ್ಯಾನಂದವನ್ನು ಉಪಕ್ರಮಿಸಿ '' ತೇಯೇ ಶತಂ '' ಎಂಬದಾಗಿ ನೂರು ನೂರು ಭಾಗದಿಂದ ಮೇಲುಮೇಲೆ ಅಧಿಕವಾಗಿ ಅಭ್ಯಾಸ ಮಾಡಲ್ಪಡುವುದರಿಂದ , ಎಂದರ್ಥವು

ಆನಂದಾದಯಃ ಪ್ರಧಾನಸ್ಯ—ಆನಂದತ್ವಾದಿ ಗುಣಗಳನ್ನು ಬಿಟ್ಟು ಬ್ರಹ್ಮಸ್ವರೂಪವನ್ನು ತಿಳಿಯುವುದು ಅಸಾಧ್ಯವಾಗಿರುವುದರಿಂದಲೂ, ಆನಂದತ್ವ ಸತ್ಯತ್ವ ಜ್ಞಾನತ್ವಾನನ್ತತ್ವ ಅಮಲತ್ವ ಶ್ರಿಯಃ ಪತಿತ್ವ' ರೂಪಗಳಾದ ಈ ಆರು ಧರ್ಮಗಳಿಗೆ ಆಶ್ರಯವಾಗಿರುವಿಕೆಯಿಂದಲೂ, ಪ್ರಧಾನವಾದ ಬ್ರಹ್ಮ ಸ್ವರೂಪಕ್ಕೆ ಸರ್ವ ವಿದ್ಯೆಗಳಲ್ಲಿಯೂ ಭೇದವಿ

ಲ್ಲದೇ ಇರುವುದರಿಂದಲೂ ಈ ಆರು ಗುಣಗಳು ಸರ್ವ ವೇದಾಂತ ವಿದ್ಯೆಗಳಲ್ಲಿಯೂ ಅನುಸಂಧೇಯಗಳಾಗಿರುವುವೆಂದರ್ಥವು.

ಅಕ್ಷರಧಿಯಾಂತ್ವವರೋಧಃ–ಅಕ್ಷರ ಬ್ರಹ್ಮಸಂಬಂಧಿಗಳಾದ ಅಸ್ಥೂಲತ್ವಾದಿ ಬುದ್ಧಿಗಳಿಗೆ ಸರ್ವ ಬ್ರಹ್ಮವಿದ್ಯೆಗಳಲ್ಲಿಯೂ ಅನ್ವಯವು ಸಿದ್ಧವು. ಗುಣಗಳು ಪ್ರಧಾನವಾದ ತಮ್ಮಗಳಿಗೆ ಆಶ್ರಯವಾದ ಬ್ರಹ್ಮವನ್ನು ಅನುವರ್ತಿಸಿ ತಾನೆ ಇರುವುದು. ಈ ಅಧಿಕರಣದಲ್ಲಿ ನಿರೂಪಿಸಲ್ಪಟ್ಟ ಅಮಲತ್ವ ರೂಪವಾದ ಗುಣವನ್ನುದ್ದೇಶಿಸಿಯೂ ಮೊದಲು 'ಆನಂದಾದಯಃ ಪ್ರಧಾನಸ್ಯ' ಎಂಬ ಅಧಿಕರಣದಲ್ಲಿ ಸತ್ಯತ್ವಾದಿಗಳಾದ ಆರು ಗುಣಗಳೂ ಬ್ರಹ್ಮಸ್ವರೂಪ ನಿರೂಪಕ ಧರ್ಮಗಳೆಂದು ಹೇಳಲ್ಪಟ್ಟವೆಂದರಿಯಬೇಕು.

ಆನಂದೋಬ್ರಹ್ಮ–ಆನಂದವನ್ನು ಬ್ರಹ್ಮವನ್ನಾಗಿ ತಿಳಿಯಬೇಕು. ಶಾನ್ತಿ ಸಮೃದ್ಧಮಮೃತಂ–ಶಾನ್ತಿಯೊಡನೆ ಕೂಡಿದವನಾಗಿಯೂ ಸಂಸಾರ ಸಂಬಂಧ ವಿಲ್ಲದವನಾಗಿಯೂ, (ಈ ಶ್ರುತಿಯು ಜೀವಪರವಾಗಿ ವ್ಯಾಖ್ಯಾನ ಮಾಡಲ್ಪಟ್ಟಿರುವುದು.)

ಇಲ್ಲಿ ಬ್ರಹ್ಮಸ್ವರೂಪವು ಜ್ಞಾನಮಾತ್ರರಸವೆಂತಲೂ ಆದರೆ ಇದಕ್ಕೆ ಜ್ಞಾನವೇ ಮೊದಲಾದ ಗುಣಗಳಿಲ್ಲವೆಂತಲೂ ಕೆಲವರು ಹೇಳುವರು. ಇಂತಹ ವಾದಗಳು ಅಖಂಡ ಖಂಡನವೆಂಬ ಗ್ರಂಥದಲ್ಲಿ ಅನೇಕಪ್ರಕಾರವಾಗಿ ಖಂಡಿಸಲ್ಪಟ್ಟಿರುವುವು. ಬ್ರಹ್ಮವು ಜ್ಞಾನಸ್ವರೂಪವು ಆನಂದ ಸ್ವರೂಪವೆಂದು ಶ್ರುತಿಗಳಲ್ಲಿ ಹೇಳುವುದಕ್ಕೆ ತಾತ್ಪರ್ಯವೇನಂದರೆ? ಜ್ಞಾನಾನಂದೈಶ್ವರ್ಯಾದಿ ಗುಣಗಳಿರುವಾಗಲೂ ಅತ್ಯಂತಾನುಕೂಲವಾಗಿ ತನಿಗೆತಾನೆ ಪ್ರಕಾಶಿಸುವ ಜ್ಞಾನರೂಪವಾದ ಆತ್ಮಸ್ವರೂಪ ವಿರುವುದೆಂದರಿಯಬೇಕು. ಅದು ಹೇಗೆಂದರೆ? ರತ್ನ ದೀಪ ಸೂರ್ಯಾದಿಗಳು ತಮ್ಮಗಳ ಪ್ರಕಾಶಕ್ಕೆ ವಿಷಯವಾದವುಗಳನ್ನೂ ಪ್ರಕಾಶಪಡಿಸುವುವಲ್ಲದೆ ತಾವೂ ಇತರವಾದ ಅಂತಹ ಪ್ರಕಾಶವನ್ನು ಅಪೇಕ್ಷಿಸದೇನೇ ಪ್ರಕಾಶಿಸುವುವು. ಅದರಿಂದ ಪ್ರಕಾಶವೆಂತಲೂ ಪ್ರಕಾಶವುಳ್ಳದ್ದೆಂತಲೂ ಲೋಕದಲ್ಲಿ ವ್ಯವಹಾರವು ಯರಡು ವಿಧವಾಗಿರುವುದು. ಅದರಂತೆ ಪರಮಾತ್ಮನು ಗುಣದಿಂದಲೂ ಜ್ಞಾನದಿಂದಲೂ ಸಮಸ್ತವನ್ನು ಪ್ರತ್ಯಕ್ಷವಾಗಿ ನೋಡುವನು. ತಾನು ಅವುಗಳನ್ನಪೇಕ್ಷಿಸದೆ ಪ್ರಕಾಶಿಸುವನು ಆದುದರಿಂದಲೆ ಜ್ಞಾನವೆಂತಲೂ ಜ್ಞಾನವುಳ್ಳವನೆಂತಲೂ ಹೇಳುವುದು. ಮತ್ತು ಜ್ಞಾನ ಸ್ವರೂಪನೆಂಬವುದಕ್ಕೆ ಬೇರೊಂದು ಅಭಿಪ್ರಾಯವೂ ಉಂಟು. ಅದು ಏನಂದರೆ? ಅವನಿಗುಂಟಾಗಿರುವ ಗುಣಗಳಲ್ಲಿ ಜ್ಞಾನವೆಂಬ ಗುಣವು ಸಾರವಾಗಿರುವುದರಿಂದ (ಈ ಕಾರಣದಿಂದ) ಜ್ಞಾನಸ್ವರೂಪ ನೆನ್ನುವರು. ಇದಕ್ಕೆ "ತದ್ಗು

ಣಸಾರತ್ವಾತ್ತದ್ವ್ಯಪದೇಶಃ ಪ್ರಾಜ್ಞವತ್ " (ಬ್ರ॥ ಸೂ॥ ೨॥ ೩) ಎಂಬದಾಗಿ ಸೂತ್ರಕಾರರೂ ನ್ಯಾಯವನ್ನುಪಪಾದಿಸಿರುತ್ತಾರೆ.

(ಆತ್ಮಕ್ಕೆ ಜ್ಞಾನವು ಗುಣವಾದಮೇಲೆ "ವಿ ಯಜ್ಞಂತನುತೆ" ಎಂಬ ಶ್ರುತಿಯಲ್ಲಿ ಆತ್ಮಸ್ವರೂಪವನ್ನು ಜ್ಞಾನವೆಂದು ಹೇಳಿರುವುದು ಹೇಗೆಂದರೆ ಆದಕ್ಕಾಗಿ ಈಸೂತ್ರವು ಪ್ರವೃತ್ತಿಸಿರುವುದು. ತುಶಬ್ದವು ಈಸಂದೇಹವನ್ನು ಪರಿಹರಿಸುವ ಅರ್ಥವುಳ್ಳದ್ದಾಗಿರುವುದು. ತದ್ಗುಣ ಸಾರತ್ವಾತ್—ಅಂತಹಾ ಜ್ಞಾನರೂಪವಾದ ಗುಣವನ್ನು ಸಾರವಾಗಿ ಎಂದರೆ ಸ್ವರೂಪ ನಿರೂಪಕವಾಗಿ ವುಳ್ಳದ್ದಾಗಿರುವುದರಿಂದ, ತದ್ವ್ಯಪದೇಶಃ—ಆತ್ಮನನ್ನು ಜ್ಞಾನವೆಂದು ಹೇಳುವುದು. ಅದು ಹೇಗೆಂದರೆ ? ಪ್ರಾಜ್ಞವತ್—"ಬ್ರಹ್ಮಣಾ ವಿಪಶ್ಚಿತಾ" ಎಂಬ ಶ್ರುತಿಯಲ್ಲಿ ಪ್ರಾಜ್ಞನೆಂಬದಾಗಿ ಹೇಳಲ್ಪಟ್ಟ ಪರಮಪುರುಷನು "ಸತ್ಯಂಜ್ಞಾನಮನಂತಂ" ಎಂದು ಜ್ಞಾನ ಸ್ವರೂಪನಾಗಿ ಹೇಳಲ್ಪಡುವಂತೆ ಎಂದರ್ಥವು)

ಇದರಿಂದ ಬ್ರಹ್ಮವು ಜ್ಞಾನಸ್ವರೂಪವೆಂತಲೂ ಜ್ಞಾನ ಗುಣಕವೆಂತಲೂ ಒಂದಕ್ಕೊಂದು ವಿರೋಧವಾಗಿ ತೋರುವುದೆಂದು ಯೆಷ್ಟುಮಾತ್ರವೂ ಸಂದೇಹಿಸ ಲವಕಾಶವಿಲ್ಲವೆಂದು ಹೇಳಿದಂತೆ ಆಯಿತು. ಅದು ಹೇಗೆಂದರೆ ? ಒಂದು ಸ್ವರೂಪ ಜ್ಞಾನವನ್ನು ಹೇಳುವುದು. ಮತ್ತೊಂದು ಗುಣ ಜ್ಞಾನವನ್ನು ಹೇಳುವುದೆಂದು ಯೆರಡಕ್ಕೂ ಮಾರ್ಗವು ಧಾರಾಳವಾಗಿ ಹೇಳಿರುವೆವು. ಈ ರೀತಿಯಾಗಿಯೇ ವಾರ್ಷ್ಣೇಯಾಧ್ಯಾಯದಲ್ಲಿ ಜೀವ ಪ್ರಸಂಗವು ಪ್ರಾಪ್ತವಾದಾಗ "ಯಥಾಜೀವಃ ಪ್ರಶಾಂತಾತ್ಮಾ ಹ್ರಸ್ವೋವಾಯದಿವಾಮಹಾನ್ । ಜ್ಞಾನಾತ್ಮಾನಂ ತಥಾವಿದ್ಯಾತ್ಪುರುಷಂ ಸರ್ವಜಂತುಷು" ಎಂದು ಹೇಳಲ್ಪಟ್ಟಿರುವುದು. ॥ ೬೪ ॥

(ಪ್ರಕೃತಿಯು ಹೇಗಾದರೆ ವಿಕಾರಾದಿಗಳನ್ನು ಹೊಂದುವುದೊ ಅದರಂತೆ ವಿಕಾರಾದಿಗಳನ್ನು ಹೊಂದದ ಜೀವನು ಏಕರೂಪನಾಗಿದ್ದರೂ ಚಿಕ್ಕದೂ ದೊಡ್ಡದೂ ಆದ ಸರ್ವಜಂತುಗಳ ಶರೀರಲ್ಲಿಯೂ ಹೇಗಾದರೆ ವ್ಯಾಪಿಸಿರುವನೊ ಈಪ್ರಕಾರವಾಗಿ ತಾನೆ ಜ್ಞಾನ ಸ್ವರೂಪನಾಗಿರುವ ಪರಮಪುರುಷನು ಸಕಲ ಪ್ರಾಣಿಗಳಲ್ಲಿಯೂ ಪೂರ್ಣನಾಗಿರುವನೆಂದರಿಯಬೇಕು)

ಈ ಪ್ರಕಾರವಾಗಿ ಈ (೭)ನೇ ಶ್ಲೋಕದಲ್ಲಿ ಹೇಳಲ್ಪಡುವ (೯) ನಾಮಗಳಿಗೂ

"ಅಗ್ರಾಹ್ಯೋ" (೫೬) ಯೋನಧಿಷ್ಠೇಯೋ ವೃತ್ತಿಗೇವ ಕುಲಾಲಕೈಃ । ಅವ್ಯುಚ್ಛಿನ್ನಾಸ್ತತಸ್ತೇವತೇ ಸರ್ಗಸ್ಥಿತ್ಯಂತಸಂಯಮಾಃ॥ ಅತಸ್ಸದಾ ಪ್ರವಾಹತ್ವಾನ್ನಿತ್ಯ "ಶಾಶ್ವತ" (೫೭) ಉಚ್ಯತೆ । ವಿಕಾಂ

ಕಲೀಲಾರಸತೋನಿರ್ವೃತಃ " ಕೃಷ್ಣ" (೫೯) ಉಚ್ಯತೇ ॥ ಕೃಷಿರ್ಭೂವಾಚಕಶ್ಶಬ್ದೋಣಶ್ಚ ನಿರ್ವೃತಿವಾಚಕಃ । ರಕ್ತರಾಜೀವ ನಯನೋ " ಲೋಹಿತಾಕ್ಷಃ " (೫೯) ಪ್ರಕೀರ್ತಿತಃ ॥ ಯಸ್ಯಬ್ರಹ್ಮಚ ಕ್ಷತ್ರಂಚ ಹ್ಯೋದನಂ ಭವೇತಸ್ಸದಾ । " ಪ್ರತರ್ದನ " (೬೦) ಸ್ಸವಿಜ್ಞೇಯಸ್ಸಂಹರ್ತೃತ್ವಪ್ರದೋಮನುಃ ॥ ಭೋಗೋಪ ಕರಣಂನಿತ್ಯಂ ನಿರ್ಮರ್ಯಾದಂ ಪರಂಪದಂ । ಯಸ್ಯತೇನಸಮೃದ್ಧತ್ವಾತ್ " ಪ್ರಭೂತ " (೬೧) ಇತಿ ಕಥ್ಯತೇ ॥ ತ್ರಿಪಾದ್ವಿಭೂತಿಸ್ತ್ರಿಕಕುತ್ತಸ್ಯೈವ ಸ್ಥಾನಂವಿಶೇಷತಃ । ಯಸ್ಯಸ " ತ್ರಿಕಕುದ್ಧಾಮಾ " (೬೨) ಯದ್ವಾತ್ರಿಯುಗಧರ್ಮವಾನ್ । ಆರ್ಷಂನಿರುಕ್ತಮಾಶ್ರಿತ್ಯ ತ್ರಿಕಕುತ್ತಾಸ್ಥ್ಯತ್ರಿಲಕ್ಷಣಃ । ಅಸ್ಮಿನ್ಪಕ್ಷೇ ಭಿನ್ನ ನಾಮ ಧಾಮಜ್ಯೋತಿ ಸ್ಸ್ವರೂಪವಾನ್ ॥ ವ್ಯಾಖ್ಯಾತೃಣಾಮಭಿಪ್ರಾಯೋ ನಾಮೈಕತ್ವೇಪಿಕೀರ್ತಿತಃ । ತಧ್ಯೈವಾಸಂತ್ರಿಕಕುದೊ ವಾರಾಹಂ ರೂಪಮಾಶ್ರಿತಃ ॥ ತ್ರಿಕಕುತ್ತೇ ನವಿಖ್ಯಾತ ಶ್ಶರೀರಸ್ಯ ಪ್ರಮಾಪಣಾತ್ । ಗುಣಸ್ಯ ವಿಭವಾನಾಂಚರೂಪಸ್ಯಚ ನಿರಂತರಂ ॥ ನಿರೂಪಕಶ್ಚ ಸರ್ವೈಪಶ್ಚತನ್ನಿರೂಪ್ಯಂ ಸ್ವರೂಪಕಂ । ಅನುಪ್ರವಿಶ್ಯವಸತಿಸ " ಪವಿತ್ರ " (೬೩) ಮಿತಿಸ್ಮೃತಂ ॥ ಸರ್ವಹೇಯ ಪ್ರತ್ಯನೀಕಮನಂತಾನಂದ ಲಕ್ಷಣಂ । ವೇದಾಂತ ಪಾರಗಂನಿತ್ಯ ಮುಚ್ಯತೇ " ಮಂಗಲಂಪರಂ ॥ " (೬೪) ಎಂಬೀ ವಿವೃತಿಯನ್ನು ಕಾಣಬಹುದು.

ಮೂ॥ ಈಶಾನಃ ಪ್ರಾಣದಃ ಪ್ರಾಣೋಜ್ಯೇಷ್ಠ
ಶ್ಶ್ರೇಷ್ಠಃ ಪ್ರಜಾಪತಿಃ । ಹಿರಣ್ಯಗರ್ಭೋ ಭೂ
ಗರ್ಭೋ ಮಾಧವೊ ಮಧುಸೂದನಃ ॥೮॥

(೬೫ನೇ ನಾಮವು) ಈಶಾನಃ,

ಓಮ್ ॥ ಈಶಾನಾಯನಮಃ.

(ಶಂ॥ ಭಾ) ಸರ್ವ ಭೂತಗಳಿಗೂ ನಿಯಾಮಕನಾದಕಾರಣ ' ಈಶಾನಃ ಎನ್ನಲ್ಪಡುವನು.

(ವಿ॥ ಭಾ) ಮುಂದಿನ ನಾಮದಲ್ಲಿ ಹೇಳಲ್ಪಟ್ಟ ಸ್ವಭಾವವು ಜೀವಾತ್ಮರಿಗೆ ಕೆಲವು (ಮುಕ್ತರಾದ) ಕಾಲದಲ್ಲಿ ಪ್ರಕಾಶವಾಗಿಯೂ ಕೆಲವು

ಕಾಲದಲ್ಲಿ (ಬದ್ಧರಾದ ಕಾಲದಲ್ಲಿ) ಅಪ್ರಕಾಶವಾಗಿಯೂ ಇರುವುದರಿಂದ ಅವರಿಗಿಂತಲೂ ಪರಮಾತ್ಮನಿಗೆ ಭೇದವನ್ನು ಹೇಳುವುದೀನಾಮವು ಈಶಾನಃ-ತನ್ನನ್ನೂ ಮತ್ತು ತನಗಿಂತಲೂ ಇತರಗಳಾದ ಪದಾರ್ಥಗಳನ್ನೂ ಸರ್ವಾವಸ್ಥೆಯಲ್ಲಿಯೂ ಆಳುವಂತಹ ಸ್ವಭಾವವುಳ್ಳವನು.

ಇದಕ್ಕೆ " ತಮೀಶ್ವರಾಣಾಂ ಪರಮಂ ಮಹೇಶ್ವರಂ " (ಶ್ವೇ॥ ಉ॥ ೬॥ ೭) " ಸ್ವಾಭಾವಿಕೀಜ್ಞಾನ ಬಲಕ್ರಿಯಾಚ " (ಶ್ವೇ॥ ಉ॥ ೬॥ ೮) " ನತಸ್ಯಕಶ್ಚಿತ್ಪತಿರಸ್ತಿಲೋಕೇ ನಚೇಶಿತಾನೈವಚತಸ್ಯಲಿಙ್ಗಮ್ । ಸಕಾರಣಂ ಕರಣಾಧಿಪಾಧಿಪೋ ನಚಾಸ್ಯಕಶ್ಚಿಜ್ಜನಿತಾನಚಾಧಿಪಃ " (ಶ್ವೇ॥ ಉ॥ ೬॥ ೯) " ಸರ್ವಸ್ಯವಶೀಸರ್ವಸ್ಯೇಶಾನಸ್ಸರ್ವಸ್ಯಾಧಿಪತಿ ಸ್ಸನಸಾಧುನಾ ಕರ್ಮಣಾ ಭೂಯಾನ್ನೋಏವಾ ಸಾಧುನಾಕನೀಯಾನ್ । ಏಷಸರ್ವೇಶ್ವರ ಏಷಭೂತಾಧಿಪತಿ ರೇಷಭೂತಪಾಲ ಏಷ ಸೇತುರ್ವಿಧರಣ ಏಷಾಂಲೋಕಾನಾ ಮಸಂಭೇದಾಯ " (ಬೃ॥ ಉ॥ ೪॥ ೫॥ ೧೫) " ಸವಾಅಯಮಾತ್ಮಾ ಸರ್ವೇಷಾಂ ಭೂತನಾಮಧಿಪತಿ ಸ್ಸರ್ವೇಷಾಂ ಭೂತನಾಂರಾಜಾ " (ಬೃ॥ ಉ॥ ೪॥ ೫॥ ೧೫) " ಏಕಇದ್ರಾಜಾ ಜಗತೋ ಬಭೂವ " (೪ನೇ ಕಾಂಡ ೧ನೇ ಪ್ರಶ್ನೆ ೮ನೇ ಅನು) " ಸ ಈಶೋಸ್ಯಜಗತೋ ನಿತ್ಯಮೇವ ನಾನ್ಯೋಹೇತುರ್ವಿದ್ಯತೇ ಈಶನಾಯ " (ಶ್ವೇ॥ ಉ॥ ೬॥ ೧೭) " ಈಶ್ವರಸ್ಸರ್ವಭೂತಾನಾಂ " (ಗೀ॥ ೧೮॥ ೬೧) ಈಶತೇಭಗವಾನೇಕ ಸ್ಸತ್ಯಮೇತದ್ಬ್ರವೀಮಿತೇ " (ಭಾ॥ ಉ॥ ೬೭॥ ೧೭) " ಪರಮಾತ್ಮಾಚ ಸರ್ವೇಷಾಮಾಧಾರಃ ಪರಮೇಶ್ವರಃ " (ವಿ॥ ಪು॥ ೬॥ ೪॥ ೪೦) ಇತ್ಯಾದ್ಯನೇಕ ಶ್ರುತಿ ಸ್ಮೃತಿ ಸಹಸ್ರ ಪ್ರಮಾಣಗಳು ಜಾಗರೂಕಗಳಾಗಿರುವುವು ಈ ಪ್ರಕಾರವಾಗಿ ಸಮಸ್ತವನ್ನೂ ಆಳುವಂತಾ ಸ್ವಭಾವವೆಂಬುವುದು ಪರಮಪುರುಷನಿಗೆ ಸಹಜವಾಗಿರುವುದರಿಂದ ಬ್ರಹ್ಮಕ್ಕೆ ಐಶ್ವರ್ಯವೂ ಸರ್ವಜ್ಞತ್ವವೇ ಮೊದಲಾದವುಗಳೂ ಕಲ್ಪಿತಗಳೆಂತಲೂ ಉಪಾಧಿವಶದಿಂದ ಬಂದವುಗಳೆಂತಲೂ ಪರಿಣಾಮವೆಂತಲೂ ಹೇಳುವಂತವರಿಗೆ ಯರಡು ಮೂರು ತಿಲಜಲಾಂಜಲಿಯು ಬಿಟ್ಟಿರುವಂತೆ ತಿಳಿಯತಕ್ಕದ್ದು॥೬೫॥

(ಈ ಮೇಲ್ಕಂಡ ಶ್ರುತ್ಯಾದಿ ಪ್ರಮಾಣಗಳೆಲ್ಲವೂ ಪರಮಪುರುಷನಿಗೆ ಸರ್ವೇಶ್ವರತ್ವವನ್ನು ಬೋಧಿಸುವುವು)

## (೬೬ನೇ ನಾಮವು) ಪ್ರಾಣದಃ,

## ಓಮ್ ॥ ಪ್ರಾಣದಾಯನಮಃ,

(ಶಂ|| ಭಾ) " ಕೋಹ್ಯೇವಾನ್ಯಾತ್ಕಃ ಪ್ರಾಣ್ಯಾತ್ " (ತೈ|| ಆ|| ೭) ಎಂಬೀ ಪ್ರಮಾಣಾನುಸಾರವಾಗಿ ಪ್ರಾಣಗಳನ್ನು ಚೇಷ್ಟಿಸುವಂತೆ ಮಾಡುವಂತವನು ' ಪ್ರಾಣದಃ ' ಎನ್ನಲ್ಪಡುವನು. (ಅಥವಾ) ಪ್ರಾಣಗಳನ್ನು ಕಾಲರೂಪಿಯಾಗಿ ಖಂಡಿಸುವಂತವನು ' ಪ್ರಾಣದಃ ' ಎನ್ನಲ್ಪಡುವನು. (ದೋಅವ ಖಂಡನೆ)

(ವಿ|| ಭಾ) ಇವನ ಐಶ್ವರ್ಯಕ್ಕೆ ಮೊದಲನೇದಾದ ವಿಷಯವನ್ನು ಹೇಳಲುಪಕ್ರಮಿಸುವುದೀನಾಮವು. ಪ್ರಾಣದಃ-ಬಲವನ್ನು ಕೊಡುವಂತವನು. ಎಂದರೆ ನಿತ್ಯಸೂರಿಗಳಿಗೆ ಸರ್ವಕಾಲದಲ್ಲಿಯೂ ತನ್ನ ಸೇವೆ ಅಥವಾ ದರ್ಶನವೆಂಬ ಅನುಭವಕ್ಕೂ ಕೈಂಕರ್ಯಕ್ಕೂ ಅಪೇಕ್ಷಿತವಾದ ಬಲವನ್ನು ಕೊಡುವಂತವನೆಂದರ್ಥವು. ಇದಕ್ಕೂ " ಯಆತ್ಮದಾಬಲದಾಃ " (೮ನೇ ಕಾಣ್ಡ|| ೧ನೇ ಪ್ರ|| ೪ನೇ ಅ) " ಸದ್ಯೈವೇಃಪ್ರಾಣಆವಿಶತಿ " (ಬೃ|| ಆ|| ೩|| ೫|| ೨೦) ಇತ್ಯಾದಿ ಪ್ರಮಾಣಗಳಿರುವವು.

(ಮ|| ಭಾ) ಪ್ರಾಣವೆನ್ನಲ್ಪಡುವ ಬಲವನ್ನು ಬಲಿಷ್ಠರಿಗೆ ಕೊಡುವಂತವನು ' ಪ್ರಾಣದಃ ' ಎನ್ನಲ್ಪಡುವನು.

## (೬೭ನೇ ನಾಮವು) ಪ್ರಾಣಃ, ಓಮ್|| ಪ್ರಾಣಾಯನಮಃ.

(ಶಂ|| ಭಾ) " ಪ್ರಾಣಸ್ಯ ಪ್ರಾಣಃ " ಎಂಬೀ ಶ್ರುತ್ಯನುಸಾರವಾಗಿ ಚಲಿಸುವಂತೆ ಮಾಡುವಂತವನು ' ಪ್ರಾಣಃ ' ಎನ್ನಲ್ಪಡುವನು. (ಅಥವಾ) ಕ್ಷೇತ್ರಜ್ಞನಾಗಿರುವದರಿಂದಲೊ ಅಥವಾ ಪರಮಾತ್ಮನಾಗಿರುವುದರಿಂದಲೊ, (ಯದ್ವಾ) ಮುಖ್ಯ ಪ್ರಾಣನಾಗಿರುವಂತವನಾಗಿರುವುದರಿಂದಲೊ ' ಪ್ರಾಣಃ ' ಎನ್ನಲ್ಪಡುವನು.

(ವಿ|| ಭಾ) ಈ ಪ್ರಕಾರವೇ ಅವರುಗಳಿಗೆ (ನಿತ್ಯಸೂರಿಗಳಿಗೆ) ಉಜ್ಜೀವನ ಹೇತುವಾದವನು ' ಪ್ರಾಣಃ ' ಎನ್ನಲ್ಪಡುವನು. ಇದಕ್ಕೂ " ತತೋದೇವಾನಾಂ ನಿರವರ್ತ್ತತಾಸುರೇಕಃ " (೮ನೇ ಕಾಂ|| ೧ನೇ ಪ್ರ|| ೪ನೇ ಅ) ಇತ್ಯಾದ್ಯನೇಕ ಪ್ರಮಾಣಗಳಿರುವುವು.

(ಅನಂತರದಲ್ಲಿ ನಿತ್ಯಸೂರಿಗಳಿಗೆಲ್ಲವೂ ಒಬ್ಬನೇ ಪ್ರಾಣನಾಗಿರುವನೆಂದರ್ಥವು)

(ಮ||ಭಾ) ಪ್ರಾಣಿತೀತಿ ಪ್ರಾಣಃ-ಜೀವಿಸುವಂತೆ ಮಾಡುವಂತವನು ' ಪ್ರಾಣಃ ' ಎನ್ನಲ್ಪಡುವನು. || ೬೬ ||

## (೭೮ನೇ ನಾಮವು) ಜ್ಯೇಷ್ಠಃ,
### ಓಮ್॥ ಜ್ಯೇಷ್ಠಾಯನಮಃ.

(ಶಂ॥ ಭಾ) ಅತ್ಯಂತ ವೃದ್ಧನಾದವನು "ಜ್ಯೇಷ್ಠಃ" ಎನ್ನಲ್ಪಡುವನು. (ಮ) ಇದನ್ನೇ ಹೇಳಿರುತ್ತಾರೆ.

(ವಿ॥ ಭಾ) ಅತ್ಯಂತವಾಗಿ ಶ್ಲಾಘಿಸುವುದಕ್ಕೆ ಅರ್ಹನು. ಎಂದರೆ ತಾನೂ ನಿತ್ಯಸೂರಿಗಳೂ ಸರ್ವದಾ ಸರ್ವಪ್ರಕಾರದಿಂದಲೂ ಅನುಭವಿಸುತಲಿದ್ದರೂ ಸ್ವಲ್ಪವೂ ನ್ಯೂನವಾಗದ ಅಪರಿಮಿತೈಶ್ವರ್ಯವುಳ್ಳವನಾಗಿರುವಂತವನಾದಕಾರಣ ಅತ್ಯಂತ ಶ್ಲಾಘನೀಯನೆಂದರ್ಥವು. (ಅಥವಾ) ಸರ್ವರಿಗೂ ಮೂಲಪುರುಷನಾದಕಾರಣ (ಶಂ॥ ಪ್ರಕಾರವಾಗಿ) ವೃದ್ಧನೆಂತಲೂ ಹೇಳಬಹುದು. ಇದಕ್ಕೆ "ವಿಷಪ್ರಕೃತಿರವ್ಯಕ್ತಃ ಕರ್ತಾಚೈವಸನಾತನಃ । ಪರಶ್ಚಸರ್ವಭೂತೇಭ್ಯ ಸ್ತಸ್ಮಾದ್ವೃದ್ಧತಮೋಽಚ್ಯುತಃ" (ಭಾರ॥ ಸಭಾ॥ ೩೮॥ ೨೪) ಎಂಬೀ ಪ್ರಮಾಣವು ಇರುವುದು. ಮೊದಲನೆ ಅರ್ಥಕ್ಕೆ "ಭಗವಾನ್ ವಾಸುದೇವೋಜ್ಯಾಯಸೀವಿಭೂತಿಃ ॥ ಬ್ರಹ್ಮೈವಭೂತಾನಾಂಜ್ಯೇಷ್ಠಂ" ಇತ್ಯಾದಿ ಪ್ರಮಾಣಗಳಿರುವುವು.॥೭೮॥

(ವಿಷಪ್ರಕೃತಿರಿತ್ಯಾದಿ—ಇವನುತಾನೆ ಪ್ರಕೃತಿಯೂ, ಅವ್ಯಕ್ತವೂ, ಶಾಶ್ವತನಾದ ಸರ್ವ ಕರ್ತಾ ಆಗಿರುವ ಚೇತನನೂ, ಸಕಲ ಭೂತಗಳಿಗಿಂತಲೂ ಶ್ರೇಷ್ಠನೂ ಆದಕಾರಣದಿಂದ ಅಚ್ಯುತನು ವೃದ್ಧತಮನೆಂದರ್ಥವು)

* ಭಗವಾನಿತ್ಯಾದಿ—ವಾಸುದೇವನೆನ್ನಲ್ಪಡುವ ಪರಮ ಪುರುಷನೊಬ್ಬನೆ ಮಹಾವಿಭೂತಿ (ಮಹಾತ್ತಾದ ಐಶ್ವರ್ಯ)ವುಳ್ಳವನೆನ್ನಲ್ಪಡುವನು ಬ್ರಹ್ಮೈವೇತ್ಯಾದಿ—ಸಮಸ್ತಭೂತಗಳಿಗಿಂತಲೂ ಪರಮಪುರುಷನೆ ಆದಿಯಾದವನು)

## (೭೯ನೇ ನಾಮವು) ಶ್ರೇಷ್ಠಃ,
### ಓಮ್ ॥ ಶ್ರೇಷ್ಠಾಯನಮಃ.

(ಶಂ॥ ಭಾ) ಅತ್ಯಂತ ಪ್ರಶಸ್ತನಾದವನು 'ಶ್ರೇಷ್ಠಃ' ಎನ್ನಲ್ಪಡುವನು.

(ವಿ ಭಾ) ಅಂತಹ ನಿತ್ಯಸೂರಿಗಳು ಸರ್ವಕಾಲವಲ್ಲಿಯೂ ಅನುಭವಿಸುವುದರಿಂದುಂಟಾದಪ್ರೀತಿಯೊಡನೆ ಮಾಡತಕ್ಕ ಸ್ತೋತ್ರಗಳಿಂದ

ಸೇವಿಸಲ್ಪಡುವಂತವನು. ಇದಕ್ಕೆ "ತದ್ವಿಪ್ರಾಸೋವಿಪನ್ಯವೋಜಾಗೃವಾಂಸಸ್ಸಮಿಂಧತೆ ॥ ವಿಷ್ಣೋರ್ಯತ್ಪರಮಂಪದಂ" (ಸುಬಾ॥ ೬॥ ೮) ಇತ್ಯಾದಿ ಶ್ರುತಿಗಳು ಪ್ರಮಾಣಗಳಾಗಿರುವುವು.

(ಶ್ರೀಮಹಾವಿಷ್ಣುವಿನ ಪರಮಪದವು ಯಾವುದೊ ಅದನ್ನು ಹೊಂದಿರುವ ಬ್ರಹ್ಮವೇದಿಗಳಾದ ನಿತ್ಯಸೂರಿಗಳು ಸದಾ ಸ್ತುತಿಶೀಲರಾಗಿ ಪರಬ್ರಹ್ಮವನ್ನನುಭವಿಸುವಂತವರಾಗಿರುವರು.)

## (೭೦ನೇ ನಾಮವು) ಪ್ರಜಾಪತಿಃ,

## ಓಮ್ ॥ ಪ್ರಜಾಪತಯೇನಮಃ.

(ಶಂ॥ ಭಾ) ಈಶ್ವರ ಭಾವದಿಂದ ಸರ್ವ ಪ್ರಜೆಗಳಿಗೂ ಪ್ರಭುವಾದವನು "ಪ್ರಜಾಪತಿ" ಎನ್ನಲ್ಪಡುವನು.

(ವಿ॥ ಭಾ) ಈ ಪ್ರಕಾರವಾಗಿ ನಿತ್ಯಸೂರಿಗಳು ಜಗತ್ಪ್ರಭುವನ್ನು ಸ್ತೋತ್ರಮಾಡುವುದಕ್ಕೆ ಕಾರಣವಾದ ಪರಸ್ಪರ ಸಂಬಂಧವು ಯಾವುದೋ ಅದನ್ನು ಈ ನಾಮವು ಹೇಳುವುದು. ಬದ್ಧರಿಗಿಂತಲೂ ಮುಕ್ತರಿಗಿಂತಲೂ ಶ್ರೇಷ್ಠರಾಗಿರುವ ನಿತ್ಯಸೂರಿಗಳಿಗೆ ಸ್ವಾಮಿಯಾಗಿರುವಂತವನು "ಪ್ರಜಾಪತಿಃ" ಎನ್ನಲ್ಪಡುವವು. ಬದ್ಧ ಮುಕ್ತರಿಗಿಂತಲೂ ಅತ್ಯಂತ ಶ್ರೇಷ್ಠರಾದ ನಿತ್ಯಸೂರಿಗಳಿಂದ ನಿತ್ಯವೂ ಶಿಕ್ಷಿಸಲ್ಪಡುವನೆಂದರ್ಥವು. ಇದಕ್ಕೆ "ರಶ್ಮಿಂರಶ್ಮೀನಾಂಮಧ್ಯೇ ತಪಂತಂ ॥ ಋತಸ್ಯಪದೇಕವಯೋನಿಪಾಂತಿ" (ಆರ॥ ೩॥ ೧೧) "ಯಮಂತಸ್ಸಮುದ್ರೇಕವಯೋವಯಂತಿ ಯದಕ್ಷರೇ ಪರಮೇಪ್ರಜಾಃ" (ತ್ರೈ॥ ನಾ॥ ೬॥ ೧॥ ೩) "ಯಸ್ಮಿನ್ದೇವಾಅಧಿವಿಶ್ವೇನಿಷೇದುಃ" (ತ್ರೈ॥ ನಾ॥ ೬॥ ೧॥ ೨॥) ಇತ್ಯಾದ್ಯನೇಕ ಪ್ರಮಾಣಗಳು ಭಾಷ್ಯದಲ್ಲಿ ಉದಹರಿಸಲ್ಪಟ್ಟಿರುವುವು. ॥೭೦॥

(ಕಿರಣಗಳ ಮಧ್ಯದಲ್ಲಿ ಪ್ರಕಾಶಿಸುವ ಕಿರಣವನ್ನು ಸತ್ಯವಾದ ಸ್ಥಾನದ ಮಧ್ಯದಲ್ಲಿ ಸ್ತುತಿಶೀಲರಾದ ನಿತ್ಯಸೂರಿಗಳು ಇರುವರು. (ಆರ॥ ೩॥ ೧೧) ಯಾವ ಪರಮಪುರುಷನಲ್ಲಿ ಸಮಸ್ತರಾದ ನಿತ್ಯಸೂರಿಗಳು ಇರುವರೊ. (ತ್ರೈ॥ ನಾ॥ ೬॥ ೧॥ ೨) ಯಾವ ಪರಮಾತ್ಮನನ್ನು (ಸಮುದ್ರ ಮಧ್ಯದಲ್ಲಿ ದೂರದೃಷ್ಟಿಯುಳ್ಳ ಜನರು ಎಂದರೆ) ಅಳವಿಲ್ಲದ ಪರಮಪದದಲ್ಲಿ ನಿತ್ಯಸೂರಿಗಳು ತಿಳಿಯುವರೊ. (ತ್ರೈ॥ ನಾ ॥೬॥ ೧॥ ೩).

# (೭೧ನೇ ನಾಮವು) ಹಿರಣ್ಯಗರ್ಭಃ,

## ಓಮ್ ॥ ಹಿರಣ್ಯಗರ್ಭಾಯನಮಃ

(ಶಂ॥ ಭಾ) "ಹಿರಣ್ಯಗರ್ಭಸ್ಸಮವರ್ತತಾಗ್ರೇ ಭೂತಸ್ಯಜಾತಃ ಪತಿರೇಕಆಸೀತ್" ಎಂಬ ಶ್ರುತ್ಯನುಸಾರವಾಗಿ ಚತುರ್ಮುಖ ಬ್ರಹ್ಮರೂಪದಿಂದ ಹಿರಣ್ಮಯವಾದ ಅಂಡ ಮಧ್ಯದಲ್ಲಿ (ಬ್ರಹ್ಮಾಂಡ ಮಧ್ಯದಲ್ಲಿ) ಇರುವಂತವನಾದ ಕಾರಣದಿಂದ "ಹಿರಣ್ಯಗರ್ಭಃ" ಎನ್ನಲ್ಪಡುವನು.

(ವಿ॥ ಭಾ) ಈ ಪ್ರಕಾರವಾಗಿ ಅನುಭವಿಸುವುದಕ್ಕೆ ಅರ್ಹವಾದ ದೇಶ ವಿಶೇಷವನ್ನು ಹೇಳುವುದು ಈ ನಾಮವು. ನಿರ್ದೋಷನೂ ನಿತ್ಯನೂ ಆಗಿ ಶುದ್ಧ ಸತ್ವಮಯವಾಗಿರುವುದರಿಂದ ಸುವರ್ಣದಂತೆ ಪ್ರಕಾಶಿಸುತಲಿರುವ ಪರಮಪದ ಮಧ್ಯದಲ್ಲಿ ನಿತ್ಯ ವಾಸವನ್ನು ಮಾಡುವಂತವನು "ಹಿರಣ್ಯಗರ್ಭಃ" ಎನ್ನಲ್ಪಡುವನು. ಹಿರಣ್ಯವೆಂದರೆ ಶ್ರೇಷ್ಠವಾದ ಪರಮಪದ ಸ್ಥಾನವು, ಅಲ್ಲಿ ನಿತ್ಯ ವಾಸವಾಗಿರುವುದರಿಂದ ಗರ್ಭಭೂತನಾದವನು ಹಿರಣ್ಯಗರ್ಭನೆಂದರ್ಥವು. ಇದಕ್ಕೂ "ಹಿರಣ್ಮಯೇ ಪರೇಲೋಕೇ ವಿರಜಂ ಬ್ರಹ್ಮನಿಷ್ಕಳಂ । ತಚ್ಛುಭ್ರಂ ಜ್ಯೋತಿಷಾಂಜ್ಯೋತಿ ಸ್ತದ್ಯದಾತ್ಮ ವಿದೋವಿದುಃ ॥ ನತತ್ರಸೂರ್ಯೋಭಾತಿ" (ಮುಂ॥ ಉ॥ ೨॥ ೨॥ ೧೦) "ದೇವಾನಾಂಪೂರಯೋಧ್ಯಾತಸ್ಯಾಂ ಹಿರಣ್ಮಯಃಕೋಶಃ" (ಆರ॥ ೧ನೇ ಪ್ರ॥ ೨೭ನೇ ಅನು) "ಪುರೀಂಹಿರಣ್ಮಯೀಂಬ್ರಹ್ಮಾವಿವೇಶಾ ಪರಾಜಿತಾಂ" (ಆ॥ ೧॥ ೨೭) ಇತ್ಯಾದ್ಯನಂತ ಶ್ರುತಿ ಪ್ರಮಾಣಗಳಿರುವುವು. ॥೭೧॥

(ಸ್ವರ್ಣಮಯವಾಗಿರುವ ಶ್ರೇಷ್ಠವಾದ ಶ್ರೀವೈಕುಂಠ ಲೋಕದಲ್ಲಿ ರಜೋಗುಣರಹಿತವಾದ (ಇದರಿಂದ ತಮಸ್ಸಂಬಂಧ ವಿಲ್ಲವೆಂಬುವುದೂ ಸ್ವತಸಿದ್ಧವಾಗುವುದು) ಪರಬ್ರಹ್ಮವು ಪ್ರಕಾಶಿಸುತಲಿರುವುದು. ಪರಮ ಪವಿತ್ರವಾಗಿಯೂ ತೇಜಸ್ಸುಗಳಿಗೂ ಕೂಡ ಪ್ರಕಾಶಕವಾಗಿಯೂ ಇರುವ ಅಂತಹಾ ಪರವಸ್ತುವನ್ನು ಆತ್ಮ ಜ್ಞಾನಿಗಳು ತಿಳಿಯುವರು. ಅದುಸ್ವಯಂಪ್ರಕಾಶವಾದುದರಿಂದ ಸೂರ್ಯನು ಅದನ್ನು ಪ್ರಕಾಶ ಪಡಿಸಲಾರನು ನಿತ್ಯಸೂರಿಗಳಿಗೆ ಆವಾಸಭೂತವಾದ ಶ್ರೀವೈಕುಂಠ ದಿವ್ಯ ನಗರವು ಅಯೋಧ್ಯಾ ಎನ್ನಲ್ಪಡುವುದು ಅದರಲ್ಲಿ ನಿರ್ದೋಷತ್ವಾದಿ ಗುಣ ಸಾಮ್ಯದಿಂದ ಸ್ವರ್ಣದಂತೆ ರಮಣೀಯವಾಗಿರುವ ಹಿರಣ್ಮಯಸ್ಥಾನವು ಬಂದಿರುವುದು. ಅಪರಾಜಿತಾ ಎನ್ನಲ್ಪಡುವ

ಹಿರಣ್ಮಯವಾದ ಪುರಿಯನ್ನು ಪರಮಾತ್ಮ ಸಾಧರ್ಮ್ಯವುಳ್ಳ ಮುಕ್ತಾತ್ಮನು ಪ್ರವೇಶಿಸಿದನು ಎಂದರ್ಥವು.)

## (೭೨ನೇ ನಾಮವು) ಭೂಗರ್ಭಃ,

## ಓಮ್ ॥ ಭೂಗರ್ಭಾಯನಮಃ.

ಮ॥ ಭಾ॥ ಭೂಮಿಯನ್ನು ಗರ್ಭದಲ್ಲಿಟ್ಟುಕೊಂಡಿರುವಂತವನು 'ಭೂಗರ್ಭಃ' ಎನ್ನಲ್ಪಡುವನು.

(ವಿ॥ ಭಾ) ಅನಂತರದಲ್ಲಿ ಅವನಿಗೆ ದಿವ್ಯಮಹಿಷೀಯೋಗವನ್ನೀ ನಾಮವು ಹೇಳುವುದು. ಹ್ರೀ ಎಂತಲೂ ಭೂದೇವಿ ಎಂತಲೂ "ಮಹೀಂದೇವೀಂ ವಿಷ್ಣುಪತ್ನೀಂ ವಜುಾರ್ಯಾಂ ॥ ಹ್ರೀಶ್ಚತೆ ॥ ಉದ್ಧೃತಾಸಿವರಾಹೇಣ" ಇತ್ಯಾದ್ಯುಪನಿಷತ್ತುಗಳಲ್ಲಿ ಹೇಳಲ್ಪಡುವ ಭೂದೇವಿಗೆ ಸರ್ವಕಾಲದಲ್ಲಿಯೂ ತನ್ನ ಅನುಭವವನ್ನು ಕೊಟ್ಟು ಅವಳನ್ನು ಗರ್ಭದಂತೆ ಪಾಲಿಸುವಂತವನು "ಭೂಗರ್ಭಃ" ಎನ್ನಲ್ಪಡುವನು. ಶ್ರುತ್ಯರ್ಥವು ಸ್ಪಷ್ಟವು. ॥ ೭೨ ॥

## (೭೩ನೇ ನಾಮವು) ಮಾಧವಃ,

## ಓಮ್ ॥ ಮಾಧವಾಯನಮಃ.

(ಶಂ॥ ಮ॥ ವಿ॥ ಭಾ) ಮಾ – ಶ್ರೀದೇವಿಯು, ಇವಳಿಗೆ ಪತಿಯಾದವನು ಮಾಧವನೆನ್ನಲ್ಪಡುವನು. (ಶಂ) ಅಥವಾ ಮಧು ವಿದ್ಯಾ ಎಂಬುವುದು ವೇದಾಂತ ವಿಹಿತವಾದದ್ದೊಂದಿರುವುದು. ಅದರಿಂದ ತಿಳಿಯಲ್ಪಡತಕ್ಕವನು 'ಮಾಧವಃ' ಎನ್ನಲ್ಪಡುವನು. ಇದಕ್ಕೆ "ಮಧುವಿದ್ಯಾವಬೋಧ್ಯತ್ವಾ ದ್ಧವತ್ವಾದ್ವಾಶ್ರಿಯೋನಿಶಂ । ಮೌನಾಧ್ಯಾನಾಚ್ಚಯೋಗಾಚ್ಚ ವಿದ್ಧಿಭಾರತಮಾಧವಂ" ಎಂಬದಾಗಿ ಮಹಾಭಾರತ ಪ್ರಮಾಣವು ಈ ಅರ್ಥವನ್ನು ಬೋಧಿಸುವುದು. (ವಿ) ಇದಕ್ಕೆ ಎಂದರೆ ಇವನು ಶ್ರೀಯಃಪತಿಯಾಗಿರುವುದಕ್ಕೆ "ಹ್ರೀಶ್ಚತೇಲಕ್ಷ್ಮೀಶ್ಚಪತ್ನ್ಯೌ ॥ ನಿತ್ಯೈವೈಷಾಜಗನ್ಮಾತಾ ವಿಷ್ಣೋಃಶ್ರೀರನಪಾಯಿನೀ" (ವಿ॥ ಪು॥ ೧॥ ೮॥ ೧೭) ಇತ್ಯಾದ್ಯನಂತ ಪ್ರಮಾಣಗಳು, ಭಾಷ್ಯದಲ್ಲಿ ಉದಹರಿಸಲ್ಪಟ್ಟಿರುವುವು.

(ಭೂದೇವಿಯೂ ಶ್ರೀದೇವಿಯೂ ಇವನಿಗೆ ಪತ್ನಿಯರು. ಲೋಕಮಾತೆಯಾದ ಈ ಶ್ರೀದೇವಿಯು ನಿತ್ಯಳೂ ಬಿಟ್ಟಿರತಕ್ಕವಳಲ್ಲದವಳೂ ಆದ ಪತ್ನಿಯು. ಎಂದರ್ಥವು)

ಇವಳಿಗೆ ಸ್ವರೂಪದಂತೆ ನಿತ್ಯನಿರ್ಮಲವಾದ ರೂಪವೂ ಸ್ವಾಭಾವಿಕವಾದ ಪರಮೈಶ್ವರ್ಯವೂ ಸಕಲ ಜಗತ್ತಿಗೂ ತಾಯಿಯಾಗಿರುವ ಸ್ವಭಾವವೂ ಪರಮಪುರುಷನೊಡನೆ ನಿತ್ಯ ಸಂಬಂಧವೂ ಅದೂ ಸ್ವಾಭಾವಿಕವೆಂಬುವುದೂ ತತ್ವ ಪರಶಾಸ್ತ್ರಗಳಾದ ಶ್ರೀಸೂಕ್ತಮೇಧಾಸೂಕ್ತ ಶ್ರದ್ಧಾಸೂಕ್ತ ಉತ್ತರನಾರಾಯಣಾನುವಾಕಕೌಷೀತಕೀ ಪ್ರಮಾಣವೇ ಮೊದಲಾದ ವೇದಗಳಲ್ಲಿಯೂ ವಿಷ್ಣುಪುರಾಣವೇ ಮೊದಲಾದ ಸ್ಮೃತಿಗಳಲ್ಲಿಯೂ ವಿಸ್ತಾರವಾಗಿ ಹೇಳಲ್ಪಡುವುವು ‖೭೭‖

## (೭೮ನೇ ನಾಮವು) ಮಧುಸೂದನಃ,

### ಓಮ್‖ ಮಧುಸೂದನಾಯನಮಃ.

(ವಿ) ಈರೀತಿಯಾಗಿ ಸರ್ವ ನಿರ್ವಾಹಕನಾಗಿರುವುದರೊಡನೆ ಅಸುರ ಸಂಹಾರಾದಿಗಳನ್ನು ಮಾಡುವುದರಿಂದ ಎದುರಿಲ್ಲದ ನಿರಂಕುಶೈಶ್ವರ್ಯ ಶಾಲಿ ಎನ್ನುವುದೀನಾಮವು.

(ಶಂ‖ ವಿ‖ ಮ‖ ಭಾ) ಮಧುವೆಂಬ ಹೆಸರುಳ್ಳ ಅಸುರನನ್ನು ಸಂಹಾರಮಾಡಿರುವಂತವನು. (ಶಂ) ಇದಕ್ಕೆ "ಕರ್ಣಮಿಶ್ರೋದ್ಭವಂಚಾಪಿ ಮಧುನಾಮ ಮಹಾಸುರಂ | ಬ್ರಹ್ಮಣೋಽಪಚಿತಿಂಕುರ್ವನ್ ಜಘಾನಪುರುಷೋತ್ತಮಃ ‖ ತಸ್ಯತಾತವಧಾದೇವ ದೇವದಾನವಮಾನವಾಃ | 'ಮಧುಸೂದನ' ಇತ್ಯಾಹುಃ ಋಷಯಶ್ಚ ಜನಾರ್ದನಂ" ಎಂಬ ಶ್ರೀಮಹಾಭಾರತ ನಿರುಕ್ತವೂ ಇರುವುದು.

(ಕರ್ಣಮಿಶ್ರನೆಂಬವನಿಂದ ಹುಟ್ಟಿರುವ ಮಧುವೆಂಬ ಮಹಾಸುರನನ್ನು ಚತುರ್ಮುಖನಿಗೆ ಅಥವಾ ವೇದಕ್ಕೆ ಸಂತೋಷವನ್ನುಂಟುಮಾಡುವುದಕ್ಕಾಗಿ ಸಂಹರಿಸಿರುತ್ತಾನಾದುದರಿಂದ ದೇವದಾನವ ಮಾನವರೆಲ್ಲರೂ ಸಮಸ್ತ ಋಷಿಗಳೂ ಜನಾರ್ದನನನ್ನು ಮಧುಸೂದನನೆನ್ನುವರು. ಇಲ್ಲಿ 'ವಿಷ್ಣುಕರ್ಣೋದ್ಭವಂಚಾಪಿ' ಎಂಬದಾಗಿ ಒಂದು ಪಾಠವುಂಟು. ಆವಾಗ ಶ್ರೀಮಹಾವಿಷ್ಣುವಿನ ಕಿವಿಯಲ್ಲಿ ಮಧುವೆಂಬ ಅಸುರನು ಹುಟ್ಟಿರುವನೆಂಬ ಅರ್ಥವನ್ನರಿಯಬೇಕು.)

(ವಿ) ಅಥವಾ, ಮಧು ಎಂದರೆ ಇಂದ್ರಿಯವು, ನಿತ್ಯಸೂರಿಗಳ ಇಂದ್ರಿಯವೆಂದರ್ಥವು. ಅವುಗಳನ್ನು; ಸೂದತೇ–ಸೂದಯತಿ–ಆತ್ಮನ್ಯಾಪ

(ಶಂ॥ ಭಾ) ರಾಮಶ್ಶಸ್ತ್ರಭೃತಾಮಹಂ " ಎಂಬ ಗೀತಾ ವಚನಾನುಸಾರವಾಗಿ ಧನುಸ್ಸುಳ್ಳವನಾದಕಾರಣದಿಂದ "ಧನ್ವೀ" ಎನ್ನಲ್ಪಡುವನು.

(ಶಸ್ತ್ರಗಳನ್ನು ಧರಿಸಿರುವಂತವರಲ್ಲಿ ನಾನು ರಾಮನಾಗಿರುವೆನು ಎಂದೀ ಪ್ರಮಾಣಾರ್ಥವು)

(ವಿ॥ ಭಾ) ಈಪ್ರಕಾರವಾಗಿ ಅಸದೃಶವಾದ ಪೌರುಷದಿಂದ ಕೂಡಿರುವುದಕ್ಕೆ ತಕ್ಕಂತೆ ಶಾರ್ಙ್ಗವೆಂಬ ಧನುಸ್ಸನ್ನು ಯಾವಾಗಲೂ ಉಳ್ಳವನು "ಧನ್ವೀ" ಎನ್ನಲ್ಪಡುವನು. ಈ ಪ್ರಕಾರವಾಗಿ ಹೇಳಿರುವುದು ಇತರಗಳಾದ ದಿವ್ಯಾಯುಧಗಳುಳ್ಳವಿಕೆಗೂ ನಿದರ್ಶಕವಾಗಿರುವುದೆಂದರಿಯಬೇಕು. ಇದಕ್ಕೆ "ಶಾರ್ಙ್ಗಧನ್ವಾ ಹೃಷೀಕೇಶಃ ಪುರುಷಃ ಪುರುಷೋತ್ತಮಃ ॥ ಅಜಿತಃಖಡ್ಗಧೃಗ್ವಿಷ್ಣುಃ" ಎಂಬ ಶ್ರೀರಾಮಾಯಣ ಯುದ್ಧಕಾಂಡ (೧೨೦)ನೇ ಸರ್ಗದ ವಚನವನ್ನರಿಯಬೇಕು.

ಮತ್ತು "ಶರಾನಾನಾವಿಧಾಕಾರಾ ಧನುರಾಯತವಿಗ್ರಹಂ । ಅನುವ್ರಜಂತಿಕಾಕುತ್ಸ್ಥಂ ಸರ್ವೇಪುರುಷ ವಿಗ್ರಹಾಃ ॥ (ಶ್ರೀರಾ) ತತೋರಾಜರ್ಷ ಭಗವಾನುಗ್ರಧನ್ವಾ ನಾರಾಯಣಃ ಪ್ರಭವಶ್ಚಾಪ್ಯಯಶ್ಚ॥ ಭೂತಾದಿಮಿಂದ್ರಿಯಾದಿಂಚ ದ್ವಿಧಾಹಂಕಾರಮೀಶ್ವರಃ । ಬಿಭರ್ತಿಶಂಖರೂಪೇಣ ಶಾರ್ಙ್ಗರೂಪೇಣಚಸ್ಥಿತಂ" (ವಿ॥ ಪು॥ ೧॥ ೨೨॥ ೭೦) ಇತ್ಯಾದಿ ಪ್ರಮಾಣಗಳಲ್ಲಿ ಪರಮಪುರುಷನಿಗೆ ಧನುಸ್ಸೆಂಬ ಆಯುಧ ಯೋಗವನ್ನು ಇತರಗಳಾದ ದಿವ್ಯಾಸ್ತ್ರ ಯೋಗವನ್ನೂ ಪ್ರತಿಪಾದಿಸುವುವು. ॥೭೭॥

(ಹೃಷೀಕೇಶಾದಿ ಶಬ್ದ ವಾಚ್ಯನಾದ ಪುರುಷೋತ್ತಮನು ಶಾರ್ಙ್ಗವೆಂಬ ಧನುಸ್ಸುಳ್ಳವನು. ನಂದಕವೆಂಬ ಖಡ್ಗಧಾರಿಯಾದ ಪರಮಾತ್ಮನು ಯಾರಿಂದಲೂ ಜಯಿಸಲ್ಪಡದವನೆಂದು ಶ್ರೀರಾಮಾಯಣ ವಚನಾರ್ಥವು. ಶರಗಳು ನಾನಾವಿಧಗಳಾದ ಪುರುಷ ರೂಪಗಳನ್ನು ಧರಿಸಿ ಉದ್ದವಾದ ದಿವ್ಯಮಂಗಳ ವಿಗ್ರಹವುಳ್ಳ ಶ್ರೀರಾಮನನ್ನನುಸರಿಸಿದವೆಂದು "ಶರಾನಾನಾವಿಧಾಕಾರಾಃ" ಎಂಬ ಶ್ರೀರಾಮಾಯಣ ವಚನಾರ್ಥವು. ಕಠೋರವಾದ ಧನುಸ್ಸುಳ್ಳ ಭಗವನ್ನಾರಾಯಣನು ಈ ಪ್ರಪಂಚಕ್ಕೆ ಸೃಷ್ಟಿ ಸಂಹಾರಗಳನ್ನು ಮಾಡತಕ್ಕವನೆಂದು "ತತೋರಾಜರ್ಷ" ಎಂಬ ವಚನಾರ್ಥವು ತತ್ವಗಳಲ್ಲಿ ತಾಮಸಾಹಂಕಾರವನ್ನು ಪಾಂಚಜನ್ಯವೆಂಬ ಶಂಖರೂಪದಿಂದಲೂ ಸಾತ್ವಿಕ ಹಂಕಾರವನ್ನು ಶಾರ್ಙ್ಗವೆಂಬ ಧನುಸ್ಸಿನ ರೂಪದಿಂದಲೂ ಧರಿಸಿರುವನೆಂದು ಶ್ರೀವಿಷ್ಣುಪುರಾಣ ವಚನಾರ್ಥವು.)

## (೭೮ನೇ ನಾಮವು) ಮೇಧಾವೀ,

## ಓಮ್ ॥ ಮೇಧಾವಿನೇನಮಃ.

(ಶಂ॥ಭಾ) ಬಹು ಗ್ರಂಥಧಾರಣ ಸಾಮರ್ಥ್ಯವು ಮೇಧಾ ಎನ್ನಲ್ಪಡುವುದು. ಅದುಳ್ಳವನು "ಮೇಧಾವೀ" ಎನ್ನಲ್ಪಡುವನು.

(ವಿ॥ ಭಾ) ಅಳವಿಲ್ಲದ ನಿತ್ಯವಾಗಿರುವ ತನ್ನ ಮಹಿಮಾನುಗುಣವಾದ ಸ್ವಭಾವ ಸಿದ್ಧವಾಗಿರುವ ಸರ್ವಜ್ಞತಾ ಎಂಬ ಗುಣವುಳ್ಳವನು "ಮೇಧಾವೀ" ಎನ್ನಲ್ಪಡುವನು ಇದಕ್ಕೆ "ಯಸ್ಸರ್ವಜ್ಞ ಸ್ಸರ್ವವಿತ್" ಎಂಬ ಶ್ರುತಿಯೂ ಆಧಾರವಾಗಿರುವುದು. ॥೭೮॥

## (೭೯ನೇ ನಾಮವು) ವಿಕ್ರಮಃ,

## ಓಮ್ ॥ ವಿಕ್ರಮಾಯನಮಃ.

(ಶಂ॥ಭಾ) ಸರ್ವ ಪ್ರಪಂಚವನ್ನು ಆಕ್ರಮಿಸಿದವನಾದಕಾರಣದಿಂದ "ವಿಕ್ರಮಃ" ಎನ್ನಲ್ಪಡುವನು. (ಅಥವಾ) (ಶಂ॥ ವಿ॥ ಮ) ವಿ ಎಂದರೆ ಪಕ್ಷಿಯು, ಗರುಡನೆಂದರ್ಥವು. ಅದನ್ನು ವಾಹನವನ್ನಾಗಿ ಮಾಡಿಕೊಂಡು ಸಂಚರಿಸುವಂತವನು "ವಿಕ್ರಮಃ" ಎನ್ನಲ್ಪಡುವನು (ವಿ) ಇದರಿಂದ ವೇದ ಸ್ವರೂಪನಾದ ಗರುಡನಮೇಲೆ ಹತ್ತಿಕೊಂಡು ಅಲ್ಲಲ್ಲಿ ಸ್ವೇಚ್ಛೆಯಾಗಿ ಸಂಚರಿಸುವಂತವನೆಂಬ ಅರ್ಥವೇರ್ಪಟ್ಟಿತು. ಇದಕ್ಕೆ "ತತ್ಪುರುಷಾಯ ವಿದ್ಮಹೇ ಸುವರ್ಣಪಕ್ಷಾಯ ಧೀಮಹಿ, ತನ್ನೋ ಗರುಡಃ ಪ್ರಚೋದಯಾತ್" (ತೈ॥ ನಾ॥ ೬॥ ೧॥ ೨೪) ಎಂಬ ಪ್ರಮಾಣವು ಆಧಾರವಾಗಿರುವುದು.

(ತತ್ಪುರುಷಾಯ -ತಸ್ಯ—ಮಹಾ ಪುರುಷನಾದ ಅಂತಹ ಶ್ರೀಮನ್ನಾರಾಯಣನಿಗೆ, ಪುರುಷಾಯ—ಶೇಷ ಭೂತನಾದ, ಸುವರ್ಣಪಕ್ಷಾಯ—ಶ್ರೇಷ್ಠವಾದ ವರ್ಣವುಳ್ಳ ಪಕ್ಷಗಳಿಂದ ಕೂಡಿರುವ (ಪಕ್ಷಗಳೆಂದರೆ ರೆಕ್ಕೆಗಳು) ಗರುತ್ಮಂತನನ್ನು, ಧೀಮಹಿ-ಧ್ಯಾನಿಸುವೆವು, ನಃ—ನಮಗೆ, ಗರುಡಃ—ಗರುತ್ಮಂತನು, ತತ್—ಅಂತಹ ನಾರಾಯಣ ಧ್ಯಾನವನ್ನು, ಪ್ರಚೋದಯಾತ್—ಪ್ರೇರಿಸಲಿ ಅಥವಾ ಕೈಕೂಡುವಂತೆ ಮಾಡಲಿ)

ವೇದಾತ್ಮನಾದ ಈ ಗರುತ್ಮಂತನ ತತ್ವವು ಸಾವರ್ಣ ಸೂಕ್ತಾದಿಗಳಲ್ಲಿ ಕಾಣಲ್ಪಡುವುದು. ॥೭೯॥

# (೮೦ನೇ ನಾಮವು) ಕ್ರಮಃ,

## ಓಮ್ ॥ ಕ್ರಮಾಯನಮಃ.

(ಶಂ॥ ಮ॥ ಭಾ) "ಕ್ರಾಂತೇ ವಿಷ್ಣುಂ" ಎಂಬ ಮನು ವಚನ ವನ್ನನುಸರಿಸಿ ಕ್ರಮಣವಿಂದಲಾದರೂ (ಶಂ) ಕ್ರಮಹೇತುವಾಗಿರುವುದ ರಿಂದಲಾದರೂ "ಕ್ರಮಃ" ಎನ್ನಲ್ಪಡುವನು.

("ಕ್ರಮುಪಾದ ವಿಕ್ಷೇಪೇ" ಎಂಬ ಧಾತುವನ್ನನುಸರಿಸಿ ಈ ನಾಮವು ವಿಷ್ಣುವು ತನ್ನ ಪಾದಗಳಿಂದ ಭೂವ್ಯಾಕಾಶವನ್ನೂ ಆಕ್ರಮಿಸಿದ ತ್ರಿವಿಕ್ರಮಾವತಾರ ವೃತ್ತಾಂತ ವನ್ನು ಬೋಧಿಸುವುದೆಂದರಿಯಬೇಕು.)

( ವಿ ॥ ಭಾ ) ಇಂತಹ ನಿತ್ಯವಿಭೂತಿಯುಳ್ಳವನಾಗಿರುವುದರಿಂದ ಅತ್ಯಂತವಾಗಿ ಸ್ಫೀತನಾದವನು. ಸ್ಫೀತನೆಂದರೆ ತುಂಬಿದವನು ಪರಿ ಪೂರ್ಣನೆಂದರ್ಥವು. ॥೮೦॥

# (೮೧ನೇ ನಾಮವು) ಅನುತ್ತಮಃ,

## ಓಮ್॥ ಅನುತ್ತಮಾಯನಮಃ.

ಶಂ॥ ಮ) ಯಾವ ಪರಮಪುರುಷನಾದ ವಿಷ್ಣುವಿಗಿಂತಲೂ ಶ್ರೇಷ್ಠವಾದ ಬೇರೊಂದು ವಸ್ತುವಿಲ್ಲವೋ ಅಂತವನು "ಅನುತ್ತಮಃ" ಎನ್ನಲ್ಪಡುವನು. ಇದಕ್ಕೆ (ವಿ) "ತಸ್ಮಾದ್ಧಾನ್ಯಂ ನ ಪರಃ ಕಿಂಚ ನಾಸ ॥ (೨ನೇ ಅಷ್ಟಕ॥ ೮ನೇ ಪ್ರ॥ ೯ನೇ ಅನು) ತೇನಾರ್ಹತಿ ಬ್ರ ಹ್ಮಣಾಸ್ಪರ್ಧಿತುಂಕಃ ॥ ತೇನಕೋರ್ಹತಿ ಸ್ಪರ್ಧಿತುಂ ॥ ( ೨ನೇ ಅಷ್ಟ ॥ ೭ನೇ ಪ್ರ) ಮತ್ತಃ ಪರತರಂ ನಾನ್ಯತ್ಕಿಂಚಿದಸ್ತಿ ಧನಂಜಯ" (ಗೀ ೭॥ ೭) "ಪರಂಹ್ಯಪರ ಮೇತಸ್ಮಾ ದ್ವಿಶ್ವರೂಪಾ ನ್ನ ವಿದ್ಯತೇ" ಎಂತಲೂ; (ಶಂ॥ ಮ) "ಯಸ್ಮಾತ್ಪರಂ ನಾ ಪರಮಸ್ತಿ ಕಿಂಚಿತ್" (ಯಾಜ್ಞೋಕ್ತ್ಯಪ॥ ೧೨) "ನತ್ವತ್ಸಮೊ ಸ್ತ್ಯಭ್ಯಧಿಕಃ ಕುತೋನ್ಯಃ" (ಗೀ॥ ೧೧॥ ೪೩) ಇತ್ಯಾದಿ ಪ್ರಮಾಣಗಳನ್ನು ಉದಹರಿಸಿರುತ್ತಾರೆ. ॥೮೧॥

(ತಸ್ಮಾದ್ಧಾನ್ಯಂ ಎಂಬ ಶ್ರುತಿಗೆ ಆ ಪರಮಪುರುಷನಿಗಿಂತಲೂ ಶ್ರೇಷ್ಠವಾದ ಬೇರೊಂದು ವಸ್ತುವಿರಲಿಲ್ಲವೆಂದರ್ಥವು ಅಂತಹ ಪರಬ್ರಹ್ಮನೊಡನೆ ದ್ವೇಷಿಸುವುದಕ್ಕೆ ಯಾವನು ತಾನೇ ಸಮರ್ಥನಾಗುವನೆಂದು 'ತೇನಾರ್ಹತಿ' ಎಂಬ ಶ್ರುತ್ಯರ್ಥವು ಅವ

ನನ್ನು ದ್ವೇಷಿಸುವುದಕ್ಕೆ ಯಾವನು ಅರ್ಹನಾಗುವುನೆಂದು 'ತೇನಕಃ' ಎಂಬ ಶ್ರುತ್ಯರ್ಥವು. ನನಿಗಿಂತಲೂ ಶ್ರೇಷ್ಠವಾದ ಬೇರೊಂದು ವಸ್ತುವಿಲ್ಲ ಎಲೈ ಅರ್ಜುನನೆ? ಎಂದು ಗೀತಾ ವಚನಾರ್ಥವು ಪರಮಿತಿ = ಶ್ರೀಮಹಾವಿಷ್ಣುವೇ ಸರ್ವರಿಗಿಂತಲೂ ಶ್ರೇಷ್ಠನಾಗಿರುವುದರಿಂದ ವಿಶ್ವರೂಪನಾದ ಇವನಿಗಿಂತಲೂ ಶ್ರೇಷ್ಠವಾದ ಬೇರೊಂದು ವಸ್ತುವಿಲ್ಲವು. ಸರ್ವವೂ ಇವನಿಗಿಂತಲೂ ನಿಕೃಷ್ಟವಾದದ್ದೇ ಸರಿ ಯಸ್ಮಾದಿತಿ = ಯಾವ ಪರಮಪುರುಷನಿಗಿಂತಲೂ ಶ್ರೇಷ್ಠವಾದ ಬೇರೊಂದು ವಸ್ತುವಿಲ್ಲವೊ; ಇರುವುದೆಲ್ಲವೂ ಇವನಿಗಿಂತಲೂ ನಿಹೀನವಾಗಿಯೇ ಇರುವುದು. ನತ್ವತ್ಸಮೋಸ್ತಿ = ನಿನಿಗೆ ಸಮವಾದವರೆ ಇಲ್ಲವು, ಹೀಗಿರುವಲ್ಲಿ ನಿನಿಗಿಂತಲೂ ಅಧಿಕವಾದ ಬೇರೊಬ್ಬನು ಯೆಲ್ಲಿ? ಎಂದೀ ಪ್ರಮಾಣಾರ್ಥವು)

## (೮೨ನೇ ನಾಮವು) ದುರಾಧರ್ಷಃ,
## ಓಮ್|| ದುರಾಧರ್ಷಾಯನಮಃ.

(ಶಂ|| ಮ|| ಭಾ) ದೈತ್ಯರೇ ಮೊದಲಾದವರಿಂದ ಧರ್ಷಣಮಾಡುವುದಕ್ಕೆ (ಬೆದರಿಸುವುದಕ್ಕೆ) ಅಶಕ್ಯನಾದವನು "ದುರಾಧರ್ಷಃ" ಎನ್ನಲ್ಪಡುವನು.

(ವಿ|| ಭಾ) ಗಾಂಭೀರ್ಯಾತಿಶಯದಿಂದ ಸಮುದ್ರದಂತೆ ಯಾರಿಂದಲೂ ತಿರಸ್ಕರಿಸುವುದಕ್ಕೆ ಆಗದವನು "ದುರಾಧರ್ಷಃ" ಎನ್ನಲ್ಪಡುವನು. ಇದಕ್ಕೆ (ಛಾಂದೊ|| ೩|| ೧೪|| ೨) "ಮನೊಮಯಃ ಪ್ರಾಣಶರೀರೊ ಭಾರೂಪ ಸ್ಸತ್ಯ ಸಂಕಲ್ಪಃ | ಆಕಾಶಾತ್ಮಾ ಸರ್ವ ಕರ್ಮಾ ಸರ್ವ ಗಂಧ ಸರ್ವ ರಸ ಸ್ಸರ್ವಮಿದಮಭ್ಯಾಕ್ತೋಽವಾಕ್ಯನಾದರಃ || ಗಂಭೀರಃ ಪರಮೋದೇವಃ || ಮಹೋದಧಿಮಿವಾಕ್ಷೋಭ್ಯಂ|| ಗಾಂಭೀರ್ಯಾ ತ್ಸಾಗರೊಪಮಂ" ಇತ್ಯಾದಿ ಶ್ರುತಿ ಸ್ಮೃತಿಗಳು ಆಧಾರಗಳಾಗಿರುವುವು.

ಆದರೆ ಇದುವರಿವಿಗೂ ಹೇಳಿರುವ ಈ ಘಟ್ಟದಲ್ಲಿ ನಿಷ್ಕೃಷ್ಟವಾಗಿ ವಿರ್ಶಿಟ್ಟ ಅರ್ಥವೇನೆಂದರೆ ಅದನ್ನು ವಿವರಿಸುವೆವು. ಪೂರ್ವೋಕ್ತವಾದ ಶ್ರುತಿ ಸ್ಮೃತಿಯೇ ಮೊದಲಾದ ಅನೇಕ ಸಹಸ್ರ ವಚನಗಳಿಂದ (ಇಲ್ಲಿ ಉದಾಹರಿಸಲ್ಪಟ್ಟ "ತದ್ವಿಷ್ಣೋಃ ಪರಮಂ ಪದಂ" (ಪು|| ಸೂ|| ೧೪) ಇತ್ಯಾದಿ ವಚನಗಳಿಂದ) ಉದ್ಘೋಷಿಸಲ್ಪಟ್ಟದ್ದಾಗಿಯೂ ಕಾಲಾಧೀನವಾಗದೇ ಇರುವುದರಿಂದ ವಿಕಾರನಾಶಾದಿಗಳ್ಯಾವವೂ ಇಲ್ಲದೆ ತಮಶ್ಶಬ್ದವಾಚ್ಯವಾದ ಪ್ರಕೃತಿಗಿಂತಲೂ ಮೇಲಾದ ಪ್ರದೇಶದಲ್ಲಿ ನಿತ್ಯವಾಗಿಯೂ, ಪುನರಾ

ವೃತ್ತಿರಹಿತವಾಗಿಯೂ, ಭಗವತ್ಸ್ವರೂಪದಂತೆ ಪ್ರಕಾಶಿಸುತ್ತಲೂ ಇರುವ ಪರಮಪದವೆನ್ನಲ್ಪಡುವ ಸ್ಥಾನ ವಿಶೇಷದಲ್ಲಿ ಶ್ರೀದೇವಿ ಭೂದೇವಿಗಳೆಂಬ ದಿವ್ಯ ಮಹಿಷಿಗಳೊಡನೆ ಕೂಡಿ ಕೌಷೀತಕೀ ಬ್ರಾಹ್ಮಣಾದಿಗಳಲ್ಲಿ ಹೇಳಲ್ಪಡುವ ಪರ್ಯಂಕವಿದ್ಯಾ ಕ್ರಮದಿಂದ ರತ್ನಮಯವಾದ ದಿವ್ಯಾಸ್ಥಾನದಲ್ಲಿ ದಿವ್ಯವಾದ ರತ್ನ ಪರ್ಯಂಕದಮೇಲೆ ಇದ್ದುಕೊಂಡು ಅನಂತ ಗರುಡ ವಿಷ್ವಕ್ಸೇನಾದಿಗಳಾದ ನಿತ್ಯಸೂರಿಗಳಿಂದ ಯಾವಾಗಲೂ ಶುಶ್ರೂಷಿಸಲ್ಪಟ್ಟ ಚರಣಾರವಿಂದಗಳುಳ್ಳವನಾಗಿರುವ ಪರಮಪುರುಷನ ಸಕಲ ವೇದ ವೇದಾಂತ ರಹಸ್ಯ ಭೂತವಾದ ಸರ್ವೈಶ್ವರ್ಯವು ವಿವರಿಸಲ್ಪಟ್ಟಂತೆ ಆಯಿತು. ಈ ಅರ್ಥವು ಶೈವಪುರಾಣದಲ್ಲಿ "ವೈಕುಂಠೇತು ಪರೇಲೋಕೇ ಶ್ರಿಯಾಸಾರ್ಧಂ ಜಗತ್ಪತಿಃ | ಆಸ್ತೇ ವಿಷ್ಣುರಚಿಂತ್ಯಾತ್ಮಾ ಭಕ್ತೈರ್ಭಾಗವತೈಸ್ಸಹ॥" ಇತ್ಯಾದಿಗಳಿಂದ ವಿವರಿಸಲ್ಪಟ್ಟಿರುವುದು. ॥೮೨॥

(ವೈಕುಂಠವೆಂಬ ಶ್ರೇಷ್ಠವಾದ ಲೋಕದಲ್ಲಿ ಶ್ರೀದೇವಿಯೊಡನೆ ಜಗತ್ಪತಿಯಾದ ಶ್ರೀಮಹಾವಿಷ್ಣುವು ಭಕ್ತಿ ಪ್ರಪತ್ತಿಗಳೆಂಬ ಉಪಾಯಗಳಿಂದ ಮುಕ್ತರಾದ ಆತ್ಮರುಗಳೊಡನೆ ಕೂಡಿರುವನೆಂದೀ ಪ್ರಮಾಣಾರ್ಥವು)

## (೮೩ನೇ ನಾಮವು) ಕೃತಜ್ಞಃ,
## ಓಮ್ ॥ ಕೃತಜ್ಞಾಯನಮಃ.

(ಶಂ॥ ಮ) ಮಾಡಲ್ಪಟ್ಟ ಪ್ರಾಣಿಗಳ (ಶಂ॥ ಪುಣ್ಯಾಪುಣ್ಯಾತ್ಮಕಗಳಾದ) ಕರ್ಮಗಳನ್ನು ತಿಳಿಯುವಂತವನು "ಕೃತಜ್ಞಃ" ಎನ್ನಲ್ಪಡುವನು. (ಅಥವಾ॥ ಶಂ) ಅತ್ಯಲ್ಪವಾದ ಪತ್ರ ಪುಷ್ಪ ಫಲಾದಿಗಳನ್ನು ತನಿಗೆ ಸಮರ್ಪಣ ಮಾಡುವಂತವರಿಗೂ ಕೂಡ ಮೋಕ್ಷವನ್ನು ಕೊಡುವಂತವನು "ಕೃತಜ್ಞಃ" ಎನ್ನಲ್ಪಡುವನು. (ವಿ) ಮಾಡಿದ್ದನ್ನು ತಿಳಿಯುವಂತವನು "ಕೃತಜ್ಞಃ" ಎನ್ನಲ್ಪಡುವನು. ಇದಕ್ಕೆ ಶ್ರೀಗೀತೆಯಲ್ಲಿ "ಅಪಿಚೇತ್ಸುದುರಾಚಾರೋ ಭಜತೆ ಮಾಮನನ್ಯಭಾಕ್| ಸಾಧುರೇವ ಸಮಂತವ್ಯ ಸ್ಸಮ್ಯಗ್ವ್ಯವಹಿತೋ ಹಿಸಃ" (೯॥ ೩೦) ಎಂಬದಾಗಿ ಪ್ರಮಾಣವಿರುವುದು. ಮತ್ತು ಇಂತಹ ಪತ್ರ ಪುಷ್ಪಾದಿ ಸಾಮಾನ್ಯವಸ್ತು ಸಮರ್ಪಣವನ್ನು ಕೂಡ ಮಹತ್ತಾಗಿ ಭಾವಿಸಿ ಇದಕ್ಕೆ ಅನುರೂಪವಾದ ಪ್ರತ್ಯುಪಕಾರವು ಇವನಿಗೆ ನಾನೇನು ಮಾಡುವೆನು ? ಅಂತಹ ಪ್ರತ್ಯುಪಕಾರವು

ಯಾವದೂ ಇಲ್ಲವೆಂದು ಚಿಂತಿಸುವನೆಂತಲೂ ತಿಳಿಯಬೇಕು. ಇದಕ್ಕೂ "ಕದಂಚಿದುಪಕಾರೇಣ ಕೃತೇನೈಕೇನ ತುಷ್ಯತಿ" (ಶ್ರೀರಾ|| ಅ||ಕಾಂ) ಎಂತಲೂ; "ಗೋವಿಂದೇತಿ ಯದಾಕ್ರಂದ ತ್ಕೃಷ್ಣಾಮಾಂ ದೂರವಾಸಿನಂ | ಋಣಂ ಪ್ರವೃದ್ಧಮಿವಮೇ ಹೃದಯಾನ್ನಾಪ ಸರ್ಪತಿ" (ಭಾರ|| ಉ|| ೫೮|| ೨೨) ಎಂತಲೂ ಪ್ರಮಾಣವಿರುವುದು. ||೮೩||

(ಸಾಮಾನ್ಯವಾಗಿ ಮಾಡಲ್ಪಟ್ಟ ಉಪಕಾರ ಭಾವನಾ ಎಂಬ ಒಂದು ನೆಪವನ್ನೇ ಮಹೋಪಕಾರವನ್ನಾಗಿ ಭಾವಿಸಿ ಸಂತೋಷಿಸತಕ್ಕವನು.

ದೂರವಾಸಿಯಾದ ನನ್ನನ್ನು ಕುರಿತು ದ್ರೌಪದೀದೇವಿಯು 'ಹಾ ಕೃಷ್ಣಾ' ಎಂದು ಕೂಗಿಕೊಂಡ ಮಹೋಪಕಾರಕ್ಕೆ ಅವಳಿಗೆ ನಾನು ವಸ್ತ್ರನಿರ್ಮಾಣಾದಿ ರೂಪದಿಂದ ಮಾನ ಸಂರಕ್ಷಣೆ ಮಾಡಿರುವುದೆಂಬ ಅತ್ಯಲ್ಪವಾದ ಪ್ರತ್ಯುಪಕಾರವು ಸಾಲದೆ ಇರುವುದರಿಂದ ಬಡ್ಡಿ ಹೆಚ್ಚುತಲಿರುವ ಸಾಲದಂತೆ ನನ್ನ ಮನಸ್ಸಿನಲ್ಲಿ ಇಂತವಳಿಗೆ ಯಾವ ಪ್ರತ್ಯುಪಕಾರವನ್ನು ಮಾಡಿ ತೀರಿಸುವೆನೆಂದು ನೆನೆಯುತಲಿರುವನು ಕೃಷ್ಣನೆಂದರ್ಥವು.

(ಎಂತಹ ದುರಾಚಾರನಾಗಿದ್ದರೂ ಅನನ್ಯ ಚಿತ್ತನಾಗಿ (ಎಂದರೆ ತಾನು ಮಾಡುವ ಭಜನಕ್ಕೆ ದೇವತಾಂತರವೂ ಪ್ರಯೋಜನಾಂತರವೂ ವಿಷಯವೆಂದು ಭಾವಿಸದೆ ಕೇವಲ ನನ್ನಲ್ಲಿಲೀನವಾದ ಮನಸ್ಸುಳ್ಳವನಾಗಿ) ನನ್ನನ್ನು ಭಜನೆಮಾಡುವನೊ ಅಂತವನು ಸತ್ಪುರುಷನೆಂತಲೆ ಭಾವಿಸಲ್ಪಡತಕ್ಕವನಾಗಿರುವನು. ಏತಕ್ಕೆಂದರೆ ಅವನು ಅಂತಹ ದೃಢವಾದ ನಿಶ್ಚಯವುಳ್ಳವನಾಗಿರುವುದರಿಂದ ಈ ರೀತಿಯಿಂದ ಹೇಳಲ್ಪಡುವನು.)

## (೮೪ನೇ ನಾಮವು) ಕೃತಿಃ,

### ಓಮ್ || ಕೃತಯೇನಮಃ.

(ಶಂ|| ಭಾ) ಪುರುಷನ ಪ್ರಯತ್ನವಾದರೂ ಕ್ರಿಯೆಯಾದರೂ "ಕೃತಿಃ" ಎನ್ನಲ್ಪಡುವುದು. ಪರಮಾತ್ಮನು ಸರ್ವಾತ್ಮಕನಾಗಿರುವುದರಿಂದಲಾದರೂ ಆಯಾ ವಸ್ತುವೇ ಮೊದಲಾದವುಗಳಿಗೆ ಆಧಾರಭೂತನಾಗಿರುವುದರಿಂದಲಾದರೂ ಈ ಅರ್ಥವು ಹೇಳಲ್ಪಡುವುದು. ಜಗದ್ವ್ಯಾಪಾರಗಳಿಂದ ಕಾಣಲ್ಪಡುವನಾದಕಾರಣದಿಂದಲೂ "ಕೃತಿಃ" ಎನ್ನಲ್ಪಡುವನು.

(ವಿ || ಭಾ) ಕೃತಿಃ–ಮಾಡಿಸುವಂತವನು. ಎಂದರೆ ಪ್ರಾಣಿಗಳು ಮಾಡುವ ಸುಕೃತವೂ ಅವನ ಪ್ರಸಾದಾತಿಶಯದಿಂದ ಬರುವುದೆಂದರ್ಥವು. ಇದಕ್ಕೂ "ಏಷ ಏವ ಸಾಧುಕರ್ಮಕಾರಯತಿ ತಂ ಯಮೇಭ್ಯೋಲೋಕೇಭ್ಯ ಉನ್ನಿನೀಷತಿ" ಇತ್ಯಾದಿ ಶ್ರುತಿ ಪ್ರಮಾಣಗಳಿರುವುವು. (ಕೌಷೀ|| ೩|| ೯)

(ಯಾವನಿಗೆ ಸದ್ಗತಿಯನ್ನು ಕೊಡಬೇಕೆಂಬದಾಗಿ ಪರಮಪುರುಷನು ನೆನೆಯುವನೊ ಅಂತವನಿಂದ ಸತ್ಕರ್ಮಗಳನ್ನು ಮಾಡಿಸುತ್ತಾನೆಂದರ್ಥವು)

(ಮ) ಸಮಸ್ತವನ್ನು ಮಾಡುವಂತವನು " ಕೃತಿಃ " ಎನ್ನಲ್ಪಡುವನು. ॥ ೮೪ ॥

## (೮೫ನೇ ನಾಮವು) ಆತ್ಮವಾನ್,

### ಓಮ್ ॥ ಆತ್ಮವತೇನಮಃ.

(ಶಂ॥ ಭಾ) " ಸ ಭಗವಃ ಕಸ್ಮಿನ್ ಪ್ರತಿಷ್ಠಿತಃ? ಸ್ವೇಮಹಿಮ್ನಿ" ಎಂಬ ಶ್ರುತ್ಯನುಸಾರವಾಗಿ ತನ್ನ ಮಹಿಮೆಯಲ್ಲಿ ಪ್ರತಿಷ್ಠಿತನಾಗಿರುವುದರಿಂದ " ಆತ್ಮವಾನ್ " ಎನ್ನಲ್ಪಡುವನು

(ವಿ॥ ಭಾ) ಆತ್ಮಗಳುಳ್ಳವನು " ಆತ್ಮವಾನ್ " ಎನ್ನಲ್ಪಡುವನು. ಎಂದರೆ ಅಂತಹ ಸುಕೃತಗಳನ್ನು ಮಾಡತಕ್ಕ ಆತ್ಮಗಳ ಸ್ವರೂಪ ಸ್ಥಿತಿ ಪ್ರವೃತ್ತಿಗಳು ಇವನ ಅಧೀನಗಳಾಗಿರುವುವೆಂದರ್ಥವು.

(ಮ) ಧೈರ್ಯಶಾಲಿಯು ಅಥವಾ ಲೋಕ ವಿಲಕ್ಷಣವಾದ ಶರೀರವುಳ್ಳವನು " ಆತ್ಮವಾನ್ " ಎನ್ನಲ್ಪಡುವನು. ॥೮೫॥

ಈ ರೀತಿಯಾಗಿ ಈ (೯)ನೇ ಶ್ಲೋಕದಲ್ಲಿ ಪ್ರತಿಪಾದಿಸಲ್ಪಟ್ಟ ಹನ್ನೊಂದು ನಾಮಗಳಿಗೂ

" ಈಶನಾ ದ್ರಮಣಾಚ್ಚಾಪಿ " ಈಶ್ವರಃ " (೭೫) ಪರಿಕೀರ್ತಿತಃ। ವಿಕ್ರಮಂ ಪೌರುಷಂ ಪ್ರೋಕ್ತಂ ತದ್ವತ್ತ್ವಾ " ದ್ವಿಕ್ರಮೀ " (೭೬) ಬುಧೈಃ ॥ ಪೌರುಷಾನುಗುಣಂ ಶಾರ್ಙ್ಗಂ ಯಸ್ಯ " ಧನ್ವೀ " (೭೭) ಸ ಕಥ್ಯತೇ । ನಿಸ್ಸೀಮ ಭೂತಾನು ಗುಣ ನಿತ್ಯ ಸರ್ವಜ್ಞ ಲಕ್ಷಣಾ। ಮೇಧಾ ಯಸ್ಯಾಸ್ತಿ ಸಪ್ರೋಕ್ತೋ "ಮೇಧಾವೀ" (೭೮) ತಿವಿಚಕ್ಷಣೈಃ॥ ಗಮನಂ ಪಕ್ಷಿರಾಜೇನ ಯಸ್ಯ " ವಿಕ್ರಮ" (೭೯) ಉಚ್ಯತೆ। ಕ್ರಮಣಾತ್ಕ್ರಮಹೇತುತ್ವಾ " ತ್ಕ್ರಮ " (೮೦) ಏವ ಉದಾಹೃತಃ ॥ ಉತ್ತಮೊ ನಾಸ್ತಿ ಯಸ್ಮಾತ್ಸ " ಅನುತ್ತಮ " (೮೧) ಉದಾಹೃತಃ । ಆಪಾಂನಿಧಿ ಪದಕ್ಷೋಭ್ಯೋ "ದುರಾಧರ್ಷ" (೮೨) ಇತೀರಿತಃ ॥ ದುರ್ವಿಜ್ಞೇಯ ಗತಿ ರ್ಯಸ್ಮಾ ' ದ್ದುರಾಧರ್ಷಃ ' ಪ್ರಕೀರ್ತಿತಃ । ಪ್ರಾಣಿಭಿರ್ಯತ್ಕೃತಂ ಕರ್ಮ ತದಾಜ್ಞಾತ್ವಾ ಫಲದೋ ಯತಃ । ಪತ್ರ ಪುಷ್ಪಾದಿ ನಾತುಷ್ಟಃ " ಕೃತ

ಜ್ಞೋ" (೮೩) ಮೋಕ್ಷದಾನತಃ ‖ ಯಸ್ಮಾತ್ಪ್ರಸನ್ನಾತ್ಸುಕೃತಂ ತೇಷಾಂ ಸ "ಕೃತಿ" ರಿಷ್ಯತೇ | ಪ್ರಯತ್ನೇನವಾ ಕ್ರಿಯಾವಾಥ "ಕೃತಿ" ರುಕ್ತಾ ಕ್ರಿಯಾವತಾಂ ‖ ತೇಷಾಮಾತ್ಮ ಶರೀರಾದಿ ನಿರಾಸಾದಧವಾ "ಆತ್ಮವಾನ್" (೮೫) | ಸ್ವೇಮಹಿಮ್ನಿ ಪ್ರತಿಷ್ಠಾನಾ 'ದಾತ್ಮವಾ' ನಭಿಧೀಯತೇ ‖ " ಎಂಬ ವಿವೃತಿಯನ್ನು ಕಾಣಬಹುದು.

ಮೂ‖ ಸುರೇಶ ಶ್ಶರಣಂ ಶರ್ಮ ವಿಶ್ವರೇತಾಃ ಪ್ರಜಾಭವಃ ಅಹ ಸ್ಸಂವತ್ಸರೋ ವ್ಯಾಲಃ ಪ್ರತ್ಯಯ ಸ್ಸರ್ವ ದರ್ಶನಃ ‖೧೦‖

(೮೬ನೇ ನಾಮವು) ಸುರೇಶಃ,

ಓಮ್ ‖ ಸುರೇಶಾಯನಮಃ.

(ಶಂ‖ ಭಾ) ಸುರೇಶಃ-ದೇವತೆಗಳಿಗೆ ಈಶನಾದವನು, (ಸೂಪಪದೋವಾ ರಾಧಾತುಃ) ಶೋಭನಗಳಾದ ಇಷ್ಟಾರ್ಥಗಳನ್ನು ಕೊಡುವಂತವರಿಗೆ ಪ್ರಭುವಾದವನೆಂತಲಾದರೂ ಆಗಬಹುದು.

(ವಿ‖ ಭಾ) ಸುರೇಶಃ-ದೇವನಾಥನು, ಎಂದರೆ ಸಂಸಾರಿಗಳಲ್ಲಿ ಅಲ್ಪ ಫಲಗಳನ್ನ ಪೇಕ್ಷಿಸುವ ಬ್ರಹ್ಮಾದಿಗಳಿಗೆ ಅವರವರ ಅಪೇಕ್ಷಿತಫಲಗಳನ್ನು ಕೊಟ್ಟು ರಕ್ಷಿಸುವಂತವನೆಂದರ್ಥವು. ಈ ಪ್ರಕಾರವೇ ಶ್ರೀವಿಷ್ಣು ಪುರಾಣದಲ್ಲಿ "ಯಸ್ಯಪ್ರಸಾದಾದಹಮಚ್ಯುತಸ್ಯ ಭೂತಃ ಪ್ರಜಾಸರ್ಗ ಕರೋಂತಕಾರೀ| ಕ್ರೋಧಾಚ್ಚ ರುದ್ರಃ" (೪‖ ೧‖ ೮೫) ಎಂಬದಾಗಿ ಚತುರ್ಮುಖನೇ ಹೇಳಿರುವನು. ‖೮೬‖

(ಯಾವ ಪರಮಪುರುಷನ ಅನುಗ್ರಹ ಸ್ವಭಾವದಿಂದುಂಟಾಗಿರುವ ನಾನು ಪ್ರಜಾಸೃಷ್ಟಿಯನ್ನು ಮಾಡತಕ್ಕ ಅಧಿಕಾರಿಯಾಗಿರುವೆನೊ, ಪರಮಾತ್ಮನ ಕ್ರೋಧದಿಂದುಂಟಾಗಿರುವ ರುದ್ರನು ಪ್ರಜಾನಾಶಕನಾಗಿರುವನೊ, ಎಂಬದಾಗಿ ಬ್ರಹ್ಮ ರುದ್ರರಿಗೆ ಅಪೇಕ್ಷಿತವಾದ ಸೃಷ್ಟಿ ಸಂಹಾರಾಧಿಕಾರವನ್ನು ಪರಮಪುರುಷನು ಕೊಟ್ಟಿರುವುದಕ್ಕೆ ಪ್ರಮಾಣ ಭೂತವಾಗಿರುವ ಶ್ರೀವಿಷ್ಣು ಪುರಾಣ ವಚನಾರ್ಥವು)

(೮೭ನೇ ನಾಮವು) ಶರಣಂ,

ಓಮ್ ‖ ಶರಣಾಯನಮಃ.

( ಶಂ॥ ಮ ) ನೀಚೋಚ್ಚಾದಿ ತಾರತಮ್ಯವಿಲ್ಲದೆ ಆರ್ತರಾದ ಸರ್ವರಿಗೂ ರಕ್ಷಕನಾದವನು “ ಶರಣಂ ” ಎನ್ನಲ್ಪಡುವನು. ಎಂದರೆ ತಾಪತ್ರಯಾದಿ ದುಃಖಗಳಿಂದ ಪೀಡಿತರಾದವರಿಗೆ ದುಃಖಗಳನ್ನು ಪರಿಹರಿಸಿ ರಕ್ಷಕನಾಗುವಂತವನೆಂದರ್ಥವು.

ಭಾ) ಶರಣಂ-ಉಪಾಯವು. ಎಂದರೆ ಸರ್ವಪ್ರಾಣಿಗಳಿಗೂ ನಿರುಪಾಧಿಕವಾದ ಉಪಾಯವಾಗಿರುವಂತವನೆಂದರ್ಥವು (ಉಪಾಯವೆಂದರೆ ಅಪೇಕ್ಷಿಸಲ್ಪಡುವ ಫಲಕ್ಕೆ ಸಾಧನಭೂತನಾಗಿರುವಂತವನು) ಇದಕ್ಕೆ “ ತಗ್ಂಹ ದೇವ ಮಾತ್ಮ ಬುದ್ಧಿ ಪ್ರಕಾಶಂ ಮುಮುಕ್ಷುರ್ವೈ ಶರಣ ಮಹಂ ಪ್ರಪದ್ಯೇ ” (ಶ್ವೇ॥ ೬॥ ೧೮) ಎಂಬದಾಗಿ ಶ್ವೇತಾಶ್ವತರಾದ್ಯುಪನಿಷತ್ತುಗಳಲ್ಲಿ “ಮೋಕ್ಷಾರ್ಥಿಯಾದ ನಾನು ನಿನ್ನನ್ನೇ ಉಪಾಯವನ್ನಾಗಿ ಅಧ್ಯವಸಾನಮಾಡುವೆನೆಂದು ” ಜೀವಾತ್ಮನ ಅಧ್ಯವಸಾಯವನ್ನು ತೋರಿಸುವ ಈ ವಾಕ್ಯದಲ್ಲಿ ಪರಮಾತ್ಮನ ಉಪಾಯತ್ವವು ಸ್ಪಷ್ಟವಾಗಿರುವುದು. “ ನಿವಾಸ ಶ್ಶರಣಂ ಸುಹೃದ್ಗತಿ ರ್ನಾ ರಾಯಣಃ ॥ (ಸುಬಾ॥ ೬) ಶರಣ್ಯಾಂ ಶರಣಂಚತ್ವಾ ಮಾಹುರ್ದಿವ್ಯಾ ಮಹರ್ಷಯಃ'' (ಶ್ರೀರಾ॥ ಯು॥ ೧೨೦) ಇತ್ಯಾದಿಗಳಲ್ಲಿಯೂ ಈ ಅರ್ಥವು ಸ್ಪಷ್ಟವು. ಈ ಪ್ರಮಾಣಾರ್ಥವು ಸ್ಪಷ್ಟವಾಗಿರುವುದು. ॥೮೭॥

## (೮೮ನೇ ನಾಮವು) ಶರ್ಮ,

### ಓಮ್॥ ಶರ್ಮಣೇನಮಃ.

(ಶಂ ॥ ಭಾ) ಪರಮಾನಂದ ರೂಪನಾಗಿರುವುದರಿಂದ (ಮ) ಸುಖ ರೂಪನಾಗಿರುವುದರಿಂದ “ ಶರ್ಮ ” ಎನ್ನಲ್ಪಡುವನು.

(ವಿ॥ ಭಾ) ಶರ್ಮ-ಆನಂದ ರೂಪನು, ಸುಖರೂಪವಾದ ಪರಮಪುರುಷಾರ್ಥವೆನ್ನಲ್ಪಡುವನು. ಇದಕ್ಕೆ ಛಾಂದೋಗ್ಯಾದಿಗಳಲ್ಲಿ “ ಸರ್ವಕರ್ಮ ಸರ್ವ ಗಂಧ ಸ್ಸರ್ವ ರಸಃ'' ಇತ್ಯಾದಿ ಪ್ರಮಾಣಗಳಿರುವುವು. ಇಲ್ಲಿ 'ಸರ್ವ ರಸಃ ' ಎಂಬದಾಗಿ ಹೇಳಿರುವುದರಿಂದ ರಸ ಶಬ್ದವು ಸುಖಾಪರ ಪರ್ಯಾಯವಾಗಿ ಸುಖರೂಪವಾದ ಪರಮಪುರುಷಾರ್ಥವೆನ್ನಲ್ಪಡುವ ಅರ್ಥಬೋಧಕವಾಗುವುದೆಂದರಿಯಬೇಕು. ॥೮೮॥

## (೪೯ನೇ ನಾಮವು) ವಿಶ್ವರೇತಾಃ,
## ಓಮ್ ॥ ವಿಶ್ವರೇತಸೇನಮಃ.

(ಶಂ॥ ಮ) ಪ್ರಪಂಚಕ್ಕೆ ಕಾರಣಭೂತನಾದವನು "ವಿಶ್ವರೇತಾಃ" ಎನ್ನಲ್ಪಡುವನು. (ಶಂ) ವಿಶ್ವಸ್ಯ ಕಾರಣತ್ವಾ ದ್ವಿಶ್ವರೇತಾಃ. (ಮ) ವಿಶ್ವಸ್ಯಕಾರಣಂರೇತೋ ಯಸ್ಯಸಃ.

(ವಿ॥ ಭಾ) ಇನ್ನು ಮುಂದೆ ಪರಮಪುರುಷನು ಉಪಾಯವಾಗಿರುವಿಕೆಯೂ ಉಪೇಯವಾಗಿರುವಿಕೆಯೂ ವಿಚಾರಿಸಲ್ಪಡುವುದು.(ಉಪಾಯವೆಂದರೆ ಸಾಧನವು. ಉಪೇಯವೆಂದರೆ ಹೊಂದಲ್ಪಡುವಂತವನಾಗಿರುವಿಕೆಯು) ವಿಶ್ವರೇತಾಃ-ತನಿಗಾಗಿ ಕಾರ್ಯರೂಪವಾದ ಸಕಲ ಪ್ರಪಂಚಗಳುಳ್ಳವನು. (ಪ್ರಪಂಚವನ್ನು ಕಾರ್ಯವಾಗಿ ಉಳ್ಳವನು ) ಎಂದರೆ ಸಮಸ್ತರಾದ ಪ್ರಜೆಗಳಿಗೂ ಜ್ಞಾನೇಂದ್ರಿಯ ಕರ್ಮೇಂದ್ರಿಯಾದಿಗಳಾದ ಸಮಸ್ತವನ್ನೂ ಮಾಡತಕ್ಕವನೆಂದರ್ಥವು. ಇದಕ್ಕ "ಏತಸ್ಮಾಜ್ಜಾಯತೆ ಪ್ರಾಣೊ ಮನಸ್ಸರ್ವೇಂದ್ರಿಯಾಣಿಚ | ಖಂ ವಾಯುರ್ಜ್ಯೋತಿರಾಪಃ ಪೃಥಿವೀ ವಿಶ್ವಸ್ಯಧಾರಿಣೀ ॥" ಇತ್ಯಾದಿ ಶ್ರುತಿಗಳು ಪರಮಾತ್ಮನಿಂದ ಪ್ರಾಣವೂ ಮನಸ್ಸು ಮೊದಲಾದ ಸರ್ವೇಂದ್ರಿಯಗಳೂ ಪೃಥಿವ್ಯಾದಿ ಪಂಚ ಭೂತಗಳೂ ಉತ್ಪನ್ನವಾಗುವುವೆಂದು ಹೇಳುವುವು. ॥೪೯॥

## (೫೦ನೇ ನಾಮವು) ಪ್ರಜಾಭವಃ,
## ಓಮ್ ॥ ಪ್ರಜಾಭವಾಯನಮಃ.

(ಶಂ॥ ಮ) ಸಮಸ್ತ ಪ್ರಜೆಗಳೂ ಯಾವ ಪರಮಪುರುಷನಿಂದ ಹುಟ್ಟುವುವೊ ಅವನು "ಪ್ರಜಾಭವಃ" ಎನ್ನಲ್ಪಡುವನು.

(ವಿ ॥ ಭಾ) ಪ್ರಜಾಸ್ತಸ್ಮಿನ್ ಭವಂತೀತಿ ಪ್ರಜಾಭವಃ—ಸಮಸ್ತ ಪ್ರಜೆಗಳೂ ಆ ಪರಮಾತ್ಮನಿಂದ ಕೊಡಲ್ಪಟ್ಟ ಕರಣ ಕಳೇಬರಾದ್ಯುಪಕರಣಗಳಿಂದ ಅವನಲ್ಲಿ ಅಭಿಮುಖರಾಗಿರುವುದಕ್ಕೆ ಯೋಗ್ಯರಾಗಿರುವುದರಿಂದ "ಪ್ರಜಾಭವಃ" ಎನ್ನಲ್ಪಡುವನು. ॥೫೦॥

## (೫೧ನೇ ನಾಮವು) ಅಹಃ, ಓಮ್॥ ಅಹ್ನೇನಮಃ.

(ಶಂ) ಪ್ರಕಾಶರೂಪನಾದ ಕಾರಣದಿಂದ "ಅಹಃ" ಎನ್ನಲ್ಪಡುವನು. (ಮ) 'ಅಹ ವ್ಯಾಪ್ತೌ' ಎಂಬ ಧಾತುವಿನಿಂದ ಸರ್ವ ವ್ಯಾಪಕನಾದ ಕಾರಣದಿಂದ 'ಅಹಃ' ಎನ್ನಲ್ಪಡುವನು.

(ವಿ ‖ ಭಾ) ಅಹಃ-ಹೀನನಿಲ್ಲದವನು, ಎಂದರೆ "ನಹಿ ಕಲ್ಯಾಣಕೃತ್ಕಶ್ಚಿದ್ದುರ್ಗತಿಂತಾತಗಚ್ಛತಿ" (ಗೀ‖ ೬‖ ೪೦) ಎಂಬ ವಚನಾನುಸಾರವಾಗಿ ಇವನ ವಿಷಯದಲ್ಲಿ ಸ್ವಲ್ಪಮಾತ್ರವಾದ ಸುಕೃತವನ್ನು ಮಾಡಿದರೂ ಅಂತವನು ದುರ್ಗತಿಯನ್ನು ಹೊಂದುವುದಿಲ್ಲವೆಂಬ ಅರ್ಥವು ಸಿದ್ಧವಾಗುವುದರಿಂದ ಭಗವದ್ವಿಷಯದಲ್ಲಿ ಸ್ವಲ್ಪವಾದ ಪರಿಚರಣಾದಿಗಳನ್ನು ಮಾಡಿದರೂ ಹೀನನಾಗದವನನ್ನುಳ್ಳವನು "ಅಹಃ" ಎನ್ನಲ್ಪಡುವನೆಂದರ್ಥವು. (ಅಥವಾ) ಅಹಃ-ಹಗಲಾಗಿರುವಂತವನು, ಎಂದರೆ ಅನಾದಿಯಾಗಿ ಬಂದಿರುವ ಅವಿದ್ಯಾ ಎಂಬ ನಿದ್ರೆಯಿಂದ ಬಿಡಲ್ಪಟ್ಟಿರುವಂತವನಿಗೆ ಹಗಲಾಗಿರುವಂತವನೆಂದರ್ಥವು. ಅವಿದ್ಯಾದಿಗಳಿಂದ ಬಿಡಲ್ಪಟ್ಟಿರುವಂತವರಿಗೆ ಹಗಲಿನಂತೆ ಪ್ರಕಾಶರೂಪನಾಗಿರುವನೆಂದು ತಾತ್ಪರ್ಯವು ‖೯೧‖

(ಎಲೈ ಅರ್ಜುನನೇ ? ಭಗವದ್ವಿಷಯದಲ್ಲಿ ಸ್ವಲ್ಪಮಾತ್ರವಾದ ಸುಕೃತವನ್ನು ಮಾಡಿದವನೂ ದುರ್ಗತಿಯನ್ನು ಹೊಂದುವುದಿಲ್ಲವೆಂದು (ಗೀ‖ ೬‖ ೪೦‖) ಅರ್ಥವು)

## (೯೨ನೇ ನಾಮವು) ಸಂವತ್ಸರಃ,
## ಓಮ್‖ ಸಂವತ್ಸರಾಯನಮಃ.

(ಶಂ‖ ಭಾ) ಕಾಲಸ್ವರೂಪನಾಗಿರುವ ವಿಷ್ಣುವು "ಸಂವತ್ಸರಃ" ಎನ್ನಲ್ಪಡುವನು.

(ವಿ‖ ಭಾ) ಈ ವಿಧವಾಗಿ ಅವಿದ್ಯಾದಿಗಳೆಂಬ ನಿದ್ರೆಯಿಂದ ಬಿಡಲ್ಪಟ್ಟು ಪ್ರಬುದ್ಧರಾದ ಆತ್ಮರಿಗೆ ತನ್ನ ವಿಷಯವಾದ ಬುದ್ಧಿಯನ್ನು ಕೊಟ್ಟು ಉದ್ಧರಿಸುವುದಕ್ಕಾಗಿ ಅವರಲ್ಲಿ ವಾಸಮಾಡುವಂತವನು "ಸಂವತ್ಸರಃ" ಎನ್ನಲ್ಪಡುವನು. ಈ ಅರ್ಥವು ಗೀತೆಯಲ್ಲಿಯೂ "ದದಾಮಿ ಬುದ್ಧಿಯೋಗಂತಂಯೇನ ಮಾಮುಪಯಾಂತಿತೇ" (೧೦‖ ೧೦) ಎಂಬದಾಗಿ ಹೇಳಲ್ಪಟ್ಟಿರುವುದು. "ತೇಷಾಮಹಂ ಸಮುದ್ಧರ್ತಾ" (ಗೀ‖

೧೬॥ ೭) " ಅನಯೈನಂ ಹರಿಶ್ರೇಷ್ಠ ದತ್ತಮಸ್ಯಾಭಯಂ ಮಯಾ "
(ಶ್ರೀರಾ॥ ೧೮॥ ೩೪) ಎಂತಲೂ ಹೇಳಿರುವನು.

(ಯಾವ ಬುದ್ಧಿ ಯೋಗವು ನನ್ನನ್ನು ಹೊಂದುವುದಕ್ಕೆ ಸಾಧನವಾಗಿರುವುದೊ ಅದನ್ನು ಕೊಡುವೆನೆಂದು ಗೀತಾವಚನಾರ್ಥವು. ಅಂತವರನ್ನು ನಾನು ಚನ್ನಾಗಿ ಉದ್ಧರಿಸುವೆನು (ಗೀ॥ ೧೬) ಎಲೈ ಸುಗ್ರೀವರಾಜನೇ ಈ ವಿಭೀಷನಿಗೆ ನಾನಭಯುವನ್ನು ಕೊಟ್ಟಿರುವೆನು, ಕರದುಕೊಂಡು ಬಾ ಎಂದು (ಶ್ರೀ ರಾ) ಅರ್ಥವು.

(ಮ) ಬ್ರಹ್ಮಾದಿ ದೇವತೆಗಳೆಂಬ ವತ್ಸಗಳನ್ನು (ಕರುಗಳನ್ನು) ಚನ್ನಾಗಿ ಕಾಪಾಡುವಂತವನು "ಸಂವತ್ಸರಃ" ಎನ್ನಲ್ಪಡುವನು. ॥೯೦॥

## (೯೩ನೇ ನಾಮವು) ವ್ಯಾಳಃ, ಓಮ್॥ ವ್ಯಾಳಾಯನಮಃ.

(ಶಂ॥ ಭಾ) ಮಹಾಸರ್ಪದಂತೆ ಗ್ರಹಿಸಲಶಕ್ಯನಾದವನು (ಮ) ಸರ್ಪದಂತೆ ಉಗ್ರನಾದವನು " ವ್ಯಾಳಃ " ಎನ್ನಲ್ಪಡುವನು.

( ವಿ ॥ ಭಾ ) ಹಿಂದಿನ ನಾಮದಲ್ಲಿ ಪ್ರತಿಪಾದಿತರಾದ ಅವಿದ್ಯಾದಿಗಳಿಂದ ಬಿಡಲ್ಪಟ್ಟವರಿಗೆ ಅಭಯಪ್ರದಾನವನ್ನುಮಾಡಿ ಅವರನ್ನು ತನ್ನ ಅಧೀನದಲ್ಲಿಟ್ಟುಕೊಳ್ಳುವಂತವನು " ವ್ಯಾಳಃ " ಎನ್ನಲ್ಪಡುವನು. ಲಾ ಆದಾನೆ. ವ್ಯಾಜ್ ಪೂರ್ವಃ. ॥೯೩॥

## (೯೪ನೇ ನಾಮವು) ಪ್ರತ್ಯಯಃ,
## ಓಮ್॥ ಪ್ರತ್ಯಯಾಯನಮಃ.

(ಶಂ॥ ಭಾ) " ಪ್ರಜ್ಞಾನಂ ಬ್ರಹ್ಮ " ಎಂಬ ಶ್ರುತಿ ಪ್ರಮಾಣಾನುಸಾರವಾಗಿ ಪ್ರಜ್ಞೆಯುಳ್ಳವನು "ಪ್ರತ್ಯಯಃ" ಎನ್ನಲ್ಪಡುವನು.

(ವಿ॥ ಭಾ) ಅನಂತರದಲ್ಲಿ ತನ್ನನ್ನು ನಂಬುವಂತೆ ಅವರನ್ನು ಮಾಡತಕ್ಕವನು " ಪ್ರತ್ಯಯಃ " ಎನ್ನಲ್ಪಡುವನು. ಈ ಅರ್ಥವು " ತಂ ಹ ದೇವ ಮಾತ್ಮ ಬುದ್ಧಿ ಪ್ರಕಾಶಂ (ಶ್ವೇತಾಶ್ವ॥ ೬॥ ೧೮) ಭೂಯೊ ಭೂಯೊಪಿತೇ ಬ್ರಹ್ಮನ್ ವಿಶ್ವಾಸ್ಯಃ ಪುರುಷೋತ್ತಮಃ॥ (ಶ್ರೀವಿಷ್ಣುತತ್ವ) ಯದಿತೇ ಹೃದಯಂ ವೇತ್ತಿ ಯದಿತೇ ಪ್ರತ್ಯಯೊಮಯಿ। ಭೀಮಸೇನಾರ್ಜುನೌ ಶೀಘ್ರಂ ನ್ಯಾಸಭೂತೌ ಪ್ರಯಚ್ಛಮೇ " (ಭಾರ॥ ಸಭಾ ಪ॥ ೨೦॥ ೭) ಇತ್ಯಾದಿ ಪ್ರಮಾಣಗಳಲ್ಲಿ ತಾನು ನಂಬಲ್ಪಡತಕ್ಕವನೆಂಬುವುದ

ನ್ನು ಹೇಳಿರುವನು. (ಮ) " ಪ್ರತ್ಯೇತೀತಿ ಪ್ರತ್ಯಯಃ " ಎಂಬದಾಗಿ ಈ ಅರ್ಥವನ್ನೇ ಸ್ವೀಕರಿಸಿರುತ್ತಾರೆ. ‖೯೪‖

## (೯೫ನೇ ನಾಮವು) ಸರ್ವದರ್ಶನಃ,
## ಓಮ್‖ ಸರ್ವದರ್ಶನಾಯನಮಃ.

(ಶಂ‖ ಭಾ) "ವಿಶ್ವತಶ್ಚಕ್ಷುಃ ‖ ವಿಶ್ವಾಕ್ಷಂ" ಎಂಬ ಶ್ರುತ್ಯನುಸಾರ ವಾಗಿ ಸರ್ವದರ್ಶನಾತ್ಮಕವಾದ ಅಥವಾ ಸರ್ವಾತ್ಮಕನಾಗಿರುವುದರಿಂದ " ಸರ್ವ ದರ್ಶನಃ " ಎನ್ನಲ್ಪಡುವನು.

( ವಿ‖ ಭಾ ) ಹಿಂದಿನ ನಾಮದಲ್ಲಿ ಪ್ರತಿಪಾದಿತರಾದವರಿಗೆ ಸಮಸ್ತ ವಾದ ತನ್ನ ಮಹಿಮೆಯನ್ನು ತೋರಿಸುವಂತವನು " ಸರ್ವ ದರ್ಶನಃ " ಎನ್ನಲ್ಪಡುವನು. " ತಮ ಕ್ರತುಂ ಪಶ್ಯತಿ ವೀತ ಶೋಕೋ ಧಾತುಃ ಪ್ರಸಾದಾನ್ಮಹಿಮಾನ ಮೀಶಂ (ಶ್ವೇತಾಶ್ವ‖ ೩‖ ೨೦) ತಸ್ಯೈಷ ಆತ್ಮಾ ವಿವೃಣುತೆ ತನೂಂ ಸ್ವಾಂ " (ಮು‖ ಉ‖ ೩‖ ೨‖ ೩) ಇಂತಹ ಶ್ರುತಿ ಗಳು ತನ್ನ ಮಹಿಮೆಯನ್ನು ಸ್ವಭಕ್ತರಿಗೆ ತೋರಿಸುವನೆಂಬ ಅರ್ಥವನ್ನು ಹೇಳುವುವು.

(ಮ) ಸಮಸ್ತವನ್ನು ನೋಡುವಂತವನು ಅಥವಾ ದರ್ಶನಯೋಗ್ಯ ವಾದ ಸಮಸ್ತವೂ ಯಾವ ಪರಮಾತ್ಮನ ಅಧೀನವೊ ಅವನು " ಸರ್ವ ದರ್ಶನಃ " ಎನ್ನಲ್ಪಡುವನು. ‖೯೫‖

ಈ ರೀತಿಯಾಗಿ ಈ (೧೦)ನೇ ಶ್ಲೋಕದಲ್ಲಿ ಹೇಳಲ್ಪಟ್ಟ (೧೦) ನಾಮಗಳಿಗೂ ವಿವೃತಿಯನ್ನು "ಬ್ರಹ್ಮಾದೀನಾಂ ಫಲ್ಗುಪದಲಿಪ್ಸೂನಾಂ ತ್ರಿದಿವೌಕಸಾಂ| ಸಂವಿಧಾತಾ " ಸುರೇಶ " (೮೬) ಶ್ಚ ಪ್ರೋಚ್ಯತೆ ವಿಬು ಧೋತ್ತಮೈಃ ‖ ಆರ್ತಾನಾ ಮಾರ್ತಿಹಂತೃತ್ವಾತ್ " ಶರಣಂ " (೮೭) ಪರಿ ಕೀರ್ತಿತಃ | ಯದುಪಾಸಾದ್ಭಯಂ ದುಃಖಂ ಪಾಪಂ ಬಂಧೋನ ಬಾಧತೆ‖ ಪ್ರತಿಷ್ಠಾಂಚ ಸುಖಂ ಜ್ಞಾನಂ ಭವೇತ್ " ಶರಣಂ " ಇತ್ಯತಃ | ಪರಮಾ ನಂದ ರೂಪತ್ವಾತ್ " ಶರ್ಮ " (೮೮) ಹಿಂಸಾದಿ ಮಂಥನಾತ್ ‖ ವಿಶ್ವಂ ರೇತೋ ಭಗವತೋ "ವಿಶ್ವರೇತಾಃ" (೮೯) ಹರಿಸ್ಸ್ಮೃತಃ | ಜ್ಞಾನೇಂ ದ್ರಿಯಾದಿಕಂ ವಿಶ್ವಂ ಪರಿಚರ್ಯಾರ್ಥಮೇವಹಿ ‖ ಯಃ ಪ್ರಜಾನಾಂ ಕರೋ

ತೀತಿ "ವಿಶ್ವರೇತಾಃ" ಜಸಸ್ಸ್ಮೃತಃ | ತದ್ವತ್ತ್ರೈರೇವ ಕರಣೈ ಸ್ತೈಸ್ಮಿನ್ನಭಿಮುಖಾಃ ಪ್ರಜಾಃ || ಸರ್ವಾಸ್ವೈವ ಭವಂತೀತಿ "ಪ್ರಜಾಭವ" (೯೦) ಉದಾಹೃತಃ | ನಸನ್ತಿ ಹೀನಾ ಯಸ್ಯೇತಿ "ಅಹಃ" (೯೧) ಸ ಪರಿಕೀರ್ತಿತಃ || ಅನಾದ್ಯ ವಿದ್ಯಾ ನಿದ್ರಾಯಾಂ ಸ್ವಧೀಹೇತು ತಯಾ ಹ್ಯಹಃ | ಇತ್ಥಂತೇಷು ಪ್ರಬುದ್ಧೇಷು ವಸತ್ಯುದ್ಧರಣಾಯಯಃ || "ಸಂವತ್ಸರಃ" (೯೨) ತಾನಾತ್ಮಕಾತ್ "ವ್ಯಾಲಃ" (೯೩) ಉಕ್ತಿಃ ಕರೋತಿಯಃ | ಯೋಸೌ ಪ್ರತ್ಯಾಯಯತಿ ತಾನ್ ಪ್ರತ್ಯಯಸ್ಸ ಉದಾಹೃತಃ || ಮಹಿಮಾನಂ ಸರ್ವ ಸಹಂ ತೇಷಾಂ ದರ್ಶಯತೀತಿಯಃ|| "ಸರ್ವದರ್ಶನ" (೯೪) ಆಖ್ಯಾತೋ ನವಾರ್ಣೋಲೋಚನ ಪ್ರದಃ" ಎಂಬೀ ರೀತಿಯಾಗಿ ಕಾಣಬಹುದು.

ಮೂ|| ಅಜ ಸ್ಸರ್ವೇಶ್ವರ ಸ್ಸಿದ್ಧ ಸ್ಸಿದ್ಧಿ ಸ್ಸ
ರ್ವಾದಿ ರಚ್ಯುತಃ | ವೃಷಾಕಪಿ ರಮೇಯಾತ್ಮಾ
ಸರ್ವಯೋಗವಿನಿಸ್ಸೃತಃ ||೧೧||

(೯೫ನೇ ನಾಮವು) ಅಜಃ, ಓಮ್|| ಅಜಾಯನಮಃ.

(ಶಂ|| ಭಾ) ಅಜಃ-ಹುಟ್ಟುವುದಿಲ್ಲವಾದುದುರಿಂದ "ಅಜಃ" ಎನ್ನಲ್ಪಡುವನು. "ನಜಾತೋನಜನಿಷ್ಯತೇ || (ಋಕ್ಸಂ|| ೧|| ೮೧|| ೫) ನಹಿಜಾತೋ ನಜಾಯೇಯಂ ನಜನಿಷ್ಯೇ ಕದಾಚನ| ಕ್ಷೇತ್ರಜ್ಞಸ್ಸರ್ವಭೂತಾನಾಂ ತಸ್ಮಾದಹಮಜಸ್ಸ್ಮೃತಃ" (ಭಾರ|| ಶಾಂತಿ ಪ|| ೩೪೩) ಎಂಬ ಶ್ರುತಿ ಭಾರತ ಪ್ರಮಾಣಗಳು ಪರಮಾತ್ಮನು ಹುಟ್ಟಲಿಲ್ಲವು ಹುಟ್ಟುವುದೂ ಇಲ್ಲವೆಂತಲೂ; ಸಮಸ್ತ ಭೂತಗಳ ಶರೀರಗಳೆಂಬ ಕ್ಷೇತ್ರಗಳನ್ನು ತಿಳಿದಿರುವ ನಾನು ಯಾವ ಕಾರಣದಿಂದ ಇದಕ್ಕೆ ಮೊದಲು ಹುಟ್ಟಲೂ ಇಲ್ಲವೊ, ಈಗಲೂ ಹುಟ್ಟಲಿಲ್ಲವೊ, ಇನ್ನು ಮುಂದೆಯೂ ಹುಟ್ಟುವುದಿಲ್ಲವೊ ಆ ಕಾರಣದಿಂದ ಅಜನೆಂದು ನಾನು ಹೇಳಲ್ಪಡುವೆನೆಂದು ಹೇಳುವುದರಿಂದಲೂ; ಈ ಅರ್ಥವು ಸ್ಪಷ್ಟವಾಗುವುದು.

(ವಿ|| ಭಾ) ಹಿಂದೆ ಪ್ರಸ್ತುತರಾದ ಭಕ್ತರು ತನ್ನನ್ನು ಹೊಂದುವುದಕ್ಕೆ ವಿರೋಧವಾಗಿರುವ ಪಾಪವೆ ಮೊದಲಾದವುಗಳನ್ನು ನಿವರ್ತಿಸು

ವಂತವನು "ಅಜಃ" ಎನ್ನಲ್ಪಡುವನು. "ಅಜಗತಿಕ್ಷೇಪಣಯೋಃ" ಇತಿ ಧಾತುಃ. ಈ ಅರ್ಥಕ್ಕೂ "ತೇಷಾಮೇವಾನುಕಂಪಾರ್ಥ ಮಹ ಮಜ್ಞಾನ ಜಂತಮಃ | ನಾಶಯಾಮ್ಯಾತ್ಮಭಾವಸ್ಥೋ ಜ್ಞಾನದೀಪೇನಭಾಸ್ವ ಸ್ವತಾ || (ಗೀ|| ೧೦|| ೧೧) ಅಹಂತ್ವಾ ಸರ್ವ ಪಾಪೇಭ್ಯೋ ಮೋಕ್ಷ ಯಿ ಷ್ಯಾಮಿ" (ಗೀ|| ೧೮|| ೬೬) ಇತ್ಯಾದಿ ಪ್ರಮಾಣಗಳುಂಟು. ಇವು ಭಗವತ್ಪ್ರಾಪ್ತಿಗೆ ಪ್ರತಿಬಂಧಕಗಳಾದ ಪಾಪಗಳನ್ನು, ಅಥವಾ ಅಜ್ಞಾನಾ ದಿಗಳನ್ನು ಪರಮಾತ್ಮನು ನಾಶಪಡಿಸುವ ಅಂಶವನ್ನು ತೋರಿಸುವುವೆಂ ದರಿಯಬೇಕು. ||೯೬||

## (೯೭ನೇ ನಾಮವು) ಸರ್ವೇಶ್ವರಃ,

### ಓಮ್|| ಸರ್ವೇಶ್ವರಾಯನಮಃ.

(ಶಂ || ಭಾ) "ಏಷ ಸರ್ವೇಶ್ವರಃ" ಎಂಬ ಶ್ರುತ್ಯನುಸಾರವಾಗಿ ಸಮಸ್ತರಾದ ಈಶ್ವರರಿಗೂ ಈಶ್ವರನಾಗಿರುವಂತವನು "ಸರ್ವೇಶ್ವರಃ" ಎನ್ನಲ್ಪಡುವನು.

(ವಿ|| ಭಾ) ಸಮರ್ಥರೊ ಅಥವಾ ಅಸಮರ್ಥರೊ ಶರಣಾಗತರೆಂಬ ದಾಗಿ ಭಗವಚ್ಚರಣಾರವಿಂದಗಳಲ್ಲಿ ತಮ್ಮಗಳ ರಕ್ಷಾಭರನ್ಯಾಸವನ್ನು ಮಾಡಿದ ಮಾತ್ರದಲ್ಲಿಯೇ ಅಂತಹ ಸಮಸ್ತರ ಅನಿಷ್ಟಗಳನ್ನು ಪರಿಹರಿ ಸುವುದಕ್ಕಾಗಿ ಅತಿಶೀಘ್ರವಾಗಿ ಅವರಲ್ಲಿ ಸೇರಿಕೊಳ್ಳುವಂತವನು "ಸರ್ವೇ ಶ್ವರಃ" ಎನ್ನಲ್ಪಡುವನು. ಶ್ರೀರಾಮಾಯಣದಲ್ಲಿ "ವಿಭೀಷಣೇನಾಶುಜ ಗಾಮ ಸಂಗಮಂ" (ಶ್ರೀರಾ|| ಯು|| ೧೮|| ೩೯.) ಎಂಬದಾಗಿ ಶರಣ್ಯ ನಾದ ಶ್ರೀರಾಮನು ಶೀಘ್ರವಾಗಿ ಶರಣಾಗತನಾದ ವಿಭೀಷಣನೊಡನೆ ಸೇರಿ ಕೊಂಡ ಅಂಶವು ತೋರಿಸಲ್ಪಟ್ಟಿರುವುದು. ||೯೭||

## (೯೮ನೇ ನಾಮವು) ಸಿದ್ಧಃ,

### ಓಮ್|| ಸಿದ್ಧಾಯನಮಃ.

(ಶಂ|| ಭಾ) ಸರ್ವಕಾಲದಲ್ಲಿಯೂ ನಿಷ್ಪನ್ನ ಸ್ವರೂಪನಾದಕಾರಣ ದಿಂದ "ಸಿದ್ಧಃ" ಎನ್ನಲ್ಪಡುವನು.

(ವಿ|| ಭಾ) ಶರಣಾಗತಿಯೆಂಬ ಮೋಕ್ಷೋಪಾಯಕ್ಕಿಂತಲೂ ಬೇರೆಯಾದ ಭಕ್ತ್ಯಾದಿಯಾದ ಸಾಧನ ವಿಶೇಷದಿಂದ ಸಾಧಿಸಲಪೇಕ್ಷಿಸದಂತೆ ತಾನೇ ಸಿದ್ಧವಾಗಿರುವಂತವನು "ಸಿದ್ಧಃ" ಎನ್ನಲ್ಪಡುವನು (ಎಂದರೆ ಅಕಿಂಚನ್ಯಾನನ್ಯಗತಿತ್ವಾದಿಗಳಿಂದ ಕರ್ಮಜ್ಞಾನಾಂಗಕವಾದ ಭಕ್ತಿಯೋಗವನ್ನು ಅನುಷ್ಠಿಸಿ ಮೋಕ್ಷವನ್ನು ಹೊಂದುವುದಕ್ಕೆ ಶಕ್ತರಾಗದೆ ಇರುವುದರಿಂದ ಅಂತಹ ಭಕ್ತಿ ಸ್ಥಾನದಲ್ಲಿ ಶರಣಾಗತಿಯನ್ನು ಮಾಡಿ ಭಗವತ್ಕೃಪಾ ಪ್ರತೀಕ್ಷಕರಾದ ಚೇತನರಿಗೆ ಉಪಾಯಾಂತರವಾದ ಭಕ್ತಿ ಸ್ಥಾನದಲ್ಲಿ ಸಿದ್ಧೋಪಾಯಭೂತನಾದ ಇವನೇ ನಿಂತು ಕಾಪಾಡುವಂತವನೆಂದರ್ಥವು) ಈ ಅರ್ಥವು "ನ್ಯಾಸ ಇತ್ಯಾಹುರ್ಮನೀಷಿಣೊ ಬ್ರಹ್ಮಾಣಂ" ಎಂಬದಾಗಿ (ತೈತ್ತಿ|| ನಾ|| ೬|| ೫೦) ಹೇಳಲ್ಪಟ್ಟಿರುವುದು. ||೯೮||

(ಬ್ರಹ್ಮಾಣಾಂ—ಬ್ರಹ್ಮನಿಗೆ ಅಂತರ್ಯಾಮಿಯಾದ ಪರಮಾತ್ಮನನ್ನೆ, ನ್ಯಾಸ ಇತಿ—ಶರಣಾಗತಿ ಎಂಬದಾಗಿ, ಆಹುಃ—ಹೇಳುವರು. ಪರಮಾತ್ಮನೆ ಶರಣಾಗತಿಯಿಂದ ತನ್ನನ್ನು ಸೇರಿದವರಿಗೆ ಉಪಾಯಾಂತರ ಸ್ಥಾನದಲ್ಲಿ ನಿಂತು ರಕ್ಷಕನಾಗುವುದರಿಂದ ಪರಮ ಪುರುಷನನ್ನೆ ಮೋಕ್ಷೋಪಾಯವಾದ ಶರಣಾಗತಿ ಎನ್ನುವರೆಂದರ್ಥವು.)

## (೯೯ನೇ ನಾಮವು) ಸಿದ್ಧಿಃ, ಓಮ್|| ಸಿದ್ಧ್ಯೇನಮಃ.

( ಶಂ || ಮ ) ಸರ್ವವಸ್ತುಗಳಲ್ಲಿಯೂ ಸಂವಿದ್ರೂಪ (ಜ್ಞಾನರೂಪ) ನಾಗಿರುವುದರಿಂದಲಾದರೂ, ನಿರತಿಶಯ ಫಲ ಸ್ವರೂಪನಾಗಿರುವುದರಿಂದಲಾದರೂ, (ಶಂ) ಸ್ವರ್ಗಾದಿ ಪ್ರಾಪ್ತಿರೂಪ ಫಲಕ್ಕೆ ನಾಶವುಂಟಾಗಿದ್ದರೂ ಬ್ರಹ್ಮ ಪ್ರಾಪ್ತಿರೂಪವಾದ ಮಹಾ ಫಲಕ್ಕೆ ನಾಶವಿಲ್ಲವಾದುದರಿಂದಲಾದರೂ "ಸಿದ್ಧಿಃ" ಎನ್ನಲ್ಪಡುವನು. (ಮ) ಸ್ವರ್ಗಾದಿ ಫಲಗಳು ವಿನಾಶ ಹೊಂದತಕ್ಕವುಗಳಾದುದರಿಂದ ಅವುಗಳಿಗೆ ಫಲರೂಪತ್ವವಿಲ್ಲವು, ಪರಮಾತ್ಮನೆ ನಿರತಿಶಯ ಫಲರೂಪನು.

(ವಿ|| ಭಾ) ಬೇರೆಯಾದ ಉಪಾಯಗಳಿಂದ ಸಾಧಿಸುವುದಕ್ಕೆ ಯೋಗ್ಯನಾದವನು "ಸಿದ್ಧಿಃ" ಎನ್ನಲ್ಪಡುವನು. (ಮೊದಲಿನ (೯೮)ನೇ ನಾಮವು ಶರಣಾಗತಿಯಿಂದ ಇವನನ್ನು ಸಾಧಿಸಬಹುದೆಂಬ ಅಂಶವನ್ನೂ ಈ ನಾಮವು ಅಂತಹ ಶರಣಾಗತಿ ಎಂಬ ಉಪಾಯಕ್ಕಿಂತಲೂ ಬೇರೆಯಾದ ಉಪಾಯಗಳೆಂದರೆ ವೇದಾಂತ ವಿಹಿತಗಳಾದ ವಿದ್ಯೆಗಳಿಂದಲೂ

ಇವನನ್ನು ಸಾಧಿಸಬಹುದೆಂಬ ಅಂಶವನ್ನೂ ಹೇಳುವುದೆಂದರಿಯಬೇಕು.) ಇದಕ್ಕೆ "ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ ॥ (ಗೀ॥ ೮ನೇ ಅ) ಯಂಪೃಥಗ್ಧರ್ಮಚಾರಿಣಃ ॥ ಪೃಥಗ್ಧರ್ಮಫಲೈಷಿಣಃ ॥ ಪೃಥಗ್ಧರ್ಮೈ ಸ್ಸಮರ್ಚ್ಯಂತಿ ತಸ್ಮೈ ಧರ್ಮಾತ್ಮನೇನಮಃ" ಇತ್ಯಾದಿ ಪ್ರಮಾಣಗಳು ಆಧಾರಭೂತಗಳಾಗಿ ನಾನಾ ಧರ್ಮಗಳಿಂದ ಪರಮಾತ್ಮನು ಆರಾಧಿಸಲ್ಪಟ್ಟು ಫಲಪ್ರದನಾಗುವ ಅರ್ಥವನ್ನು ಹೇಳುವುವು. ॥೯೯॥

## (೧೦೦ನೇ ನಾಮವು) ಸರ್ವಾದಿಃ,

## ಓಮ್॥ ಸರ್ವಾದಯೇನಮಃ.

(ಶಂ॥ ಭಾ) ಸಕಲ ಭೂತಗಳಿಗೂ ಆದಿಕಾರಣನಾದ ಕಾರಣದಿಂದ "ಸರ್ವಾದಿಃ" ಎನ್ನಲ್ಪಡುವನು.

(ವಿ॥ ಭಾ) ಭಕ್ತ ಪ್ರಸನ್ನರೆಂಬೀ ಸರ್ವರಿಗೂ ಸಮಸ್ತ ಪುರುಷಾರ್ಥಗಳನ್ನು ಕೊಡುವಂತಹ ಸ್ವಭಾವವುಳ್ಳವನು "ಸರ್ವಾದಿಃ" ಎನ್ನಲ್ಪಡುವನು. ಇದಕ್ಕೂ "ಯೇತ್ವಾಂದೇವಂ ಧ್ರುವಂಭಕ್ತಾಃ ಪುರಾಣಂ ಪುರುಷೋತ್ತಮಂ । ಪ್ರಾಪ್ನುವಂತಿ ಸದಾಕಾಮಾ ನಿಹಲೋಕೇ ಪರತ್ರಚ ॥ (ಶ್ರೀರಾ॥ ಯು॥ ೧೨೦॥ ೩೧) ಸರ್ವಾನ್ಕಾಮಾ ನ್ಪ್ರಾಪ್ನುವಂತೆ ವಿಶಾಲಾಕ್ಷ ತ್ರೈಲೋಕ್ಯೇಸ್ಮಿನ್ ಕೃಷ್ಣನಾಮಾಭಿಧಾನಾತ್" ಎಂಬ ಪ್ರಮಾಣವೂ ಇರುವುದು. ॥ ೧೦೦ ॥

(ನಿತ್ಯನೂ ಪುರಾಣಪುರುಷನೂ ಆದ ನಿನ್ನನ್ನು ಭಕ್ತಿಯಿಂದ ಭಜನಮಾಡತಕ್ಕವರು ತಮ್ಮ ತಮ್ಮಗಳ ಅಪೇಕ್ಷಾನುಗುಣವಾದ ಇಹಪರ ಸುಖಗಳನ್ನನುಭವಿಸುವರು. ಕೃಷ್ಣ ಎಂಬ ನಾಮೋಚ್ಚಾರಣದಿಂದ ಈ ಮೂರು ಲೋಕಗಳಲ್ಲಿಯೂ ತನಗೆ ಅಪೇಕ್ಷಿತವಾದ ಸಮಸ್ತ ಇಷ್ಟಾರ್ಥಗಳನ್ನು ಹೊಂದುವರೆಂಬರ್ಥವು)

ಈ ಪ್ರಕಾರವಾಗಿ "ವಿಶ್ವಾದ್ಯಂ ಪ್ರಥಮಂ ಸರ್ವಾದ್ಯಂತಂ ಶತಕ ಮುಚ್ಯತೇ" ಎಂಬೀ ರೀತಿಯಿಂದ ಭಗದ್ಗುಣ ದರ್ಪಣವೆಂಬ ಶ್ರೀಮನ್ನಾಮಸಹಸ್ರ ವಿವರಣದಲ್ಲಿ ಪ್ರಥಮ ಶತಕವು ಸಂಪೂರ್ಣವು.



## (೧೦೧ನೇ ನಾಮವು) ಅಚ್ಯುತಃ,

### ಓಮ್|| ಅಚ್ಯುತಾಯನಮಃ.

(ಶಂ|| ಮ) "ಶಾಶ್ವತಂ ಶಿವಮಚ್ಯುತಂ || ಯಸ್ಮಾನ್ನಚ್ಯುತಪೂರ್ವೋಹಮಚ್ಯುತಸ್ತೇನಕರ್ಮಣಾ" ಎಂಬ ಶ್ರುತಿ ಮತ್ತು ಭಗವದುಕ್ತವಾದ ಪ್ರಮಾಣಾನುಸಾರವಾಗಿ ಸ್ವರೂಪ ಸಾಮರ್ಥ್ಯದಿಂದ ಭ್ರಷ್ಟನಲ್ಲದವನು ಅಥವಾ ಭ್ರಷ್ಟನಾಗುವಂತೆ ಮಾಡಲ್ಪಡದವನು "ಅಚ್ಯುತಃ" ಎನ್ನಲ್ಪಡುವನು.

(ಶಂ|| ಮ) ಪ್ರಥಮ ಶತಕವು ಸಮಾಪ್ತವು.

(ವಿ|| ಭಾ) ಹಿಂದೇ ಹೇಳಿರುವಂತೆ ಶರಣಾಗತರಾದವರ ರಕ್ಷಣ ವ್ರತವನ್ನು ಬಿಟ್ಟುಬಿಡದೇ ದೃಢವಾಗಿ ಸ್ವೀಕರಿಸಿರುವಂತವನು "ಅಚ್ಯುತಃ" ಎನ್ನಲ್ಪಡುವನು. "ಮಿತ್ರಭಾವೇನ ಸಂಪ್ರಾಪ್ತಂ ನತ್ಯಜೇಯಂ ಕದಂಚನ" (ಶ್ರೀರಾ|| ಯು|| ೧೮|| ೩) ಎಂಬದಾಗಿರುವ ಶರಣ್ಯನ ಶೀಲವು ಶರಣಾಗತರಕ್ಷಣವೆಂಬ ವ್ರತವನ್ನು ಎಂದಿಗೂ ಬಿಟ್ಟಿರತಕ್ಕದ್ದಲ್ಲವೆಂದು ಸಿದ್ಧವಾಗುವುದಷ್ಟೆ. || ೧೦೧ ||

## (೧೦೨ನೇ ನಾಮವು) ವೃಷಾಕಪಿಃ,

### ಓಮ್|| ವೃಷಾಕಪಯೇನಮಃ.

(ಶಂ|| ವಿ|| ಮ) ವೃಷಾಕಪಿಃ-ಧರ್ಮ ವರಾಹಸ್ವರೂಪನು. ಇದಕ್ಕೆ "ಕಪಿರ್ವರಾಹಶ್ರೇಷ್ಠಶ್ಚ ಧರ್ಮಶ್ಚ ವೃಷಉಚ್ಯತೇ | ತಸ್ಮಾದ್ವೃಷಾಕಪಿಂಪ್ರಾಹ ಕಶ್ಯಪೋಮಾಂ ಪ್ರಜಾಪತಿಃ" (ಭಾರ|| ಶಾನ್ತಿ|| ೩೪೩|| ೫೯) ಎಂಬ ಪ್ರಮಾಣವು ಆಧಾರವಾಗಿರುವುದು. ಸರ್ವೇಷ್ಟಾರ್ಥಗಳನ್ನು ವರ್ಷಿಸುವುದರಿಂದ ಧರ್ಮವು ವೃಷ ಶಬ್ದದಿಂದ ಹೇಳಲ್ಪಡುವುದು. ಕಾತ್-ಜಲದಿಂದ, ಭೂಮಿಯನ್ನು; ಅಪಾತ್-ರಕ್ಷಿಸಿದನು, ಆದುದರಿಂದ ಕಪಿಃ ಎಂದರೆ ವರಾಹವೆಂದರ್ಥವು. ಇದರಿಂದ ಧರ್ಮ ಸ್ವರೂಪನೂ ವರಾಹಸ್ವರೂಪನೂ ಎಂದೇರ್ಪಡುವುದು. || ೧೦೨ ||

## (೧೦೩ನೇ ನಾಮವು) ಅಮೇಯಾತ್ಮಾ,

### ಓಮ್|| ಅಮೇಯಾತ್ಮನೇನಮಃ

(ಶಂ|| ವಿ|| ಮ) ಇಂತವನೆಂದು ಪರಿಮಿತಿಯಿಂದ ತಿಳಿಯುವುದಕ್ಕೆ ಆಗದವನು "ಅಮೇಯಾತ್ಮಾ" ಎನ್ನಲ್ಪಡುವನು. ಅಳೆವಿಡ ಲಕಕ್ಯನೆಂದರ್ಥವು. (ವಿ) ಇದಕ್ಕೆ ಪುರುಷ ಸೂಕ್ತದಲ್ಲಿ ಹೇಳಿರುವ "ಅತೋ ಜ್ಯಾಯಾಂಶ್ಚ ಪುರುಷಃ|| ಭೂಯಾಂಶ್ಚಾತೋ ಜನಾರ್ದನಃ" ಎಂಬೀ ಪ್ರಮಾಣಾನುಸಾರವಾಗಿ ಆಶ್ರಿತನನ್ನು ಅನುಗ್ರಹಿಸುವ ವಿಷಯದಲ್ಲಿ ಅಳೆವಿಡಲಕಕ್ಯವಾದ ಮಹತ್ಸ್ವಭಾವವುಳ್ಳವನೆಂಬ ಅರ್ಥವನ್ನರಿಯಬೇಕು. || ೧೦೩ ||

## (೧೦೪ನೇ ನಾಮವು) ಸರ್ವಯೋಗ ವಿನಿಸ್ಸೃತಃ, ಓಮ್|| ಸರ್ವಯೋಗ ವಿನಿಸ್ಸೃತಾಯನಮಃ.

(ಶಂ|| ಮ) "ಅಸಂಗೋಹ್ಯಯಂ ಪುರುಷಃ" (ಬೃ|| ೬|| ೩|| ೧೫) ಎಂಬ ಶ್ರುತ್ಯನುಸಾರವಾಗಿ ಸರ್ವ ಸಂಬಂಧಗಳಿಂದ ಬಿಡಲ್ಪಟ್ಟವನಾದ ಕಾರಣದಿಂದ; ಅಥವಾ (ಶಂ) ನಾನಾ ವಿಧಗಳಾದ ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿರುವ ಯೋಗಗಳಿಂದಲೂ ; ಗ್ರಹಿಸ ಲಕಕ್ಯನು.

(ವಿ|| ಭಾ) ಹಿಂದಿನ ನಾಮದಲ್ಲಿ ಹೇಳಲ್ಪಟ್ಟ ಸ್ವಭಾವವುಳ್ಳವನೆಂದು ಹೇಗೆ ತಿಳಿಯಬಹುದೆಂದರೆ ? ಸರ್ವಯೋಗವಿನಿಸ್ಸೃತಃ-ಸರ್ವೋಪಾಯಗಳಿಂದಲೂ ಹೊಂದಲ್ಪಡತಕ್ಕವನು. ಎಂದರೆ ಶಾಸ್ತ್ರೋಕ್ತಗಳಾದ ಉಪಾಯಗಳೇನು, ತಮ್ಮತಮ್ಮಗಳಿಗೆ ಅಭಿಮತಗಳಾದ ಉಪಾಯಗಳೇನು. ಇಂತಹ ಸರ್ವ ವಿಧಗಳಾದ ಉಪಾಯಗಳಿಂದಲೂ ಸ್ವಲ್ಪವೂ ಪ್ರಯಾಸವಿಲ್ಲದೆ ಹೊಂದಲ್ಪಡತಕ್ಕವನೆಂದರ್ಥವು. ಹೀಗೆಯೆ "ಸ್ವಬುದ್ಧಿಮಾತ್ರನಿರಾಜ್ಞಾತಃ ಪರಮಾತ್ಮಾ ಜಗತ್ಪ್ರಭುಃ | ಐಶ್ವರ್ಯಾನುಭವಪ್ರೀತೋಜ್ಞಾತಾರ ಮನುಸೇವತೆ" ಇತ್ಯಾದಿ ಶ್ರೀಪಾಷ್ಕರ ಸಂಹಿತಾ ವಚನವೂ ಇರುವುದು. || ೧೦೪ ||

(ಪುರುಷನು ತನ್ನ ಬುದ್ಧ್ಯನುಸಾರವಾಗಿ ವಿಚಾರಿಸಿ ನೋಡಿದಕೂಡ್ಲೆ ಅವನಿಗೆ ಅಂತಹ ಮಾರ್ಗವನ್ನನುಸರಿಸಿಯೆ ಗೋಚರನಾಗಿ ಜಗತ್ಪ್ರಭುವಾದ ಪರಮಾತ್ಮನು ತನ್ನ ಸರ್ವೈಶ್ವರ್ಯವನ್ನು ಅವನು ಅನುಭವಿಸುವಂತೆ ಮಾಡಿ ಅದರಿಂದ ತಾನೂ ಸಂತುಷ್ಟನಾಗಿ ಬ್ರಹ್ಮವೇದಿಯಾದ ಅವನನ್ನು ಅನುಸರಿಸಿಕ್ಕೊಂಡಿರುವನೆಂದರ್ಥವು.)

ಈ ಪ್ರಕಾರವಾಗಿ ಈ (೧೧)ನೆ ಶ್ಲೋಕದಲ್ಲಿರುವ (೯) ನಾಮಗಳಿಗೂ "ಪ್ರತ್ಯರ್ಥಿನಸ್ಸ್ವ ಸಂಪ್ರಾಪ್ತೌ ಪ್ರಜಾನಾಂಕ್ಷಿಪತೀತಿ "ಅಜಃ",

(೯೬) ಅಶಕ್ತಾನಾಂಚ ಶಕ್ತಾನಾಂ ವೈರೂಪ್ಯಂ ಶರಣೈಷಿಣಾಂ | ಅಶಕ್ತೇಃಪರಿಹರ್ತುರ್ಯಸ್ಸ " ಸರ್ವೇಶ್ವರ " (೯೭) ಈರಿತಃ‖ ಸ್ವರೂಪೇಣೈವ ಭಕ್ತಾನಾಂ ಸಿದ್ಧತ್ವಾತ್ " ಸಿದ್ಧ " (೯೮) ಉಚ್ಯತೆ, | ಅಯಮೇವ ಹ್ಯುಪಾಯೈಶ್ಚ ಸಿದ್ಧಿ" ಸ್ಸಾಧ್ಯತಾಸ್ಸಾಧ್ಯತೇಯತಃ | ಸರ್ವೇಷಾಂ (೯೯) ಪುರುಷಾರ್ಥಾನಾಂ ಮೂಲಂ " ಸರ್ವಾದಿ " (೧೦೦) ರೀರಿತಃ | ಭಕ್ತೇ ಭ್ಯೋಚ್ಯುತ ಪೂರ್ವತ್ವಾತ್ " ಅಚ್ಯುತಃ " (೧೦೧) ಪರಿಕೀರ್ತಿತಃ ‖ ಆಶ್ರಿ ~~ತಾನಾಂ ಚ್ಯುತಿರ್ಯಸ್ಮಾನ್ನ ನಾಸ್ತಿಸೊ~~ " ಉಚ್ಯುತ " ಈರೀತಃ ‖ ಕಪಿರ್ವ ರಾಹಶ್ಶ್ರೇಷ್ಠಶ್ಚ ಧರ್ಮಶ್ಚ ವೃಷಉಚ್ಯತೆ | ತಸ್ಮಾ " ದ್ವೃಷಾ ಕಪಿಃ " (೧೦೨) ಪ್ರೋಕ್ತೋವ ಸ್ವರ್ಗ್ಯೋ ಭೀಷ್ಟದೋವಮನುಃ ‖ ಇ ಯಾನಿತ್ಯ ಪರಿಚ್ಛೇದ್ಯ ಸ್ವಭಾವಾತ್ಸರ್ವತೋಧಿಕಃ | (೧೦೩) ಅಮೇ ಯಾತ್ಮಾ " ಸಮುದ್ದಿಷ್ಟೊ ಹ್ಯಾನ್ನತ್ಯ ಫಲದೋವಮನುಃ ‖ ಸರ್ವೈ ರುಪಾಯೈಃ ಪ್ರಾಪ್ಯಶ್ಚ "ಸರ್ವಯೋಗ ವಿನಿಸ್ಸೃತಃ‖ " (೧೦೪) ಎಂಬೀ ವಿವೃತಿಯನ್ನು ಕಂಡುಕೊಳ್ಳಬಹುದು.

ಮೂ‖ ವಸು ರ್ವಸುಮನಾಸ್ಸತ್ಯ ಸ್ಸಮಾತ್ಮಾ ಸ
ಮ್ಮಿತಸ್ಸಮಃ | ಅಮೋಘಃ ಪುಂಡರೀಕಾಕ್ಷೊ ವೃ
ಷಕರ್ಮಾ ವೃಷಾಕೃತಿಃ ‖೧೧‖

(೧೦೫ನೇ ನಾಮವು) ವಸುಃ,

ಓಮ್‖ ವಸವೇನಮಃ.

(ಶಂ‖ ಭಾ) (ಮ) ವಸತೀತಿ ವಸುಃ–ಸರ್ವಭೂತಗಳೂ ಈ ಪರ ಮಾತ್ಮನಲ್ಲಿ ವಾಸಮಾಡುವುದರಿಂದ (ಶಂ) ಅಥವಾ ಸರ್ವ ಭೂತಗಳಲ್ಲಿ ಯೂ ಇವನು ವಾಸವಾಗಿರುವುದರಿಂದ ; (ಯದ್ವಾ) " ವಸೂನಾಂಪಾವ ಕಶ್ಚಾಸ್ಮಿ " ( ಗೀ‖ ೧೦‖ ೨೩ ) ಎಂಬ ಗೀತಾವಚನಗಳನ್ನನುಸರಿಸಿ ಅಷ್ಟವಸುಗಳ ಮಧ್ಯದಲ್ಲಿ ಪಾವಕ (ಅಗ್ನಿ) ಎಂಬ ವಸುವಾಗಿರುವುದ ರಿಂದಲಾದರೂ " ವಸುಃ " ಎನ್ನಲ್ಪಡುವನು.

(ವಿ‖ ಭಾ) ಅಂತವರಲ್ಲಿ ಮಹಾ ಪ್ರೀತಿಯೊಡನೆ ವಾಸಮಾಡುವಂತ ವನು " ವಸುಃ " ಎನ್ನಲ್ಪಡುವನು. ‖ ೧೦೫ ‖

## (೧೦೬ನೇ ನಾಮವು) ವಸುಮನಾಃ,

### ಓಮ್॥ ವಸುಮನಸೇನಮಃ.

(ಶಂ॥ ಭಾ) ಧನವಾಚಕವಾದ ಇಲ್ಲಿನ ವಸುಶಬ್ದದಿಂದ ಪ್ರಾಶಸ್ತ್ಯವು ಕಾಣಲ್ಪಡುವುದು. ಆದುದರಿಂದ ಪ್ರಶಸ್ತವಾದ ಮನಸ್ಸುಳ್ಳವನೆಂತಲಾದರೂ ರಾಗ ದ್ವೇಷಾದಿಗಳಿಂದ ಕಲುಷಿತವಾಗದ ಮನಸ್ಸುಳ್ಳವನೆಂತಲಾದರೂ "ವಸುಮನಾಃ" ಎಂಬ ನಾಮಕ್ಕೆ ಅರ್ಥವನ್ನು ಹೇಳಬಹುದು

(ವಿ॥ ಭಾ) ವಸುಮನಾಃ-ನಿಧಿಯಲ್ಲಿ ಮನಸ್ಸುಳ್ಳವನು, ಎಂದರೆ ಭೂಗರ್ಭದಲ್ಲಿಡಲ್ಪಟ್ಟ ನಿಧಿಯನ್ನು ಕಂಡರೆ ಲೋಕರಿಗೆ ಎಷ್ಟು ಪ್ರೀತಿಯುಂಟಾಗಬಹುದೊ ಅಂತಹ ಪ್ರೀತಿಯನ್ನು ಹಿಂದಿನ ನಾಮಗಳಲ್ಲಿ ಪ್ರಸ್ತುತರಾದ ಭಕ್ತರಲ್ಲಿಡತಕ್ಕವನೆಂದರ್ಥವು. ಈ ಅರ್ಥವನ್ನು ಗೀತೆಯಲ್ಲಿಯೂ "ಸಮಹಾತ್ಮಾ ಸುದುರ್ಲಭಃ" (೭-೧೯) ಎಂಬದಾಗಿ ಅಂತಹ ಮಹಾತ್ಮನಾದ ಭಕ್ತನು ನಿಧಿಯಂತೆ ಅತ್ಯಂತ ದುರ್ಲಭನೆಂದು ಹೇಳಿರುತ್ತಾನೆ.

(ಮ) ವಸು ಎಂದರೆ ಮಹತ್ತಾದ ಧನವು, ಬ್ರಹ್ಮ ವೆಂದರ್ಥವು. ಬ್ರಹ್ಮಮಯವಾದ ಮನಸ್ಸುಳ್ಳವನು "ವಸುಮನಾಃ" ಎನ್ನಲ್ಪಡುವನು. (ಇಲ್ಲಿ ಕೆಲವರು "ಬ್ರಾಹ್ಮಣಾನಾಂಧನಂವೇದಃ" ಎಂಬ ಪ್ರಮಾಣಾನುಸಾರವಾಗಿ ಮಹಾಧನವಾದ ವೇದರೂಪವಾಗಿರುವ ಮನಸ್ಸುಳ್ಳವನೆಂತಲೂ ಹೇಳುವರು.) ॥ ೧೦೬ ॥

## (೧೦೭ನೇ ನಾಮವು) ಸತ್ಯಃ,

### ಓಮ್॥ ಸತ್ಯಾಯನಮಃ.

(ಶಂ॥ ಭಾ) "ಸತ್ಯಂಜ್ಞಾನ ಮನಂತಂ ಬ್ರಹ್ಮ" (ತೈ॥ ಉ॥ ೨॥ ೧) ಎಂಬ ಶ್ರುತ್ಯನುಸಾರವಾಗಿ ಪರಮಾತ್ಮನು ವ್ಯರ್ಥವಲ್ಲದ ಆತ್ಮವಾಗಿರುವುದರಿಂದ ಸತ್ಯನೆಂತಲಾದರೂ; "ಸಚ್ಚತ್ಯಚ್ಚಾಭವತ್" (ತೈ॥ ಉ॥ ೨॥ ೬) ಎಂಬ ತೈತ್ತಿರೀಯ ಶ್ರುತ್ಯನುಸಾರವಾಗಿ ರೂಪವುಳ್ಳ ಮತ್ತು ರೂಪವಿಲ್ಲದ ವಸ್ತ್ವಾತ್ಮಕನಾಗಿರುವುದರಿಂದ ಸತ್ಯನೆಂತಲಾದರೂ; "ಸದಿತಿಪ್ರಾಣಃ, ತತ್ಯನ್ನಂ, ಯಮಿತ್ಯ ಸಾವಾದಿತ್ಯಃ" ಎಂಬ

ಶ್ರುತ್ಯನುಸಾರವಾಗಿ ಪ್ರಾಣ ಅನ್ನ ಆದಿತ್ಯರೂಪನಾಗಿರುವುದರಿಂದ ಸತ್ಯನೆಂತಲಾದರೂ (ಶಂ|| ಮ|| ವಿ) ಸತ್ಸುಸಾಧುಃ-ಸತ್ಯಂ, ಸತ್ಪುರುಷ ರಲ್ಲಿ ಶ್ರೇಷ್ಠನಾಗಿರುವುದರಿಂದ ಸತ್ಯನೆಂತಲಾದರೂ ಅರ್ಥವನ್ನರಿಯಬೇಕು. (ವಿ|| ಭಾ) ಹಿಂದಿನ ನಾಮಗಳಲ್ಲಿ ಪ್ರಸಕ್ತರಾದ ಭಕ್ತರಲ್ಲಿ ಸಾಧುವಾದ ಪುರುಷನು "ಸತ್ಯಃ ಎನ್ನಲ್ಪಡುವನು. || ೧೦೭ ||

## (೧೦೮ನೇ ನಾಮವು) ಸಮಾತ್ಮಾ,

### ಓಮ್|| ಸಮಾತ್ಮನೇನಮಃ.

(ಶಂ|| ಭಾ) ರಾಗ ದ್ವೇಷಾದಿಗಳಿಂದ ದೂಷಿತವಾಗದ ಮನಸ್ಸುಳ್ಳವನೆಂತಲಾದರೂ ಸಮಸ್ತ ಭೂತಗಳಲ್ಲಿಯೂ ಸಮವಾಗಿ ಒಂದೇ ರೀತಿಯಾದ ಆತ್ಮನಾಗಿರುವುದರಿಂದಲಾದರೂ "ಸಮಾತ್ಮಾ" ಎನ್ನಲ್ಪಡುವನು.

(ವಿ|| ಭಾ) ತನ್ನನ್ನಾಶ್ರಯಿಸಿರುವ ಭಕ್ತರು ಗುಣಾದಿಗಳಿಂದ ಸ್ವಲ್ಪ ನ್ಯೂನಾಧಿಕ ಭಾವವನ್ನು ಹೊಂದಿದ್ದರೂ ಅವರ ಗುಣ ವೃತ್ತಾದಿಗಳನ್ನು ಆಲೋಚಿಸದ ಮನಸ್ಸುಳ್ಳವನು "ಸಮಾತ್ಮಾ" ಎನ್ನಲ್ಪಡುವನು. "ಸಮೋಽಹಂ ಸರ್ವಭೂತೇಷು (ಗೀ|| ೯|| ೨೯) "ಅನಾಲೋಚಿತ ವಿಶೇಷಾ ಶೇಷಲೋಕಶರಣ್ಯ" (ಶ್ರೀಮಿತಗದ್ಯ) ಎಂಬದಾಗಿ ಈ ಅರ್ಥವು ಪ್ರತಿಪಾದಿಸಲ್ಪಟ್ಟಿರುವುದು.

(ಮ) ಸರ್ವ ಸಮವಾದ ಮನಸ್ಸುಳ್ಳವನು ||೧೦೮||

## (೧೦೯ನೇ ನಾಮವು) ಸಮ್ಮಿತಃ,

### ಓಮ್|| ಸಮ್ಮಿತಾಯನಮಃ.

(ಶಂ|| ಭಾ) 'ಅಸಮ್ಮಿತಃ' ಎಂದು ಪದಚ್ಛೇದವು. ಸಕಲವಸ್ತು ಸಮೂಹಗಳಿಂದ (ಪರಿಚ್ಛಿನ್ನ) ಅಳವಿಡಲ್ಪಡುವಂತವನು 'ಸಮ್ಮಿತನೆನ್ನಲ್ಪಡುವನು. ಸಮ್ಮಿತನಾಗದವನು "ಅಸಮ್ಮಿತಃ" ಎನ್ನಲ್ಪಡುವನು. ಎಂದರೆ ಸಕಲ ವಸ್ತುಗಳಿಂದಲೂ ಅಳವಿಡಲ್ಪಡದ ಸ್ವರೂಪವುಳ್ಳವನು 'ಅಸಮ್ಮಿತಃ' ಎನ್ನಲ್ಪಡುವನೆಂದರ್ಥವು.

(ವಿ|| ಭಾ) ಸಮ್ಮಿತಃ-ದಶರಥ ವಸುದೇವಾದಿಗಳಿಗೆ ಪುತ್ರರಾಗಿ

ಅವತರಿಸಿದ ರಾಮಕೃಷ್ಣಾವತಾರಾದಿಗಳಲ್ಲಿ ಇವನು ಹಿಡಿಯುವದಕ್ಕೆ ಯೋಗ್ಯನೆಂಬದಾಗಿ ಅವರುಗಳಿಂದ ಭಾವಿಸಲ್ಪಡುವಂತವನು "ಸಮ್ಮಿತಃ" ಎನ್ನಲ್ಪಡುವನು. "ಊನಷೋಡಶವರ್ಷೋಮೇ ರಾಮೋರಾಜೀವಲೋಚನಃ ॥ (ಶ್ರೀರಾ॥ ಬಾ॥ ೨೦॥ ೨) ಮಮಾಯಂ ತನಯೋಜಾತಃ" (ಶ್ರೀವಿಷ್ಣುಪು॥ ೫॥ ೫॥ ೫) ಇತ್ಯಾದಿಗಳಲ್ಲಿ ಇವನು ಅಳವಿಡಲ್ಪಡತಕ್ಕವನೆಂಬ ಅಂಶವು ಸೂಚಿತವಾಗಿರುವುದು. ಈ ಪ್ರಮಾಣಗಳಲ್ಲಿ ನನ್ನ ರಾಮನಿಗೆ ೧೬ ವರ್ಷಗಳು ಕೂಡಾ ತುಂಬಲಿಲ್ಲವೆಂತಲೂ ಇವನು ನನ್ನ ಪುತ್ರನಾಗಿ ಹುಟ್ಟಿರುವನೆಂತಲೂ ಪರಮಪುರುಷನನ್ನು ಪರಿಚ್ಛಿನ್ನನಂತೆ ಹೇಳಿರುವರು.

(ಮ) ವೇದಾಂತಗಳಿಂದ ಚನ್ನಾಗಿ ಹಿಡಿಯಲ್ಪಡತಕ್ಕವನು. ಅಥವಾ ಸರ್ವದೇಶ ಸರ್ವಕಾಲಗಳಲ್ಲಿಯೂ ಲಕ್ಷ್ಮೀಸಮೇತನಾಗಿರುವಂತವನು. ॥ ೧೦೯ ॥

## (೧೧೦ನೇ ನಾಮವು) ಸಮಃ

## ಓಮ್॥ ಸಮಾಯನಮಃ.

(ಶಂ॥ ಭಾ) ಸರ್ವಕಾಲಗಳಲ್ಲಿಯೂ ಸರ್ವ ವಿಕಾರರಹಿತನಾಗಿರುವುದರಿಂದಲಾದರೂ ಲಕ್ಷ್ಮೀಸಮೇತನಾಗಿರುವುದರಿಂದಲಾದರೂ "ಸಮಃ" ಎನ್ನಲ್ಪಡುವನು.

(ವಿ॥ ಭಾ) ಅವರುಗಳಲ್ಲಿ ಸಮವಾಗಿರುವಂತವನು. ॥ ೧೧೦ ॥

## (೧೧೧ನೇ ನಾಮವು) ಅಮೋಘಃ

## ಓಮ್॥ ಅಮೋಘಾಯನಮಃ.

(ಶಂ॥ ಭಾ) ಪೂಜಿಸಲ್ಪಟ್ಟೂ ಸ್ತೋತ್ರ ಮಾಡಲ್ಪಟ್ಟೂ ಸ್ಮರಿಸಲ್ಪಟ್ಟೂ ತಾನು ಅವರುಗಳಿಗೆ ಸಕಲ ಫಲಗಳನ್ನು ಕೊಡುತ್ತಾನಲ್ಲದೆ ಇಂತಹ ಪೂಜಾದಿಗಳನ್ನು ವ್ಯರ್ಥಪಡಿಸುವುದಿಲ್ಲವಾದ್ದರಿಂದ "ಅಮೋಘಃ" ಎನ್ನಲ್ಪಡುವನು. ಸತ್ಯ ಸಂಕಲ್ಪನೆಂತಲೂ ಆಗಬಹುದು.

(ವಿ॥ ಭಾ) ಅವರುಗಳಿಗೆ ತನ್ನಲ್ಲುಂಟಾಗಿರುವ ಸಂಬಂಧವನ್ನು ಫಲವತ್ತಾಗಿ ಮಾಡುವಂತವನು "ಅಮೋಘಃ" ಎನ್ನಲ್ಪಡುವನು. ಇದಕ್ಕೆ "ಅಮೋಘಂ ದರ್ಶನಂ ರಾಮನಚ ಮೋಘಃ ಸ್ತವಸ್ತವ । ಅಮೋಘಾಸ್ತೇ ಭವಿಷ್ಯಂತಿ ಭಕ್ತಿಮಂತಶ್ಚಯೇನರಾಃ" (ಶ್ರೀರಾ॥ ಯು॥

೧೨೦॥ ೩೧) ಎಂಬೀ ಶ್ಲೋಕದಲ್ಲಿ ಶ್ರೀರಾಮನ ದರ್ಶನವೂ ಶ್ರೀರಾಮಸ್ತವನವೂ ವ್ಯರ್ಥವಾಗುವುದಿಲ್ಲವೆಂತಲೂ ಶ್ರೀರಾಮ ಚರಣಾರವಿಂದ ಭಕ್ತಿಯುಕ್ತರೂ ವ್ಯರ್ಥವಾಗಲಾರರೆಂತಲೂ ಹೇಳಿರುವುದು.

(ಮ) ಅಮೋಘಃ–ಪಾಪವಿಲ್ಲದವನು. "ಮೋಘಮನ್ನಂ ವಿಂದತೆ ಅಪ್ರಚೇತಾಃ" ಎಂಬೀ ಶ್ರುತಿಯಲ್ಲಿ ಓಘ ಶಬ್ದವು ಪಾಪಪರವಾಗಿ ಪಠಿತವಾಗಿರುವುದರಿಂದ ಈ ಅರ್ಥವು ಪ್ರಾಪ್ತವಾಗಿರುವುದು. ಸತ್ಯ ಸಂಕಲ್ಪನೆಂತಲಾದರೂ ಆಗಬಹುದು. ॥ ೧೧೧ ॥

## (೧೧೨ನೇ ನಾಮವು) ಪುಂಡರೀಕಾಕ್ಷಃ,

## ಓಮ್॥ ಪುಂಡರೀಕಾಕ್ಷಾಯನಮಃ.

(ಶಂ॥ ಭಾ) "ಹೃತ್ಪುಂಡರೀಕಂ ಪುರಮಧ್ಯಸಗ್‌ಸ್ಥಂ" ಎಂಬ ಶ್ರುತ್ಯನುಸಾರವಾಗಿ ಹೃದಯ ಪುಂಡರೀಕದಲ್ಲಿ ವ್ಯಾಪಿಸಿರುವುದರಿಂದಲಾದರೂ; ಹೃದಯವೆಂಬ ಪುಂಡರೀಕದಲ್ಲಿ ಕಾಣಲ್ಪಡುತ್ತಾನಾದುದರಿಂದಲಾದರೂ; ಪುಂಡರೀಕಕ್ಕೆ ಸಮಾನವಾದ ಕಣ್ಣುಗಳುಳ್ಳವನಾಗಿರುವುದರಿಂದಲಾದರೂ ಪುಂಡರೀಕಾಕ್ಷ ನೆನ್ನಲ್ಪಡುವನು. ಪುಂಡರೀಕವೆಂದರೆ ತಾವರೆ ಪುಷ್ಪವು.

(ವಿ॥ ಭಾ) "ಪುಂಡರೀಕಂ ಪರಂಧಾಮ ನಿತ್ಯಮಕ್ಷರ ಮವ್ಯಯಂ। ತದ್ಭವಾನ್ ಪುಂಡರೀಕಾಕ್ಷಃ ॥ (ಭಾರ॥ ಉ॥ ೬೯॥ ೬) ದಿವೀವ ಚಕ್ಷುರಾತತಂ" (ಪು॥ ಸೂ) ಎಂಬೀ ಪ್ರಮಾಣಾನುಸಾರವಾಗಿ ನಿತ್ಯವಾದ ಪರಮಪದವಾಸಿಗಳಿಗೆ ನೇತ್ರದಂತೆ (ಕಣ್ಣಿನಂತೆ) ಇರುವಂತವನು. ॥೧೧೨॥

## (೧೧೩ನೇ ನಾಮವು) ವೃಷಕರ್ಮಾ,

## ಓಮ್॥ ವೃಷಕರ್ಮಣೇನಮಃ.

(ಶಂ) ಧರ್ಮಲಕ್ಷಣವಾದ ಕರ್ಮವುಳ್ಳವನು. (ವಿ) ಇವನೀ ರೀತಿಯಾಗಿ ಪರಮೋತ್ಕೃಷ್ಟನಾಗಿದ್ದರೂ ಹಿಂದೇ ಹೇಳಿರುವಂತೆ ನಮ್ಮಗಳಿಗೆಲ್ಲವೂ ಹಿತವನ್ನುಂಟುಮಾಡುವುದರಿಂದ ಧರ್ಮರೂಪವಾದ ಕಾರ್ಯವುಳ್ಳವನು. (ಮ) ಭಕ್ತರಿಗೆ ಇಷ್ಟಾರ್ಥಗಳನ್ನು ಕೊಡುವ ವ್ಯಾಪಾರವುಳ್ಳವನು "ವೃಷಕರ್ಮಾ" ಎನ್ನಲ್ಪಡುವನು. ॥ ೧೧೩ ॥

# (೧೧೪ನೇ ನಾಮವು) ವೃಷಾಕೃತಿಃ,

## ಓಮ್॥ ವೃಷಾಕೃತಯೇನಮಃ.

(ಶಂ॥ ಮ) ಧರ್ಮ ಸಂಸ್ಥಾಪನಕ್ಕಾಗಿ ಶರೀರವನ್ನು ಸ್ವೀಕರಿಸು ವಂತವನು "ವೃಷಾಕೃತಿಃ" ಎನ್ನಲ್ಪಡುವನು. "ಧರ್ಮ ಸಂಸ್ಥಾಪ ನಾರ್ಥಾಯ ಸಂಭವಾಮಿ ಯುಗೇಯುಗೆ" (೪-೮) ಎಂಬದಾಗಿ ಶ್ರೀಗೀ ತೆಯಲ್ಲಿ ಧರ್ಮ ಸಂಸ್ಥಾಪನಕ್ಕಾಗಿ ಅವತರಿಸಿ ಶರೀರ ಪರಿಗ್ರಹವನ್ನು ಮಾಡುವೆನೆಂದು ಹೇಳಿರುತ್ತಾನಷ್ಟೆ.

(ವಿ॥ ಭಾ) ವಿಶ್ವಮಾಪ್ಯಾಯಯರ್ಕಾಂತ್ಯಾ ಪೂರ್ಣೇಂದ್ವಯುತ ತುಲ್ಯಯಾ" (ಪಾಷ್ಕರಸಂ) ಎಂಬ ವಚನದಲ್ಲಿ ಹತ್ತುಸಾವಿರ ಚಂದ್ರರು ಏಕಕಾಲದಲ್ಲಿ ಉದಯಿಸಿದರೆ ಅದು ಯೆಷ್ಟು ಶೀತಲವಾಗಿರಬಹುದೋ ಅಂತಹ ಶೀತಲವಾದ ಕಾಂತಿಯಿಂದ ಪ್ರಪಂಚವನ್ನು ವೃದ್ಧಿಹೊಂದಿಸುವ ನೆಂಬದಾಗಿ ಹೇಳಿರುವಂತೆ ತಾಪತ್ರಯಗಳನ್ನು ನಾಶಪಡಿಸುವ ಅಮೃತ ಪ್ರವಾಹದಂತೆ ಅತ್ಯಂತ ಶೀತಲವಾದ ವ್ಯಾಪಾರಗಳೂ ಸುಂದರವಾದ ದಿವ್ಯ ರೂಪವೂ ಉಳ್ಳವನಾಗಿರುವುದರಿಂದ ಧರ್ಮರೂಪವಾದ ವ್ಯಾಪಾ ರವೂ ಶರೀರವೂ ಉಳ್ಳವನು "ವೃಷಾಕೃತಿಃ" ಎನ್ನಲ್ಪಡುವನು. ಈ ವಿಷಯದಲ್ಲಿ ಇನ್ನೂ ಅನೇಕ ಪ್ರಮಾಣಗಳು ಭಾಷ್ಯದಲ್ಲಿ ಉದಾಹರಿಸ ಲ್ಪಟ್ಟಿರುವುವು. ॥ ೧೧೪ ॥

ಈ ಪ್ರಕಾರವಾಗಿ (೧೨)ನೇ ಶ್ಲೋಕದಲ್ಲಿರುವ (೧೦) ನಾಮಗ ಳಿಗೂ; "ವಸತೀತಿ "ವಸು" (೧೦೫) ಸ್ತೋಷುಪ್ರೀತ್ಯಾ ಪರಮಯಾ ಸ್ವಯಂ | ವಸುನೀವ ನಿಧೌತೇಷು ಮನೋಯಸ್ಯಾಸ್ತಿ ಸರ್ವದಾ | ಸರ್ವೈಃ "ವಸುಮನಾಃ" (೧೦೬) ಪ್ರೋಕ್ತೋವಾತ್ಸಲ್ಯವತ್ವೋಪಕೋ ಮುನಃ ॥ ಸತ್ಸುಸಾಧು "ಸ್ಸತ್ಯ" (೧೦೭) ಇತಿ ಸಮಾತ್ಮಾ" (೧೦೮) ಸಮಚಿತ್ತತಃ| ಮಿತತ್ವಾಚ್ಚ ತಥಾ ಭಕ್ತೈ "ಸ್ಸಮ್ಮಿತಃ" (೧೦೯) ಪರಿ ಕೀರ್ತಿತಃ ॥ ಜ್ಞಾತೇಪರಿಚಿತೇಬಾಪಿ ಸಮತ್ವಾ "ತ್ಸಮ" (೧೧೦) ಉ ಚ್ಯತೆ | ಫಲಧಸ್ಪರ್ಶರಹಿತಸ್ಸ "ಧ್ಯಮೋಘಃ" (೧೧೧) ಪ್ರಕೀರ್ತಿತಃ ॥ ಪುಂಡರೀಕಂ ಪರಂಧಾಮ ನಿತ್ಯಮಕ್ಷರ ಮವ್ಯಯಂ | ತದ್ಗತಾನಾಮಕ್ಷಿ

ಭೂತಃ " ಪುಂಡರೀಕಾಕ್ಷ " (೧೧೦) ಈರಿತಃ ॥ ಶ್ರೇಯಸ್ಕರಂ ಧರ್ಮ ರೂಪಂ ಕರ್ಮಯಸ್ಯ ಪ್ರಚಕ್ಷತೆ । " ವೃಷಕರ್ಮೇ " ತಿ (೧೧೩) ವಿಖ್ಯಾತ ಶ್ಶುಭಕರ್ಮ ಪ್ರದೋಮನುಃ ॥ ಧರ್ಮರೂಪಾ ಕೃತಿರ್ಯಸ್ಯಸ " ವೃಷಾ ಕೃತಿ " (೧೧೪) ರುಚ್ಯತೆ । ತಾಪತ್ರಯಾಗ್ನಿ ದಗ್ಧಾನಾಂ ಸುಧೈವಾ ತ್ಯಂತ ಶೀತಲಂ ॥ ರೂಪಂಕರ್ಮಚ ಯಸ್ಯಾಸ್ತಿ ವೃಷಕರ್ಮಾ ವೃಷಾ ಕೃತಿಃ " ಎಂಬೀ ವಿವರಣಗಳನ್ನು ಕಾಣಬಹುದು.

## (೧೧೫ನೇ ನಾಮವು) ರುದ್ರಃ,
## ಓಮ್॥ ರುದ್ರಾಯನಮಃ.

(ಶಂ॥ ಭಾ) ಸಂಹಾರಕಾಲದಲ್ಲಿ ಪ್ರಜೆಗಳನ್ನು ಸಂಹರಿಸುತ ಅಳು ವಂತೆ ಮಾಡುತ್ತಾನಾದಕಾರಣದಿಂದಲಾದರೂ, ಅಳುವಿಕೆಯನ್ನು ಕೊ ಡುತ್ತಾನಾದುದರಿಂದಲಾದರೂ, ದುಃಖ ಕಾರಣವನ್ನುಂಟುಮಾಡುವುದರಿಂ ದಲಾದರೂ, " ರುದ್ರಃ " ಎನ್ನಲ್ಪಡುವನು.

(ವಿ॥ ಭಾ) ಇಂತಹ ದಿವ್ಯ ರೂಪವನ್ನೂ ದಿವ್ಯ ಚೇಷ್ಟಿತಗಳನ್ನೂ (ಲೋಕೋತ್ತರವಾದ ವ್ಯಾಪಾರಗಳನ್ನೂ) ಭಕ್ತರಿಗೆ ತೋರಿಸಿ ಅವರ ಮನಸ್ಸನ್ನು ಕರಗಿಸಿ ಆನಂದ ಬಾಷ್ಪದೊಡನೆ ಅವರನ್ನು ಅಳುವಂತೆ ಮಾಡುವಂತವನು " ರುದ್ರಃ " ಎನ್ನಲ್ಪಡುವನು. ಇದಕ್ಕೆ " ಆಹ್ಲಾದ ಶೀತನೇತ್ರಾಂಬುಃ ಪುಳಕೀಕೃತ ಗಾತ್ರವಾನ್ । ಸದಾಪರ ಗುಣಾವಿಷ್ಟೋ ದ್ರಷ್ಟವ್ಯ ಸ್ಸರ್ವದೇಹಿಭಿಃ " (ಶ್ರೀಪಾಂಚ॥ ವಿ॥ ತ) ಎಂಬ ಪ್ರಮಾಣ ದಲ್ಲಿ ಹೇಳಿರುವಂತೆ " ಸದಾ " ಭಗವದ್ಗುಣ ವರ್ಣನೆದಲ್ಲಿ ಆಸಕ್ತನಾದವನು ಅದರಿಂದುಂಟಾದ ಸಂತೋಷದಿಂದ ಶೀತಲವಾದ ಆನಂದ ಬಾಷ್ಪಯು ಕ್ತನಾಗಿಯೂ ರೋಮಾಂಚಿತವಾದ ದೇಹವುಳ್ಳವನಾಗಿಯೂ ಸಮಸ್ತ ಪ್ರಾಣಿಗಳಿಂದ ಕಾಣಲ್ಪಡುವನೆಂಬ ಅರ್ಥವನ್ನು ಕಂಡುಕೊಳ್ಳಬೇಕು.

(ಮ) ರುದ್ರನನ್ನು ಅಳುವಂತೆ ಮಾಡುವುದರಿಂದಲಾದರೂ ದುಃಖಗ ಳನ್ನು ಹೋಡಿಸುವುದರಿಂದಲಾದರೂ "ರುದ್ರಃ" ಎನ್ನಲ್ಪಡುವನು ॥೧೧೫॥

## (೧೧೬ನೇ ನಾಮವು) ಬಹುಶಿರಾಃ,
## ಓಮ್॥ ಬಹುಶಿರಸೇನಮಃ.

(ಶಂ|| ವಿ|| ಮ) ಅನೇಕ ಸಹಸ್ರ ಸಂಖ್ಯಾಕಗಳಾದ ಶಿರಸ್ಸುಳ್ಳವನು "ಬಹುಶಿರಾಃ" ಎನ್ನಲ್ಪಡುವನು. ಇದನ್ನು (ಶಂ|| ಮ) "ಸಹಸ್ರ ಶೀರ್ಷಾ ಪುರುಷಃ" ಎಂಬ ಪುರುಷಸೂಕ್ತ ಪ್ರಮಾಣವು ಹೇಳುವುದು. ಈ ಪ್ರಮಾಣದಲ್ಲಿರುವ ಸಹಸ್ರ ಶಬ್ದವು "ಶತಂಸಹಸ್ರ ಮಯುತಂ ಸರ್ವಮಾನಂತ್ಯ ವಾಚಕಂ" ಎಂಬಂತೆ ಪರಮಾತ್ಮನಿಗೆ ಅನೇಕ ಶಿರಸ್ಸುಗಳುಳ್ಳವಿಕೆಯನ್ನು ಬೋಧಿಸುವುದು.

## (೧೧೭ನೇ ನಾಮವು) ಬಭ್ರುಃ,

## ಓಮ್|| ಬಭ್ರವೇನಮಃ.

(ವಿ) ಅಂತಹ ಸಹಸ್ರ ಶಿರಸ್ಸುಗಳುಳ್ಳ ರೂಪದಿಂದ (ಮ|| ಶಂ|| ವಿ) ಲೋಕಗಳನ್ನು ಧರಿಸುವಂತವನು "ಬಭ್ರುಃ" ಎನ್ನಲ್ಪಡುವನು. ಇದಕ್ಕೆ (ವಿ) "ಯಸ್ಯಸಾ ಸ ಕಲಾಪೃಥ್ವೀ ಫಣಾಮಣಿ ಶಿಲಾರುಣಾ | ಬಿಭರ್ತಿ ಮಾಲಾಂ ಲೋಕಾನಾಂ || ಯೋನಂತಃ ಪೃಥಿವೀಂಧರ್ತೆ ಶೇಖರ ಸ್ಥಿತಿಸಂಸ್ಥಿತಾಂ |" ಇತ್ಯಾದಿಗಳು ಈ ಮೇಲ್ಕಂಡ ಅರ್ಥಗಳನ್ನು ಹೇಳುವುವು. || ೧೧೭ ||

(ಸಕಲವಾದ ಭೂಮಿಯೂ ಯಾವ ಪರಮಪುರುಷನ ಫಣಾಮಂಡಲದಲ್ಲಿ ಪ್ರಕಾಶಿಸುತಲಿರುವ ರತ್ನಗಳ ಕಾಂತಿಗಳಿಂದ ಕೆಂಪು ವರ್ಣವಾಗಿರುವುದೊ; ಅವನೆ ಮಾಲಾಕಾರವಾಗಿರುತಲಿರುವ ಲೋಕಗಳನ್ನು ಧರಿಸುವಂತವನು. ತನ್ನ ಶಿರಸ್ಸುಗಳ ಆಧಾರದಮೇಲೆ ಇರುವ ಭೂಮಿಯನ್ನು ಯಾವ ಅನಂತನು ಧರಿಸುವುನೊ; ಎಂದೀ ಪ್ರಮಾಣಗಳ ಅರ್ಥವು)

## (೧೧೮ನೇ ನಾಮವು) ವಿಶ್ವಯೋನಿಃ,

## ಓಮ್|| ವಿಶ್ವಯೋನಯೇನಮಃ.

(ಮ|| ಭಾ) ಪ್ರಪಂಚಕ್ಕೆ ಕಾರಣನಾದವನು. (ವಿ|| ಭಾ) ತನ್ನನ್ನು ಸೇವಿಸುವಂತವರಾದ ಸರ್ವರನ್ನೂ ತನ್ನೊಡನೆ ಸೇರಿಸಿಕೊಳ್ಳುವಂತವನು ("ಯುಮಿಶ್ರಣೇ" ಧಾ "ಅದಾದಿಃ") "ವಿಶ್ವಯೋನಿಃ" ಎನ್ನಲ್ಪಡುವನು. || ೧೧೮ ||

## (೧೧೯ನೇ ನಾಮವು) ಶುಚಿಶ್ರವಾಃ,

## ಓಮ್|| ಶುಚಿಶ್ರವಸೇನಮಃ.

(ಶಂ॥ ಮ) ಪರಿಶುದ್ಧಗಳೂ ಕೇಳುವುದಕ್ಕೆ ಯೋಗ್ಯಗಳೂ ಆದ ನಾಮಗಳುಳ್ಳವನು "ಶುಚಿಶ್ರವಾಃ" ಎನ್ನಲ್ಪಡುವನು.

(ವಿ॥ ಭಾ) ಅಂತಹ ಭಕ್ತರು ಹೃದಯ ಶುದ್ಧಿಯೊಡನೇ ಹೇಳುವಂತವುಗಳನ್ನು ಅವಶ್ಯವಾಗಿ ಕೇಳುವಂತವನು "ಶುಚಿಶ್ರವಾಃ" ಎನ್ನಲ್ಪಡುವನು. ॥ ೧೧೯ ॥

## (೧೨೦ನೇ ನಾಮವು) ಅಮೃತಃ,

## ಓಮ್॥ ಅಮೃತಾಯನಮಃ.

(ಶಂ॥ ಮ) "ಅಜರೋಽಮರಃ" ಎಂಬ ಶ್ರುತ್ಯನುಸಾರವಾಗಿ ಮರಣವಿಲ್ಲದವನು "ಅಮೃತಃ" ಎನ್ನಲ್ಪಡುವನು.

(ವಿ॥ ಭಾ) ಅಂತಹ ಭಕ್ತರುಗಳಿಗೆ ಅತ್ಯಂತ ಭೋಗ್ಯಭೂತನಾಗಿರುವುದರಿಂದಲಾದರೂ ಜರಾಮರಣ ನಿವಾರಣದಿಂದಲಾದರೂ ಸರ್ವದಾ ಸೇವಿಸಿದರೂ ತೃಪ್ತಿಯನ್ನುಂಟುಮಾಡದೇ ಇರುವುದರಿಂದಲಾದರೂ "ಅಮೃತಃ" ಎನ್ನಲ್ಪಡುವನು. ಅಥವಾ ಅಮೃತರಸದಂತೆ ಇರುವಂತವನು. "ಅಮೃತಸ್ಯೇವನಾತೃಪ್ಯನ್ ಪ್ರೇಕ್ಷಮಾಣಾ ಜನಾರ್ದನಂ" ಎಂಬದಾಗಿ ಪ್ರಮಾಣವು ಇರುವುದು.

(ಜನಾರ್ದನನನ್ನು ಯೆಷ್ಟು ನೋಡಿದರೂ ಅಮೃತ ಪಾನದಲ್ಲಿ ತೃಪ್ತಿಯನ್ನು ಹೊಂದದಂತ ತೃಪ್ತಿಯನ್ನು ಹೊಂದಲಿಲ್ಲ ವೆಂದರ್ಥವು.

ಇಂತಹ ಶಕ್ತಿ ಲೇಶದ ಸಂಬಂಧದಿಂದಲ್ಲವೆ ಸಮುದ್ರ ಸಾರದಲ್ಲಿ (ದೇವಾಸುರರು ಸಮುದ್ರವನ್ನು ಕಡೆದ ಕಾಲದಲ್ಲಿ ಪ್ರಾಪ್ತವಾದ ಅಮೃತವೆಂಬ ಸಾರವಾದ ರಸದಲ್ಲಿ) ಅಮೃತತ್ವವು ಔಪಚಾರಿಕವಾಗಿ ವರ್ತಿಸಿರುವುದು. ॥ ೧೨೦ ॥

## (೧೨೧ನೇ ನಾಮವು) ಶಾಶ್ವತಸ್ಥಾಣುಃ,

## ಓಮ್॥ ಶಾಶ್ವತಸ್ಥಾಣವೇನಮಃ.

(ಶಂ॥ ಮ) ಸ್ಥಿರವಾಗಿರುವಂತವನು ಸ್ಥಾಣುವೆನ್ನಲ್ಪಡುವನು. ಶಾಶ್ವತವಾಗಿರುವ ಸ್ಥಾಣುವಾದವನು "ಶಾಶ್ವತಸ್ಥಾಣುಃ" ಎನ್ನಲ್ಪಡುವನು.

(ವಿ|| ಭಾ) ತಾನು ನಿತ್ಯನಾಗಿ ಅನುಭವಿಸುವಂತರಿಗೆ ಆತ್ಮ ಪ್ರದಾನವನ್ನು ಎಷ್ಟು ಮಾಡಿದರೂ ನ್ಯೂನನಾಗದವನು ಎಂದರೆ ಹಿಂದಿನ ನಾಮದಲ್ಲಿ ಹೇಳಿರುವ ಅಮೃತದಂತೆ ಅನಿತ್ಯವಾಗದೆ ಪುನರಾವೃತ್ತಿ ಯಿಲ್ಲದಂತೆ ನಿತ್ಯವಾಗಿ ಅನುಭವಿಸಲ್ಪಡುವಂತವನು "ಶಾಶ್ವತಸ್ಥಾಣುಃ" ಎನ್ನಲ್ಪಡುವನು. || ೧೩೦ ||

## (೧೩೩ನೇ ನಾಮವು) ವರಾರೋಹಃ,
## ಓಮ್|| ವರಾರೋಹಾಯನಮಃ.

(ರಂ| ಮ) ಶ್ರೇಷ್ಠವಾದ ಆರೋಹವುಳ್ಳವನು. ಆರೋಹವೆಂದರೆ ತೊಡೆ, ಅದುಳ್ಳವನು. ಅಥವಾ (ಶಂ) "ನಚಪುನರಾವರ್ತತೆ" (ಛಾಂದೋ|| ೮|| ೧೫|| ೧) ಯಂಪ್ರಾಪ್ಯ ನನಿವರ್ತಂತೆ" (ಗೀತಾ|| ೮|| ೨೧) ಇತ್ಯಾದಿ ವಚನಾನುಸಾರವಾಗಿ (ವರಮಾರೋಹಣಂ ಯಸ್ಮಿನ್ನಿತಿವಾ) ಪುನರಾವೃತ್ತಿ ರಹಿತವಾಗಿರುವುದರಿಂದ ಶ್ರೇಷ್ಠವಾದ ಆರೋಹವು ಇವನಲ್ಲಿ ಉಂಟಾಗಿರುವುದು ಎಂದರೆ ಆರೂಢರಾದವರಿಗೆ ಪುನರಾವೃತ್ತಿ ಇಲ್ಲದೆ ಇರುವುದರಿಂದ "ವರಾರೋಹಃ" ಎನ್ನಲ್ಪಡುವನು.

(ವಿ|| ಭಾ) ಆದುದರಿಂದಲೆ "ವರಾರೋಹಃ" ಎನ್ನಲ್ಪಡುವನು. ಶ್ರೇಷ್ಠವಾದ ಪ್ರಾಪ್ತಿಯುಳ್ಳವನು. ಭಗವಂತನನ್ನು ಹೊಂದುವುದು ಇತರಗಳಾದ ಪ್ರಾಪ್ತಿಗಳಿಗಿಂತಲೂ ಶ್ರೇಷ್ಠವಾಗಿ ತಾನೇ ಇರುವುದು. ಇತರ ಪುರುಷಾರ್ಥಗಳನ್ನು ಹೊಂದುವುದು ಅತ್ಯಂತ ನಿಕೃಷ್ಟವೆಂತಲೂ ಭಗವತ್ಪ್ರಾಪ್ತಿ ರೂಪವಾದ ಪುರುಷಾರ್ಥವು ಸರ್ವೋತ್ಕೃಷ್ಟವೆಂತಲೂ "ಏತೇವೈನಿರಯಾಸ್ತಾತ ಸ್ಥಾನಸ್ಯ ಪರಮಾತ್ಮನಃ" ಎಂಬ ಪ್ರಮಾಣವು ಬೋಧಿಸುವುದು.

ಪರಬ್ರಹ್ಮವು ಪರ ವ್ಯೂಹ ವಿಭವ ವೆಂಬದಾಗಿ ಮೂರು ವಿಧವಾಗಿರುವುದೆಂದು ಭಾಗವತ ಸಿದ್ಧಾಂತವು. ಅವುಗಳಲ್ಲಿ ಪರ ವೆಂಬುವುದು ಕಾರ್ಯರಹಿತವಾದ ಕಾರಣವಾಗಿ ಮಾತ್ರವೆ ಇರುವದರೊಡನೆ ಕಾರ್ಯದೊಡನೆ ಸಂಬಂಧಿಸದೆ ಜ್ಞಾನಶಕ್ತಿ ಬಲೈಶ್ವರ್ಯ ವೀರ್ಯಶಕ್ತಿ ತೇಜಸ್ಸುಗಳೆಂಬ ಷಾಡ್ಗುಣ್ಯ ಪರಿಪೂರ್ಣವಾಗಿ ಮಹಾರ್ಣವದಂತೆ ಪ್ರಕಾಶಿಸುತ ಅನಂತ

ವಾಗಿಯೂ ನಿತ್ಯವಾಗಿಯೂ ಇರುವ ಭೋಗ ಭೂಮಿಯನ್ನು ಏಕಚ್ಛತ್ರಾಧಿಪತ್ಯವನ್ನಾಗಿ ಆಳುತಲೂ ಮುಕ್ತ ಪುರುಷರುಗಳಿಂದ ಸೇವಿಸಲ್ಪಡುತಲೂ ಉಪಾಧಿ ರಹಿತವೂ ಆದ ಸ್ಥಿತಿಯು.

ವ್ಯೂಹವು ಮೋಕ್ಷಾಪೇಕ್ಷಿಗಳನ್ನುಂಟುಮಾಡ ಲಪೇಕ್ಷಿಸಿ ಅದಕ್ಕಾಗಿ ಸೃಷ್ಟಿ ಸ್ಥಿತಿ ಲಯಗಳೆಂತಲೂ ಶಾಸ್ತ್ರವೆಂತಲೂ ಅದರ ತಾತ್ಪರ್ಯವೆಂತಲೂ ಅದರ ಫಲವೆಂತಲೂ ಧ್ಯಾನವೆಂತಲೂ ಆರಾಧನ ವೆಂತಲೂ ಲೀಲಾ ಎಂತಲೂ ಈ ರೀತಿಯಾಗಿ ಮಾಡತಕ್ಕ ಕಾರ್ಯ ವರ್ಗಕ್ಕೆ ಉಪಯುಕ್ತವಾಗಿರುವ ಪರವಸ್ತುವಿನ ಗುಣಗಳಲ್ಲಿ ಕೆಲವನ್ನು ವಿಭಾಗಿಸಿಕೊಂಡು ಲೀಲಾ ವಿಭೂತಿಯನ್ನು ನಿರ್ವಹಿಸಿ ಮೋಕ್ಷಸಾಧನವಾಗಿದ್ದುಕೊಂಡು ನಾಲ್ಕು ವಿಧವಾಗಿರುವ ಸ್ಥಿತಿಯು.

ವಿಭವವೆಂದರೆ ? ಅಂತಹ ವ್ಯೂಹೇಚ್ಛೆಯ ಯೊಡನೆ ದೇವ ಮನುಷ್ಯತಿರ್ಯಕ್ಕೆಂಬ ಹೇಳುವ ತನ್ನ ವಿಭೂತಿಯಂತೆ ಕಾಣಲ್ಪಡುವ ತನ್ನ ಇಚ್ಛಾನುಗುಣವಾದ ಅವತಾರ ವರ್ಗವು. ಈ ವಿಷಯವು ಶ್ರೀಸಾತ್ವತ ಸಂಹಿತೆಯಲ್ಲಿ "ಷಾಡ್ಗುಣ್ಯ ವಿಗ್ರಹಂದೇವಂ ಭಾಸ್ವಜ್ಜ್ವಲನ ತೇಜಸಂ | ಸರ್ವತಃ ಪಾಣಿಪಾದಂತತ್" ಎಂಬದಾಗಿ ಉಪಕ್ರಮಿಸಿ "ಪರಮೇತತ್ಸಮಾಖ್ಯಾತ ಮೇಕಂಸರ್ವಾಶ್ರಯಂವಿಭುಂ | ಏತತ್ಪೂರ್ವತ್ರಯಂಚಾನ್ಯದ್ಜ್ಞಾನಾದ್ಯೈರ್ಭೇದಿತಂಗುಣೈಃ ‖ ವಿದ್ಧ್ಯೇತದ್ವ್ಯೂಹ ಸಂಜ್ಞಂ ವೈ ನಿಶ್ರೇಯಸ ಫಲಪ್ರದಂ | ಮುಖ್ಯಾನುವೃತ್ತಿ ಭೇದೇನಯುಕ್ತಂ ಜ್ಞಾನಾದಿಭಿರ್ಗುಣೈಃ ‖ ನಾನಾಕೃತಿಚ ತದ್ವಿದ್ಧಿ ವಿಭವಂಭುಕ್ತಿ ಮುಕ್ತಿದಂ" ಎಂಬದಾಗಿ ಹೇಳಲ್ಪಟ್ಟಿರುವುದು.

("ಷಡ್ಗುಣಗಳಿಂದ ಪ್ರಕಾಶಿಸುವಂತಹ ಶರೀರವೂ ಜ್ವಲಿಸುವ ಅಗ್ನಿಯಂತೆ ಪ್ರಕಾಶಿಸುವಂತಹ ತೇಜಸ್ಸೂ, ಸರ್ವತೋ ಮುಖವಾದ ಕರಚರಣಾದ್ಯವಯವಗಳೂ ವುಳ್ಳ ಪರಮಪುರುಷನನ್ನು" ಎಂದುಪಕ್ರಮಿಸಿ "ಇದುತಾನೇ ಸಕಲಕ್ಕೂ ಆಶ್ರಯವಾಗಿಯೂ ಸರ್ವ ವ್ಯಾಪಕವಾಗಿಯೂ ಇರುವ ಪರಸ್ವರೂಪ ವೆನ್ನಲ್ಪಡುವುದು. ಇದರ ಮೂಲಕವಾಗಿ ಮತ್ತೂ ಮೂರು (ಸಂಕರ್ಷಣ ಪ್ರದ್ಯುಮ್ನಾ ನಿರುದ್ಧರೆಂಬ) ವ್ಯೂಹಗಳಿರುವುವು. ಅವು ಜ್ಞಾನವೇ ಮೊದಲಾದ ಗುಣಗಳಿಂದ ಪರಸ್ಪರವಾಗಿ ಭೇದಿಸಲ್ಪಟ್ಟಿರುವುವು. ಇದುತಾನೆ ವ್ಯೂಹವೆಂಬ ಹೆಸರುಳ್ಳದ್ದಾಗಿಯೂ ಮೋಕ್ಷವೆಂಬ ಪುರುಷಾರ್ಥವನ್ನು ಕೊಡುವಂತವು ಎಂತಲೂ ತಿಳಿದುಕೊಳ್ಳು. ಜ್ಞಾನಾದಿ ಗುಣಗಳು ಮುಖ್ಯ

ವಾಗಿ ಅನುವರ್ತ್ತಿಸಿರುತ ಭೋಗ ಮೋಕ್ಷಗಳನ್ನು ಸಾಧಿಸುವಂತಾದ್ದಾಗಿ ನಾನಾವಿಧವಾಗಿರುವುದು ವಿಭವವೆನ್ನಲ್ಪಡುವುದೆಂತಲೂ ತಿಳಿದುಕೊಳ್ಳೆಂದು ಈ ಮೇಲಿನ ಪ್ರಮಾಣ ತಾತ್ಪರ್ಯವು.)

ಅಂತಹ ವಿಭವಾವತಾರಗಳಲ್ಲಿ ಕೆಲವು ಮತ್ಸ್ಯ ಕೂರ್ಮಾದಿಗಳಂತೆ ಸಾಕ್ಷಾತ್ತಾಗಿರುವುದು. ಮತ್ತೆ ಕೆಲವು ಋಷಿ ಎನ್ನಲ್ಪಡುವ ಮಹಿಮೆಶಾಲಿಗಳಾದ ಪುರುಷರುಗಳಲ್ಲಿ ಎಂದರೆ ಭಾರ್ಗವ ರಾಮ ಕೃಷ್ಣ ದ್ವೈಪಾಯನರೆಂಬ ವ್ಯಾಸಾದಿಗಳಲ್ಲಿ ಅಧಿಷ್ಠಿಸಿರುವುದು. ಇನ್ನೂ ಕೆಲವು ತ್ರಿಪುರ ಸಂಹಾರ ಕಾಲದಲ್ಲಿ ರುದ್ರನ ಬಾಣದಲ್ಲಿ ತನ್ನ ಶಕ್ತಿಯನ್ನು ಆವೇಶ ಮಾಡಿಸಿದಂತೆ ಆಯಾ ಕಾರ್ಯ ಕಾಲದಲ್ಲಿ ತನ್ನ ಶಕ್ತಿಮಾತ್ರವನ್ನು ಆವೇಶ ಮಾಡಿಸುವುವು. ಇನ್ನೂ ಕೆಲವು ಅರ್ಚಾ ವಿಗ್ರಹಾದಿಗಳಲ್ಲಿ ಸಾಕ್ಷಾತ್ತಾಗಿ ಆವಿರ್ಭವಿಸುವಂತವುಗಳಾಗಿರುವುವು. ಈ ಪ್ರಕಾರವಾಗಿ ವಿಭವಾವತಾರವು ನಾಲ್ಕು ವಿಧವಾಗಿರುವುದು.

ಒಳ್ಳೇದು ಆಗಲಿ; ಚತುರ್ಮುಖ ಬ್ರಹ್ಮಾದಿಗಳೂ ಕೂಡ ಭಗವತ್ಪ್ರಾದುರ್ಭಾವಗಳೆಂತಲೂ, ಆದುದರಿಂದ ಪರಮಪುರುಷನೊಡನೆ ಅಭಿನ್ನಗಳೆಂತಲೂ, ಶ್ರುತಿಯು ಹೇಳುವುದೆಂದರೆ ? ಮೇಲೆ ಹೇಳಿರುವ ಅವತಾರಗಳಿಗೆ ಸಮಾನವಾಗಿ ಚತುರ್ಮುಖಾದಿಗಳನ್ನು (ಭಗವದವತಾರಗಳನ್ನಾಗಿ) ಹೇಳಿ ಪರಮಪುರುಷನೊಡನೆ ಅಭೇದವಾಗಿ ಹೇಳುವುದು ಮೂಢಜಲ್ಪಿತವಾಗಿರುವುದು. ಈಪ್ರಕಾರವಾಗಿ ಹೇಳಿದರೆ ಅಸ್ಮದಾದಿಗಳಿಗೂ ತೃಣಾದಿಗಳಿಗೂ ಕೂಡ " ಸರ್ವಂ ಖಲ್ವಿದಂ ಬ್ರಹ್ಮ " (ಛಾ|| ೩|| ೧೪|| ೧) ಎಂಬದಾಗಿ ಶ್ರುತಿಯು ಹೇಳುವುದರಿಂದ ಪರಮಾತ್ಮನೊಡನೆ ಸರ್ವರಿಗೂ ಅಭೇದ ಪ್ರಸಂಗ ಉಂಟಾಗಿ ಸರ್ವವೂ ಭಗವತ್ಪ್ರಾದುರ್ಭಾವಗಳೆಂದು ಪ್ರಾಪ್ತವಾಗುವುದು. ಮತ್ತು ಅವರುಗಳನ್ನು ಭಗವದವತಾರ ಪರಿಗಣನೆಯಲ್ಲಿ ಬಿಡದೇ ಸೇರಿಸಲೂ ಇಲ್ಲವು. ಅವರುಗಳನ್ನು ದೇವ ಮನುಷ್ಯಾದಿಗಳಂತೆ ಸೃಷ್ಟಿಗೆ ವಿಷಯರನ್ನಾಗಿಯೂ ಶಾಸ್ತ್ರವು ಹೇಳಿರುವುದು. ಮತ್ತು ಅವರುಗಳನ್ನು ಭಗವತ್ಪ್ರಾದುರ್ಭಾವಗಳಿಗಿಂತಲೂ ಭೇದವುಳ್ಳವರನ್ನಾಗಿಯೂ ಭಗವತ್ಪ್ರಾದುರ್ಭಾವ ಶಬ್ದಕ್ಕಿಂತಲೂ ಬೇರೆಯಾಗಿರುವ ಪ್ರಾದುರ್ಭಾವ ಶಬ್ದದಿಂದ ನಿರ್ದೇಶಿಸಲ್ಪಟ್ಟವರನ್ನಾಗಿಯೂ ಭಗವದ್ವಿಭೂತಿ ಲೇಶದಿಂದುಂಟಾಗಿ ಭಗವತ್ಪ್ರಾದುರ್ಭಾವ ವಿಶೇಷಾಧೀನವಾದ ವ್ಯಾಪಾರಗಳುಳ್ಳವರೆಂಬಿದೇ ಮೊದಲಾದ ವ್ಯವಹಾರ ವಿಷಯರ

ನ್ನಾಗಿಯೂ ಭಗವಚ್ಛಾಸ್ತ್ರದ ಅನೇಕ ಪ್ರಕರಣಗಳು ಪ್ರತಿಪಾದಿಸು ತ್ತವೆ. ಈ ಅರ್ಥವು ಶ್ರೀಪಾಷ್ಕರದಲ್ಲಿ " ಜ್ಞಾನೋಪದೇಷ್ಟಾ ಭಗವಾನ್ ಕಪಿಲಾಕ್ಷಸ್ತ್ವಧೋಕ್ಷಜಃ | ವಿದ್ಯಾಮೂರ್ತಿ ಶ್ಚತುರ್ವಕ್ತ್ರೋ ಬ್ರಹ್ಮಾ ವೈ ಲೋಕಪೂಜಿತಃ ‖ ತದಂಶಭೂತೋವೈ ಯಸ್ಯ ವಿಶ್ವವ್ಯಂಜನ ಲಕ್ಷಣಃ " ಎಂಬದಾಗಿ ವಿವರಿಸಲ್ಪಟ್ಟಿರುವುದು.

(ಜ್ಞಾನೋಪದೇಶವನ್ನು ಮಾಡತಕ್ಕ ಕಪಿಲಾಕ್ಷರೆನ್ನುವಂತವರು ಶ್ರೀಮನ್ನಾರಾಯಣನೆ. ವಿದ್ಯಾಮೂರ್ತಿಯಾಗಿ ನಾಲ್ಕು ಮುಖಗಳೊಡನೆ ಕೂಡಿ ಲೋಕಪೂಜ್ಯನಾದ ಚತುರ್ಮುಖನು ಪ್ರಪಂಚ ರೂಪದಿಂದ ಪ್ರಕಾಶಿಸುವುದಕ್ಕಾಗಿ ಅವನ ಅಂಶವಾಗಿ ಹುಟ್ಟಿದ ಪುರುಷನೆಂದೀ ಪ್ರಮಾಣಾರ್ಥವು.)

ಈಪ್ರಕಾರವಾಗಿಯೇ ಬ್ರಹ್ಮ ರುದ್ರರು ಭಗವದಂಶ ವೆಂಬುವುದಕ್ಕೆ " ಅಂಶೋನಾನಾ ವ್ಯಪದೇಶಾತ್ " ಎಂಬ (೨‖ ೩‖ ೪೨) ಬ್ರಹ್ಮ ಸೂತ್ರ ನ್ಯಾಯದಿಂದ ಸರ್ವ ಜೀವರಿಗೂ ಉಂಟಾಗಿರುವ ಭಗವದಂಶತ್ವೇನ ನಿರ್ವಾಹವನ್ನು ಅನೇಕ ಪ್ರಮಾಣೋಪನ್ಯಾಸ ಪೂರ್ವಕವಾಗಿ ಮಾಡಿ ಇವರನ್ನು ಸೃಷ್ಟಿಗೆ ವಿಷಯರನ್ನಾಗಿಯೂ ಕರ್ಮವಶ್ಯರನ್ನಾಗಿಯೂ ಭಗವದ್ವಿಭೂತಿ ಕೋಟಿಯಲ್ಲಿ ಪ್ರಮುಖರನ್ನಾಗಿಯೂ ವಿಸ್ತಾರವಾಗಿ ಹೇಳಿರುವ ಸಂಗತಿಗಳನ್ನು ಭಾಷ್ಯದಲ್ಲಿಯೇ ವಿವರವಾಗಿ ನೋಡಬಹುದು. ಗ್ರಂಥ ವಿಸ್ತರ ಭಯದಿಂದಲೂ ವಿಷಯ ಪ್ರಾಧಿಮೆಯಿಂದ ಸರ್ವರಿಗೂ ಸುಲಭವಾಗಿ ಗ್ರಹಿಸ ಲಶಕ್ಯವಾಗಿರುವುದರಿಂದಲೂ ಸಂಗ್ರಹವಾಗಿ ಬರೆದಿರುವೆವು. ಇದರಿಂದ ಬ್ರಹ್ಮ ವಿಷ್ಣು ಮಹೇಶ್ವರರೆಂಬ ತ್ರಿಮೂರ್ತಿಗಳನ್ನು ಸಮಾನರನ್ನಾಗಿ ಹೇಳುವ ಪಂಡಿತ ನ್ಯಾಯವು ತಮ್ಮಗಳನ್ನು ಪಂಡಿತರನ್ನಾಗಿ ತಿಳಿದುಕೊಂಡಿರುವಂತವರ ವ್ಯಾಮೋಹ ರೂಪವಾಗಿರುವುದಲ್ಲದೆ ಶಾಸ್ತ್ರಾರ್ಥ ರೂಪವಾಗಿರಲಾರದೆಂ ದರಿಯಬೇಕು. ಮತ್ತು ಇಂತಹ ಸಂದರ್ಭಗಳು ಅಲ್ಲಲ್ಲಿ ಸ್ಥಾಪಿಸಲ್ಪಡುತಲೂ ಇರುವುವು. ‖ ೧೨೨ ‖

## (೧೨೩ನೇ ನಾಮವು) ಮಹಾತಪಾಃ,

### ಓಮ್‖ ಮಹಾತಪಸೇನಮಃ.

(ಶಂ‖ ಭಾ) " ಯಸ್ಯಜ್ಞಾನ ಮಯಂತಪಃ " (ಮುಣ್ಡಕೋಪ‖ ೧‖ ೧) ಎಂಬ ಶ್ರುತಿ ಪ್ರಮಾಣಾನುಸಾರವಾಗಿ ಸೃಷ್ಟಿ ವಿಷಯವಾದ ಜ್ಞಾನವುಳ್ಳವನು.

(ವಿ|| ಭಾ) ಮೊದಲಿನ "ಕಿಮೇಕಂ ದೈವತಂಲೋಕೇ ಕಿಂವಾಪ್ಯೇಕಂ ಪರಾಯಣಂ" ಎಂಬ ಪ್ರಾಪ್ಯವಿಷಯವಾದ ಧರ್ಮ ಪುತ್ರರ ಪ್ರಶ್ನೆಗೆ ಅದರ ಪ್ರತ್ಯುತ್ತರಗಳು ಪ್ರಾಯೇಣ ಇದುವರಿಗಿನ ನಾಮಗಳಿಂದಲೇ ಹೇಳಲ್ಪಟ್ಟಿರುವುವು. ಇನ್ನು ಮುಂದೆ "ಸ್ತುವಂತಃ ಕಂ" ಎಂಬಿದೇ ಮೊದಲಾದ ಉಪಾಯ ವಿಷಯವಾದ ಪ್ರಶ್ನೋತ್ತರಗಳ ವಿಷಯವಾಗಿ ವ್ಯೂಹವು ಹೇಳಲ್ಪಡುವುದು. ಈ ವ್ಯೂಹಗಳಲ್ಲಿ ಮೊದಲು "ವರಾರೋಹಃ" ಇತ್ಯಂತಗಳಾದ ನಾಮಗಳಿಂದ ವಾಸುದೇವ ವ್ಯೂಹವು ಇವರ ಅಸಾಧಾರಣ ಧರ್ಮವಾದ ಪರತ್ವವರ್ಣನ ಮುಖವಾಗಿ ಹೇಳಲ್ಪಡುವುದು. ಮಹಾತಪಾಃ–ಪೂಜ್ಯವಾದ ಜ್ಞಾನವುಳ್ಳವನು, "ಯಸ್ಯಜ್ಞಾನ ಮಯಂತಪಃ" ಎಂಬ ಮುಂಡುಕೋಪ ನಿಷತ್ಪ್ರಮಾಣವು ಈ ಅರ್ಥದಲ್ಲಿ ಪ್ರಮಾಣವಾಗಿರುವುದು.

ಇಲ್ಲಿ ಮುಖ್ಯವಾಗಿ ತಿಳಿಯತಕ್ಕ ಅಂಶಗಳನ್ನು ಸ್ವಲ್ಪಮಟ್ಟಿಗೆ ವಿವರಿಸುವೆವು. ವಾಸುದೇವ ಸಂಕರ್ಷಣ ಪ್ರದ್ಯುಮ್ನಾ ನಿರುದ್ಧರೆಂಬ ನಾಲ್ಕು ವ್ಯೂಹಗಳಿಗೂ ಜ್ಞಾನಶಕ್ತಿ ಬಲೈಶ್ವರ್ಯ ವೀರ್ಯ ತೇಜಸ್ಸುಗಳೆಂಬ ಆರುಗುಣಗಳೂ ವ್ಯಾಪಾರಗಳೂ ಶ್ರೀ ಪಾಂಚರಾತ್ರ ಶಾಸ್ತ್ರದಲ್ಲಿ ಹೇಳಿರುವ ಕ್ರಮದಿಂದ ವಿಭಕ್ತಗಳಾಗಿರುವುವು. ಈ ಕ್ರಮವನ್ನು ಈ ಸಹಸ್ರನಾಮ ಭಾಷ್ಯಕಾರರಾದ ಶ್ರೀಪರಾಶರಭಟ್ಟರವರೇ ಶ್ರೀರಂಗ ರಾಜಸ್ತವವೆಂಬ ಗ್ರಂಥರತ್ನದಲ್ಲಿ,

"ಷಾಡ್ಗುಣ್ಯಾ ದ್ವಾಸುದೇವಃ ಪರಇತಿ ಸಭವಾನ್ಮುಕ್ತ ಭೋಗ್ಯೋ ಬಲಾಢ್ಯಾದ್ಬೋಧಾತ್ಸಂಕರ್ಷಣಸ್ತ್ವಂ ಹರಸಿವಿತನುಷೆ ಶಾಸ್ತ್ರಮೈಶ್ವರ್ಯ ವೀರ್ಯಾತ್ | ಪ್ರದ್ಯುಮ್ನ ಸ್ಸರ್ಗಧರ್ಮೌನಯಸಿಚ ಭಗವನ್‌ಶಕ್ತಿತೇಜೋ ನಿರುದ್ಧೋಬಿಭ್ರಾಣಃ ಪಾಸಿತತ್ವಂ ಗಮಯಸಿಚ ತಥಾವ್ಯೂಹ್ಯ ರಂಗಾಧಿರಾಜ ||" (ಉತ್ತರಶ|| ೩೯ನೆ ಶ್ಲೋ.)

ಎಂಬ ಶ್ಲೋಕದಿಂದ ವಾಸುದೇವಾದಿ ವ್ಯೂಹ ಚತುಷ್ಟಯದ ಗುಣ ವ್ಯಾಪಾರ ಭೇದಗಳನ್ನು ಸಂಗ್ರಹವಾಗಿ ಅನುಗ್ರಹಿಸಿರುತ್ತಾರೆ. ಇದರ ಅರ್ಥವು = (೧ನೇದು) ಭಗವನ್–ಜ್ಞಾನ ಶಕ್ತ್ಯಾದಿ ಷಡ್ಗುಣಗಳಿಗೆ ಆ ವಾಸಭೂತನಾದ, ಹೇ ರಂಗಾಧಿರಾಜ–ಶ್ರೀರಂಗನಾಥನೆ, ಸಭವಾನ್–ಅಂತಹ ಪ್ರಸಿದ್ಧವಾದ ಮಹಿಮೆಯುಳ್ಳ ನೀನು, ವ್ಯೂಹ್ಯ–

ವ್ಯೂಹ್ಯ—ವಾಸುದೇವಾದಿ ವ್ಯೂಹ್ಯರೂಪದಿಂದ ಅವತರಿಸಿ, ಷಾಡ್ಗುಣ್ಯಾತ್—ಜ್ಞಾನಾದಿಗಳಾದ ಆರು ಗುಣಗಳುಳ್ಳವನಾಗಿರುವುದರಿಂದ, ಮುಕ್ತಭೋಗ್ಯಃ—ಮುಕ್ತಾತ್ಮರಿಂದ ಅನುಭವಿಸಲ್ಪಟ್ಟವರಾಗಿ, ಪರವಾಸುದೇವ ಇತಿ—ಪರವಾಸುದೇವರೆನ್ನಲ್ಪಟ್ಟ ಶ್ರೇಷ್ಠವಾದ ಮೂರ್ತಿಯುಳ್ಳವನಾಗಿರುವಿ. ಪರನೆಂಬದಾಗಿ ಹೇಳಲ್ಪಟ್ಟ ವಾಸುದೇವನೆಂಬ ನೀನು ಜ್ಞಾನಶಕ್ತ್ಯಾದಿ ಷಡ್ಗುಣ ಪೂರ್ಣನಾಗಿದ್ದುಕೊಂಡು ಮುಕ್ತ ಭೋಗ್ಯನಾಗಿರುವಿ ಎಂದರ್ಥವು. ಇದರಿಂದ ಪರವಾಸುದೇವ ವ್ಯೂಹದಲ್ಲಿ ಷಡ್ಗುಣ ಪೂರ್ತಿಯೂ ಮುಕ್ತರಿಗೆ ತನ್ನ ಅನುಭವರೂಪ ಭೋಗವನ್ನು ಕೊಡುವಿಕೆ ಎಂಬ ವ್ಯಾಪಾರವೂ ಅನುಸಂಧೇಯವಾಗಿರುವುದು. ಷಾಡ್ಗುಣ್ಯ ಪೂರ್ತಿಯೂ ಮುಕ್ತಭೋಗ ಪ್ರದಾನ ರೂಪವಾದ ವ್ಯಾಪಾರವೂ ವಾಸುದೇವ ವ್ಯೂಹಗತವಾಗಿರುವುದೆಂದರ್ಥವು.

(೨ನೇದು) ಬಲಾಢ್ಯಾದ್ಬೋಧಾತ್—ಬಲಸಹಿತವಾದ ಜ್ಞಾನದಿಂದ, ತ್ವಂ—ನೀನು, ಸಂಕರ್ಷಣಸ್ಸನ್—ಸಂಕರ್ಷಣನೆಂಬ ಸಂಜ್ಞೆಯುಳ್ಳವನಾಗಿ, ಹರಸಿ—ಜಗತ್ಸಂಹಾರವನ್ನು ಮಾಡುತ್ತಿ, ಶಾಸ್ತ್ರಂಚ—ಶಾಸ್ತ್ರವನ್ನೂ, ವಿತನುಷೇ—ಚನ್ನಾಗಿ ವಿಸ್ತರಿಸುವಂತೆ ಮಾಡುತ್ತಿ, ಷಡ್ಗುಣಗಳಲ್ಲಿ ಜ್ಞಾನ ಬಲಗಳೆಂಬ ಗುಣಗಳೂ ಜಗತ್ಸಂಹಾರ ಶಾಸ್ತ್ರ ವಿಸ್ತರ ಕರಣವೆಂಬ ವ್ಯಾಪಾರಗಳೂ ಸಂಕರ್ಷಣ ವ್ಯೂಹಕ್ಕೆ ಸೇರಿರುವುವು

(೩ನೇದು) ತ್ವಂ—ನೀನು, ಪ್ರದ್ಯುಮ್ನಸ್ಸನ್—ಪ್ರದ್ಯುಮ್ನ ವ್ಯೂಹವೆಂದು ಹೇಳಲ್ಪಟ್ಟವನಾಗಿ, ಐಶ್ವರ್ಯವೀರ್ಯಾತ್—ಐಶ್ವರ್ಯಸಹಿತವಾದ ವೀರ್ಯ ಗುಣದಿಂದ, ಸರ್ಗಧರ್ಮೌನಯಸಿ—ಸೃಷ್ಟಿಯನ್ನೂ ಧರ್ಮ ಪ್ರವರ್ತನವನ್ನೂ ಮಾಡುತ್ತಿ. ಐಶ್ವರ್ಯ ವೀರ್ಯಗಳು ಪ್ರದ್ಯುಮ್ನ ವ್ಯೂಹದ ಗುಣವೆಂತಲೂ ಸೃಷ್ಟಿಯೂ ಮತ್ತು ಧರ್ಮ ಪ್ರವರ್ತನವೂ ಇದರ ವ್ಯಾಪಾರವೆಂತಲೂ ತಿಳಿಯಬೇಕು.

(೪ನೇದು) ತ್ವಂ—ನೀನು, ಅನಿರುದ್ಧಃ—ಅನಿರುದ್ಧ ವ್ಯೂಹವೆಂಬ ಹೆಸರುಳ್ಳವನಾಗಿ, ಶಕ್ತಿತೇಜೋಬಿಭ್ರಾಣಃ—ಶಕ್ತಿ ತೇಜಸ್ಸುಗಳೆಂಬ ಗುಣಗಳನ್ನು ಧರಿಸಿಕೊಂಡು, ಪಾಸಿ ತತ್ವಂ ಗಮಯಸಿಚ—ಜಗದ್ರಕ್ಷಣವನ್ನೂ ತತ್ವಜ್ಞಾನವನ್ನೂ ಮಾಡುತ್ತಿ ಇದರಿಂದ ಶಕ್ತಿ ತೇಜಸ್ಸುಗಳೆಂಬ ಗುಣದ್ವಯವೂ ಜಗದ್ರಕ್ಷಣ ತತ್ವ ಜ್ಞಾಪನಗಳೆಂಬ ವ್ಯಾಪಾರಗಳೂ ಅನಿರುದ್ಧ ವ್ಯೂಹಕ್ಕೆ ಸೇರಿರುವಂವಂತೇ ಹೇಳಲ್ಪಟ್ಟಿತೆಂದರಿಯಬೇಕು

ಇಂತಹ ವ್ಯೂಹ ಚತುಷ್ಟಯದಲ್ಲಿ ಹಿಂದಿನ ನಾಮದವರಿಗೂ ಪರವಾಸುದೇವ ವ್ಯೂಹಕ್ಕೆ ಸೇರಿದ ಗುಣ ವ್ಯಾಪಾರಗಳನ್ನು ಅಲ್ಲಲ್ಲಿ ವಿಸ್ತರಿಸಿ ಹೇಳಿ ಇನ್ನು ಮುಂದೆ ಸಂಕರ್ಷಣ ವ್ಯೂಹವೆಂಬ (೨ನೆ) ವ್ಯೂಹವನ್ನು ಕುರಿತು ಹೇಳಲ್ಪಡುವುದರಿಂದ ಸಂಕರ್ಷಣ ವ್ಯೂಹ ಪ್ರತಿಪಾದಕವಾದ ಈ ನಾಮವು, ಜ್ಞಾನ ಬಲಗಳು ಈ ವ್ಯೂಹಕ್ಕೆ ನಿಯತಗಳಾಗಿರುವುವೆಂತಲೂ, ಅದರಲ್ಲಿಯೂ ಪ್ರಾಣಿಗಳಿಗೆ ಚಿರಕಾಲದಿಂದುಂಟಾಗಿರುವ

ಗರ್ಭ ಜನ್ಮ ಜರಾಮರಣಾದಿ ಕ್ಲೇಶಗಳನ್ನು ಪರಿಹರಿಸ ಬೇಕೆಂಬ ಇಚ್ಛೆಯೂ ಆವರಿಗುಂಟಾಗಿರುವುದರಿಂದ ಆದನ್ನಿಲ್ಲಿ ಜ್ಞಾನ ಶಬ್ದದಿಂದ “ ಪೂಜ್ಯವಾದ ಜ್ಞಾನವುಳ್ಳವ ” ನೆಂತಲೂ, ಹೇಳಿರುವಂತೆ ತಿಳಿಯಬೇಕು.

(ಮ॥ ಭಾ) ಮಹತ್ತಾದ ಆಲೋಚನೆ ಯುಳ್ಳವನು. ॥೧೨೩॥

ಈ (೧೩)ನೇ ಶ್ಲೋಕದಲ್ಲಿರುವ ಒಂಭತ್ತು ನಾಮಗಳಿಗೂ “ ಈದೃಗ್ರೂಪೈಶ್ಚೇಷ್ಟಿತೈಶ್ಚ ಭಕ್ತಾನಾನಂದ ಬಾಷ್ಪೈಃ । ರೋದಯನ್ “ ರುದ್ರ ” (೧೧೪) ಉದ್ದಿಷ್ಟಸ್ಸರ್ವಸಂತೋಷ ದೋಮನಾಃ ॥ ಫಣಾಶ್ಚ ಬಹವೋಯಸ್ಯಾನನ್ತ “ ಬಹುಶಿರಾ ” (೧೧೫) ಮತಃ । ಅನಂತರೂಪೋಯೋಧತ್ತೇ ಪೃಥ್ವೀಂ “ ಬಭ್ರು ” (೧೧೬) ಸ್ಸ ಈರಿತಃ ॥ ವಿಶ್ವೇಷಾಂ ಭೇಜುಷಾಂಸ್ಥೇನ “ ವಿಶ್ವಯೋನಿ ” (೧೧೭) ಸ್ಸ್ಮೃತಿಶ್ರಣಾತ್ । ಭಕ್ತೈರುಕ್ತಾನ್ಯವಶ್ಯಂ ಯಶ್ಶೃಣೋತೀತಿಸ “ ಶುಚಿಶ್ರವಾಃ ” (೧೧೮) ॥ ಜರಾಮೃತ್ಯೋ ರ್ವಾರಣೇನ ಹ್ಯತೃಪ್ತೇರ್ವಾಪಿಸೇವನಾತ್ । “ ಅಮೃತ ” (೧೧೯) ಶಾಸ್ತ್ರ್ಯಸ್ಮಿನ್ನತಿಶಯ ಮಾಧುರ್ಯೇಣಚ ಸರ್ವದಾ ॥ ಭೋಗ್ಯೋಹ್ಯ ಪುನರಾವೃತ್ತ್ಯಾ ಭೋಕ್ತೃಭ್ಯೋರೋಚತೇಯತಃ । ಸ್ಥಾಯೀನಿತ್ಯಸ್ಸದಾಯೋಸೌ “ ಶಾಶ್ವತಸ್ಥಾಣು ” (೧೨೦) ರುಚ್ಯತೇ ॥ ಪರಮುತ್ಕೃಷ್ಟ ಮಾರೋಹೋ ಯಸ್ಯ ಸ್ವಪ್ರಾಪ್ತಿ ಲಕ್ಷಣಃ । ವರ್ತತೇಸ “ ವರಾರೋಹಃ ” (೧೨೧) ಪ್ರಕೃಷ್ಟಸ್ಥಾನದೋಮನಾಃ ॥ (ಶತೋತ್ತರೈರ್ದ್ವಾವಿಂಶತ್ಯೈ ರ್ವರಾರೋಹಾಂತ ನಾಮಭಿಃ । ಕಿಮೇಕಂ ದೈವತಮಿತಿಕಿಮಿತ್ಯೇಕಂ ಪರಾಯಣಂ । ಪ್ರಾಶ್ನ್ಯಸ್ಯ ಪ್ರಶ್ನಯೋಶ್ಚೈವ ಮುಕ್ತಮುತ್ತರ ಮತ್ರತು ॥ ವ್ಯೂಹೀಯೋ ವಾಸುದೇವೋಪಿ ವ್ಯಾಖ್ಯಾತೋಽತ್ರೈವಸಂಗ್ರಹಾತ್ । ಅಥಸಂಕರ್ಷಣಾತ್ಮಾನಂ ವಕ್ಷ್ಯತ್ಯುತ್ತರ ನಾಮಭಿಃ ॥) ಮಹತ್ಪೂಜ್ಯಂ ತಪೋಜ್ಞಾನಂ ಯಸ್ಯೇತಿಸ “ ಮಹಾತಪಾಃ ” (೧೨೨)” ॥ ಎಂಬೀ ರೀತಿಯಿಂದವಿವೃತಿಯನ್ನು ಕಾಣಬಹುದು.

ಮೂ॥ ಸರ್ವಗ ಸ್ಸರ್ವವಿ ದ್ಭಾನು ರ್ವಿಷ್ವಕ್ಸೇನೋ
ಜನಾರ್ದನಃ । ವೇದೋ ವೇದವಿ ದವ್ಯಂಗೋ ವೇ
ದಾಂಗೋ ವೇದವಿ ತ್ಕವಿಃ ॥೧೪॥

## (೧೨೪ನೇ ನಾಮವು) ಸರ್ವಗಃ,

### ಓಮ್॥ ಸರ್ವಗಾಯ ನಮಃ.

(ಶಂ॥ಭಾ) ತಾನು ಸಮಸ್ತಕ್ಕೂ ಕಾರಣನಾಗಿ ಎಲ್ಲವನ್ನೂ ವ್ಯಾಪಿಸಿರುವ ಕಾರಣದಿಂದ ಸಮಸ್ತವನ್ನೂ ಹೊಂದಿರುವಂತವನು "ಸರ್ವಗಃ", ಎನ್ನಲ್ಪಡುವನು.

(ವಿ॥ಭಾ) ಸಮಸ್ತವನ್ನು ಧರಿಸುವ ಸಾಮರ್ಥ್ಯವೆಂಬ ಬಲದಿಂದ ದೇಹವನ್ನು ಆತ್ಮವು ಧರಿಸುವಂತೆ ಧರಿಸುವಂತವನಾಗಿ; ಸಂಹರಿಸಲ್ಪಟ್ಟ ಸಮಸ್ತವನ್ನೂ ಹೊಂದುವಂತವನು "ಸರ್ವಗಃ" ಎನ್ನಲ್ಪಡುವನು. ಈಪ್ರಕಾರವಾಗಿ ಸಂಹರಿಸುವುದೆಂಬುವದನ್ನು ಸ್ವೀಕರಿಸಿಯೇ ಸಂಕರ್ಷಣನೆಂಬ ನಾಮ ವುಂಟಾಯಿತೆಂದು ನಿರುಕ್ತಿಯು ಹೇಳುವುದು.

## (೧೨೫ನೇ ನಾಮವು) ಸರ್ವವಿತ್,

### ಓಮ್॥ ಸರ್ವವಿದೇನಮಃ.

(ಶಂ॥ಬಾ) ಸಮಸ್ತವನ್ನೂ ತಿಳಿಯುತ್ತಾ ನಾದುದರಿಂದಲಾದರೂ ಸಮಸ್ತವನ್ನೂ ಹೊಂದುತ್ತಾ ನಾದುದರಿಂದಲಾದರೂ "ಸರ್ವವಿತ್" ಎನ್ನಲ್ಪಡುವನು.

(ವಿ॥ಭಾ) ಇನ್ನು ಮುಂದೆ ಸಂಹರಿಸಲ್ಪಟ್ಟವುಗಳನ್ನು ಸೃಷ್ಟಿಸುವ ಪ್ರದ್ಯುಮ್ನ ಮೂರ್ತಿಯು ಹೇಳಲ್ಪಡುವುದು ಇದು ಐಶ್ವರ್ಯವೀರ್ಯವೆಂಬ ಯರಡು ಗುಣಗಳೊಡನೆ ಸೇರಿರುವುದು. ಅದರಲ್ಲಿ ಜಗತ್ಸೃಷ್ಟಿ ರೂಪವಾದ ಕ್ರಿಯಾಶಕ್ತಿಯ ವಿಲಾಸವಾದ ಐಶ್ವರ್ಯವು ಇಲ್ಲಿ ಹೇಳಲ್ಪಟ್ಟಿತೆಂದರಿಯಬೇಕು. ಸಕಲ ಕಾರ್ಯ ವರ್ಗವನ್ನು ಸೃಷ್ಟಿಸಿ ಹೊಂದುವಂತವನು "ಸರ್ವವಿತ್" ಎನ್ನಲ್ಪಡುವನು. ॥೧೨೫॥

## (೧೨೬ನೇ ನಾಮವು) ಭಾನುಃ,

### ಓಮ್॥ ಭಾನವೇನಮಃ.

(ಶಂ॥ಮ) ಪ್ರಕಾಶಿಸುತ್ತಾ ನಾದುದರಿಂದ "ಭಾನುಃ" ಎನ್ನಲ್ಪಡುವನು. "ಸರ್ವವಿಚ್ಚಾಸೌಭಾನುಶ್ಚ" ಎಂಬದಾಗಿ ಹಿಂದಿನ ನಾಮ

ಗರ್ಭ ಜನ್ಮ ಜರಾಮರಣಾದಿ ಕ್ಲೇಶಗಳನ್ನು ಪರಿಹರಿಸ ಲಿಚ್ಛೈಸಿ ಆಪ್ತ ಗಳನ್ನು ಸಂಹರಿಸಬೇಕೆಂಬ ಇಚ್ಛೆಯು ಅವರಿಗುಂಟಾಗಿರುವುದರಿಂದ ಅದನ್ನಿಲ್ಲಿ ಜ್ಞಾನ ಶಬ್ದದಿಂದ "ಪೂಜ್ಯವಾದ ಜ್ಞಾನವುಳ್ಳವ" ನೆಂತಲೂ, ಹೇಳಿರುವಂತೆ ತಿಳಿಯಬೇಕು.

(ಮ॥ ಭಾ) ಮಹತ್ತಾದ ಆಲೋಚನೆ ಯುಳ್ಳವನು. ॥೧೨೩॥

ಈ (೧೩)ನೇ ಶ್ಲೋಕದಲ್ಲಿರುವ ಒಂಭತ್ತು ನಾಮಗಳಿಗೂ "ಈ ದೃಗೂಪ್ಯಸ್ಯ ಕ್ಲೇಷಿತೈಶ್ಚ ಭಕ್ತಾನಾನಂದ ಬಾಷ್ಪೈರ್ಯ | ರೋದಯ್ "ರುದ್ರ" (೧೧೫) ಉದ್ದಿಷ್ಟಸ್ಸರ್ವಸಂತೋಷ ದೋಮನಃ ॥ ಫಣಾಶ್ಚ ಬಹವೋಯಸ್ಯಾನನ್ತ "ಬಹುಶಿರಾ" (೧೧೬) ಮತಃ | ಅನಂತರೂಪೋಯೋಧತ್ತೇ ಪೃಥ್ವೀಂ "ಬಭ್ರು" (೧೧೭) ಸ್ಸಈರಿತಃ ॥ ವಿಶ್ವೇಷಾಂ ಭೇಜುಷಾಂಸ್ಯೇವ "ವಿಶ್ವಯೋನಿ" (೧೧೮) ಸ್ಸ್ವಮಿಶ್ರಣಾತ್| ಭಕ್ತೈರುಕ್ತಾನ್ಯವಶ್ಯಂ ಯಃ ಶೃಣೋತಿಸ "ಶುಚಿಶ್ರವಾಃ" (೧೧೯) ॥ ಜರಾಮೃತ್ಯೋರ್ವಾರಣೇನ ಹ್ಯತೃಪ್ತೇರ್ವಾಪಿಸೇವನಾತ್ | "ಅಮೃತ" (೧೨೦) ಶ್ಶಾಸ್ಯಸ್ನಿರತಿಶಯ ಮಾಧುರ್ಯೇಣಚ ಸರ್ವದಾ॥ ಭೋಗ್ಯೋಹ್ಯ ಪುನರಾವೃತ್ತ್ಯಾ ಭೋಕ್ತೃಭ್ಯೋರೋಚತೇಯತಃ| ಸ್ವಯಂನಿತ್ಯಸ್ಸದಾಯೋಸೌ "ಶಾಶ್ವತಸ್ಥಾಣು" (೧೨೧) ರುಚ್ಯತೇ ॥ ಪರಮುತ್ಕೃಷ್ಟ ಮಾರೋಹೋ ಯಸ್ಯ ಸ್ವಪ್ರಾಪ್ತಿ ಲಕ್ಷಣಃ | ವರ್ತತೇಸ "ವರಾರೋಹಃ" (೧೨೨) ಪ್ರಕೃಷ್ಟಸ್ಥಾನದೋಮನಃ ॥ (ಶತೋತ್ತರೈರ್ದ್ವಾವಿಂಶತ್ಯೈ ರ್ವರಾರೋಹಾಂತ ನಾಮಭಿಃ | ಕಿಮೇಕಂ ದೈವತಮಿತಿಕಿಮಿತ್ಯೇಕಂ ಪರಾಯಣಂ | ಪ್ರಾಸ್ಯಸ್ಯ ಪ್ರಶ್ನಯೋಶ್ಚೇವ ಮುಕ್ತಮುತ್ತರ ಮತ್ರತು ॥ ವ್ಯೂಹೀಯೋ ವಾಸುದೇವೋಪಿ ವ್ಯಾಖ್ಯಾತೋಽತ್ರೈವಸಂಗ್ರಹಾತ್ | ಅಧಸಂಕರ್ಷಣಾತ್ಮಾನಂ ವಕ್ಷ್ಯತ್ಯುತ್ತರ ನಾಮಭಿಃ॥) ಮಹತ್ಪೂಜ್ಯಂ ತಪೋಜ್ಞಾನಂ ಯಸ್ಯೇತಿಸ "ಮಹಾತಪಾಃ" (೧೨೩)" ॥ ಎಂಬೀ ರೀತಿಯಿಂದವಿವೃತಿಯನ್ನು ಕಾಣಬಹುದು.

ಮೂ॥ ಸರ್ವಗ ಸ್ಸರ್ವವಿ ದ್ಭಾನು ರ್ವಿಷ್ವಕ್ಸೇನೊ
ಜನಾರ್ದನಃ | ವೇದೋ ವೇದವಿ ದವ್ಯಂಗೋ ವೇ
ದಾಂಗೋ ವೇದವಿ ತ್ಕವಿಃ ॥೧೪॥

## (೧೨೪ನೇ ನಾಮವು) ಸರ್ವಗಃ,

### ಓಮ್॥ ಸರ್ವಗಾಯ ನಮಃ.

(ಶಂ ॥ ಭಾ) ತಾನು ಸಮಸ್ತಕ್ಕೂ ಕಾರಣನಾಗಿ ಎಲ್ಲವನ್ನೂ ವ್ಯಾಪಿಸಿರುವ ಕಾರಣದಿಂದ ಸಮಸ್ತವನ್ನೂ ಹೊಂದಿರುವಂತವನು " ಸರ್ವಗಃ " ಎನ್ನಲ್ಪಡುವನು.

(ವಿ ॥ ಭಾ) ಸಮಸ್ತವನ್ನು ಧರಿಸುವ ಸಾಮರ್ಥ್ಯವೆಂಬ ಬಲದಿಂದ ದೇಹವನ್ನು ಆತ್ಮವು ಧರಿಸುವಂತೆ ಧರಿಸುವಂತವನಾಗಿ; ಸಂಹರಿಸಲ್ಪಟ್ಟ ಸಮಸ್ತವನ್ನೂ ಹೊಂದುವಂತವನು " ಸರ್ವಗಃ " ಎನ್ನಲ್ಪಡುವನು. ಈಪ್ರಕಾರವಾಗಿ ಸಂಹರಿಸುವುದೆಂಬುವದನ್ನು ಸ್ವೀಕರಿಸಿಯೇ ಸಂಕರ್ಷಣನೆಂಬ ನಾಮ ವುಂಟಾಯಿತೆಂದು ನಿರುಕ್ತಿಯು ಹೇಳುವುದು.

## (೧೨೫ನೇ ನಾಮವು) ಸರ್ವವಿತ್,

### ಓಮ್॥ ಸರ್ವವಿದೇನಮಃ.

(ಶಂ ॥ ಭಾ) ಸಮಸ್ತವನ್ನೂ ತಿಳಿಯುತ್ತಾನಾದುದರಿಂದಲಾದರೂ ಸಮಸ್ತವನ್ನೂ ಹೊಂದುತ್ತಾನಾದುದರಿಂದಲಾದರೂ " ಸರ್ವವಿತ್ " ಎನ್ನಲ್ಪಡುವನು.

(ವಿ ॥ ಭಾ) ಇನ್ನು ಮುಂದೆ ಸಂಹರಿಸಲ್ಪಟ್ಟವುಗಳನ್ನು ಸೃಷ್ಟಿಸುವ ಪ್ರದ್ಯುಮ್ನ ಮೂರ್ತಿಯು ಹೇಳಲ್ಪಡುವುದು ಇದು ಐಶ್ವರ್ಯವೀರ್ಯವೆಂಬ ಯರಡು ಗುಣಗಳೊಡನೆ ಸೇರಿರುವುದು. ಅದರಲ್ಲಿ ಜಗತ್ಸೃಷ್ಟಿರೂಪವಾದ ಕ್ರಿಯಾಶಕ್ತಿಯ ವಿಲಾಸವಾದ ಐಶ್ವರ್ಯವು ಇಲ್ಲಿ ಹೇಳಲ್ಪಟ್ಟಿತೆಂದರಿಯಬೇಕು. ಸಕಲ ಕಾರ್ಯ ವರ್ಗವನ್ನು ಸೃಷ್ಟಿಸಿ ಹೊಂದುವಂತವನು " ಸರ್ವವಿತ್ " ಎನ್ನಲ್ಪಡುವನು. ॥೧೨೫॥

## (೧೨೬ನೇ ನಾಮವು) ಭಾನುಃ,

### ಓಮ್॥ ಭಾನವೇನಮಃ.

(ಶಂ ॥ ಮ) ಪ್ರಕಾಶಿಸುತ್ತಾನಾದುದರಿಂದ " ಭಾನುಃ " ಎನ್ನಲ್ಪಡುವನು. " ಸರ್ವವಿಚ್ಚಾಸೌಭಾನುಶ್ಚ " ಎಂಬದಾಗಿ ಹಿಂದಿನ ನಾಮ

ವನ್ನು ವಿಶೇಷಣವನ್ನಾಗಿಯೂ ಈ ನಾಮವನ್ನು ವಿಶೇಷ್ಯವನ್ನಾಗಿಯೂ ಮಾಡಿ ಒಂದೇ ನಾಮವೆಂದರಿಯಬೇಕು. (ಶಂ) "ತಮೇವಭಾನ್ತ ಮನು ಭಾತಿ ಸರ್ವಮ್ (ಮುಂಡುಕೊ ೧॥ ೧॥ ೯) ಯದಾದಿತ್ಯ ಗತಂ ತೇಜಃ (ಗೀತಾ ೪॥ ೨॥ ೧) ಇತ್ಯಾದಿ ಶ್ರುತಿಗಳು ಇದದಕ್ಕೆ ಆಧಾರಗಳಾಗಿರುವುವು.

(ಪ್ರಕಾಶಿಸುತಲಿರುವ ಯಾವ ಪರಮಪುರುಷನನ್ನು ಅನುಸರಿಸಿ ಸರ್ವವೂ ಪ್ರಕಾಶಿಸುವುದೊ; ಸೂರ್ಯನಲ್ಲಿರುವ ಯಾವ ತೇಜಸ್ಸುಂಟೋ; ಎಂದೀ ಪ್ರಮಾಣದ್ವಯಾರ್ಥವು.)

(ವಿ॥ಭಾ) ಸಮಸ್ತವನ್ನು ನಿರ್ಮಾಣ ಮಾಡಿದರೂ ತಾನು ಸ್ವಲ್ಪವೂ ವಿಕಾರವನ್ನು ಹೊಂದದೆ ಪ್ರಕಾಶಿಸುವಂತವನು "ಭಾನುಃ" ಎನ್ನಲ್ಪಡುವನು. ಇದರಿಂದ ಅವಿಕಾರವೆಂಬ ವೀರ್ಯವು ಹೇಳಲ್ಪಟ್ಟಿತೆಂದರಿಯಬೇಕು. ॥೧೨೬॥

## (೧೨೭ನೇ ನಾಮವು) ವಿಷ್ವಕ್ಸೇನಃ,

### ಓಮ್॥ ವಿಷ್ವಕ್ಸೇನಾಯನಮಃ·

(ಶಂ॥ಭಾ) ಯಾವ ಪರಮಪುರುಷನ ಯುದ್ಧೋದ್ಯೋಗ ಮಾತ್ರದಿಂದಲೇ ಸಮಸ್ತನಾದ ದೈತ್ಯಸೇನೆಯು ನಾಲ್ಕು ಕಡೆಯಲ್ಲಿಯೂ ಓಡಿಹೋಗುವುದೊ ಅವನು "ವಿಷ್ವಕ್ಸೇನಃ" ಎನ್ನಲ್ಪಡುವನು.

(ವಿ॥ಭಾ) ಇನ್ನು ಮುಂದೆ ಸೃಷ್ಟಿಸಲ್ಪಡುವ ವಸ್ತುಗಳನ್ನು ಸ್ಥಿತಿ ಎಂಬ ವ್ಯಾಪಾರದಿಂದ ರಕ್ಷಿಸುವ ಅನಿರುದ್ಧವ್ಯೂಹವು ಹೇಳಲ್ಪಡುವುದು. ಇನೇನ ಸಹಾವರ್ತ್ತಂತ ಇತಿಸೇನಾಃ, ಎಂದರೆ ಪ್ರಭುವಿನೊಡನೆ ಕೂಡಿರುವಂತವರೆಂದರ್ಥವು. ಇದರಿಂದ ರಕ್ಷಕನಾದ ಪ್ರಭುವಿನೊಡನೇ ಕೂಡಿರುವ ರಕ್ಷಿಸಲ್ಪಡತಕ್ಕ ವಸ್ತುಗಳು ಹೇಳಲ್ಪಡುವುವು ಅಂತಹಾ ರಕ್ಷ್ಯ ವಸ್ತುಗಳು ಯಾವನಿಗಾದರೆ ನಾಲ್ಕು ಕಡೆಗಳಲ್ಲಿಯೂ ಇರುವವೊ ಅವನು "ವಿಷ್ವಕ್ಸೇನಃ" ಎನ್ನಲ್ಪಡುವನು. ॥೧೨೭॥

## (೧೨೮ನೇ ನಾಮವು)ಜನಾರ್ದನಃ,

### ಓಮ್॥ ಜನಾರ್ದನಾಯನಮಃ·

(ಶಂ॥ಮ) ದುರ್ಜನರನ್ನು ಕೊಲ್ಲುವುದರಿಂದಲಾದರೂ; (ಶಂ) ಪರಕಲೋಕವನ್ನು ಹೊಂದಿಸುವುದರಿಂದ ಲಾದರೂ; ಮೋಕ್ಷರೂಪ

ಪುರುಷಾರ್ಥವನ್ನು ಜನರಿಂದ ಯಾಚಿಸಲ್ಪಡುವುದರಿಂದ ಲಾದರೂ "ಜನಾರ್ದನಃ" ಎನ್ನಲ್ಪಡುವನು.

(ವಿ ‖ ಭಾ) ರಕ್ಷಣ ವಿರೋಧಿಗಳನ್ನು ಯಾವ ಪ್ರತ್ಯುಪಕಾರವನ್ನೂ ಅಪೇಕ್ಷಿಸದೆ ಹೋಗಲಾಡಿಸುವಂತವನು. "ಜನಾರ್ದನಃ" ಎನ್ನಲ್ಪಡುವನು. ಈ ಅರ್ಥವು ಶ್ರೀ ಮಹಾಭಾರತದಲ್ಲಿ "ದಸ್ಯುತ್ರಾಣಾಜ್ಜನಾರ್ದನಃ" ಎಂಬದಾಗಿ ಹೇಳಲ್ಪಟ್ಟಿರುವುದು. (ಕಳ್ಳರ ದಶೆಯಿಂದ ಬಿಡಿಸಿ ಕಾಪಾಡುವುದರಿಂದ ಜನಾರ್ದನ ನೆನ್ನಲ್ಪಡುವನೆಂದರ್ಥವು) ಇಲ್ಲಿ ಅಪೇಕ್ಷೆಯಿಲ್ಲದೆ ಮಾಡುವುದೆಂಬ ತೇಜಸ್ಸು ಹೇಳಲ್ಪಟ್ಟಿತೆಂದರಿಯಬೇಕು. ಇಲ್ಲಿ ಪರಮಪುರುಷನು ಸದಾ ಸರ್ವ ಗುಣಗಳಿಂದೊಪ್ಪಿದವನಾಗಿದ್ದರೂ ಇಲ್ಲಿ ಹೇಳಿರುವ ಗುಣ ವ್ಯವಸ್ಥೆಯು ವಾಸುದೇವಾದಿ ಮೂರ್ತಿಗಳಲ್ಲಿ ನಿಯತಗಳಾಗಿ ಅನುಸಂಧಿಸಬೇಕೆಂದು ಶ್ರೀಪಾಂಚರಾತ್ರಾದಿ ಸಂಹಿತಾ ವಿಶೇಷಗಳಲ್ಲಿ ಪಠಿತಗಳಾಗಿರುವುವು.

## (೧೨೭ನೇ ನಾಮವು) ವೇದಃ,

### ಓಮ್‖ ವೇದಾಯನಮಃ.

(ಶಂ ‖ ಭಾ) ವೇದಯತೀತಿವೇದಃ—ತಿಳಿಸುತ್ತಾ ನಾದುದರಿಂದ "ವೇದಃ" ಎನ್ನಲ್ಪಡುವನು. (ಮ) ಸರ್ವವನ್ನು ತಿಳಿದವನು.

(ವಿ ‖ ಭಾ) ಪುನಃ ಮೊದಲಿನ ಉದ್ದೇಶ ಕ್ರಮದಿಂದ ಶ್ರೀಸಂಕರ್ಷಣ ಮೂರ್ತಿಯ ಶಾಸ್ತ್ರ ಪ್ರದಾನರೂಪವಾದ ವ್ಯಾಪಾರವು ಹೇಳಲ್ಪಡುವುದು. ಸೃಷ್ಟಿಯಿಂದ ಕರಣ (ಇಂದ್ರಿಯ)ಗಳನ್ನು ಹೊಂದಿರುವ ಸರ್ವರೂ ತನ್ನಲ್ಲಿ ಶಾಸ್ತ್ರಗಳನ್ನ ಹೊಂದುವಂತೆ ಇರುವಂತವನು "ವೇದಃ" ಎನ್ನಲ್ಪಡುವನು. ಅನೇನವಿದಂತ್ರೀತಿವೇದಃ, ಈ ಪ್ರಕಾರವೇ "ಯೋವೈ ವೇದಾಂಶ್ಚ ಪ್ರಹಿಣೋತಿತಸ್ಮೈ" ಎಂತಲೂ ಶ್ರುತಿ ಹೇಳುವುದು. ಆದುದರಿಂದಲೆ, ಉಪಾಯ ಆಗಮ ಅಯನ ಗಮಯಿತಾ ಬ್ರಾಹ್ಮಣಾಚಾರ್ಯ ಶಬ್ದಗಳಿಂದ ಸಂಕರ್ಷಣನನ್ನು ಹೇಳುವರು.

(ತನ್ನಿಂದ ಸೃಷ್ಟಿಸಲ್ಪಟ್ಟ ಚತುರ್ಮುಖ ಬ್ರಹ್ಮನಿಗೆ ಯಾವನಾದರೆ ವೇದಗಳನ್ನು ಕೊಡುವನೊ ಎಂದರ್ಥವು)

## (೧೩೦ನೇ ನಾಮವು) ವೇದವಿತ್,

ಓಮ್|| ವೇದವಿದೇನಮಃ.

(ವಿ|| ಭಾ) ವೇದಾರ್ಥಗಳನ್ನು ಸಂಶಯ ಭ್ರಾಂತ್ಯಾದಿ ದೋಷಗಳಿಲ್ಲದೆ ತಿಳಿಯುವಂತಹವನು " ವೇದವಿತ್ " ಎನ್ನಲ್ಪಡುವನು. ಈಪ್ರಕಾರವೇ ಗೀತೆಯಲ್ಲಿ " ವೇದಾಂತಕೃದ್ವೇದ ವಿದೇವಚಾಹಂ " ಎಂದು ಹೇಳುತ್ತಾನೆ.

## (೧೩೧ನೇ ನಾಮವು) ಅವ್ಯಂಗಃ,

ಓಮ್|| ಅವ್ಯಂಗಾಯನಮಃ.

(ಶಂ|| ಮ) ಜ್ಞಾನಾದಿಗಳಿಂದ ಪರಿಪೂರ್ಣನು ಅಥವಾ (ಶಂ) ವ್ಯಕ್ತಿ (ಆಕಾರ) ಇಲ್ಲದವನು.

(ವಿ|| ಭಾ) ತನ್ನಿಂದ ಕಲ್ಪಿಸಲ್ಪಟ್ಟ ಛಂದಸ್ಸು ಕಲ್ಪವೇ ಮೊದಲಾದ ವೇದಾಂಗಗಳಿಂದ ಪರಿಪೂರ್ಣನಾದವನು. || ೧೩೧ ||

## (೧೩೨ನೇ ನಾಮವು) ವೇದಾಂಗಃ,

ಓಮ್|| ವೇದಾಂಗಾಯನಮಃ.

(ವಿ|| ಭಾ) ಅನಂತ ಶಾಖೆಗಳುಳ್ಳ ವೇದಗಳನ್ನು ಶರೀರವಾಗಿ ಉಳ್ಳವನು " ವೇದಾಂಗಃ " ಎನ್ನಲ್ಪಡುವನು.

ಎಂದರೆ ವೇದಗಳನ್ನು ತಿಳಿದವನ ಬುದ್ಧಿಗೆ ವಿಷಯನಾಗುವನೆಂದರ್ಥವು. ಇದಕ್ಕೆ ಶ್ರುತಿ ಸ್ಮೃತ್ಯಾದ್ಯನೇಕ ಪ್ರಮಾಣಗಳಿರುವುವು. ಶ್ರುತಿಗಳನ್ನು ಅವನ ಆಜ್ಞಾರೂಪಗಳನ್ನಾಗಿ ಹೇಳುವುದರಿಂದ ವೇದರೂಪವಾದ ಆಜ್ಞಾವುಳ್ಳವನೆಂತಲೂ ಹೇಳಬಹುದು. || ೧೩೨ ||

## (೧೩೩ನೇ ನಾಮವು) ವೇದವಿತ್,

ಓಮ್|| ವೇದವಿದೇನಮಃ.

(ಶಂ|| ಭಾ) ವೇದಗಳನ್ನು ವಿಚಾರಿಸುವಂತಹವನು.

(ವಿ|| ಭಾ) ವೇದ ಶಬ್ದದಿಂದ ವೇದಾರ್ಥವಾದ ಧರ್ಮವನ್ನು ಹೇಳಿ ಅದನ್ನು 'ವಿತ್' ಎಂದರೆ ಅನುಷ್ಠಾನ ಮಾಡಿಸುವುದರಿಂದ

'ಹೊಂದಲ್ಪಡುತಾತ್ತಾದಕಾರಣ " ವೇದವಿತ್ " ಎಂಬದಾಗಿ ಪ್ರದ್ಯುಮ್ನ ಮೂರ್ತಿಯು ಹೇಳಲ್ಪಡುವನು ಆದುದರಿಂದಲೆ ಇವರನ್ನು ಧರ್ಮವೇಂತಲೂ ಪ್ರಕಾಶಪಡಿಸುವರೆಂತಲೂ ಪ್ರವರ್ತಕರೆಂತಲೂ ಹೇಳುವರು. (ಮ) ' ವೇದವಿತ್ಕವಿಃ ' ಎಂಬದಾಗಿ ಒಂದೇನಾಮವಾಗಿರುವುದರಿಂದ ಮೊದಲಿನ ' ವೇದವಿತ್ ' ಶಬ್ದದೊಡನೆ ಪೌನರುಕ್ತ್ಯವಿಲ್ಲವು. ||೧೩೩||

## (೧೩೪ನೇ ನಾಮವು) ಕವಿಃ,
## ಓಮ್|| ಕವಯೇನಮಃ.

(ಶಂ|| ಭಾ) ಸರ್ವದರ್ಶಿಯಾದವನು. " ನಾನ್ಯೋತೋಽಸ್ತಿ ದ್ರಷ್ಟಾ (ಬೃಹ|| ೫|| ೭|| ೨೩) ಕವಿರ್ಮನಿಷೀ " (ಈಶೊ|| ೮) ಎಂಬ ಶ್ರುತ್ಯಾದಿಗಳು ಈ ಅರ್ಥವನ್ನು ಹೇಳುವುವು.

(ವಿ|| ಭಾ) ಪ್ರಿಯವಾದವುಗಳನ್ನು ನೋಡುವಂತವನು " ಕವಿಃ " ಎನ್ನಲ್ಪಡುವನು. (ಇಲ್ಲಿ ಪ್ರಿಯವಾದವು ಯಾವವೆಂದರೆ ಧರ್ಮಾಧಿಕಾರಿಗಳೂ ಧರ್ಮದಿಂದ ಆರಾಧಿಸಲ್ಪಡುವ ದೇವತೆಗಳೂ, ಆಯಾ ದೇವತೆಗಳೆನ್ನು ಸಾಧಿಸುವುದಕ್ಕೆ ಯೋಗ್ಯವಾದ ಧರ್ಮವೂ )

ಈ ಹದಿನಾಲ್ಕನೇ ಶ್ಲೋಕದಲ್ಲಿರುವ (೧೧) ನಾಮಗಳಿಗೂ " ಧಾತಯಾ ಸ್ಸಂಹತಾನ್ಯೋನ್ಯೈ ಗಚ್ಛತೀತಿಸ " ಸರ್ವಗಃ " (೧೨೪)| ಪ್ರದ್ಯುಮ್ನತ್ವೇತು ಕಾರ್ಯಾಣಿ ಲಭತೇಯಸ್ಸ " ಸರ್ವವಿತ್ " (೧೨೫)|| " ಭಾನು " (೧೨೬) ಸ್ಸರ್ವಸ್ಯಭಾತೀತಿ ನಿರ್ಮಾಣೇಽಸ್ಯ ವಿಕಾರತಃ | ಇನೇನಸ್ವಾಮಿನಾಲೋಕಂ ವರ್ತತೇ ಸೇನಇತ್ಯತಃ || ವಿಷ್ವಗ್ರಕ್ಷ್ಯೋ ಜನೋಯಸ್ಯ " ವಿಷ್ವಕ್ಸೇನ " (೧೨೭) ಇತೀರಿತಃ | ಭಕ್ತವಿದ್ವೇಷಿಣಾಂತೂರ್ಣ ಮರ್ದನಾದ್ಧಿ "ಜನಾರ್ದನಃ" (೧೨೮)|| ಸಂಕರ್ಷಣತ್ವೇ ಶಾಸ್ತ್ರಾರ್ಥ ಪ್ರದತ್ವಾತ್ " ವೇದ " (೧೨೯) ಈರಿತಃ | ಅಸಂಶಯ ವಿಪರ್ಯಾಸಂ ವೇದಾರ್ಥಂ ವೇತ್ತಿ "ವೇದವಿತ್" (೧೩೦)|| ಶಿಕ್ಷಾವ್ಯಾಕರಣಾದ್ಯಂಗೈ ರ್ನಹೀನೋಽ " ವ್ಯಂಗ " (೧೩೧) ಉಚ್ಯತೇ |-ಯಸ್ಯವೇದೋಽನನ್ತಶಾಖೋ "-ವೇದಾಂಗೋ " (೧೩೨) ಜ್ಞತಯಾಸ್ಮೃತಃ || ವೇದೈರ್ವೇದ್ಯ ತಯಾ ವೇದ ಸ್ತದರ್ಥೋ ಧರ್ಮಉಚ್ಯತೇ|-ತದನುಷ್ಠಾಪನಾನ್ನಿತ್ಯಂ ಪ್ರದ್ಯುಮ್ನೋ

" ವೇದವಿತ್ " (೧೩೨) ಸ್ಮೃತಃ ‖ ಸಪವರ್ಕಾಂತದರ್ಶಿತ್ವಾ " ತ್ಕವಿ " (೧೩೪) ರಿತ್ಯುಚ್ಯತೆ ಬುಧೈಃ " ‖ ಎಂಬೀ ರೀತಿಯಿಂದ ನಿರ್ವಚನವನ್ನು ತಿಳಿಯಬೇಕು.

ಮೂ‖ ಲೋಕಾಧ್ಯಕ್ಷ ಸ್ಸುರಾಧ್ಯಕ್ಷೋ ಧರ್ಮಾಧ್ಯಕ್ಷಃ ಕೃತಾಕೃತಃ । ಚತುರಾತ್ಮಾ ಚತುರ್ವ್ಯೂಹ ಶ್ಚತುರ್ದ್ರಂಷ್ಟ್ರ ಶ್ಚತುರ್ಭುಜಃ ‖೧೫‖

(೧೩೫ನೇ ನಾಮವು) ಲೋಕಾಧ್ಯಕ್ಷಃ,

ಓಮ್‖ ಲೋಕಾಧ್ಯಕ್ಷಾಯನಮಃ.

(ಶಂ‖ ಮ) ಸರ್ವ ಲೋಕಾಧಿಪತಿಯು, (ಶಂ) ಸಕಲ ಲೋಕಗಳಿಗೂ ಮುಖ್ಯವಾಗಿ ಉಪದ್ರಷ್ಟಾ ಆಗಿರುವಂತವನು "ಲೋಕಾಧ್ಯಕ್ಷಃ" ಎನ್ನಲ್ಪಡುವನು.

(ವಿ‖ ಭಾ) ಹಿಂದಿನ ನಾಮದಲ್ಲಿ ಹೇಳಿರುವ ಅರ್ಥವನ್ನೇ ಈ ವೊದಲಾದ ಮೂರು ನಾಮಗಳು ಹೇಳುವುವು. ' ಲೋಕ ' ಶಬ್ದದಿಂದ ಧರ್ಮಾನುಷ್ಠಾನ ಮಾಡತಕ್ಕವರೂ, ' ಸುರ ' ಶಬ್ದದಿಂದ ಕರ್ಮಗಳಿಂದ ಆರಾಧಿಸಲ್ಪಡುವ ದೇವತೆಗಳೂ, ' ಧರ್ಮ ' ಶಬ್ದದಿಂದ ಅವರು ಹೊಂದುವುದಕ್ಕೆ ಸಾಧನವೂ ಹೇಳಲ್ಪಟ್ಟು, ಇವರಿಗೆ ಅಧ್ಯಕ್ಷನೆಂದು ಯಾರಿಗೂ ಗೋಚರವಾಗದ ಸ್ಥಾನದಲ್ಲಿದ್ದುಕೊಂಡು ಫಲಪ್ರದನಾಗಿರುವ ಅನಿರುದ್ಧನು ಹೇಳಲ್ಪಡುವನು. ಆದುದರಿಂದಲೆ ಇವರನ್ನು ' ಧರ್ಮಜ್ಞರೆಂತಲೂ ಉಪಾಯಜ್ಞರೆಂತಲೂ ಅಧ್ಯಕ್ಷರೆಂತಲೂ ಸತ್ಯಸಂಧರೆಂತಲೂ ಪುರುಷರಿಗೆ ಜ್ಞಾನವನ್ನು ಕೊಡುವಂತವರೆಂತಲೂ ' ಹೇಳುವ ದಿವ್ಯ ನಾಮಗಳುಳ್ಳವರೆಂದರಿಯಬೇಕು (೧೩೫‖ ೬‖ ೭).

(೧೩೬ನೇ ನಾಮವು) ಸುರಾಧ್ಯಕ್ಷಃ,

ಓಮ್‖ ಸುರಾಧ್ಯಕ್ಷಾಯನಮಃ.

(ಶಂ‖ ಭಾ) ಲೋಕಪಾಲಕರಾದ ದೇವತೆಗಳಿಗೆ ಪ್ರಭುವಾದವನು ಸುರಾಧ್ಯಕ್ಷನೆನ್ನಲ್ಪಡುವನು. ‖ ೧೩೬ ‖

## (೧೩೭ನೇ ನಾಮವು) ಧರ್ಮಾಧ್ಯಕ್ಷಃ.

ಓಮ್|| ಧರ್ಮಾಧ್ಯಕ್ಷಾಯನಮಃ.

(ಶಂ|| ಭಾ) ಅನುಗುಣವಾದ ಫಲವನ್ನು ಕೊಡುವುದಕ್ಕಾಗಿ ಧರ್ಮಾಧರ್ಮಗಳನ್ನು ಸಾಕ್ಷಾತ್ತಾಗಿ ನೋಡುವಂತವನು ' ಧರ್ಮಾಧ್ಯಕ್ಷ ' ನೆನ್ನಲ್ಪಡುವನು. || ೧೩೭ ||

## (೧೩೮ನೇ ನಾಮವು) ಕೃತಾಕೃತಃ,

ಓಮ್|| ಕೃತಾಕೃತಾಯನಮಃ.

(ಶಂ|| ಭಾ) ಕಾರ್ಯಕಾರಣ ರೂಪನಾಗಿರುವುದರಿಂದ ' ಕೃತಾಕೃತಃ ' ಎನ್ನಲ್ಪಡುವನು. (ಮ) ಸೃಷ್ಟ್ಯಾದಿ ಸಕಲ ಕಾರ್ಯಗಳನ್ನು ತಾನು ಮಾಡುವಂತವನಾಗಿಯೂ ತಾನು ಬೇರೊಬ್ಬರಿಂದ ಸೃಷ್ಟಿಸಲ್ಪಡದವನಾಗಿಯೂ ಇರುವಂತವನು.

(ವಿ|| ಭಾ) ಸಂಸಾರ ಪ್ರವರ್ತಕವಾದ ಪ್ರವೃತ್ತಿ ಧರ್ಮಸ್ವರೂಪನೂ ಅದನ್ನು ನಿವರ್ತಿಪಡಿಸಿ ಮೋಕ್ಷಪ್ರಾಪಕವಾದ ನಿವೃತ್ತಿ ಧರ್ಮ ಸ್ವರೂಪನೂ ಆದವನು "ಕೃತಾಕೃತಃ" ಎನ್ನಲ್ಪಡುವನು. ಪ್ರವೃತ್ತಿ ಧರ್ಮವು ಅನಿತ್ಯ ಫಲಪ್ರದವಾಗಿರುವುದರಿಂದ ಔಪಚಾರಿಕವಾದ ಕೃತಶಬ್ದದಿಂದಲೂ ನಿವೃತ್ತಿ ಧರ್ಮವು ನಿತ್ಯ ಫಲಪ್ರದವಾಗಿರುವುದರಿಂದ ಅಕೃತ ಶಬ್ದದಿಂದಲೂ ಔಪಚಾರಿಕವಾಗಿ ಹೇಳಲ್ಪಡುವುದೆಂದು ತಿಳಿಯಬೇಕು. ||೧೩೮||

## (೧೩೯ನೇ ನಾಮವು) ಚತುರಾತ್ಮಾ,

ಓಮ್|| ಚತುರಾತ್ಮನೇನಮಃ.

(ಶಂ|| ಮ) ಸೃಷ್ಟ್ಯಾದಿ ವ್ಯಾಪಾರಗಳಲ್ಲಿ ನಾಲ್ಕಾಗಿವುಳ್ಳ ಬ್ರಹ್ಮಾದ್ಯಾತ್ಮಗಳನ್ನು ವಿಭೂತಿಯಾಗಿ ಉಳ್ಳವನು " ಚತುರಾತ್ಮಾ " ಎನ್ನಲ್ಪಡುವನು. ಇದಕ್ಕೆ (ಶ್ರೀವಿಷ್ಣು ಪು|| ೧|| ೨೨) " ಬ್ರಹ್ಮಾದಕ್ಷಾದಯಃ ಕಾಲಸ್ತಥೈವಾಖಿಲ ಜಂತವಃ | ವಿಭೂತಯೋ ಹರೇರೇತಾ ಜಗತಸ್ಸೃಷ್ಟಿಹೇತವಃ || ವಿಷ್ಣುರ್ಮನ್ವಾದಯಃಕಾಲ ಸ್ಸರ್ವಭೂತಾನಿಚ ದ್ವಿಜ | ಸ್ಥಿತೇರ್ನಿಮಿತ್ತ ಭೂತಸ್ಯ ವಿಷ್ಣೋರೇತಾ ವಿಭೂತಯಃ || ರುದ್ರಃಕಾಲೋಂತಕಾದ್ಯಾಶ್ಚ ಸಮಸ್ತಾಶ್ಚೈವ ಜಂತವಃ | ಚತುರ್ಧಾ ಪ್ರಳಯಾಯೈತೆ ಜ

ನಾರ್ದನ ವಿಭೂತಯಃ" ಎಂಬೀ ಶ್ರೀವಿಷ್ಣುಪುರಾಣ ವಚನವು ಪ್ರಮಾಣವಾಗಿರುವುದು.

(ಸೃಷ್ಟಿ ಸ್ಥಿತಿಲಯಗಳೆಂಬೀ ತ್ರಿವಿಧವಾದ ಜಗದ್ವ್ಯಾಪಾರವೂ ಶ್ರೀಮಹಾವಿಷ್ಣುವಿನ ಕಾರ್ಯವಾಗಿದ್ದರೂ ಒಂದೊಂದು ವ್ಯಾಪಾರದಲ್ಲಿ ಕೆಲವು ದೇವತೆಗಳನ್ನು ತನ್ನ ವಿಭೂತಿ ಕೋಟಿಯಲ್ಲಿ ಸೇರಿಸಿಕೊಂಡು ಎಂದರೆ ಮಾಡಲ್ಪಡತಕ್ಕ ಕಾರ್ಯಾಧಿಕಾರವನ್ನು ಮುಂದೇ ವಿವರಿಸಲ್ಪಡುವ ದೇವತೆಗಳಿಗೆ ಕೊಟ್ಟು ಅವರ ಮೂಲಕವಾಗಿ ನಡಿಸುವನು. ಅದು ಯಾವರೀತಿಯಲ್ಲೆಂದರೆ? ಚತುರ್ಮುಖನೂ ದಕ್ಷಾದಿಗಳೂ ಕಾಲವೂ ಹೀಗೆಯೆ ಸರ್ವ ಜಂತುಗಳೂ, ಪ್ರಪಂಚದ ಸೃಷ್ಟಿ ಕಾರಣಭೂತನಾದ ಶ್ರೀಮಹಾವಿಷ್ಣುವಿನ ವಿಭೂತಿ ಭೂತರೆಂತಲೂ, ವಿಷ್ಣು ಮನುಕಾಲಗಳೂ ಹೀಗೆಯೇ ಸರ್ವಜಂತುಗಳೂ ಸ್ಥಿತಿ ಎನ್ನಲ್ಪಡುವ ಜಗದ್ರಕ್ಷಣಕ್ಕೆ ಕಾರಣಭೂತನಾದ ಶ್ರೀಮಹಾವಿಷ್ಣುವಿನ ವಿಭೂತಿಗಳೆಂತಲೂ, ರುದ್ರ ಕಾಲಾಂತಕಾದಿಗಳೂ ಹೀಗೆಯೇ ಸರ್ವ ಜಂತುಗಳೂ ಪ್ರಳಯೋಪ ಯುಕ್ತವಾದ ಜನಾರ್ದನ ವಿಭೂತಿಗಳೆಂತಲೂ, ಹೇಳಲ್ಪಡುವರು. ಇಲ್ಲಿ ರಕ್ಷಣದಲ್ಲಿ ವಿಷ್ಣುವನ್ನೇ ವಿಷ್ಣುವಿಭೂತಿಯಲ್ಲಿ ಸೇರಿಸಿ ಹೇಳಿರುವುದರಿಂದ ಜಗದ್ರಕ್ಷಣದಲ್ಲಿ ಸಾಕ್ಷಾತ್ತಾಗಿ ತಾನೇ ಅಧಿಕರಿಸಿರುವ ಭಾಗವು ತೋರುವುದಲ್ಲದೆ ಬೇರೊಂದು ಕಾರಣವಸ್ತುವಿಗೆ ವಿಷ್ಣುವು ವಿಭೂತಿ ಭೂತವಲ್ಲವೆಂದರಿಯಬೇಕು.)

(ವಿ॥ ಭಾ) ವಾಸುದೇವ ಸಂಕರ್ಷಣ ಪ್ರದ್ಯುಮ್ನಾ ನಿರುದ್ಧ ರೂಪದಿಂದ ನಾಲ್ಕು ವಿಧವಾಗಿರುವಂತವನು. ॥ ೧೩೯ ॥

## (೧೪೦ನೇ ನಾಮವು) ಚತುರ್ವ್ಯೂಹಃ,

## ಓಮ್॥ ಚತುರ್ವ್ಯೂಹಾಯನಮಃ.

(ವಿ॥ ಭಾ) ಒಬ್ಬನು ಹೇಗೆ ನಾಲ್ಕುವಿಧವಾಗಿರಬಹುದೆಂದರೆ ? ಅದಕ್ಕಾಗಿ "ಚತುರ್ವ್ಯೂಹಃ" ಎಂದು ಹೇಳುತ್ತಾರೆ. (ಕಂ॥ ಮ॥ ವಿ) ನಾಲ್ಕು ವಿಧವಾದ ಮೂರ್ತಿ ಭೇದಗಳುಳ್ಳವನು. ಎಂದರೆ ಮುಂದೇ ಹೇಳಲ್ಪಡುವ ಪ್ರಯೋಜನಕ್ಕಾಗಿಯೂ ಧ್ಯಾನಮಾಡಲ್ಪಡುವ ಸ್ವರೂಪವು ಇಂತಾದ್ದೆಂದು ತಿಳಿಸುವುದಕ್ಕಾಗಿಯೂ ಜ್ಞಾನ ಶಕ್ತ್ಯಾದಿಗಳಾದ ಆರು ಕಲ್ಯಾಣ ಗುಣಗಳನ್ನು ಏಕವಾಗಿಯೂ ಭಿನ್ನಪಡಿಸಿಯೂ ಸ್ವೀಕರಿಸಿ ಆಯಾ ಗುಣಗಳಿಗೆ ಪ್ರಕಾಶವಾಗಿ ಯೇರ್ಪಟ್ಟ ಅವಯವ ವರ್ಣ ಆಭರಣ ಆಯುಧ ವಾಹನ ಧ್ವಜವೇ ಮೊದಲಾದವುಗಳಿಂದಲೂ ಜಾಗ್ರತ್ಸ್ವಪ್ನಾದಿ ನಾಲ್ಕು ಅವಸ್ಥೆಗಳಿಂದಲೂ ಸೇರಿ ನಾಲ್ಕು ವಿಧವಾಗಿ ಭೇದಿಸಲ್ಪಟ್ಟಿರುವಂತವನು "ಚತುರ್ವ್ಯೂಹಃ" ಎನ್ನಲ್ಪಡುವನು. ॥ ೧೪೦ ॥

## (೧೪೧ನೇ ನಾಮವು) ಚತುರ್ದಂಷ್ಟ್ರಃ,
### ಓಮ್॥ ಚತುರ್ದಂಷ್ಟ್ರಾಯನಮಃ.

(ಶಂ॥ ಮ) ನಾಲ್ಕು ಕೋರೆ ಹಲ್ಲುಗಳುಳ್ಳ ನೃಸಿಂಹರೂಪಿಯಾದವನು. (ಶಂ) "ಚತ್ವಾರಿಶೃಂಗಾ" ಎಂಬ ಶ್ರುತ್ಯನುಸಾರವಾಗಿ (ಸಾದೃಶ್ಯದಿಂದ) ಶೃಂಗದಂತೆ ಇರುವ ಕೋರೆ ಹಲ್ಲುಗಳುಳ್ಳವನು.

(ವಿ॥ ಭಾ) ಇಂತಹ ವ್ಯೂಹ ಮೂರ್ತಿಗಳಿಗೆ ಕಾರಣವಾದ ಪರಸ್ವರೂಪದಲ್ಲಿ ನಾಲ್ಕು ಹಲ್ಲುಗಳುಳ್ಳದ್ದು ಜಗದೀಶ್ವರಲಕ್ಷಣವೆಂದು ಶ್ರೀರಾಮಾಯಣದಲ್ಲಿ "ಚತುರ್ದಶ ಸಮುದ್ವಂದ್ವ ಶ್ಚತುರ್ದ್ರಂಷ್ಟ್ರ ಶ್ಚತುರ್ಗತಿಃ" ಎಂದು ಹೇಳಿರುತ್ತಾರೆ. ॥ ೧೪೧ ॥

## (೧೪೨ನೇ ನಾಮವು) ಚತುರ್ಭ್ಬುಜಃ,
### ಓಮ್॥ ಚತುರ್ಭ್ಬುಜಾಯನಮಃ.

(ವಿ॥ ಭಾ) "ಚತುರ್ಭುಜ ಮುದಾರಾಂಗಂ ಚಕ್ರಾದ್ಯಾ ಯುಧಭೂಷಣಂ" ಎಂಬದಾಗಿ ಶ್ರೀವಿಷ್ಣುಪುರಾಣದಲ್ಲಿ ಹೇಳಿರುವಂತೆ ಪರಸ್ವರೂಪದಲ್ಲಿ (ಶಂ॥ ವಿ॥ ಮ) ನಾಲ್ಕು ಭುಜಗಳುಳ್ಳವನು "ಚತುರ್ಭುಜಃ" ಎನ್ನಲ್ಪಡುವನು. ॥ ೧೪೨ ॥

ಈ ಪ್ರಕಾರವಾಗಿ ಈ (೧೫)ನೇ ಶ್ಲೋಕದಲ್ಲಿರುವ (೮) ನಾಮಗಳಿಗೂ "ಧರ್ಮಾಧಿಕಾರಿಣೋಲೋಕಾ ಸ್ತದಾರಾಧ್ಯಾ ಸ್ಸುರಾಸ್ತಥಾ। ಧರ್ಮಸ್ತತ್ಫಲ ಧನಂತೇಷಾ "ಮಧ್ಯಕ್ಷ" (೧೩೫॥ ೬॥ ೭) ಸ್ತ್ವ್ಯತ್ರಿನಾಮವಾನ್॥ ಲೋಕಾಧ್ಯಕ್ಷ ಸ್ಸುರಾಧ್ಯಕ್ಷೋ ಧರ್ಮಾಧ್ಯಕ್ಷ ಇತಿಕ್ರಮಾತ್। ಅನಿರುದ್ಧ ಸ್ಸವಿಜ್ಞೇಯೋ ಲೋಕಾಧ್ಯಕ್ಷಾದಿ ನಾಮವಾನ್॥ ಅನಿತ್ಯನಿತ್ಯಫಲದೌ ಪ್ರವರ್ತಕ ನಿವರ್ತಕೌ। ದದೌಯಸ್ಯ ಸ್ವರೂಪಂಸ "ಕೃತಾಕೃತ" (೧೩೮) ಇತೀರಿತಃ॥ ವಾಸುದೇವಾದಿ ರೂಪತ್ವಾ "ಚ್ಚತುರಾತ್ಮೇ" (೧೩೯) ತಿಕಥ್ಯತೆ। ಜಾಗ್ರತ್ಸ್ವಪ್ನ ಸುಷುಪ್ತ್ಯಾದೌ ವ್ಯೂಹಾವಸ್ಥಾ ಚತುಷ್ಟಯೆ। ಏತೈರ್ವಿಶಿಷ್ಟ ಮೂರ್ತಿತ್ವಾ "ಚ್ಚತುರ್ವ್ಯೂಹ" (೧೪೦) ಇತೀರಿತಃ॥ ದಂಷ್ಟ್ರಾಚತುಷ್ಕ ಯುಕ್ತತ್ವಾ "ಚ್ಚತುರ್ದ್ರಂಷ್ಟ್ರ" (೧೪೧) ಇತಿಸ್ಮೃತಃ। ಮಹಾಪುರುಷ ರೂಪ

(ವಿ॥ಭಾ) ಈ ಪ್ರಕಾರವಾಗಿ ವ್ಯೂಹವು ಹೇಳಲ್ಪಟ್ಟಿತು. ಇನ್ನು ಮುಂದೆ ವಿಭವವನ್ನು ಹೇಳಲುದ್ದೇಶಿಸಿ ಮೊದಲು ತ್ರಿಮೂರ್ತಿಗಳಲ್ಲಿ ಒಂದಾದ ವಿಭವಾವತಾರವನ್ನು ಹೇಳುತ್ತಾರೆ. ಪ್ರಪಂಚಕ್ಕೆ ಆದಿಯಾಗಿರುವ ತ್ರಿಮೂರ್ತಿಗಳಲ್ಲಿ ಒಬ್ಬನಾಗಿ ಅವತರಿಸಿರುವಂತವನು 'ಜಗದಾದಿಜಃ' ಎನ್ನಲ್ಪಡುವನು. ಈ ಅರ್ಥವು "ಯಸ್ಯಪ್ರಸಾದಾ ದಹಮಚ್ಯುತಸ್ಯ ಭೂತ ಪ್ರಜಾ ಸರ್ಗ ಕರೋಂತಕಾರೀ । ಕ್ರೋಧಾಚ್ಚ ರುದ್ರಃ ಸ್ಥಿತಿಹೇತು ಭೂತಃ ಯಸ್ಮಾಚ್ಚಮಧ್ಯೇ ಪುರುಷಃ ಪರಸ್ತಾತ್॥" (ವಿ॥ ಪು॥ ೪॥ ೧॥ ೧೯) ಎಂತಲೂ; ಗತಿಶ್ಚನಸ್ತ್ವಂ ದೇವೇಷು ಪೂರ್ವಜೋ ಜಗತಃ ಪ್ರಭುಃ । ರಕ್ಷಾರ್ಥಂ ಸರ್ವಭೂತಾನಾಂ ವಿಷ್ಣುತ್ವ ಮುಪಜಗ್ಮಿವಾನ್" (ಭಾರ॥ ಉ॥ ೧೨॥ ೧೧) ಎಂತಲೂ ಹೇಳಲ್ಪಟ್ಟಿರುವುದು. ಈ ಪ್ರಮಾಣದಲ್ಲಿ ಭಗವತ್ಪ್ರಸಾದದಿಂದ ಹುಟ್ಟಿದ ಚತುರ್ಮುಖನು ಪ್ರಜಾಸೃಷ್ಟಿಯನ್ನು ಮಾಡುವನೆಂತಲೂ; ರುದ್ರನು ಕ್ರೋಧ ಗುಣದಿಂದ ಹುಟ್ಟಿದವನಾಗಿ ಸಂಹಾರ ಕಾರ್ಯವನ್ನು ಮಾಡುವನೆಂತಲೂ; ಇವರಿಬ್ಬರ ಮಧ್ಯದಲ್ಲಿ ತಾನೇ ನಿಂತು ಸರ್ವ ಜಗದ್ರಕ್ಷಣವನ್ನು ಮಾಡುವನೆಂತಲೂ; ಹೇಳಲ್ಪಟ್ಟು ಸಮಸ್ತ ದೇವತೆಗಳಿಗೂ ಮೊದಲನೇಯವನಾದ ಕಾರಣ ನೀನೇಗತಿಯಾಗಿಯೂ ಜಗತ್ಪ್ರಭುವಾಗಿಯೂ ಪೂಜ್ಯನಾಗಿಯೂ ಇರುವಂತವನಾಗಿ ಸರ್ವಭೂತಗಳ ರಕ್ಷಣಾರ್ಥವಾಗಿ ವಿಷ್ಣುವಾಗಿರುವಿ ಎಂಬ ಅರ್ಥವು ಹೇಳಲ್ಪಟ್ಟಿರುವುದು. (ಮ) ಜಗದಾದಿಯಲ್ಲಿ "ಅಜಾಯಮಾನೋ ಬಹುಧಾ ವಿಜಾಯತೆ" ಎಂಬಂತೆ ಕರ್ಮದಿಂದಲ್ಲದೆ ಸ್ವೇಚ್ಛೆಯಿಂದ ಹುಟ್ಟಿದವನು. ॥ ೧೪೭ ॥

## (೧೪೮ನೇ ನಾಮವು) ಅನಘಃ,

### ಓಮ್॥ ಅನಘಾಯನಮಃ.

(ವಿ॥ ಭಾ) ಈ ಪ್ರಕಾರದಿಂದ ಸಂಸಾರ ಮಧ್ಯದಲ್ಲಿ ಅವತರಿಸಿದರೂ ಪಾಪ ಸಂಬಂಧವಿಲ್ಲದವನು. ಹೇಯ ಪ್ರತಿಭಟನೆಂದರ್ಥವು. ॥ ೧೪೮ ॥

## (೧೪೯ನೇ ನಾಮವು) ವಿಜಯಃ,

### ಓಮ್॥ ವಿಜಯಾಯನಮಃ.

(ಶಂ॥ ಭಾ) ಜ್ಞಾನ ವೈರಾಗ್ಯೈಶ್ವರ್ಯಾದಿ ಗುಣಗಳಿಂದ ಸಮಸ್ತವನ್ನು ಜಯಿಸುವುದರಿಂದ 'ವಿಜಯಃ' ಎನ್ನಲ್ಪಡುವನು.

(ವಿ॥ ಭಾ) ತ್ರಿಮೂರ್ತಿಗಳಲ್ಲಿ ಬ್ರಹ್ಮ ರುದ್ರರೆಂಬ ಇಬ್ಬರಿಗೂ ಸೃಷ್ಟಿ ಸಂಹಾರಾಧಿಕಾರವನ್ನು ಕೊಟ್ಟು ಅವರು ವಿಜಯ ಹೊಂದುವು ದೂ ಇವನ ಅನುಗ್ರಹದಿಂದಲೆ ಆಗಿರುವುದರಿಂದ ‘ ವಿಜಯಃ ’ ಎನ್ನಲ್ಪ ಡುವನು. (ಜಗದ್ವಿಜಯೋ ಅಸ್ಮಾದಿತಿವಿಜಯಃ) ಈಅರ್ಥವನ್ನು ಮೋಕ್ಷ ಧರ್ಮದಲ್ಲಿ “ ತದಾದರ್ಶಿತಪಂಥಾನೌ ಸೃಷ್ಟಿಸಂಹಾರ ಕಾರಕೌ ” (೧೪೯॥ ೧೯) ಎಂಬದಾಗಿ ಪರಮಾತ್ಮನ ಪ್ರಸಾದದಿಂದಲೂ ಕ್ರೋಧದಿಂದಲೂ ಹುಟ್ಟಿರುವ ಬ್ರಹ್ಮ ರುದ್ರರು ಅವನಿಂದ ತೋರಿಸಲ್ಪಟ್ಟ ಸೃಷ್ಟಿ ಸಂ ಹಾರ ರೂಪವಾದ ವ್ಯಾಪಾರ ಮಾರ್ಗವುಳ್ಳವರಾಗಿ ಅದನ್ನು ಮಾಡುವ ರೆಂದು ಹೇಳಿರುತ್ತಾರೆ. (ಮ) ಸರ್ವ ವ್ಯಾಪಾರಗಳಲ್ಲಿಯೂ ವಿಜಯ ರೂಪವಾದ ವಿಭೂತಿಯುಳ್ಳವನು. ॥ ೧೪೯ ॥

(೧೫೦ನೇ ನಾಮವು) ಜೇತಾ,

ಓಮ್॥ ಜೇತ್ರೇನಮಃ.

(ಶಂ॥ ಭಾ) ಸರ್ವ ಭೂತಗಳನ್ನು ಸ್ವಭಾವವಾಗಿಯೆ ಜಯಿಸುವಂ ತವನು. (ವಿ॥ ಭಾ) ಅವರುಗಳನ್ನೂ ತನ್ನ ಅಭಿಪ್ರಾಯಾನುಸಾರವಾಗಿ ರುವಂತೆ ಮಾಡುವಂತವನು. ತಯೋರಪಿ ಜೇತಾ-ಸ್ವಾಭಿಪ್ರಾಯೇಷ್ವ ವಸ್ಥಾಪಯಿತಾ. ॥ ೧೫೦ ॥

(೧೫೧ನೇ ನಾಮವು) ವಿಶ್ವಯೋನಿಃ,

ಓಮ್॥ ವಿಶ್ವಯೋನಯೇನಮಃ.

(ವಿ॥ ಭಾ) ಅವರ ಮುಖವಾಗಿ (ಬ್ರಹ್ಮ ರುದ್ರರ ಮುಖವಾಗಿ) ಕಾರ್ಯ ಪ್ರಪಂಚಕ್ಕೆ ಕಾರಣನಾಗಿರುವಂತವನು ‘ ವಿಶ್ವಯೋನಿಃ ’ ಎನ್ನ ಲ್ಪಡುವನು. ॥ ೧೫೧ ॥

(೧೫೨ನೇ ನಾಮವು) ಪುನರ್ವಸುಃ,

ಓಮ್॥ ಪುನರ್ವಸವೇನಮಃ.

(ಶಂ॥ ಭಾ) ಆಗಾಗ್ಯೆ ಶರೀರಗಳಲ್ಲಿ ಕ್ಷೇತ್ರಜ್ಞಾ ರೂಪದಿಂದ ಇರು

ವಂತವನಾದುದರಿಂದ ' ಪುನರ್ವಸುಃ ' ಎನ್ನಲ್ಪಡುವನು. (ವಿ॥ ಭಾ) ಪು ನಶ್ಚ ಬ್ರಹ್ಮಾದಿಗಳಲ್ಲಿ ಅಂತರಾತ್ಮನಾಗಿ ವಾಸಮಾಡುವಂತವನು. ಈ ಅರ್ಥವು " ದೇವಾನಾಂ ಬಂಧುಂ ನಿಹಿತಂಗುಹಾಸು ॥ ತವಾಂತರಾತ್ಮಾ ಮಮಚಯೇಚಾನ್ಯೇ ದೇಹಿಸಂಜ್ಞಿತಾಃ " (ಮೋಕ್ಷಧರ್ಮ॥ ೧೭೧॥ ೪) ಎಂಬ ವಚನಗಳಲ್ಲಿ ಹೇಳಲ್ಪಟ್ಟಿರುವುದು (ಮ) ಇದು ರಾಮನ ಜನ್ಮ ನಕ್ಷತ್ರವಾದುದರಿಂದ ಭಗವದ್ವಿಭೂತಿಯಾಗಿರುವುದು. ॥ ೧೫೨ ॥

(ದೇವತೆಗಳಿಗೆ ಬಂಧುವೂ ಸರ್ವರ ಹೃದಯಾಂತರ್ಯಾಮಿಯಾಗಿಯೂ ಇರುವಂತವ ನು. ನಿನಿಗೂ ನನಿಗೂ ಮತ್ತು ದೇಹಿಗಳಾದ ಆತ್ಮರು ಯಾರೊ ಅವರೆಲ್ಲರಿಗೂ ಅಂತ ರಾತ್ಮನಾಗಿರುವನೆಂದರ್ಥವು.)

ಈ (೧೬)ನೇ ಶ್ಲೋಕದಲ್ಲಿರುವ (೧೦) ನಾಮಗಳಿಗೂ " ಉಪಾಸಿ ತೃಭ್ಯೋ " ಭ್ರಾಜಿಷ್ಣುಃ " (೧೪೩) ಸ್ವಪ್ರಕಾಶನ ಶೀಲತಃ । ಸುಖೇನ " ಭೋಜನಂ " ಪ್ರಾಹುರ್ಭ್ಯೋ ಭಕ್ತೈರನುಭೂಯತೆ ॥ " ಭೋಕ್ತಾ " (೧೪೫) ರ್ಪಿತಸ್ಯಭೋಕ್ತೃತ್ವಾ ದ್ಭೋಕ್ತಾಸ್ಯ ದರ್ಪಿತಸ್ಯವಾ । ಪ್ರಾಗೂರ್ಧ್ವಂ ಸಂಚಿತಾನಾಂಚ ಬುದ್ಧ್ಯಾಚ ಕರಣೈಸ್ಸದಾ ॥ ಕೃತಾ ನಾಂ ಸರ್ವಧಾತೇಷಾಂ ನಿಷೇಧ ವಿಧಿಸಾಧನಂ । ಅತೀತ್ಯ ಕ್ರಿಯಮಾಣಾ ನಾ ಮಸತ್ಸೇವಾನುಬಂಧಿನಾಂ ॥ ಸರ್ವಂಸಹೇನಸ್ವೇನಾಪಿ ದುಸ್ಸಹಾನಾಂ ವಿಶೇಷತಃ । ಸ್ವಭಕ್ತ ವಿಷಯಾಣಾಂಚ ನಿರ್ಮರ್ಯಾದ ಕೃತ್ಯೈನಸಾಂ ॥ ಸ ಹನೈಕತ್ವ ಶೀಲತ್ವಾ " ತ್ಸಹಿಷ್ಣು " (೧೪೬) ರಿತಿವಿಶ್ರುತಃ ॥ ವರ್ಣಿತೋ ಭೂದ್ವ್ಯೂಹಭೇದೋ ವಿಭವಸ್ತು ಪ್ರತನ್ಯತೆ । ಜಗತಾಮಾದಿ ಭೂತಾ ಸು ಮೂರ್ತಿಷ್ವನ್ಯ ತಮತ್ವತಃ॥ ಜಾತತ್ವಾದ್ವಿಷ್ಣುರೂಪೇಣ ಪ್ರೋಚ್ಯ ತೆ " ಜಗದಾದಿಜಃ " (೧೪೭) । ಪಾಪಪ್ರತಿಸ್ಪರ್ಧ್ಯ " ನಘಃ " (೧೪೮) " ವಿಜಯೊ " (೧೪೯) ಜಗತಾಂಜಯಾ ॥ ಸ್ವಾಭಿಪ್ರಾಯೇ ಸ್ಥಾಪಯಿ ತಾ " ಜೇತಾ " (೫೫೦) ಸ್ವಾದ್ವಿಧಿಶಂಕರೌ । ವಿಶ್ವಂತತ್ಕಾರ್ಯ ವರ್ಗ ಸ್ಸ್ಯಾ " ದ್ಯೋನಿ " (೧೫೧) ಸ್ಸ್ಯತುಕಾರಣಂ ॥ ತಸ್ಯಬ್ರಹ್ಮಾದಿ ಮುಖತಃ ' ವಿಶ್ವಯೋನಿ ' ರಿತೀರಿತಃ । ಬ್ರಹ್ಮಾದಿಷ್ವಪಿದೇವೇಷು ಅನ್ತ ರಾತ್ಮ ತಯಾಚಯಃ । ಪುನರ್ನಿವಸನಾನ್ನಿತ್ಯಂ " ಪುನರ್ವಸು " (೧೫೨) ರುದಾಹೃತಃ ॥ ಎಂಬೀರೀತಿಯಾಗಿ ವಿವೃತಿಯನ್ನು ಕಾಣಬಹುದು.

ಮೂ॥ ಉಪೇಂದ್ರೋ ವಾಮನಃ ಪ್ರಾಂಶುರ
ಮೋಘಶ್ಶುಚಿ ರೂರ್ಜಿತಃ । ಅತೀಂದ್ರ ಸ್ಸಂಗ್ರ
ಹಸ್ಸರ್ಗೋ ಧೃತಾತ್ಮಾ ನಿಯಮೋಯಮಃ ।೧೭॥

(೧೫೩ನೇ ನಾಮವು) ಉಪೇಂದ್ರಃ,

ಓಮ್॥ ಉಪೇಂದ್ರಾಯನಮಃ.

(ಶಂ॥ ವಿ॥ ಭಾ) ತಮ್ಮನಾಗಿ ಇಂದ್ರನನ್ನು ಹೊಂದಿರುವುದರಿಂದಲಾದರೂ (ಶಂ) "ಮಮೋಪರಿಯಥೇಂದ್ರಸ್ತ್ವಂ ಸ್ಥಾಪಿತೋ ಗೋಭಿರೀಶ್ವರಃ । ಉಪೇಂದ್ರ ಇತಿಕೃಷ್ಣತ್ವಾಂ ಗಾಸ್ಯಂತಿ ಭುವಿದೇವತಾಃ" ಎಂಬ ಹರಿವಂಶ ಪ್ರಮಾಣಾನುಸಾರವಾಗಿ ಇಂದ್ರಾದಿಗಳಿಗೆ ಈಶನಾದ ಕಾರಣದಿಂದಲಾದರೂ 'ಉಪೇಂದ್ರಃ' ಎನ್ನಲ್ಪಡುವನು. (ವಿ) "ಜಘನ್ಯಜಸ್ತು ಸರ್ವೇಷಾ ಮಾದಿತ್ಯಾನಾಂ ಗುಣಾಧಿಕಃ । ದ್ವಾದಶೈವಾ ದಿತೇಃ ಪುತ್ರಾ ಶ್ಶಕ್ರಮುಖ್ಯಾನರಾಧಿಪ ॥ ತೇಷಾಮವರಜೋವಿಷ್ಣು ರ್ಯತ್ರ ಲೋಕಾಃ ಪ್ರತಿಷ್ಠಿತಾಃ ॥ ವಿಷ್ಣುರಿಂದ್ರಾನುಜೋಭವತ್" ಇತ್ಯಾದಿ ಪ್ರಮಾಣಗಳು ಈ ಅರ್ಥವನ್ನು ಹೇಳುವುವು. ॥ ೧೫೩ ॥

(ನೀನು ನನ್ನಮೇಲೆ ಇಂದ್ರನಂತೆ ಗೋವುಗಳಿಂದ ಈಶ್ವರನಾಗಿ ಸ್ಥಾಪಿಸಲ್ಪಟ್ಟಿರುತ್ತೀಯಾದುದರಿಂದ ಉಪೇಂದ್ರನೆನ್ನಲ್ಪಡುವಿ ಎಂದು (ಶಂ) ಉದಾಹೃತ ಪ್ರಮಾಣಾರ್ಥವು. ಅದಿತಿ ಪುತ್ರರಾದ ಸರ್ವರಿಗೂ ಕಡೆಯವನಾದ ಉಪೇಂದ್ರನು ಗುಣದಲ್ಲಿ ಅತ್ಯಂತಾಧಿಕನು. ಅದಿತಿದೇವಿಗೂ ಇಂದ್ರನೇ ಮೊದಲಾದ ಹನ್ನೆರಡೇ ಮಕ್ಕಳು. ಎಲೈ ರಾಜನೆ? ಅವರುಗಳಲ್ಲಿ ವಿಷ್ಣುವು ಕಡೆಯವನಾಗಿರುವನು ಇವನಲ್ಲಿ ಸಮಸ್ತ ಲೋಕಗಳೂ ಅಡಗಿರುವುವೆಂದು (ವಿ) ಭಾಷ್ಯೋದಾಹೃತ ಪ್ರಮಾಣಾರ್ಥವು. ವಿಷ್ಣುವು ಇಂದ್ರನಿಗೆ ತಮ್ಮನಾಗಿ ಉಪೇಂದ್ರನಾದನು.)

(೧೫೪ನೇ ನಾಮವು) ವಾಮನಃ,

ಓಮ್॥ ವಾಮನಾಯನಮಃ.

(ಶಂ॥ ಭಾ) ಬಲಿಚಕ್ರವರ್ತಿಯನ್ನು ವಾಮನರೂಪದಿಂದ ಯಾಚಿಸಿದವನು ಅಥವಾ "ಮಧ್ಯೇವಾಮನಮಾಸೀನಂ ವಿಶ್ವೇದೇವಾ ಉಪಾಸತೇ"

ಎಂಬ ಮಂತ್ರ ವರ್ಣಾನುಸಾರವಾಗಿ ವಿಶ್ವೇದೇವತೆಗಳಿಂದ ಸೇವಿಸಲ್ಪಡು ವುದರಿಂದ ವಾಮನ ನೆನ್ನಲ್ಪಡುವನು.

(ಮಧ್ಯೆ ಕೂತುಕೊಂಡಿರುವ ವಾಮನರೂಪಿಯಾದ ಭಗವಂತನನ್ನು ವಿಶ್ವೇ ದೇವತೆಗಳು ಸೇವಿಸುವರೆಂದರ್ಥವು)

(ವಿ|| ಭಾ) ಅವನೇ ಇಂದ್ರರಕ್ಷಣಾರ್ಥವಾಗಿ ಬಲಿಚಕ್ರವರ್ತಿಯ ಯಾಗದಲ್ಲಿ "ದ್ರಷ್ಟೃಲಾಕ್ ಸ್ವಕಾಂತ್ಯಾ ವಾಮಾನಿ ಸುಖಾನಿ ನಯ ತಿ" ಎಂಬ ಶ್ರುತಿಯಂತೆ ನೋಡುವಂತವರಿಗೆ ಸುಂದರವಾದ ತನ್ನ ದಿವ್ಯ ಶರೀರ ಕಾಂತಿಯಿಂದ ಸುಖವನ್ನು ಕೊಡುವುದರಿಂದ 'ವಾಮನಃ' ಎನ್ನ ಲ್ಪಡುವನು. || ೧೫೪ ||

## (೧೫೫ನೇ ನಾಮವು) ಪ್ರಾಂಶುಃ,
## ಓಮ್|| ಪ್ರಾಂಶವೇನಮಃ.

(ಶಂ|| ವಿ|| ಭಾ) ತಾನು ಚಿಕ್ಕವನಾಗಿರುತ ಬಲಿಚಕ್ರವರ್ತಿಯಲ್ಲಿ ದಾನವನ್ನು ಪ್ರಾರ್ಥಿಸಿದಮೇಲೆ ದಾನೋದಕವು ಕೈಯ್ಯಲ್ಲಿ ಬಿದ್ದಕ್ಷಣವೇ ಸರ್ವವನ್ನು ತಾನೇ ಆಕ್ರಮಿಸುವಂತೆ ಬೆಳದು ವಿಶ್ವರೂಪಿಯಾದವನು "ಪ್ರಾಂಶುಃ" ಎನ್ನಲ್ಪಡುವನು. ಇದಕ್ಕೆ "ತೋಯೇತು ಪತಿತೇ ಹಸ್ತೇ ವಾಮನೋಭೂ ದವಾಮನಃ | ತಸ್ಯವಿಕ್ರಮತೋಭೂಮಿಂ ಚಂದ್ರಾದಿತ್ಯೌ ಸ್ತನಾಂತರೆ || ನಭಃಪ್ರಕ್ರಮ ಮಾಣಸ್ಯ ನಾಭ್ಯಾಂತೌ ಸಮವಸ್ಥಿತೌ || ವಾಮನೋ ರಕ್ಷತುಸದಾ ಭವಂತಂಯಃ ಕ್ಷಣಾದಭೂ ತ್ ||" (ಶ್ರು) ಇದಂವಿಷ್ಣುರ್ವಿಚಕ್ರಮೇ" ಇತ್ಯಾದಿ ಸ್ಮೃತಿ ಶ್ರುತಿ ಗಳು ಆಧಾರಗಳಾಗಿರುವುವು

(ಕೈಯ್ಯಲ್ಲಿ ದಾನ ಜಲವು ಮಹಾ ಬಲಿಚಕ್ರವರ್ತಿಯಿಂದ ಕೊಡಲ್ಪಟ್ಟ ತತ್‌ಕ್ಷ ಣವೆ ವಾಮನಮೂರ್ತಿಯು ಸರ್ವ ಪ್ರಪಂಚಗಳನ್ನು ಆಕ್ರಮಿಸುವುದಕ್ಕೆ ಯೋಗ್ಯವಾದ ಮಹಾ ದೊಡ್ಡ ರೂಪವುಳ್ಳವನಾದನು ಅನಂತರದಲ್ಲಿ ಸರ್ವ ಜಗತ್ಪ್ರಭುವಾದ ನಾರಾಯ ಣನು ಸರ್ವ ದೇವತಾಮಯವಾದ ರೂಪವನ್ನು ತೋರಿಸಿದನು. ಪಾದಗಳೇ ಭೂಮಿಯಾ ಗಿಯೂ, ಶಿರಸ್ಸೇ ಅಂತರಿಕ್ಷವಾಗಿಯೂ, ಚಂದ್ರಾದಿತ್ಯರು ನೇತ್ರಗಳಾಗಿಯೂ ಆದರು. ಈ ಪ್ರಕಾರವಾಗಿ ಆಕಾಶವನ್ನು ಆಕ್ರಮಿಸುವಾಗ ನಾರಾಯಣನ ವಕ್ಷಸ್ಥಲ ಮಧ್ಯದಲ್ಲಿ ಚಂದ್ರಸೂರ್ಯರು ನಾಭಿಸ್ಥಾನದಲ್ಲಿ ನಿಂತರು (ಶ್ರು) ಈ ಸರ್ವ ಪ್ರಪಂಚವನ್ನು ಸರ್ವ ವ್ಯಾಪನ ಶೀಲನಾದ ವಿಷ್ಣುವು ಆಕ್ರಮಿಸಿದನೆಂದೀ ಪ್ರಮಾಣಾರ್ಥಗಳು.)

(ವಿ॥ ಭಾ) ಪ್ರಾಂಶುಃ=ಶ್ರೇಷ್ಠವಾದ ಅವಯವವುಳ್ಳವನು ॥ ೧೫೪ ॥

(೧೫೫ನೇ ನಾಮವು) ಅಮೋಘಃ,
ಓಮ್॥ ಅಮೋಘಾಯನಮಃ.

(ಶಂ॥ ಭಾ) ವ್ಯರ್ಥವಲ್ಲದ ವ್ಯಾಪಾರವುಳ್ಳವನು. (ಪ) “ ಅಮೋಘಃ ಪುಂಡರೀಕಾಕ್ಷಃ ” ಎಂಬ ಸ್ಥಾನದಲ್ಲಿ ಸತ್ಯ ಸಂಕಲ್ಪನೆಂಬ ಅರ್ಥವರ್ಣನ ವಿರುವುದರಿಂದ ಪೌನರುಕ್ತ್ಯವಿಲ್ಲವು.

(ವಿ॥ ಭಾ) ಇವನಿಗೆ ವ್ಯರ್ಥರಾಗಿರುವಂತವರಿಲ್ಲವಾದುದರಿಂದ “ ಅಮೋಘಃ ” ಎನ್ನಲ್ಪಡುವನು. ಬಲಿಚಕ್ರವರ್ತಿಯನ್ನೂ ಇಂದ್ರನನ್ನೂ ಸಮಾನವಾಗಿ ತಾರತಮ್ಯವನ್ನಿಡದೆ ಅನುಗ್ರಹಿಸುವಂತವನೆಂದು “ ಅನುಗ್ರಹಂಚಾಪಿ ಬಲೇರನುತ್ತಮಂ ಚಕಾರಯಶ್ಚೇಂದ್ರ ಪದೋಪಮಂಕ್ಷಣಾತ್ । ಸುರಾಂಶ್ಚಯಜ್ಞಾಂಶಭುಜಃ ” ಎಂದು (ವಿಷ್ಣುಧ) ಹೇಳಿರುವುದರಿಂದ ಯಾರನ್ನೂ ವ್ಯರ್ಥಪಡಿಸದ ಮಹಾ ಪ್ರಭಾವಶಾಲಿಯಾದವನು “ ಅಮೋಘಃ ” ಎನ್ನಲ್ಪಡುವನು. ॥ ೧೫೫ ॥

(ಇಂದ್ರನಿಗೆ ಯೆಂತಹ ಅನುಗ್ರಹವನ್ನು ಮಾಡಿ ಸ್ವರ್ಗಾಧಿಪತ್ಯವನ್ನು ಕೊಟ್ಟಿರುವನೊ ಅದಕ್ಕೆ ಸಮಾನವಾದ ಸ್ಥಾನವನ್ನು ಬಲಿಚಕ್ರವರ್ತಿಗಳಿಗೆ ಕೊಟ್ಟು ಇಂದ್ರನಿಗೆ ಸಮಾನವಾಗಿ ಸರ್ವೋತ್ತಮವಾದ ಅನುಗ್ರಹವನ್ನು ಮಾಡಿರುವನು. ದೇವತೆಗಳಿಗೂ ಯಜ್ಞ ಭಾಗಗಳನ್ನು ಕೊಟ್ಟು ಅನುಗ್ರಹಿಸಿರುವನೆಂದರ್ಥವು)

(೧೫೬ನೇ ನಾಮವು) ಶುಚಿಃ,
ಓಮ್॥ ಶುಚಯೇನಮಃ.

(ಶಂ॥ ಭಾ) ಧ್ಯಾನಿಸುವಂತವರನ್ನೂ ಪೂಜಿಸುವಂತವರನ್ನೂ ಪರಿಶುದ್ಧನಾಗಿ ಮಾಡುವಂತವನು “ ಶುಚಿಃ ” ಎನ್ನಲ್ಪಡುವನು.

(ವಿ॥ ಭಾ) ಈ ಪ್ರಕಾರವಾಗಿ ಅವರುಗಳಿಗೆ ಉಪಕಾರವನ್ನು ಮಾಡಿದ್ದರೂ ಪ್ರತ್ಯುಪಕಾರವನ್ನು ಅಪೇಕ್ಷಿಸದೇ ಇರುವುದೆಂಬ ಶುದ್ಧಿಯುಳ್ಳವನು “ ಶುಚಿಃ ” ಎನ್ನಲ್ಪಡುವನು. ॥ ೧೫೬ ॥

## (೧೫೮ನೇ ನಾಮವು) ಊರ್ಜಿತಃ,

### ಓಮ್|| ಊರ್ಜಿತಾಯನಮಃ.

(ವಿ|| ಭಾ) ನಮೂಚಿಯೇ ಮೊದಲಾದ ಶತ್ರುಗಳ ನಿರಾಸದಲ್ಲಿ (ಶಂ|| ಮ) ಅತ್ಯಂತವಾದ ಬಲವುಳ್ಳವನು "ಊರ್ಜಿತಃ" ಎನ್ನಲ್ಪಡುವನು. || ೧೫೮ ||

## (೧೫೯ನೇ ನಾಮವು) ಅತೀಂದ್ರಃ,

### ಓಮ್|| ಅತೀಂದ್ರಾಯನಮಃ.

(ವಿ|| ಭಾ) ಇಂದ್ರನಿಗೆ ತಮ್ಮನಾಗಿ ಅವತರಿಸಿದ್ದರೂ (ಶಂ|| ವಿ|| ಮ) ಸ್ವಾಭಾವಿಕಗಳಾದ ಜ್ಞಾನೈಶ್ವರ್ಯಾದಿ ಗುಣಗಳಿಂದಲೂ ದಿವ್ಯ ಚೇಷ್ಟಿತಗಳಿಂದಲೂ ಇಂದ್ರನನ್ನು ಅತಿಶಯಿಸಿದವನು "ಅತೀಂದ್ರಃ" ಎನ್ನಲ್ಪಡುವನು. || ೧೫೯ ||

## (೧೬೦ನೇ ನಾಮವು) ಸಂಗ್ರಹಃ,

### ಓಮ್|| ಸಂಗ್ರಹಾಯನಮಃ.

(ಶಂ||ಮ) ಸರ್ವವಸ್ತುಗಳನ್ನು ಸಂಹಾರಕಾಲದಲ್ಲಿ ಚನ್ನಾಗಿ ಗ್ರಹಿಸುವಂತವನು. (ವಿ|| ಭಾ) ಈ ರೀತಿಯುಳ್ಳಿದ್ದರೂ ಭಕ್ತರುಗಳಿಂದ ಯಾವದೊಂದು ಪ್ರಯಾಸವಿಲ್ಲದೆ ಸೇವಾರ್ಥವಾಗಿ ಸ್ವೀಕರಿಸಲ್ಪಡುವಂತವನು "ಸಂಗ್ರಹಃ" ಎನ್ನಲ್ಪಡುವನು. || ೧೬೦ ||

## (೧೬೧ನೇ ನಾಮವು) ಸರ್ಗಃ,

### ಓಮ್|| ಸರ್ಗಾಯನಮಃ.

(ಶಂ|| ಭಾ) ಸೃಷ್ಟಿಸಲ್ಪಡುವ ವಸ್ತುಗಳ ಸ್ವರೂಪವುಳ್ಳವನಾದುದರಿಂದಲಾದರೂ ಅಥವಾ (ಶಂ|| ಮ) ಸೃಷ್ಟಿಸುತ್ತಾನಾದುದರಿಂದಲಾದರೂ "ಸರ್ಗಃ" ಎನ್ನಲ್ಪಡುವನು (ವಿ|| ಭಾ) ತ್ರಿವಿಕ್ರಮನಾಗಿ ಸರ್ವಲೋಕವ್ಯಾಪಿಯಾದ ಶ್ರೀಪಾದಗಳೊಡನೆ ಈ ರೀತಿಯಾಗಿ ಭಕ್ತರುಗಳಿಗಾಗಿ ತಾನು ತನ್ನಿಂದ "ನಿಸೃಷ್ಟಾತ್ಮಾ ಸುಹೃತ್ಸುಚ" (ಶ್ರೀರಾ|| ಯು|| ೧೭|| ೬೬) ಎಂಬಂತೆ ಸೃಷ್ಟಿಸಲ್ಪಟ್ಟಿರುವನು. || ೧೬೧ ||

## (೧೬೦ನೇ ನಾಮವು) ಧೃತಾತ್ಮಾ,

ಓಮ್|| ಧೃತಾತ್ಮನೇನಮಃ.

(ಶಂ|| ಭಾ) ಏಕರೂಪದಿಂದಲೂ ಜನ್ಮಾದಿ ರಾಹಿತ್ಯದಿಂದಲೂ (ಶಂ|| ಮ) ಧರಿಸಲ್ಪಟ್ಟ ಆತ್ಮವುಳ್ಳವನು (ವಿ|| ಭಾ) ಈ ರೀತಿಯಾಗಿ ತನ್ನನ್ನು ಕೊಟ್ಟು ಆತ್ಮಗಳನ್ನು ಧರಿಸುವಂತವನು "ಧೃತಾತ್ಮಾ" ಎನ್ನಲ್ಪಡುವನು. || ೧೬೦ ||

## (೧೬೧ನೇ ನಾಮವು) ನಿಯಮಃ,

ಓಮ್|| ನಿಯಮಾಯನಮಃ

(ಶಂ|| ಭಾ) ತಮ್ಮತಮ್ಮಗಳ ಅಧಿಕಾರದಲ್ಲಿ ಪ್ರಜೆಗಳನ್ನು (ಮ) ನಿಯಮಿಸುವಂತವನು. (ವಿ|| ಭಾ) ಅಂತಹ ಆತ್ಮಕೋಟಿಗಳಿಗೆ ಪ್ರತಿಭಟರಾದ ಬಲಿಚಕ್ರವರ್ತಿಯೇ ಮೊದಲಾದವರನ್ನು ಕೂಡ ಅಣಗಿಸಿಕೊಂಡಿರುವಂತವನು "ನಿಯಮಃ" ಎನ್ನಲ್ಪಡುವನು. || ೧೬೧ ||

## (೧೬೨ನೇ ನಾಮವು) ಯಮಃ,

ಓಮ್|| ಯಮಾಯನಮಃ.

(ಶಂ|| ಭಾ) ಒಳಗೆ (ಅಂತರ್ಯಾಮಿಯಾಗಿದ್ದುಕೊಂಡು) ನಿಯಮಿಸುವಂತವನು. (ವಿ|| ಭಾ) ಈ ಪ್ರಕಾರವಾಗಿ ಸಮಸ್ತವನ್ನೂ ವಿರೋಧಪರಿಹಾರದಿಂದ ಅನುಕೂಲವಾಗಿರುವಂತೆ (ಅಂತರ್ಯಾಮಿ ಬ್ರಾಹ್ಮಣ ಮನುಸ್ಮೃತ್ಯಾದಿಗಳಲ್ಲಿ ಹೇಳಿರುವ ಪ್ರಕಾರದಿಂದ) ಮಾಡುವಂತವನು "ಯಮಃ" ಎನ್ನಲ್ಪಡುವನು. || ೧೬೨ ||

ಈ ರೀತಿಯಾಗಿ ಈ(೧೭)ನೇ ಶ್ಲೋಕದಲ್ಲಿ ಹೇಳಲ್ಪಟ್ಟಿರುವ (೧೦) ನಾಮಗಳಿಗೂ "ಇಂದ್ರಸ್ಯಾಪ್ಯನುಜತ್ವೇನ ಜಾತ "ಶ್ಚೋಪೇಂದ್ರ" (೧೫೩) ಉಚ್ಯತೇ | ದೃಷ್ಟ್ಯಾಸ್ಯ ಕಾಂತ್ಯಾವಾಮಾನಿ ಸುಖಾನಿ ನಯತೀತಿಯಃ | ಸ "ವಾಮನೋ" (೧೫೪) ವ್ಯಾಪ್ತಿಮತ್ತ್ವಾ "ತ್ಪ್ರಾಂಶು" ಶ್ಚ (೧೫೫) ಪರಿಕೀರ್ತಿತಃ || ಬಲೇಶ್ಚವಾಸವಸ್ಯಾಪಿ ಕೃತಾರ್ಥೋ ಕ

ರಣಾತ್ಸವುಂ | ಮಾನಾತೀತ ಪ್ರಭಾವತ್ವಾ " ದಮೋಘಃ " (೧೫೬) ಪರಿಕೀರ್ತಿತಃ ‖ ನಮೋಘಂ ಚೇಷ್ಟಿತಂಯಸ್ಯ ಸೋಮೋಘಃ ಪರಿಕೀರ್ತಿತಃ| ಸ್ವಯಂಕೃತೋಪಕಾರೇಷು ಯತ್ಕಿಂಚಿತ್ಪ್ರತ್ಯುಪಕ್ರಿಯಾಂ | ಅನಪೇಕ್ಷ್ಯ ಸ್ಥಿತೋಯೊಽಸೌ " ಶುಚಿ " (೧೫೭) ಸ್ಸ್ಯಾದ್ಧರ್ಮದೋಮನುಃ‖ ಊರ್ಜಾಬಲಂ ಯಸ್ಯನಿತ್ಯಂ ಸಂಜಾತೇ "ತ್ಯೂರ್ಜಿತ " (೧೫೮) ಸ್ಸ್ಮೃತಃ | ಇಂದ್ರಾನುಜತ್ವೇಪ್ಯೈಶ್ವರ್ಯಾ ದತೀತೋ " ಽತೀಂದ್ರ " (೧೫೯) ಉಚ್ಯತೇ ‖ ಭಕ್ತೈರಸ್ಯ ಪ್ರಯತ್ನೇನ ಸಂಗ್ರಾಹ್ಯ " ಸ್ಸಂಗ್ರಹ " (೧೬೦) ಸ್ಸ್ಮೃತಃ | ಬ್ರಹ್ಮಾದಿಭ್ಯಸ್ಸೃಜ್ಯತೇಯ " ಸ್ಸರ್ಗ " (೧೬೧) ಸ್ಸಂಪರಿಚಕ್ಷತೇ ‖ ಯೇನಾತ್ಮಾನೋ ಧೃತಾನಿತ್ಯಂಸ " ಧೃತಾತ್ಮಾ " (೧೬೨) ಇತಿಕೀರ್ತ್ಯತೇ | ನಿಯಮ್ಯತೇ ಜಗದ್ಯೇನ " ನಿಯಮ " (೧೬೩) ಸ್ಸಉದೀರಿತಃ ‖ ಅಕಂಟಕಂಚಾನುಕೂಲಂ ಯಚ್ಛತೀತ್ಯಖಿಲಂ " ಯಮಃ " ‖ (೧೬೪) ಎಂಬೀ ರೀತಿಯಿಂದ ವಿವೃತಿಯನ್ನು ಕಾಣಬಹುದು.

ಮೂ‖ ವೇದ್ಯೋ ವೈದ್ಯ ಸ್ಸದಾ ಯೋಗೀ
ವೀರಹಾ ಮಾಧವೋ ಮಧುಃ | ಅತೀಂದ್ರಿಯೋ
ಮಹಾಮಾಯೋ ಮಹೋತ್ಸಾಹೋ ಮಹಾ
ಬಲಃ ‖೧೮‖

## (೧೬೫ನೇ ನಾಮವು) ವೇದ್ಯಃ,
### ಓಮ್‖ ವೇದ್ಯಾಯನಮಃ.

(ಶಂ‖ ಭಾ) ಮೋಕ್ಷವನ್ನಪೇಕ್ಷಿಸುವ ಮುಮುಕ್ಷುಗಳಿಂದ ತಿಳಿಯಲ್ಪಡತಕ್ಕವನು. (ಮ) ವೇದಾಂತವೇದ್ಯನು.

(ವಿ‖ ಭಾ) ಈ ರೀತಿಯಾಗಿ ಅವತಾರವನ್ನು ಮಾಡಿ ಇಂದ್ರಿಯಗಳಿಂದ ತಿಳಿಯಲಶಕ್ಯವಾದ ಮಹಿಮೆಗಳನ್ನು ಪ್ರಕಟಪಡಿಸಿರುವುದರಿಂದ ಸರ್ವರಿಂದಲೂ ಸುಖವಾಗಿ ತಿಳಿಯುವುದಕ್ಕೆ ಸಾಧ್ಯನಾದವನು "ವೇದ್ಯಃ" ಎನ್ನಲ್ಪಡುವನು ‖ ೧೬೫ ‖

## (೧೬೬ನೇ ನಾಮವು) ವೈದ್ಯಃ,
### ಓಮ್॥ ವೈದ್ಯಾಯನಮಃ.

(ವಿ॥ ಭಾ) ಈ ರೀತಿಯಾಗಿ ತನ್ನನ್ನು ಸೇವಿಸುವಂತವರನ್ನು ಭಾಧಿಸುವ ಸಂಸಾರವನ್ನು ಪರಿಹರಿಸುವುದಕ್ಕೆ ಔಷಧವಾದ ವಿದ್ಯೆಯನ್ನು ಕಲಿತವನು ಅಥವಾ ತಿಳಿದವನು. ಈ ಅರ್ಥವು "ಮೋರುಮಂದರವಾತ್ರೋಪಿ" ಎಂಬೀವಿಷ್ಣುಧರ್ಮ ವಚನದಲ್ಲಿ ಹೇಳಲ್ಪಟ್ಟಿರುವುದು (ಮು) ಭವರೋಗವೈದ್ಯನು. (ಶಂ॥ಮು) ಸರ್ವ ವಿದ್ಯೆಗಳನ್ನು ತಿಳಿದವನು ॥೧೬೬॥

## (೧೬೭ನೇ ನಾಮವು) ಸದಾಯೋಗೀ,
### ಓಮ್॥ ಸದಾಯೋಗಿನೇನಮಃ.

(ಶಂ॥ ಭಾ) ಸರ್ವಕಾಲಗಳಲ್ಲಿಯೂ ಆವಿರ್ಭೂತ ಸ್ವರೂಪನು (ವಿ॥ ಬಾ) ಈ ರೀತಿಯಾಗಿ ಹಿಂದೆ ಹೇಳಿರುವ ವಿಷಯದಲ್ಲಿ "ಯಪಿಷು ಸುಪ್ತೇಷು ಜಾಗರ್ತಿ" ಎಂಬಂತೆ ಸದಾ ಜಾಗರೂಕನಾಗಿರುವಂತವನು "ಸದಾಯೋಗೀ" ಎನ್ನಲ್ಪಡುವನು. ॥ ೧೬೭ ॥

## (೧೬೮ನೇ ನಾಮವು) ವೀರಹಾ,
### ಓಮ್॥ ವೀರಘ್ನೇನಮಃ.

(ವಿ॥ ಭಾ) ತನ್ನನ್ನು ತಿಳಿಯುವುದಕ್ಕೆ ವಿರುದ್ಧರಾದ ಹೈತುಕವೀರರನ್ನು (ವೃಥಾ ಹೇತುವಾದಗಳಿಂದ ಭಗವದುಪಾಸಕರಿಗೆ ಜ್ಞಾನ ದೌರ್ಬಲ್ಯವನ್ನುಂಟುಮಾಡತಕ್ಕ ಅಸುರ ಪ್ರಕೃತಿಗಳನ್ನು) "ತಾನಹಂ ದ್ವಿಷತಃಕ್ರೂರಾನ್" ಎಂಬ ಗೀತಾ (೧೬॥ ೧೯) ವಚನದಂತೆ ಸಂಹರಿಸುವಂತವನು. (ಶಂ) ಧರ್ಮ ಸಂಸ್ಥಾಪನಾರ್ಥವಾಗಿ ಅಸುರ ವೀರರನ್ನು ಕೊಲ್ಲುವಂತವನು "ವೀರಹಾ" ಎನ್ನಲ್ಪಡುವನು ॥ ೧೬೮ ॥

## (೧೬೯ನೇ ನಾಮವು) ಮಾಧವಃ,
### ಓಮ್॥ ಮಾಧವಾಯನಮಃ.

(ಶಂ|| ವಿ|| ಮ) ಪರಬ್ರಹ್ಮವಾದ ತನ್ನನ್ನು ಪ್ರತಿಪಾದಿಸುವ ಪರವಿದ್ಯಾ ಪ್ರವರ್ತಕನಾದುದರಿಂದ " ಮಾಧವಃ " ಎನ್ನಲ್ಪಡುವನು. ಇದಕ್ಕೆ " ಮಾವಿದ್ಯಾಚ ಹರೇಃಪ್ರೋಕ್ತಾ ತಸ್ಯಾ ಈಶೋ ಯತೋಭವಾನ್ | ತಸ್ಮಾನ್ಮಾಧವನಾಮಾಸಿ ಧವಸ್ಸ್ವಾಮೀತಿ ಶಬ್ದಿತಃ|| " ಎಂಬ ಹರಿವಂಶ ವಚನವು (೨೯೭|| ೪೪) ಮೂಲವಾಗಿರುವುದು. (ವಿ) ಮತ್ತು " ಮೌನಾದ್ಧ್ಯಾನಾಚ್ಚಯೋಗಾಚ್ಚ ವಿದ್ಧಿಭಾರತ ಮಾಧವಂ " (ಭಾರ|| ಉ|| ೬೯|| ೪) ಎಂಬ ವಚನವನ್ನು ತಿಳಿಯಬೇಕು (ಮ) ಅರ್ಥಭೇದ ವಿರುವುದರಿಂದ (೭೩ನೆ) ನಾಮದೊಡನೆ ಪೌನರುಕ್ತ್ಯವಿಲ್ಲವು. || ೧೬೯ ||

(ಪರಬ್ರಹ್ಮ ಪ್ರತಿಪಾದಕವಾದ ವಿದ್ಯೆಯನ್ನು 'ಮಾ' ಎನ್ನುವರು ಅದಕ್ಕೆ ಸ್ವಾಮಿಯಾದವನು 'ಧವಃ' ಎನ್ನಲ್ಪಡುವುದರಿಂದ ಮಾಧವನೆನ್ನಲ್ಪಡುವನೆಂದು ಹರಿವಂಶ ವಚನಾರ್ಥವು ಮೌನದಿಂದಲೂ ಧ್ಯಾನದಿಂದಲೂ ಯೋಗದಿಂದಲೂ ಕೂಡಿರುವುದರಿಂದ ಮಾಧವನೆನ್ನಲ್ಪಡುವನೆಂದು (ಭಾ|| ಉ) ವಚನಾರ್ಥವು

## (೧೭೦ನೇ ನಾಮವು) ಮಧುಃ,

### ಓಮ್|| ಮಧವೇನಮಃ.

(ಶಂ|| ಭಾ) ಅಮೃತವು ಹೇಗಾದರೆ ಅಧಿಕ ಪ್ರೀತಿಯನ್ನುಂಟುಮಾಡುವುದೋ ಅದರಂತೆ ಇವನೂ ಅಧಿಕ ಪ್ರೀತಿಯನ್ನುಂಟುಮಾಡತಕ್ಕವನಾದುದರಿಂದ " ಮಧುಃ " ಎನ್ನಲ್ಪಡುವನು. (ಮ) ಆನಂದವುಳ್ಳವನು. (ವಿ|| ಭಾ) ಅಂತಹ ಪರವಿದ್ಯಾನಿಷ್ಠರಿಗೆ ಮಧು ಎಂದರೆ ಜೇನುತುಪ್ಪದಂತೆ ಭೋಗ್ಯಭೂತನಾಗಿರುವಂತವನು. ಇದಕ್ಕೆ " ಮಧ್ವ ಉತ್ಸಃ|| " ಪು|| ಸೂ|| ಪ್ರಿಯೋಹಿಜ್ಞಾನಿ ನೋತ್ಯರ್ಥಂ" (ಗೀ|| ೭|| ೧೭) ಎಂಬೀ ಪ್ರಮಾಣವನ್ನರಿಯಬೇಕು.

## (೧೭೧ನೇ ನಾಮವು) ಅತೀಂದ್ರಿಯಃ,

### ಓಮ್|| ಅತೀಂದ್ರಿಯಾಯನಮಃ.

(ಶಂ|| ಮ) ಇಂದ್ರಿಯಾದಿಗಳಿಗೆ ಗೋಚರನಾಗದವನು; ಇಂದ್ರಿಯಾತೀತನೆಂದರ್ಥವು. (ವಿ|| ಭಾ) ಅನಂತರದಲ್ಲಿ ಮಧು ಸಮುದ್ರದಂತೆ ಪರಮ ಭೋಗ್ಯವಾದ ಸ್ವರೂಪವುಳ್ಳ ಇಂತಹ ಗುಣ ವಿಶಿಷ್ಟನಾದ ಪರ

ಮವ್ಯೂಹಾದಿಗಳಲ್ಲಿ ಹಿಂದೆ ಹೇಳಲ್ಪಟ್ಟಿರುವ ಪರ ವ್ಯೂಹ ವಿಭವಗಳಿಗೆ ತಾತ್ಪರ್ಯವಾದ ಜ್ಞಾನಾದಿ ಷಾಡ್ಗುಣ್ಯವನ್ನು ಹೇಳಲುದ್ದೇಶಿಸಿ ಮೊದಲು ಸ್ವರೂಪವನ್ನು ಶೋಧಿಸುತ್ತಾರೆ. ಜ್ಞಾನೋಪಕರಣವಾದ ಇಂದ್ರಿಯಾದಿಗಳಿಗೆ ಅತೀತನಾದವನು. ‖ ೧೨೧ ‖

## (೧೨೨ನೇ ನಾಮವು) ಮಹಾಮಾಯಃ.

## ಓಮ್॥ ಮಹಾಮಾಯಾಯನಮಃ.

(ಶಂ॥ ಭಾ) "ಮಮಮಾಯಾ ದುರತ್ಯಯಾ" (ಭ॥ ಗೀ॥ ೭ ೧೪) ಎಂಬಂತೆ ದಾಟಲಶಕ್ಯವಾದ ತನ್ನ ಮಾಯೆಯಿಂದ ಮಾಯಾವಿಗಳಿಗೂ ಕೂಡ ಮಾಯಾವಿಯಾಗಿರುವಂತವನು. (ಮ) ಮಹಾನುಭಾವನು. (ವಿ॥ ಭಾ) ಇಂದ್ರಿಯಾತೀತನು. ಹೇಗೆ ? ಎಂದರೆ; ತೆರೆಯೊಳಗಿರುವ ವಸ್ತುವು ಹೊರಗೆ ಇರುವಂತವರಿಗೆ ಹೇಗೆ ಗೋಚರವಾಗುವುದಿಲ್ಲವೋ ಅದರಂತೆ ಭಗವಚ್ಚರಣಾರವಿಂದಗಳನ್ನು ಶರಣಾಗತಿ ಮಾರ್ಗದಿಂದ ಸೇರದವರಿಗೆ ಮೋಹಕಾರಿಯಾದ ಮಾಯೆಯುಳ್ಳವನು "ಮಹಾಮಾಯಃ" ಎನ್ನಲ್ಪಡುವನು. ಜಿತಂತೆಯಲ್ಲಿ "ಗುಣ ಮಾಯಾ ಸಮಾವೃತಃ" ಎಂದು ಹೇಳಿರುತ್ತಾರಲ್ಲವೆ; ಇಂತಹ ಮಾಯೆಯು ಮಿಥ್ಯಾಭೂತವಾದದ್ದಲ್ಲವು ಈ ವಿಷಯವನ್ನು ಮುಂದೆ ವ್ಯಕ್ತಪಡಿಸುವೆವು. ‖ ೧೨೨ ‖

## (೧೨೩ನೇ ನಾಮವು) ಮಹೋತ್ಸಾಹಃ.

## ಓಮ್॥ ಮಹೋತ್ಸಾಹಾಯನಮಃ.

(ಶಂ॥ ಭಾ) ಜಗತ್ಸೃಷ್ಟಿ ಸ್ಥಿತಿಲಯಗಳೆಂಬ ವ್ಯಾಪಾರಗಳನ್ನು ಮಾಡುವುದರಲ್ಲಿ ಮಹೋತ್ಸಾಹವುಳ್ಳವನು. (ವಿ॥ ಭಾ) ಸಾಂಖ್ಯರು ಆತ್ಮವನ್ನು ಜ್ಞಾನರೂಪವೆಂದು ಸಮ್ಮತಿಸಿದರೂ ಕರ್ತೃತ್ವ ವಿಲ್ಲವೆಂತಲೂ ತಾವರೆಯೆಲೆಯಲ್ಲಿ ಅಂಟದ ನೀರಿನಂತೆ ಪ್ರಕೃತಿಯೊಡನೆ ಲೇಪಿಸುವಂತವನಲ್ಲವೆಂತಲೂ, ಆದುದರಿಂದಲೆ ಉದಾಸೀನನೆಂತಲೂ ಅಲಸನೆಂತಲೂ ಹೇಳುವರು. ಆ ರೀತಿಯಾಗಿಲ್ಲವೆನ್ನುತ್ತಾರೆ. ಕರ್ತೃತ್ವವೆಂಬ ಮಹಾವಿಭವವುಳ್ಳವನು "ಮಹೋತ್ಸಾಹಃ" ಎನ್ನಲ್ಪಡುವನು. ಸ್ವಾತಂತ್ರ್ಯ

ರೂಪವಾದ ಈ ಕರ್ತೃತ್ವದಿಂದಲೇ ತಾನೆ ಪರಮಪುರುಷನು ಸರ್ವ ಕಾರ್ಯಗಳಲ್ಲಿಯೂ ಅನ್ಯರ ನಿರ್ಬಂಧದಿಂದಲ್ಲದೆ ಅಪ್ರತಿಹತವಾದ ತನ್ನ ಸಂಕಲ್ಪ ಲೇಶಮಾತ್ರದಿಂದ ಭೋಕ್ತೃಗಳಾದ ಸರ್ವ ಪ್ರಾಣಿಗಳ (ಅನುಭವಿಸಲ್ಪಟ್ಟೂ ಅನುಭವಿಸಲ್ಪಡದೆಯೂ ಇರುವ) ಕರ್ಮಾನುಸಾರವಾಗಿ ಭೋಗವಾಗಿಯೂ ಅದರ ಸಾಧನವಾಗಿಯೂ ಪರಿಣಾಮವನ್ನು ಹೊಂದಿರುವ ನಾನಾ ಪ್ರಪಂಚದ ಅಪೂರ್ವ ರಚನಾ ಸಾಮರ್ಥ್ಯವುಳ್ಳ ಸರ್ವ ಶಕ್ತಿಯುಕ್ತನಾಗಿದ್ದರೂ ಮೊದಲಿನಂತೆ ಸ್ವಭಾವ ನಿಯಮವನ್ನು ಅನುಸರಿಸಬೇಕೆಂಬುವುದನ್ನು ಸ್ವೀಕರಿಸಿರುವನು. ಇಂತಹ ಶಕ್ತಿ ಲೇಶದ ಅಣುಮಾತ್ರವಾದ ಅಣಿಮಾ ಮಹಿಮಾ ಮೊದಲಾದ ಐಶ್ವರ್ಯವೇ ತಾನೆ ಬ್ರಹ್ಮಾದಿಗಳಿಗೆ ಅಪರಿಮಿತವಾದ ವೈಭವವನ್ನುಂಟುಮಾಡಿಕೊಂಡಿರುವುದು ||೧೭೩||

## (೧೭೪ನೇ ನಾಮವು) ಮಹಾಬಲಃ,

## ಓಂ|| ಮಹಾಬಲಾಯನಮಃ.

(ಶಂ|| ಭಾ) ಬಲಿಷ್ಠರಿಗಿಂತಲೂ ಅಧಿಕ ಬಲವಂತನು. (ವಿ|| ಭಾ) ಸಹಾಯಾಪೇಕ್ಷಾರಹಿತವಾದ ಮಹಾ ಬಲಶಾಲಿಯಾದವನು. ಇಂತಹ ಬಲಯುಕ್ತನಾಗಿಯೇ ತಾನೆ ಇವನು ಅಪರಿಮಿತವಾದ ವ್ಯಾಪಾರಗಳನ್ನು ಮಾಡಿದರೂ ಶ್ರಮವನ್ನು ಹೊಂದದೆ ತನ್ನ ಮಹಿಮಾನುಗುಣವಾಗಿಯೇ ಮತ್ತೊಬ್ಬರ ಆಧಾರವನ್ನು ಎದುರುನೋಡದೆ ಯಾರಿಂದಲೂ ಮಾಡಲಸಾಧ್ಯವಾದ ವ್ಯಾಪಾರಗಳನ್ನು ಸದಾ ಮಾಡಿಕೊಂಡು ಸಮಸ್ತವನ್ನೂ ಶರೀರದಂತೆ ಧರಿಸುವನು. ಈ ಪ್ರಕಾರವೆ ಮೂಲ ಸಂಹಿತೆಗಳಲ್ಲಿ ಹೇಳಲ್ಪಟ್ಟಿರುವನು. ಇಂತಹ ಶಕ್ತಿಯ ಲೇಶಮಾತ್ರವೆ ತಾನೆ ಲೋಕದಲ್ಲಿ ಬಲಿಷ್ಠತ್ವೇನ ಪ್ರಸಿದ್ಧಗಳಾದ ಜಲ ವಾಯು ಪರ್ವತಾದಿಗಳಲ್ಲಿರುವುದು. || ೧೭೪ ||

ಈ (೧೮)ನೇ ಶ್ಲೋಕದಲ್ಲಿರುವ (೧೦) ನಾಮಗಳಿಗೂ " ಸರ್ವೈತ್ರೈವೇದಿತುಂಶಕ್ಯ ಸ್ಸಾಲಭ್ಯಾ " ದ್ವೇದ್ಯ " (೧೬೫) ಈರಿತಃ | ವೇದಿತೄಣಾಂ ಭವಾಖ್ಯಸ್ಯ ಗದಸ್ಯ ವಿನಿವರ್ತನಾತ್ || ವಿದ್ಯಾಮಧೀತೇ ವೇತ್ತೀತಿಯೊ " ವೈದ್ಯ " (೧೬೬) ಸ್ಸಮುದಾಹೃತಃ | ಚಿಕಿತ್ಸಾಯಾಂ ಜಾ

ಗರೂಕ "ಸ್ವದಾಯೋಗೀ" (೧೬೭) ತಿಕಥ್ಯತೇ ‖ ಸ್ವಧ್ಯಾನಭಂಜಕಾನ್ ವೀರಾನ್ಹಂತಿ ಯಸ್ಸತು "ವೀರಹಾ" (೧೬೮) | ಮಾವಿದ್ಯಾಚ ಹರೇಃ ಪ್ರೋಕ್ತಾ ತಸ್ಯಾಸ್ಸ್ವವಿಾಧವಸ್ಸ್ಮೃತಃ | ತಸ್ಮಾನ್ಮಾಧವ ನಾಮಾ ಸಾ ಬ್ರಹ್ಮವಿದ್ಯಾ ಪ್ರದೋಮನುಃ ‖ ಮೌನಾದ್ಧ್ಯಾನಾಚ್ಚಯೋಗಾಚ್ಚ "ಮಾಧವಃ" (೧೬೯) ಪರಿಕೀರ್ತಿತಃ | ಭಕ್ತೇಭ್ಯೋಲಬ್ಧ ವಿದ್ಯೇಭ್ಯೋ ಸ್ವಪದಮಾನತಯಾ "ಮಧುಃ" (೧೭೦) ‖ ಜ್ಞಾನೋಪ ಕರಣಂ ವಾತ್ರ ಮತಿಕ್ರಾಂತೋ "ಹ್ಯತೀಂದ್ರಿಯಃ" (೧೭೧) | ಮಾಯಾಯಸ್ಮಾತ್ಪ್ರಸನ್ನಾನಾಂ ಸರ್ವೇಷಾ ಮಸ್ತಿಮೋಹಿನೀ | "ಮಹಾಮಾಯ" (೧೭೨) ಸ್ಸವಿಜ್ಞೇಯೊ ವಸ್ವರ್ಣೋ ಮನುರುಜ್ವಲಃ ‖ ಮಹದುತ್ಸಹನಂಯಸ್ಯ ಹ್ಯೈಶ್ವರ್ಯಂ ಕರ್ತೃಲಕ್ಷಣಂ | "ಮಹೋತ್ಸಾಹ" (೧೭೩) ಸ್ಸವಿಜ್ಞೇಯೊ ಮನುರೈಶ್ವರ್ಯ ದಾಯಕಃ ‖ ಕರ್ತ್ರಂತರಾ ನಪೇಕ್ಷೋಯಸ್ಸೃಷ್ಟೇಸ್ಸಸ್ಯಾ "ನ್ಮಹಾಬಲಃ" | (೧೭೪) ಎಂಬೀ ರೀತಿಯಾಗಿ ವಿವೃತಿಯನ್ನು ಕಾಣಬಹುದು.

ಮೂ ‖ ಮಹಾಬುದ್ಧಿ ರ್ಮಹಾವೀರ್ಯೋ ಮ
ಹಾಶಕ್ತಿ ರ್ಮಹಾದ್ಯುತಿಃ| ಅನಿರ್ದೇಶ್ಯವಪು ಶ್ರೀ
ಮಾ ನಮೇಯಾತ್ಮಾ ಮಹಾದ್ರಿಧೃತ್ ‖೧೯‖

(೧೭೫ನೇ ನಾಮವು) ಮಹಾಬುದ್ಧಿಃ,
ಓಮ್‖ ಮಹಾಬುದ್ಧಯೇನಮಃ.

(ಶಂ‖ ಭಾ) ಸಮಸ್ತರಾದ ಬುದ್ಧಿಯುಳ್ಳವರಿಗೂ ಕೂಡ ಆಶ್ಚರ್ಯವನ್ನುಂಟುಮಾಡುವ ಬುದ್ಧಿಯುಳ್ಳವನು.

(ವಿ‖ ಭಾ) ಮಹತ್ತಾದ ಜ್ಞಾನವುಳ್ಳವನು. ಈ ಜ್ಞಾನವು ತಾನೆ ಸರ್ವದೇಶ ಸರ್ವಕಾಲ ಸರ್ವಾವಸ್ಥೆಗಳಲ್ಲಿಯೂ ; ದೂರದಲ್ಲಿಯೂ ಸಮೀಪದಲ್ಲಿಯೂ ಇರುವ ಸಮಸ್ತವನ್ನೂ ಗೋಚರಪಡಿಸುವುದಾಗಿಯೂ ; ಈ ರೀತಿಯಿಂದ ಸರ್ವವನ್ನು ತಿಳಿದಿರುವುದರಿಂದ ಸಂಶಯ ಭ್ರಮಾದಿಗಳಿಲ್ಲದೆ ಯಥಾರ್ಥವಾದದ್ದಾಗಿಯೂ ; ಕ್ಲೇಶ ಕರ್ಮ ವಿಪಾಕಾದಿಗಳೊಡನೆ ಸಂಬಂಧಿಸದೆ ಇರುವುದರಿಂದಲೂ ಸ್ವಾಭಾವಿಕವಾಗಿರುವುದರಿಂದಲೂ

ಇದು ನಿಶ್ಚಿತವಾಗಿಯೂ ಮತ್ತು ಕಣ್ಣು ಮೊದಲಾದ ಇಂದ್ರಿಯ ನಿರಪೇಕ್ಷವಾಗಿಯೂ ಇರುವುದು. ಕೆಲವು ವೇಳೆ ಈಶ್ವರ ಸ್ವಾತಂತ್ರ್ಯ ದಿಂದ ಚಕ್ಷುರಾದೀಂದ್ರಿಯ ಸಾಪೇಕ್ಷವಾಗಿಯೂ ಇರುವುದು. ಇದ ಕ್ಕಾಗಿಯೆ, ಪುಂಡರೀಕಾಕ್ಷನೆಂತಲೂ ; ಶುಚಿಶ್ರವಸ್ಸೆಂತಲೂ ; ಹೇಳಲ್ಪ ಡುವನಷ್ಟೆ ; ಆದರೂ ರೂಪ ರಸಾದಿಗಳನ್ನು ಗ್ರಹಿಸಬೇಕಾದ ಚಕ್ಷು ರಾದಿ ಕರಣಗಳು ಅವಶ್ಯವಾಗಿರಬೇಕೆಂಬ ನಿಯಮವಿಲ್ಲವು. ಅದು ಹೇ ಗೆಂದರೆ ? ಸಾಧಾರಣವಾಗಿ ಲೋಕದಲ್ಲಿ ಸರ್ಪವು ಕಣ್ಣೆಂಬ ಒಂದು ಇಂ ದ್ರಿಯದಿಂದಲೇ ದರ್ಶನ ಶ್ರವಣಗಳೆಂಬೀ ವ್ಯಾಪಾರಗಳನ್ನು ಮಾಡು ವಾಗ ಸರ್ವ ಶಕ್ತಿಯಾದ ಈಶ್ವರನು ಸಮಸ್ತದಿಂದಲೂ ಸಮಸ್ತ ಕಾರ್ಯ ಗಳನ್ನು ಮಾಡುವುದರಲ್ಲಿ ಆಶ್ಚರ್ಯ ವೇನಿರುವುದು. ಈ ಅರ್ಥವು " ಸ ರ್ವತಶ್ಶ್ರುತಿಮಾಂಶ್ಚಾಸೌ ಯಥಾದೃಚಾಕ್ಷುಶ್ರವಕೋರಗಃ " (ಜಯಸಂ) ಎಂಬದಾಗಿ ಹೇಳಲ್ಪಟ್ಟಿರುವುದು. ಮತ್ತು ಈ ಜ್ಞಾನವು ವೈಶದ್ಯವುಳ್ಳ ದ್ದಾಗಿರುವುದರಿಂದ ಕರತಲಾಮಲಕದಂತೆ ಅಪರೋಕ್ಷವಾಗಿಯೂ ; ಸಮ ಸ್ತ ನಿರ್ವಾಹಕವಾಗಿರುವುದರಿಂದ ಅಮೋಘವಾಗಿಯೂ ಇರುವುದು. ಈ ಅರ್ಥವನ್ನು " ವಿಶ್ವತಶ್ಚಕ್ಷುರುತ ವಿಶ್ವತೋಮುಖಃ ‖ (ತೈ‖ ನಾ‖ ೬‖ ೧‖ ೧) ಪಶ್ಯತ್ಯ ಚಕ್ಷು ಸ್ಸಶೃಣೋತ್ಯಕರ್ಣಃ " (ಶ್ವೆ‖ ಉ‖ ೩‖ ೧೯) ಸರ್ವತೋಕ್ಷಿ ಶಿರೋಮುಖಮ್ " (ತೈ‖ ಉ) ಇತ್ಯಾದಿ ಶ್ರುತಿಗಳು ಹೇಳು ವುವು. ಶ್ರೀಮನ್ನಾಥ ಮುನಿಗಳೂ " ಯೋವೇತ್ತಿ ಯುಗಪತ್ಸರ್ವಂ ಪ್ರತ್ಯಕ್ಷೇಣ ಸದಾಸ್ವತಃ " ಎಂಬದಾಗಿ ಪರಮಪುರುಷನನ್ನು ಸರ್ವಜ್ಞ ನನ್ನಾಗಿ ಹೇಳಿರುತ್ತಾರೆ. (ಈ ಪ್ರಮಾಣಗಳು ಚಕ್ಷುರಾದಿಂದ್ರಿಯಗ ಳಿಂದಾಗತಕ್ಕ ಕಾರ್ಯಗಳು ಅವುಗಳಿಲ್ಲದೇನೆ ಪರಮಪುರುಷನಿಗೆ ಆಗುವು ವೆಂತಲೂ ಪರಮಪುರುಷನನ್ನು ಸರ್ವಜ್ಞನೆಂತಲೂ ಹೇಳುವುವು.) ಆದ ರೂ ಕೆಲವರು ಕಣ್ಣಿನಿಂದಲೆ ಸಮಸ್ತವನ್ನೂ ನೋಡುತ್ತಾನೆಂದು ಸರ್ವ ಜ್ಞನಾದ ನಮ್ಮ ಸ್ವಾಮಿಯನ್ನು ಅವಮತಿಸುವರು. ಆದರೆ ಅದು ಬೌದ್ಧಮತಾನುಸಾರಿಯಾಗಿರುವುದು. ಏತಕ್ಕೆಂದರೆ? ಆ ರೀತಿಯಾಗಿ ಸಮ್ಮತಿಸಿದರೆ ಸರ್ವ ಶಾಸ್ತ್ರಗಳೂ ವಿರೋಧಿಸುವುವು. ಚಕ್ಷುಶ್ರವಸ್ಸಾ ದ ಸರ್ಪಕಾಕ ಘೂಕಾದಿಗಳಲ್ಲಿಯೂ (ಘೂಕ–ಗೂಬೆ) ಮನ್ತ್ರಸಿದ್ಧೌಷ ಧ ತಲ್ರೋಮಹಿಮಾದಿ ಸಿದ್ಧಿಯುಳ್ಳವರಲ್ಲಿಯೂ ಆಯಾ ಕರಣಗಳಿಂದ

ಆಯಾ ವ್ಯಾಪಾರಗಳನ್ನು ಮಾಡಬೇಕೆಂಬ ನಿಯಮವಿಲ್ಲದ ತಾರತಮ್ಯ ವಿರುವಾಗ ಶಾಸ್ತ್ರಸಿದ್ಧವಾದ ಪರಮಪುರುಷನ ಸರ್ವಜ್ಞತಾ ಮಾತ್ರ ದಲ್ಲಿ ಒಂದು ನ್ಯೂನತೆಯನ್ನು ಹೇಳುವುದು ಅತ್ಯಂತ ಪರಿಹಾಸಾಸ್ಪದವಾ ಗಿರುವುದು. ಪರಮಪುರುಷನ ಇತರ ಗುಣಗಳು ಹೀಗೆಯೆ ಇರುವುದೆ ನ್ನುವ ವಿಷಯದಲ್ಲಿ ಸಲ್ಪವೂ ಸಂದೇಹವಿಲ್ಲವು. ಇಂತಹ ಜ್ಞಾನದ ಸ್ವ ಲ್ಪಾಂಶವು ತಾನೆ ಬದ್ಧಮುಕ್ತ ನಿತ್ಯರೆಂಬ ಪ್ರಾಣಿಗಳಲ್ಲಿ ವರ್ತಿಸಿರು ವುದು. ‖ ೧೭೫ ‖

(೧೭೬ನೇ ನಾಮವು) ಮಹಾವೀರ್ಯಃ,

ಓಮ್‖ ಮಹಾವೀರ್ಯಾಯನಮಃ.

(ಶಂ‖ ಭಾ) ಮಹತ್ತತ್ವದ ಉತ್ಪತ್ತಿಗೆ ಕಾರಣವೂ ಅವಿದ್ಯಾಲಕ್ಷ ವೂ ಆದ ವೀರ್ಯವುಳ್ಳವನು.

(ವಿ‖ ಭಾ) ಮಹಾವೀರ್ಯಃ–ಮಹತ್ತಾದ ವೀರ್ಯವುಳ್ಳವನು. ಮೊ ಸರು ಮೊದಲಾದವುಗಳಿಗೆ ಕಾರಣವಾದ ಹಾಲು ಮೊದಲಾದವು ಮೊಸರು ಮೊದಲಾದ ಪರಿಣಾಮವನ್ನು ಹೊಂದುವಾಗ ವಿಕಾರವನ್ನು ಹೊಂದುವಂತೆ ಇರದೆ ಜಗತ್ಕಾರಣನಾಗಿದ್ದರೂ ಸ್ವಲ್ಪವೂ ವಿಕಾರವನ್ನು ಹೊಂದದವನೆಂ ದರ್ಥವು. ಅಗರು ಕಸ್ತೂರಿ ಪುಷ್ಪವೇ ಮೊದಲಾದವುಗಳ ಪರಿಮಳದಂತೆ ಭಗವಂತನು ಸನ್ನಿಧಿ ಮಾತ್ರದಿಂದ ಅಪರಿಮಿತ ಕಾರ್ಯಗಳನ್ನು ಮಾಡು ವಂತವನಲ್ಲವೊ ? ಇದಕ್ಕೆ "ತಸ್ಯಸನ್ನಿಧಿಮಾತ್ರೇಣ ಗಂಧಃಕ್ಷೋಭಾಯ ಜಾಯತೆ । ಮನಸೊ ನೋಪಕರ್ತೃತ್ವಾ ತ್ತಥಾಸೌ ಪರಮೇಶ್ವರಃ" ಎಂಬ ಪ್ರಮಾಣವೂ ಇರುವದಷ್ಟೆ. ಇಂತಹ ಮಹಾವೀರ್ಯದಲ್ಲಿ ಅಣು ಮಾತ್ರವೇ ತಾನೆ ಯೋಗೀಶ್ವರರೆ ಮೊದಲಾದವರುಗಳಲ್ಲಿ ಅತಿಶಯಾವಹ ವಾಗಿರುವುದು. ‖ ೧೭೬ ‖

(೧೭೭ನೇ ನಾಮವು) ಮಹಾಶಕ್ತಿಃ,

ಓಮ್‖ ಮಹಾಶಕ್ತಯೇನಮಃ.

(ಶಂ‖ ಭಾ) ಅಧಿಕ ಸಾಮರ್ಥ್ಯವುಳ್ಳವನು. (ವಿ‖ ಭಾ) ಮಹ ತ್ತಾದ ಶಕ್ತಿಯುಳ್ಳವನು. ಎಂದರೆ ಪಶುಪತಿ ಮತದಲ್ಲಿ ಬ್ರಹ್ಮವನ್ನು

ನಿಮಿತ್ತ ಕಾರಣಮಾತ್ರವೆನ್ನಾಗಿ ಹೇಳುವರು. ಅಷ್ಟುಮಾತ್ರವಲ್ಲದೆ ಉಪಾದಾನಕಾರಣವಾಗಿಯೂ ಇರುವಂತೆ ಮಹಾಶಕ್ತಿಯುಳ್ಳವನೆಂದ ರ್ಥವು. ಇಂತಹ ಶಕ್ತಿಯು ತಾನೆ ಎಂತಾದ್ದು? ಎಂದರೆ; ಸಾಧನ ಸಮೂಹಗಳನ್ನು ವಿನಿಯೋಗ ಪಡಿಸುವಂತಾದ್ದಾಗಿ ಪರಮಾತ್ಮನ ಶರೀರ ದಲ್ಲಿ ಏಕದೇಶವಾದ ಪ್ರಕೃತಿಯನ್ನು ಪರಿಣಾಮ ಹೊಂದುವಂತೆ ಮಾಡಿ ಸಾಮಗ್ರಿಯಿದ್ದರೂ ಇಲ್ಲದಿದ್ದರೂ ಯಾವಾಗಲೂ ಎಲ್ಲವನ್ನು ಸಂಪಾದಿ ಸುವಂತಾದ್ದಾಗಿರುವುದು ಆದರೆ ಬ್ರಹ್ಮವು ಒಂದೇ ಉಪಾದಾನಕಾರ ಣವೂ ನಿಮಿತ್ತ ಕಾರಣವೂ ಆದರೆ; ಒಂದಕ್ಕೇನೆ ದ್ವಿವಿಧವಾದ ಆಕಾ ರವು ಹೇಗೆ ಯೋಗ್ಯವಾಗುವುದೆಂದು ಸಂದೇಹಿಸದೆ ಧಾರವನ್ನುಂಟುಮಾ ಡುವ ಊರ್ಣನಾಭಿ ಹುಳವೇ ಮೊದಲಾದವುಗಳು ಒಂದೇ ಯರಡು ವಿಧ ಗಳಾಗಿರುವುದನ್ನು ಪ್ರತ್ಯಕ್ಷವಾಗಿ ನೋಡುವುದರಿಂದ ಸರ್ವಜ್ಞನಾದ ಪ್ರಭುವಿಗೆ ಇಂತಹ ವಿಚಿತ್ರ ಶಕ್ತಿ ಯುಂಟಾಗಿರುವ ವಿಷಯದಲ್ಲಿ ಆಶ್ಚ ರ್ಯವೇನು? ಇಂತಹ ಶಕ್ತಿ ವಿಶೇಷದ ಸ್ವಲ್ಪಾಂಶವೇ ತಾನೆ ಪ್ರಕೃತಿಯಲ್ಲಿ ಯೂ ಹಾಲು ಮೊಸರು ಮತ್ತು ವಿಕಾರಾಶ್ರಯವಾದ ಇತರ ವಸ್ತುಗಳ ಲ್ಲಿಯೂ ಕಾಣಲ್ಪಡುವುದು. ‖ ೧೭೭ ‖

## (೧೭೮ನೇ ನಾಮವು) ಮಹಾದ್ಯುತಿಃ,
## ಓಮ್‌‖ ಮಹಾದ್ಯುತಯೇನಮಃ.

(ಶಂ‖ ಭಾ) ಬಾಹ್ಯಾಂತರಗಳಲ್ಲಿ ಅಧಿಕವಾದ ತೇಜಸ್ಸುಳ್ಳವನು. " ಸ್ವಯಂಜ್ಯೋತಿಃ " ಜ್ಯೋತಿಷಾಂ ಜ್ಯೋತಿಃ " ಇತ್ಯಾದಿ ಪ್ರಮಾ ಣಗಳೇ ಅರ್ಥವನ್ನು ಹೇಳುವುವು.

(ವಿ‖ ಭಾ) ಅಧಿಕ ಕಾಂತಿಯುಳ್ಳವನು. ಎಂದರೆ ಸಹಾಯಾಂತರ ವನ್ನು ಅಪೇಕ್ಷಿಸುವ ಇತರ ವಸ್ತುಗಳಂತೆ ಇರದೆ ಅನ್ಯಾಪೇಕ್ಷಾರಹಿತ ವಾದ ಮಹಾ ತೇಜೋ ವಿಶಿಷ್ಟನಾದವನೆಂದರ್ಥವು. ಇದುತಾನೆ ಬಾ ಹ್ಯಾಂತರಾಂಧಕಾರಗಳನ್ನು ವಿರೋಧಿಸುವ ಸೂರ್ಯಾದಿಗಳಿಗೆ ಅನುಕೂಲ ವಾಗಿ ಅವರ ಪ್ರತಿಭಟರಿಗೆ ಭಯಂಕರವಾಗಿರುವುದು. ಇದರ ಬಿಂದು ಅಥವಾ ಲೇಶಮಾತ್ರವೆ ತಾನೆ ಸೂರ್ಯ ಚಂದ್ರ ಮಾಣಿಕ್ಯಾದಿಗಳಲ್ಲಿ ಪ್ರಕಾ ಶಿಸುತಲಿರುವುದು. ಇದುವರೆಗೂ ಹೇಳಲ್ಪಟ್ಟ ನಾಮಗಳು ಆರುಗಳ

ಲ್ಲಿಯೂ ಹೇಳಲ್ಪಡುವ 'ಮಹತ್' ಎಂಬ ವಿಶೇಷಣದಿಂದ ಈ ಗುಣಗಳು ಕಲಾ ಮಾತ್ರದಿಂದ ಉಚ್ಚ ನೀಚಗಳಾದ ಸಕಲ ಕಾರ್ಯಗಳನ್ನೂ ಪ್ರವರ್ತಿಸುವಂತೆ ಮಾಡಿ ಸಂಪೂರ್ಣಕ್ಕೂ ವಿಷಯವು ದೊರೆಯದೆ ಸಮುದ್ರದಲ್ಲುಂಟಾದ ಮಹಾ ಪ್ರವಾಹದಂತೆ ಅನಂತ ರೂಪನಾದ ಪರಮಪುರುಷನಲ್ಲಿ ತುಂಬಿರುವುದಾಗಿ ತಿಳಿಯಬರುವುದು. ಈ ವಿಷಯವು "ಪರಾಸ್ಯಶಕ್ತಿರ್ವಿವಿಧೈವ ಶ್ರೂಯತೆ ಸ್ವಾಭಾವಿಕೀ ಜ್ಞಾನ ಬಲಕ್ರಿಯಾಚ" ಇತ್ಯಾದಿಗಳಲ್ಲಿ ಪ್ರಸಿದ್ಧವಾಗಿರುವುದು. ಭಗವಚ್ಛಾಸ್ತ್ರದ ಕೋನೇವರಿಗೂ ಇದುತಾನೆ ವಿಷಯೀಕರಿಸಲ್ಪಟ್ಟಿರುವುದು. ಸೌಶೀಲ್ಯ ವಾತ್ಸಲ್ಯಗಳೆಂಬ ಯರಡು ಗುಣಗಳೂ ಕೆಲವು ಪ್ರಯೋಜನಕ್ಕಾಗಿ ಇದರಲ್ಲಿ ತಾನೆ ಅಂತರ್ಭವಿಸಿರುವುವು. ‖ ೧೭೮ ‖

## (೧೭೯ನೇ ನಾಮವು) ಅನಿರ್ದ್ದೇಶ್ಯವಪುಃ,
## ಓಮ್‖ ಅನಿರ್ದ್ದೇಶ್ಯವಪುಷೇನಮಃ.

(ಶಂ‖ ಭಾ) ಅಂತಾದ್ದು ಇಂತಾದ್ದೆಂದು (ಇದು ಅದು ಎಂದು) ಇತರರಿಗೆ ಬೋಧಿಸ ಲನರ್ಹವಾದ ಶರೀರವುಳ್ಳನಾಗಿರುತ ತನಿಗೆತಾನೆ ವೇದ್ಯನಾಗಿರುವುದರಿಂದ "ಅನಿರ್ದ್ದೇಶ್ಯವಪುಃ" ಎನ್ನಲ್ಪಡುವನು (ಮ) ಹೀಗೆಂದು ನಿರ್ದ್ದೇಶಿಸುವುದಕ್ಕೆ ಆಗದ ದೇಹವುಳ್ಳವನು.

(ವಿ‖ ಭಾ) ಈಪ್ರಕಾರವಾಗಿ ಜ್ಞಾನಾದಿ ಷಡ್ಗುಣ ಪರಿಪೂರ್ಣನಾಗಿರುವುದರಿಂದ "ಇವನ ದಿವ್ಯ ದೇಹವು ಇದಕ್ಕೆ ಸಮಾನವಾದದ್ದೆಂದು" ಹೇಳುವುದಕ್ಕೆ ಅನರ್ಹವಾದ ದೇಹವುಳ್ಳವನಾಗಿರುವನು ಇದಕ್ಕೆ "ಷಾಡ್ಗುಣ್ಯ ವಿಗ್ರಹಂದೇವಂ ಭಾಸ್ವಜ್ಜ್ವಲನ ತೇಜಸಂ ‖ ಬುದ್ಧಿಮನೊಂಗ ಪ್ರತ್ಯಂಗವತ್ತ್ವಂ ಭಗವತಿ ಲಕ್ಷಯಾಮ್ಯಹೇ ಶಾಸ್ತ್ರಶಬ್ದೇಭ್ಯಃ ಬುದ್ಧಿರ್ಮ ಮನೋವಾನಂಗ ಪ್ರತ್ಯಂಗತ್ವಾತ್" ಎಂಬ ಮೂಲಸಂಹಿತಾ ವಚನವು ಕಾಣಲ್ಪಡುವುದು. ಈ ವಿಷಯದಲ್ಲಿ ನಿರುಕ್ತಿಯೂ ಹೇಳಲ್ಪಟ್ಟಿರುವುದು. ಅದು ಹೇಗೆಂದರೆ? ಯಾರಾದರೆ ಬುದ್ಧಿ ಮನಸ್ಸು ಅವಯವಗಳುಳ್ಳವರೊ ಅವರುಗಳ ವಿಭವವು ಶಾಶ್ವತವಲ್ಲದೆ ಇರುವುದು; ಆದುದರಿಂದ ಪರಮಾತ್ಮನಿಗೆ ಶರೀರ ವಿರುವಂತೆ ಹೇಳಿದರೆ; ಅದು ಯಾವ

ರೂಪವಾಗಿರಬಹುದು ? ' ಎಂದು ಪರಮಾತ್ಮನ ಶರೀರಕ್ಕೆ ಪಂಚಭೂತಾತ್ಮಕತ್ವವನ್ನು ಶಂಕಿಸಿ ಅದಕ್ಕೆ ಉತ್ತರವು ' ಈ ಶರೀರವು ಭಗವದ್ರೂಪವಾಗಿಯೆ ಇರಬೇಕು. ಭಗವಂತನು ಯಾವರೂಪವುಳ್ಳವನೊ ಅದೇ ರೂಪವೇ ತಾನೆ ಇದೂ ಆಗಿರುವುದು. ಆದರೆ ಭಗವಂತನು ಯಾವರೂಪನೆಂದರೆ ? ಚಂದನಾಗರು ಕಾಷ್ಠಾದಿಗಳು ಜ್ವಲಿಸುತಲಿರುವಾಗ ಅವು ಹೇಗಾದರೆ ಸಂಪೂರ್ಣವಾಗಿ ಅಗ್ನಿಮಯವಾಗಿರುವುದೋ ; ಮಧುಮಯವಾದ ಪಾತ್ರವನ್ನು ಪಾನಮಾಡಿದರೆ ಅದು ಹೇಗಾದರೆ ಪೂರ್ಣವಾಗಿ ಮಧುಮಯವಾಗಿರುವುದೊ ; ಸ್ವರ್ಣ ಖಂಡವನ್ನು ಯೆಷ್ಟು ಪೊರೆಯಿಟ್ಟರೂ ಹೇಗಾದರೆ ಸಾಮಗ್ರವಾಗಿ ಸ್ವರ್ಣವೇ ಆಗಿರುವುದೋ ; ಒಂದು ಸುಂದರವಾದ ಪ್ರಾಸಾದ (ಮಹಡಿ) ವನ್ನು ಕಂಡರೆ ನೋಡುತಾ ನೋಡುತಾ ಹೇಗಾದರೆ ಅದು ಅತ್ಯಂತ ಸುಂದರವಾಗಿಯೆ ಇರುವುದೊ ; ಈ ರೀತಿಯಾಗಿ ಪರಮಾತ್ಮನು ಪೂರ್ಣಜ್ಞಾನ ಪೂರ್ಣೈಶ್ವರ್ಯ ಪೂರ್ಣಶಕ್ತಿಯಾಗಿಯೂ ಯಾವದನ್ನು ನೆನಸಿದರೂ ಅದು ಸಿದ್ಧಿಯಾಗುವಂತೆ ಅಪ್ರತಿಹತ ಸಂಕಲ್ಪವಾಗಿರುವುದೆಂದು ಈ ರೀತಿ ಹೇಳಲ್ಪಟ್ಟಿರುವುದು ಇದನ್ನು ತಾನೆ ಮುಂದೆ ಪಂಚೋಪನಿಷನ್ಮಯವಾದ ಶರೀರವೆಂದು ಹೇಳುವರು. ಈ ಶರೀರವು ಶುದ್ಧಸತ್ವಮಯವಾಗಿರುವುದರಿಂದ ಸ್ವರ್ಣದಲ್ಲಿ ಕೆತ್ತಲ್ಪಟ್ಟ ರತ್ನದಂತೆ ಪರಮಪುರುಷನ ಷಡ್ಗುಣಗಳನ್ನೂ ಪ್ರಕಾಶಪಡಿಸಿಕೊಂಡಿರುವುದು. ತ್ರಿಗುಣಾತ್ಮಕವಾದ ನಮ್ಮ ಶರೀರಗಳಂತೆ ಗುಣಗಳನ್ನು ಮರೆಮಾಡಲಾಗವುದೆಂಬುವುದು ತತ್ವವು. ಈ ರೀತಿ ಉಪಮಾನದಿಂದ ಹೇಳಲ್ಪಡಲಾರದೆಂಬ ಈ ದಿವ್ಯ ಶರೀರವುಳ್ಳವನೆಂಬುವುದರಲ್ಲಿ " ರೂಪವರ್ಣಾದಿ ನಿರ್ದೇಶ ವಿಶೇಷಣ ವಿವರ್ಜಿತಃ " ಎಂದು ಶ್ರೀವಿಷ್ಣು ಪುರಾಣದಲ್ಲಿ ಪ್ರಮಾಣವೂ ಇರುವುದು. ‖ ೧೭೯ ‖

## (೧೮೦ನೇ ನಾಮವು) ಶ್ರೀಮಾನ್,

## ಓಮ್॥ ಶ್ರೀಮತೇನಮಃ.

(ಶಂ॥ ಮ) ಸಮಗ್ರವಾದ ಐಶ್ವರ್ಯ ಲಕ್ಷಣವಾದ (ಮ) ಅಥವಾ ವಿದ್ಯಾಲಕ್ಷಣವಾದ ಸಂಪತ್ತುಳ್ಳವನು. (೩೩)ನೇ ನಾಮದಲ್ಲಿ ವಕ್ಷಸ್ಥಳದಲ್ಲಿ ಲಕ್ಷ್ಮಿಯುಳ್ಳವನೆಂಬ ಅರ್ಥಭೇದವಿರುವದರಿಂದ ಪುನರುಕ್ತಿ

ಯಿಲ್ಲವು. (ವಿ॥ ಭಾ) ಹಿಂದಿನ ನಾಮದಲ್ಲಿ ಪ್ರಸಕ್ತವಾಗಿರುವ ದಿವ್ಯ ದೇಹಕ್ಕೆ ತಕ್ಕದಿವ್ಯ ಭೂಷಣ ಸಂಪತ್ತುಳ್ಳವನು "ಶ್ರೀಮಾನ್" ಎನ್ನಲ್ಪಡುವನು. ॥ ೧೮೦ ॥

## (೧೮೧ನೇ ನಾಮವು) ಅಮೇಯಾತ್ಮಾ,
### ಓಮ್॥ ಅಮೇಯಾತ್ಮನೇನಮಃ.

(ಶಂ॥ ಭಾ) ಸರ್ವರಿಂದಲೂ ತಿಳಿಯಲಶಕ್ಯವಾದ (ಮ) ಪ್ರಮಾಣಕ್ಕೆ ಗೋಚರವಾಗದ ಸ್ವಭಾವವುಳ್ಳವನು. (ಮ) ೧೦೩ನೇ ನಾಮದಲ್ಲಿ ಇಂತವನೆಂದು ಹೇಳಲಸಾಧ್ಯವಾದವನೆಂಬ ಅರ್ಥಭೇದವಿರುವುದರಿಂದ ಪುನರುಕ್ತಿ ಇಲ್ಲವು. (ವಿ॥ ಭಾ) ಹಿಂದೆ ಪ್ರಸಕ್ತವಾಗಿರುವ ಗುಣಗಳಿಗೂ ದಿವ್ಯದೇಹಕ್ಕೂ ಅನುರೂಪವಾಗಿರುವ ಅತಿ ಗಂಭೀರ ಸ್ವಭಾವವುಳ್ಳವನು "ಅಮೇಯಾತ್ಮಾ" ಎನ್ನಲ್ಪಡುವನು. ॥ ೧೮೧ ॥

## (೧೮೨ನೇ ನಾಮವು) ಮಹಾದ್ರಿಧೃತ್,
### ಓಮ್॥ ಮಹಾದ್ರಿಧೃತೇನಮಃ.

(ಶಂ॥ ಮ) ಅಮೃತ ಮಥನಕಾಲದಲ್ಲಿ ಅತ್ಯಂತ ಮಹತ್ತಾದ ಮಂದರಪರ್ವತವನ್ನಾದರೂ ಗೋವುಗಳನ್ನು ರಕ್ಷಿಸುವಕಾಲದಲ್ಲಿ ಗೋವರ್ಧನ ಪರ್ವತವನ್ನಾದರೂ ಧರಿಸಿದವನು. (ವಿ॥ ಭಾ) ಮಂದರವೆಂಬ ದೊಡ್ಡದಾದ ಬೆಟ್ಟವನ್ನು ಧರಿಸಿದವನು ; ಎಂದರೆ ಹಿಂದಿನ ಗುಣರೂಪಾದಿಗಳಿಗೆ ಅನುರೂಪವಾದ ಚೇಷ್ಟಿತಗಳುಳ್ಳವನೆಂದರ್ಥವು. ॥ ೧೮೨ ॥

## (೧೮೩ನೇ ನಾಮವು) ಮಹೇಷ್ವಾಸಃ,
### ಓಮ್॥ ಮಹೇಷ್ವಾಸಾಯನಮಃ.

(ವಿ॥ ಭಾ) ಸೇತುಬಂಧನ ರಾವಣ ವಧಾದಿಗಳಲ್ಲಿ (ವಿ॥ ಶಂ॥ ಮ) ಅತ್ಯಂತ ಮನೋಹರವಾಗಿ ಬಾಣಗಳನ್ನು ಪ್ರಯೋಗಿಸುವಂತವನು "ಮಹೇಷ್ವಾಸಃ" ಎನ್ನಲ್ಪಡುವನು. ॥ ೧೮೩ ॥

(೧೮೪ನೇ ನಾಮವು) ಮಹೀಭರ್ತಾ,

ಓಮ್॥ ಮಹೀಭರ್ತ್ರೇನಮಃ

(ಶಂ॥ ವಿ) ಲೀಲೆಯಿಂದಲೆ (ಶಂ॥ ಏಕಾರ್ಣವಾಪ್ಲುತವಾದ) ಭೂಮಿಯನ್ನು ಧರಿಸುವಂತವನು " ಮಹೀಭರ್ತಾ " ಎನ್ನಲ್ಪಡುವನು. ॥೧೮೪॥

(೧೮೫ನೇ ನಾಮವು) ಶ್ರೀನಿವಾಸಃ,

ಓಮ್॥ ಶ್ರೀನಿವಾಸಾಯನಮಃ.

(ವಿ॥ ಭಾ) ಲಕ್ಷ್ಮೀನಿವಾಸಭೂತನು. ಎಂದರೆ ಕ್ಷೀರ ಸಮುದ್ರವನ್ನು ಕಡೆದ ಕಾಲದಲ್ಲಿ ಹುಟ್ಟಿರುವ ಲಕ್ಷ್ಮೀದೇವಿಯು ಉಲ್ಲಾಸದೊಡನೆ ವಕ್ಷಸ್ಥಲದಲ್ಲಿರುವಂತೆ ಮಾಡಿಕೊಂಡವನೆಂದರ್ಥವು. (ಶಂ) ಇದೇ ಅರ್ಥವು. ॥ ೧೮೫ ॥

(೧೮೬ನೇ ನಾಮವು) ಸತಾಂಗತಿಃ,

ಓಮ್॥ ಸತಾಂಗತಯೇನಮಃ.

(ಶಂ॥ ಭಾ) ವೈದಿಕರಾದ ಸಾಧು ಜನರಿಗೆ ಪುರುಷಾರ್ಥವನ್ನು ಕೊಡುವುದಕ್ಕೆ ಕಾರಣನಾದವನು. (ವಿ॥ ಭಾ) ಈ ರೀತಿಯಿಂದ ಯಥೇಚ್ಛವಾಗಿ ವಿಹಾರಶೀಲನಾಗಿದ್ದರೂ ಆಶ್ರಿತರಿಗೆ ಹಿತಕಾರಿಯಾಗಿರುವಂತವನು " ಸತಾಂಗತಿಃ " ಎನ್ನಲ್ಪಡುವನು. ॥ ೧೮೬॥

(೧೮೭ನೇ ನಾಮವು) ಅನಿರುದ್ಧಃ,

ಓಮ್॥ ಅನಿರುದ್ಧಾಯನಮಃ.

(ಶಂ॥ ಭಾ) ಪ್ರಾದುರ್ಭಾವ ದಶೆಯಲ್ಲಿಯೂ ಕೂಡ ಯಾವನಿಂದಲೂ ತಡೆಯಲ್ಪಡದವನು ಅಥವಾ ನಿರೋಧಿಸಲ್ಪಡದವನು. (ವಿ॥ ಭಾ) ಈ ರೀತಿಯಿಂದ ಸಕಲ ವಿರೋಧಿಗಳನ್ನು ಪರಿಹರಿಸಿ ಸರ್ವ ಜೀವ ಜೀವಾತುವಾಗಿರುವ ದಿವ್ಯಚೇಷ್ಟಿತಗಳುಳ್ಳವನು " ಅನಿರುದ್ಧಃ " ಎನ್ನಲ್ಪಡುವನು.

ಈ ಅರ್ಥವು " ಅಪರಿಮಿತಚೇಷ್ಟೋ ಭಗವಾನನಿರುದ್ಧಃ " ಎಂದು ಮೌಲಸಂಹಿತೆಯಲ್ಲಿ ಹೇಳಲ್ಪಟ್ಟಿರುವುದು. ‖ ೧೮೭ ‖

## (೧೮೮ನೇ ನಾಮವು) ಸುರಾನಂದಃ,

### ಓಮ್‖ ಸುರಾನಂದಾಯನಮಃ.

(ವಿ‖ ಭಾ) ಅನಂತರದಲ್ಲಿ ಅವತಾರಗಳಿಗೆಲ್ಲವೂ ಮೂಲಕಂದವಾದ ಈ ಅನಿರುದ್ಧರು ಮಾಡಿರುವ ಹಂಸಾವತಾರವು ಪ್ರಸ್ತುತಿಸಲ್ಪಡುವುದು. ಆ ಪದ್ಮಬಂಧುವಾಗಿರುವದರಿಂದ (ಶಂ‖ ವಿ‖ ಮ) ದೇವತೆಗಳನ್ನು ಆನಂದಪಡಿಸುವಂತವನು " ಸುರಾನಂದಃ " ಎನ್ನಲ್ಪಡುವನು. ‖ ೧೮೮ ‖

## (೧೮೯ನೇ ನಾಮವು) ಗೋವಿಂದಃ,

### ಓಮ್‖ ಗೋವಿಂದಾಯನಮಃ.

(ಶಂ‖ ಮ) ಶಾಂತಿಪರ್ವದ (೩೪೩‖ ೪೧)ಲ್ಲಿ " ನಷ್ಟಾಂಚೈ ಧರಣೀಂ ಪೂರ್ವ ಮವಿಂದಂ ಯದ್ಗುಹಾಗತಾಂ | ಗೋವಿಂದ ಇತಿತೇನಾಹಂ ದೇವೈ ರ್ವಾಗ್ಭಿ ರಭಿಷ್ಟುತಃ " ಎಂಬೀ ಮೋಕ್ಷಧರ್ಮ ಪ್ರಮಾಣಾನುಸಾರವಾಗಿ ಭೂಮಿಯನ್ನು ಸಂತೋಷಪಡಿಸಿರುವುದರಿಂದ ' ಗೋವಿಂದ ' ನೆಂತಲಾದರೂ ; (೭೬‖ ೪೫) " ಅಹಂಕಿಲೇಂದ್ರೋ ದೇವಾನಾಂ ತ್ವಂಗವಾಮಿಂದ್ರತಾಂಗತಃ | ಗೋವಿಂದ ಇತಿದೇವಾಸ್ತ್ವಾಂ ಸ್ತೋಷ್ಯಂತಿ ಭುವಿಶಾಶ್ವತಂ " ಎಂಬ ವಚನಾನುಸಾರವಾಗಿ ಗೋವುಗಳಿಗೆ ಪ್ರಭುವಾಗಿರುವುದರಿಂದ ' ಗೋವಿಂದ ' ನೆಂತಲಾದರೂ ; (೨೭೯‖ ೪೯) ಗೌರೇಷಾ ಭೂಸ್ತಥಾವಾಣೀ ತಾಂಚ ವಿಂದಯತೇಭವಾನ್ | ಗೋವಿಂದಸ್ತು ತತೋ ದೇವ ಮುನಿಭಿಃ ಕಥ್ಯತೇಭವಾನ್ " ಎಂಬೀ ಹರಿವಂಶ ಪ್ರಮಾಣವನ್ನನುಸರಿಸಿ ಗೋವುಗಳನ್ನು ಸಂತೋಷಪಡಿಸುತ್ತಾನಾದುದರಿಂದಲೂ ; ಗೋವುಗಳಿಗೆ ಪ್ರಭುವಾಗಿರುವುದರಿಂದಲೂ; ' ಗೋವಿಂದ ' ನೆನ್ನಲ್ಪಡುವನೆಂತಲಾದರೂ ತಿಳಿಯಬೇಕು.

(" ನಷ್ಟಾಂ " ಎಂಬ ಪ್ರಮಾಣಾರ್ಥವು—ಮೊದಲು ನಷ್ಟಳಾಗಿ ಗುಹೆಯಲ್ಲಿರುವ ಭೂಮಿಯನ್ನು ಸಂತೋಷ ಪಡಿಸುವುದರಿಂದ ಗೋವಿಂದನೆಂದು ದೇವತೆಗಳು ವೇದವಾಕ್ಯಗಳಿಂದ ಹೇಳಿದರು. (ಅಹಂಕಿಲೇಂದ್ರಃ) ಎಲೈ ಶ್ರೀಕೃಷ್ಣನೆ ? ನಾನು ದೇವತೆಗಳಿಗೆ

ಇಂದ್ರನಾಗಿರುವೆನು ; ನೀನು ಗೋವುಗಳಿಗೆ ಇಂದ್ರನಾಗಿರುವಿ ; ಆದುದರಿಂದ ನಿನ್ನನ್ನು ಭೂಲೋಕದಲ್ಲಿ ದೇವತೆಗಳು ಗೋವಿಂದನೆನ್ನುವರು. (ಗೌರೇಷಾ) ಈ ಭೂಮಿಯು 'ಗೌಃ' ಎನ್ನಲ್ಪಡುವುದು. ನೀನು ಅಂತಹ ಗೋವನ್ನು ಸಂತೋಷಪಡಿಸುತ್ತೀಯಾದು ದರಿಂದ 'ಗೋವಿಂದ' ನೆನ್ನಲ್ಪಡುವಿ ಎಂದು ಈ ಮೂರು ಪ್ರಮಾಣಗಳ ಅರ್ಥವು.)

(ವಿ|| ಭಾ) ಅವರುಗಳ ಸ್ತುತಿರೂಪವಾದ ವಾಕ್ಯಗಳಿಗೆ ವಿಷಯ ನಾದವನು "ಗೋವಿಂದಃ" ಎನ್ನಲ್ಪಡುವನು. || ೧೮೯ ||

## (೧೯೦ನೇ ನಾಮವು) ಗೋವಿದಾಂಪತಿಃ,

## ಓಮ್|| ಗೋವಿದಾಂಪತಯೇನಮಃ.

(ಶಂ|| ಮ) 'ಗೌಃ' ಎಂದರೆ ವಾಣಿಯು, (ವೇದವಾಕ್ಯಗಳು) ಅದನ್ನು ತಿಳಿದವರು ಗೋವಿದರು, ಎಂದರೆ ಪಂಡಿತರು ; ಅವರುಗಳಿಗೆ ಪ್ರಭುವಾದವನು "ಗೋವಿಂದಾಂಪತಿಃ" ಎನ್ನಲ್ಪಡುವನು. (ವಿ|| ಭಾ) ವೇದಗಳನ್ನು ತಿಳಿದ ಜ್ಞಾನಿಗಳಿಂದ ಜ್ಞಾನಯಜ್ಞದಿಂದಾರಾಧಿಸಲ್ಪಟ್ಟು ಅವರುಗಳನ್ನು ರಕ್ಷಿಸುವಂತವನು "ಗೋವಿಂದಾಂಪತಿಃ" ಎನ್ನಲ್ಪಡು ವನು. ಇದಕ್ಕೆ "ಹಂಸಮೂರ್ತಿ ಮಥಾತ್ಮಾನಂ ಜ್ಞಾನಯಜ್ಞ ಭುಜಂಸ್ಮ ರೇತ್" ಎಂಬ ವಚನವೂ ಇರುವುದು. || ೧೯೦ ||

ಈ (೨೦)ನೇ ಶ್ಲೋಕದಲ್ಲಿ ಪ್ರಸ್ತುತಗಳಾದ (೮) ನಾಮಗಳಿಗೂ "ಮಹೇಷ್ವಾಸ" (೧೮೩) ಸ್ಸಪಿಜ್ಞೇಯಶ್ಚಂಡ ಕೋದಂಡ ಮಂಡಿತಃ| ಧರಣೀಧೃತಿ ಶೀಲಸ್ಸ "ಮಹಾಭರ್ತೇ" (೧೮೪) ತಿಶಬ್ದ್ಯತೇ || ಮಧ ನಾನೀತ ಲಕ್ಷ್ಮೀವಾ್ "ಶ್ರೀನಿವಾಸ" (೧೮೫) ಸ್ಸಈರಿತಃ | ಪ್ರಣ ತಾನಾಂಪ್ರಿಯಕರ "ಸ್ಸತಾಂಗತಿ" (೧೮೬) ರಿಹೋಚ್ಯತೆ | ಅನಂತ ಚೇಷ್ಟಾ ಯುಕ್ತತ್ವಾ "ದನಿರುದ್ಧ" (೧೮೭) ಉದಾಹೃತಃ | ಸುರಾ ನನ್ದ" (೧೮೮) ಸ್ಸುರಾನ್ಸರ್ವಾ ನಾನಂದ ಯತಿಯಸ್ಸದಾ || ಗವಾಂ ಸ್ತುತಿ ಗಿರಾಂವಿಂದೊ "ಗೋವಿಂದ" (೧೮೯) ಸ್ಸಉದಾಹೃತಃ | ಗಾ ವೋವೇದಗಿರಃ ಪ್ರೋಕ್ತಾಗೋವಿದಸ್ತು ತ್ಸುಪಾಲನಾತ್ || "ಗೋವಿ ದಾಂಪತಿ" (೧೯೦) ರುದ್ದಿಷ್ಟೋ ವೇದ ವಿದ್ವತ್ಪ್ರದೋಮನುಃ" ಎಂಬ ನಿರುಕ್ತಿಯನ್ನು ಕಾಣಬಹುದು.

ಮೂ॥ ಮರೀಚಿ ರ್ದ್ದಮನೊ ಹಂಸ ಸ್ಸುಪ
ರ್ಣ್ಣೊ ಭುಜಗೋತ್ತಮಃ । ಹಿರಣ್ಯನಾಭ ಸ್ಸುತ
ಪಾಃ ಪದ್ಮನಾಭಃ ಪ್ರಜಾಪತಿಃ ॥೨೦॥

(೧೮೧ನೇ ನಾಮವು) ಮರೀಚಿಃ,

ಓಮ್॥ ಮರೀಚಯೇನಮಃ.

(ಶಂ॥ ಮ) "ತೇಜಸ್ತೇಜಸ್ವಿನಾಮಹಂ" (ಭಗವದ್ಗೀತಾ॥ ೧೦॥ ೩೬) ಎಂಬ ವಚನಾನುಸಾರವಾಗಿ ತೇಜಸ್ವಿಗಳಿಗೂ ಕೂಡ ತೇಜೋವಂತನಾಗಿರುವುದರಿಂದ "ಮರೀಚಿಃ" ಎನ್ನಲ್ಪಡುವನು. (ವಿ॥ ಭಾ) ಕಿರಣದಂತೆ ಇರುವಂತವನು ; ಎಂದರೆ ಜಾತ್ಯಂಧರಾದ ಜಂತುಗಳಿಗೂ ಕೂಡ ನಿರ್ಮಲವಾದ ತನ್ನ ರೂಪವನ್ನು ಪ್ರಕಾಶಪಡಿಸಿದವನು. ಇದು "ಕುಂದೇಂದು ಸ್ನಿಗ್ಧಕಾಂತಿಶ್ಚ" ಎಂಬದಾಗಿ ಅವರ ಧ್ಯಾನದಲ್ಲಿ ಕುಂದ ಪುಷ್ಪದಂತೆ ಬಿಳುಪಾದ ಚಂದ್ರನ ರಮಣೀಯವಾದ ಕಾಂತಿಯುಳ್ಳವನೆಂದು ಹೇಳಲ್ಪಟ್ಟಿರುವುದು. ॥ ೧೮೧ ॥

(೧೮೨ನೇ ನಾಮವು) ದಮನಃ,

ಓಮ್॥ ದಮನಾಯನಮಃ.

(ಶಂ॥ ಭಾ) ತಮ್ಮಗಳ ಅಧಿಕಾರ ಗರ್ವದಿಂದ ಅಧಿಕವಾಗಿ ಮತ್ತರಾದ ಪ್ರಜೆಗಳನ್ನು ಅಥವಾ ತಮ್ಮತಮ್ಮಗಳ ಅಧಿಕಾರವನ್ನು ಮೀರಿ ಉತ್ಪಥ ಪ್ರವೃತ್ತರಾದ ಪ್ರಾಣಿಗಳನ್ನು ಶಿಕ್ಷಿಸುವ ಸ್ವಭಾವವುಳ್ಳವನು. (ಮ) ದುಷ್ಟರನ್ನು ಶಿಕ್ಷಿಸುವಂತವನು. (ವಿ॥ ಭಾ) ತನ್ನ ಕಾನ್ತಿ ಎಂಬ ಗಂಗಾಪ್ರವಾಹದಿಂದ ಸಂಸಾರ ತಾಪತ್ರಯವನ್ನು ಶಮನ ಮಾಡುವಂತವನು "ದಮನಃ" ಎನ್ನಲ್ಪಡುವನು. ॥ ೧೮೨ ॥

(೧೮೩ನೇ ನಾಮವು) ಹಂಸಃ,

ಓಮ್॥ ಹಂಸಾಯನಮಃ.

(ಶಂ॥ ಭಾ) "ಅಹಂಸಃ" ಎಂಬದಾಗಿ ತಾದಾತ್ಮ್ಯದಿಂದ (ಅಪ್ಯೆಕ್ಯ

ಭಾವನೆಯಿಂದ)ಭಾವಿಸಲ್ಪಟ್ಟವನಾಗಿ ಸಂಸಾರ ಬಂಧವನ್ನು ನಾಶಪಡಿಸುವುದರಿಂದಲಾದರೂ; ಸರ್ವ ಶರೀರಗಳಲ್ಲಿಯೂ "ಹಗ್ ಸಶ್ಶುಚಿಷತ್ " (ಕಠ॥ ೫॥ ೨) ಎಂಬ ಶ್ರುತ್ಯನುಸಾರವಾಗಿ ಹೋಗುತಾನಾದುದರಿಂದಲಾದರೂ "ಹಂಸಃ" ಎನ್ನಲ್ಪಡುವನು. (ಮ) ಹಂಸರೂಪನಾಗಿರುವಂತವನು. (ವಿ॥ ಭಾ) ಇಂತವನು ಯಾರೆಂದರೆ? ಹಂಸಃ–"ಹಂತಾಸಂಗಾನಾಂ" ಎಂಬ ಮೌಲ ಸಂಹಿತಾ ಪ್ರಮಾಣಾನುಸಾರವಾಗಿ ಆಶ್ರಿತರ ಸಂಗದೋಷವನ್ನು ನಾಶಪಡಿಸುವಂತವನು. ಇದಕ್ಕೆ "ಸತ್ಸಸ್ತ್ವ ಶುಭಾಶ್ರಯ ಪರಮಹಂಸಾಯ" ಎಂಬದಾಗಿ ಇವರ ಧ್ಯಾನದಲ್ಲಿ ಪ್ರಮಾಣವೂ ಇರುವುದು. ‖ ೧೯೩ ‖

## (೧೯೪ನೇ ನಾಮವು) ಸುಪರ್ಣಃ,

## ಓಮ್॥ ಸುಪರ್ಣಾಯನಮಃ.

(ಶಂ॥ ಭಾ) "ದ್ವಾಸುಪರ್ಣಾ" (ಶ್ವೇತಾ॥ ೪॥ ೬) ಎಂಬ ಮಂತ್ರವರ್ಣಾನುಸಾರವಾಗಿ ಶೋಭನವಾದ ಪರ್ಣ (ಪಕ್ಷ) ವುಳ್ಳವನು. (ಮ) ಇದಕ್ಕೆ "ಏಕಸ್ಸುಪರ್ಣಸ್ಸ ಸಮುದ್ರ ಮಾವಿವೇಶ" ಎಂಬ ಶ್ರುತಿಯಂತೆ ಪಕ್ಷಿರೂಪನು. (ವಿ॥ ಭಾ) ಶೋಭನವಾದ ಪರ್ಣವುಳ್ಳವನೆಂತಲಾದರೂ ಸಂಸಾರ ಪಾರವನ್ನು ಹೊಂದಿಸುವುದರಿಂದಲಾದರೂ "ಸುಪರ್ಣಃ" ಎನ್ನಲ್ಪಡುವನು. ಇಲ್ಲಿ ಜ್ಞಾನಕರ್ಮಾನು ಗೃಹೀತವಾದ ಭಕ್ತಿಯಿಂದ ಪ್ರಸನ್ನನಾಗಿ ಮೋಕ್ಷಪ್ರದನಾದವನೆಂತಲೂ ಹೇಳಬಹುದು. ‖ ೧೯೪ ‖

## (೧೯೫ನೇ ನಾಮವು) ಭುಜಗೋತ್ತಮಃ,

## ಓಮ್॥ ಭುಜಗೋತ್ತಮಾಯನಮಃ.

(ಶಂ॥ ಮ) ಭುಜದಿಂದ ನಡಿಯುತಲಿರುವ ಸರ್ಪಗಳಲ್ಲಿ (ಮ) ಸರ್ಪಗಳಿಗಿಂತಲೂ ಶ್ರೇಷ್ಠನು. ಸರ್ಪಾಣಾಮಸ್ಮಿ ವಾಸುಕಿಃ" ಎಂಬ ಗೀತಾವಚನ ವಿರುವುದು. (ವಿ॥ ಭಾ) "ಪದ್ಮನಾಭೋಽ ಮರಪ್ರಭುಃ" (ಶೋ॥ ೫॥ ನಾ॥ ೪೧॥ ೪೯) ಎಂಬ ಸ್ಥಲದಲ್ಲಿ ಚತುರ್ವ್ಯೂಹದಲ್ಲಿ ಕಡೇ ವ್ಯೂಹವಾದ ಅನಿರುದ್ಧರನ್ನು ಪದ್ಮನಾಭನೆಂದು ಹೇಳಿತು. ಇಲ್ಲಿ ಅವ

ತಾರಗಳಲ್ಲಿ ಮೊದಲನೇದಾದ ಪದ್ಮನಾಭಾವತಾರವು ಹೇಳಲ್ಪಡುವುದು. ಭುಜಗಸ್ಯ-ಶೇಷಸ್ಯ, ಉತ್ತಮಃ-ಶೇಷೀ, ಆದಿಶೇಷನಿಗೆ ಶೇಷಿ ಎಂದರೆ ಸ್ವಾಮಿಯಾದವನು. ಎಂದರೆ "ಸುಷ್ವಾಪ ಭಗವಾನ್ ವಿಷ್ಣುಃ ರಕ್ಷಯ್ಯಾ ಮೇಕಪಿವಹಿ | ನಾಗಭೋಗೇ ಸುಮಹತಿ ಶೇಷಸ್ಯಾಮಿತತೇಜಸಃ" ಎಂಬದಾಗಿ ಆರಣ್ಯಪರ್ವದಲ್ಲಿಯೂ; "ಮಾನಸೇನಂತಶಯನೇ ದಿವ್ಯಬೋಧ ತನುರ್ವಿಭುಃ" ಎಂಬದಾಗಿ ಇವರ ಧ್ಯಾನ ವಿಧಿಯಲ್ಲಿಯೂ; "ಭೋಗಿ ಶಯ್ಯಾಸನಸ್ಯೇತೇ ತ್ರೈಲೋಕ್ಯ ಗ್ರಾಸಬೃಂಹಿತಃ" ಎಂಬದಾಗಿ ಶ್ರೀ ವಿಷ್ಣುಪುರಾಣದಲ್ಲಿಯೂ ಹೇಳಿರುವಂತೆ ಅನಂತಭೋಗವೆಂಬ ಪರ್ಯಂಕದಲ್ಲಿ ಶಯನಮಾಡುವಂತವನು "ಭುಜಗೋತ್ತಮಃ" ಎನ್ನಲ್ಪಡುವನು. ಪ್ರಮಾಣಾರ್ಥವು ಸ್ಪಷ್ಟವಾಗಿಯೇ ಇರುವುದು. ‖ ೧೯೫ ‖

## (೧೯೬ನೇ ನಾಮವು) ಹಿರಣ್ಯನಾಭಃ,

## ಓಮ್‖ ಹಿರಣ್ಯನಾಭಾಯನಮಃ.

(ಶಂ‖ ಮ) ಹಿರಣ್ಯವೆಂದರೆ ಸ್ವರ್ಣವು-ಚಿನ್ನವು, ಅದರಂತೆ ಮಂಗಳ ಕರವಾದ ನಾಭಿಯುಳ್ಳವನು. ಅಥವಾ ಹಿತವಾಗಿಯೂ ರಮಣೀಯವಾ ಗಿಯೂ ಇರುವ ನಾಭಿಯುಳ್ಳವನು. (ವಿ) ಸುಂದರವಾದ ನಾಭಿಯು ಳ್ಳವನು. ‖ ೧೯೬ ‖

## (೧೯೭ನೇ ನಾಮವು) ಸುತಪಾಃ,

## ಓಮ್‖ ಸುತಪಸೇನಮಃ.

(ಶಂ‖ ಮ) ಬದರಿಕಾಶ್ರಮದಲ್ಲಿ ನರನಾರಾಯಣ ರೂಪದಿಂದ ಮಂ ಗಳಕರವಾದ ತಪಸ್ಸನ್ನು ಮಾಡುವಂತವನು "ಸುತಪಾಃ" ಎನ್ನಲ್ಪಡು ವನು; ಇಲ್ಲಿನ ತಪಶ್ಶಬ್ದಕ್ಕೆ "ಮನಸಶ್ಚೇಂದ್ರಿಯಾಣಾಂಚ ಹ್ಯೈಕಾ ಗ್ರ್ಯಂ ಪರಮಂತಪಃ" ಎಂಬ ಸ್ಮೃತ್ಯನುಸಾರವಾಗಿ ಮನಸ್ಸಿಗೂ ಇಂದ್ರಿಯಗಳಿಗೂ ಏಕಾಗ್ರತೆಯನ್ನು ಕಲ್ಪಿಸುವಿಕೆಯೆ ಅರ್ಥವು. (ವಿ‖ಭಾ) ಶೋಭನವಾದ ಜ್ಞಾನಾಕಾರನು. ‖ ೧೯೭ ‖

## (೧೯೮ನೇ ನಾಮವು) ಪದ್ಮನಾಭಃ,
## ಓಮ್॥ ಪದ್ಮನಾಭಾಯನಮಃ.

(ಶಂ॥ ಪದ್ಮದಂತೆ ವರ್ತುಲಾಕಾರವಾದ (ಗುಂಡಾದ) ನಾಭಿಯುಳ್ಳವನು. (ಮ) ೪೮ನೇದಾದ ಪದ್ಮನಾಭವೆಂಬ ನಾಮಕ್ಕೂ ಈ ನಾಮಕ್ಕೂ ಅರ್ಥಭೇದ ವಿರುವುದರಿಂದ ಪುನರುಕ್ತಿ ಇಲ್ಲವು. (ಶಂ) ಅಥವಾ ನಾಭಿಮಧ್ಯದಲ್ಲಿ ಹೃದಯ ಪದ್ಮವು ಪ್ರಕಾಶಿಸುವುದರಿಂದಲಾದರೂ 'ಪದ್ಮನಾಭಃ' ಎನ್ನಲ್ಪಡುವನು. ಪದ್ಮನಾಭ ಹಿರಣ್ಯನಾಭಗಳೆಂಬ ಯೆರಡು ನಾಮಗಳಿಗೂ ಬ್ರಹ್ಮ ಪುರಾಣದಲ್ಲಿ "ಕದಾಚಿತ್ತಸ್ಯ ಸುಪ್ತಸ್ಯ ನಾಭ್ಯಾಂಕಾಮೋದ ಜಾಯತ | ದಿವ್ಯಮಷ್ಟದಲಂಭೂರಿ ಪಂಕಜಂ ಪಾರ್ಥಿವಂಮಹತ್ ॥ ಯಸ್ಯಹೇಮಮಯೀದಿವ್ಯಾ ಕರ್ಣಿಕಾ ಮೇರುರುಚ್ಯತೆ (ಯಸ್ಯನಾಭೌ ತದುತ್ಪತ್ತಿಃ ಪದ್ಮನಾಭಸ್ಸ ಉಚ್ಯತ)" ಎಂಬೀ ಅರ್ಥವು ವಿವರಿಸಲ್ಪಟ್ಟಿರುವುದು. ॥ ೧೯೮ ॥

## (೧೯೯ನೇ ನಾಮವು) ಪ್ರಜಾಪತಿಃ,
## ಓಮ್॥ ಪ್ರಜಾಪತಯೇನಮಃ.

(ವಿ॥ ಭಾ॥) ಆದುದರಿಂದಲೆ ಚತುರ್ಮುಖನೇ ಮೊದಲಾದ (ವಿ॥ ಶಂ) ಸರ್ವ ಪ್ರಜೆಗಳಿಗೂ ಪತಿಯು. ಎಂದರೆ (ವಿ) ನಾಯಕನು, (ಶಂ) ತಂದೆಯು. ॥ ೧೯೯ ॥

ಈ ೨೧ನೇ ಶ್ಲೋಕದಲ್ಲಿ ಪ್ರತಿಪಾದ್ಯವಾಗಿರುವ (೮) ನಾಮಗಳಿಗೂ "ಅಂಧೇಭ್ಯೋಽಪಿಚ ಜಂತುಭ್ಯೋ ಹಂಸಗ್ರೀವಾ ವತಾರತಃ | ಪ್ರಕಾಶಿತಸ್ವ ರೂಪತ್ವಾ "ನ್ಮರೀಚಿ" (೧೯೧) ರಿತಿಕಥ್ಯತೆ ॥ ಭವಾತಪಸ್ಯ ದಮನಾತ್ಕಾಂತ್ಯಾ "ದಮನ" (೧೯೨) ಈರಿತಃ | ಹಂಸಾತ್ಮೇವಂ ವಿಭೋಽಹಂತಿ ಗಚ್ಛತೀತಿ ಮನೋಹರಂ ॥ "ಹಂಸಃ" (೧೯೩) ಶ್ಯೋಭನಪರ್ಣತ್ವಾ "ತ್ಸುಪರ್ಣ" (೧೯೪) ಇತಿಕಥ್ಯತೆ | ಸಂಸಾರಪಾರನಯನಾ 'ತ್ಸುಪರ್ಣ' ಇತಿನಾಮತಃ ॥ ಪ್ರಾದುರ್ಭಾವೇಷು ಪ್ರಥಮಃ ಪದ್ಮನಾಭೋಽಥ ಉಚ್ಯತೆ | ಭುಜಗಸ್ಯೋತ್ತಮಶ್ಶೇಷೀ "ಭುಜಗೋತ್ತಮ"

(೧೯೫) ರುಚ್ಯತೇ ‖ "ಹಿರಣ್ಯನಾಭ" (೧೯೬) ಸ್ಸೌಂದರ್ಯ ನಾಭಿರ್ಯಸ್ಯೇತಿ ಸಸ್ಸ್ಮೃತಃ | ತಪೋಬುದ್ಧಿ ಸ್ಸ್ವವತಸ್ತು "ಸ್ಸುತಪಾ" (೧೯೭) ಯಸ್ಯಸಸ್ಸ್ಮೃತಃ ‖ ಪಾರ್ಥಿವಂ ಭೂರಿ ಪದ್ಮಂತು ನಾಭಾವಷ್ಟದಲಂಮಹತ್ | ಯಸ್ಯಹೇಮ ಮಯೀದಿವ್ಯಾ ಕರ್ಣಿಕಾ ಮೇರುರುಚ್ಯತೇ | ಯಸ್ಯನಾಭೌ ತದುತ್ಪತ್ತಿಃ "ಪದ್ಮನಾಭ" (೧೯೮) ಸ್ಸಉಚ್ಯತೇ ‖ ನೈಮಿತ್ತಿಕೇತುಯೇಸೃಷ್ಟಾಃ ಪ್ರಜಾಬ್ರಹ್ಮಮುಖಾ ಸ್ತದಾ | ತೇಷಾಂಚೈವ ಪತಿಸ್ಸ್ವಾಮೀ "ಪ್ರಜಾಪತಿ" (೧೯೯) ರಿಹೋಚ್ಯತೇ" ‖ ಎಂಬೀ ರೀತಿಯಾಗಿ ವಿವೃತಿಯನ್ನು ಕಾಣಬಹುದು.

ಮೂ‖ ಅಮೃತ್ಯು ಸ್ಸರ್ವದೃ ಕ್ಸಿಂಹ ಸ್ಸಂಧಾ
ತಾ ಸಂಧಿಮಾ ನ್ ಸ್ಥಿರಃ | ಅಜೋ ದುರ್ಮರ್ಷಣ
ಶ್ಶಾಸ್ತಾ ವಿಶ್ರುತಾತ್ಮಾ ಸುರಾರಿಹಾ |೨೨‖

(೨೦೦ನೇ ನಾಮವು) ಅಮೃತ್ಯುಃ,
ಓಮ್‖ ಅಮೃತ್ಯವೇನಮಃ.

(ಶಂ‖ ಭಾ) ಮರಣವಾದರೂ ಅದರ ಕಾರಣವಾದರೂ ಇಲ್ಲದವನು. (ವಿ‖ ಭಾ) ಅನಂತರದಲ್ಲಿ ನೃಸಿಂಹಾವತಾರವು ಪ್ರಸ್ತುತಿಸಲ್ಪಡುವುದು ಮೃತ್ಯುವಿಗೂ ಕೂಡಾ ಮೃತ್ಯುವಾಗಿರುವುದರಿಂದ ಮೃತ್ಯು ವಿರೋಧಿಯಾದವನು "ಅಮೃತ್ಯುಃ" ಎನ್ನಲ್ಪಡುವನು. ‖ ೨೦೦‖

ಈ ರೀತಿಯಾಗಿ ಶ್ರೀಪರಾಶರ ಭಟ್ಟಾಚಾರ್ಯ ಭಾಷಿತವಾದ
ಭಗವದ್ಗುಣ ದರ್ಪಣವೆಂಬ ಶ್ರೀವಿಷ್ಣು ಸಹಸ್ರನಾಮ ಭಾಷ್ಯದಲ್ಲಿ
ದ್ವಿತೀಯ ಶತಕವು ಸಮಾಪ್ತವು.



ಇನ್ನು ಮುಂದೆ (೩) ನೇ ಶತಕದ ಪ್ರಾರಮ್ಭವು.

## (೨೦೧ನೇ ನಾಮವು) ಸರ್ವದೃಕ್,

ಓಮ್|| ಸರ್ವದೃಶೇನಮಃ.

(ಶಂ|| ಭಾ) ಪ್ರಾಣಿಗಳ ಪುಣ್ಯ ಪಾಪಾತ್ಮಕಗಳಾದ ಕರ್ಮಗಳೆಲ್ಲ ವನ್ನೂ ಸಾಕ್ಷಾತ್ಕರಿಸುವಂತವನು. || ೧೯೯ ||

(ವಿ|| ಭಾ) ಅಂತಹ ನೃಸಿಂಹನೇ ಅನುಕೂಲರೂ ಪ್ರತಿಕೂಲರೂ ತಟಸ್ಥರೂ ಆದ ಸರ್ವ ಪ್ರಾಣಿಗಳನ್ನು ಅವರವರಿಗೆ ತಕ್ಕಂತೆ ನಿಯಮಿಸು ವದಕ್ಕಾಗಿ ನೋಡುತ್ತಾನಾದುದರಿಂದ "ಸರ್ವದೃಕ್" ಎನ್ನಲ್ಪಡು ವನು. || ೨೦೧ ||

## (೨೦೨ನೇ ನಾಮವು) ಸಿಂಹಃ,

ಓಮ್|| ಸಿಂಹಾಯನಮಃ.

(ಶಂ|| ಮ) ನಾಶಮಾಡಿಸುತ್ತಾನಾದುದರಿಂದ 'ಸಿಂಹಃ' ಎನ್ನಲ್ಪ ಡುವನು; ಎಂದರೆ ಸ್ಮರಣಮಾತ್ರದಿಂದಲೆ ಸಕಲ ಪಾಪಗಳನ್ನು ನಾಶಪ ಡಿಸುವಂತವನೆಂದು ತಾತ್ಪರ್ಯವು. || ೨೦೦ ||

ಈ ಪ್ರಕಾರವಾಗಿ (ಶಂ|| ಮ) ಸಂಪ್ರದಾಯ ಭಾಷ್ಯಾನುಸಾರ ವಾಗಿ ದ್ವಿತೀಯ ಶತಕವು.

(ವಿ|| ಭಾ) ಅಂತವನು ಯಾರೆಂದರೆ ಅದಕ್ಕಾಗಿ; ಸಿಂಹಃ-ಸಿಂಹ ಸ್ವರೂಪಿಯಾದವನು; ಶ್ರೀನರಸಿಂಹಮೂರ್ತಿ ಎಂದರ್ಥವು.

## (೨೦೩ನೇ ನಾಮವು) ಸಂಧಾತಾ,

ಓಮ್|| ಸಂಧಾತ್ರೇನಮಃ.

(ಶಂ|| ಮ) ಕರ್ಮಫಲಗಳಲ್ಲಿ ಪುರುಷರನ್ನು ಸೇರಿಸುವಂತವನು. (೨೦೧) (ವಿ|| ಭಾ) (ಹಿರಣ್ಯಾಸುರನೇ ಮೊದಲಾದ) ಶತ್ರುಗಳೆಂಬ ಮದ

ಗಜಕ್ಕೆ ಭಯಂಕರನಾಗಿದ್ದರೂ ತನ್ನ ಭಕ್ತರಾಗಿ ಸ್ತೋತ್ರಮಾಡುತಲಿರುವ ಪ್ರಹ್ಲಾದರೇ ಮೊದಲಾದವರು ತನ್ನನ್ನು ತಬ್ಬಿಕೊಳ್ಳುವಂತಹ ಭಕ್ತಸಂಶ್ಲೇಷ ಶೀಲನು "ಸಂಧಾತಾ" ಎನ್ನಲ್ಪಡುವನು. ‖ ೨೦೩ ‖

## (೨೦೪ನೇ ನಾಮವು) ಸಂಧಿಮಾನ್,

### ಓಮ್‖ ಸಂಧಿಮತೇನಮಃ.

(ಶಂ‖ ಭಾ) ಫಲಭೋಕ್ತನೂ ಅವನೇ ಆಗಿರುವುದರಿಂದ "ಸಂಧಿಮಾನ್" ಎನ್ನಲ್ಪಡುವನು. (ಮ) ಶಿಕ್ಷೋಕ್ತ ಮುಖ್ಯವಾದ ಸಂಧಿಯುಳ್ಳವನು (ಅಥವಾ) ನೀತಿಶಾಸ್ತ್ರದಲ್ಲಿ ಹೇಳಲ್ಪಡುವ ಸಂಧಿ ಕಾರ್ಯದಲ್ಲಿ ಸಮರ್ಥನು. (ವಿ‖ ಭಾ) ಅವರುಗಳೊಡನೆ ನಿತ್ಯವಾಗಿ ಸೇರಿರುವಂತವನು. ‖ ೨೦೪ ‖

## (೨೦೫ನೇ ನಾಮವು) ಸ್ಥಿರಃ,

### ಓಮ್‖ ಸ್ಥಿರಾಯನಮಃ.

(ಶಂ‖ ಮ) ಸರ್ವಕಾಲದಲ್ಲಿಯೂ ಏಕರೂಪನಾಗಿರುವಂತವನು. (ವಿ‖ ಭಾ) ಹೀಗಿದ್ದರೂ ಭಕ್ತರಲ್ಲಿ ಅಪರಾಧಗಳನ್ನು ಕಂಡರೂ ಅವರನ್ನು ಕೈಬಿಡದೆ ಸ್ಥಿರವಾಗಿ ಕಾಯುವಂತವನು "ಸ್ಥಿರಃ" ಎನ್ನಲ್ಪಡುವನು. ‖ ೨೦೫ |

## (೨೦೬ನೇ ನಾಮವು) ಅಜಃ,

### ಓಮ್‖ ಅಜಾಯನಮಃ.

(ಶಂ‖ ಮ) ಅಜತಿ–ಗಚ್ಛತಿ, ಕ್ಷಿಪತಿ ; ಇತಿವಾಅಜಃ, ಹೋಗುತ್ತಾನಾದುದರಿಂದಲಾದರೂ ಯಸೆಯುತ್ತಾನಾದುದರಿಂದಲಾದರೂ "ಅಜಃ" ಎನ್ನಲ್ಪಡುವನು. ಇಲ್ಲಿ ಅರ್ಥಭೇದವಿರುವುದರಿಂದ "ಅಜಸ್ಸರ್ವೇಶ್ವರಃ" ಎಂಬ ಸ್ಥಾನದಲ್ಲಿರುವ "ಅಜಃ" ಎಂಬ (೯೬)ನೇ ನಾಮದಿಂದ ಪುನರುಕ್ತಿ ಇಲ್ಲವು (ವಿ‖ ಭಾ) ಹಿರಣ್ಯಾಸುರನ ಸಭಾ ಸ್ತಂಭದಲ್ಲಿ ಹುಟ್ಟಿರುತ್ತಾನಾದುದರಿಂದ ಪ್ರಾಕೃತರಂತೆ ಮಾತೃಗರ್ಭ ಕ್ಲೇಶದಿಂದ ಹುಟ್ಟುವಂತವನಲ್ಲವು. ಇದಕ್ಕೆ "ನಜಾಯತೆ ಜನಿತಾ್ಯಂ ಯದಜಸ್ತಸ್ಮಾದನೇಕಜಿತ್" ಎಂಬ ಪ್ರಮಾಣವೂ ಇರುವುದು. ‖ ೨೦೬ ‖

## (೨೦೭ನೇ ನಾಮವು) ದುರ್ಮರ್ಷಣಃ,

### ಓಮ್॥ ದುರ್ಮರ್ಷಣಾಯನಮಃ.

(ಶಂ॥ವಿ॥ಮ) ದಾನವಾದಿಗಳು ನೋಡಿ ಸಹಿಸುವುದಕ್ಕೆ ಆಗದವನು. (ವಿ) ಈ ಪ್ರಕಾರವೇ "ರಥಾಂಗ ಶಂಖಧಾತಾರಂ ಬ್ರಹ್ಮಮೂರ್ತಿಂ ಸುಭೀಷಣಂ" ಎಂಬದಾಗಿ ಇವರ ಧ್ಯಾನದಲ್ಲಿ ಹೇಳಲ್ಪಟ್ಟಿರುವುದು. ॥೨೦೭॥

## (೨೦೮ನೇ ನಾಮವು) ಶಾಸ್ತಾ,

### ಓಮ್॥ ಶಾಸ್ತ್ರೇನಮಃ.

(ಶಂ॥ ಭಾ) ಶ್ರುತಿ ಸ್ಮೃತಿ ಮೊದಲಾದವುಗಳಿಂದ ಸರ್ವರನ್ನು ಶಿಕ್ಷಿಸುವಂತವನು. (ವಿ॥ ಭಾ) ಈ ರೀತಿಯಿಂದ ಸರ್ವ ದುರ್ಜನರನ್ನು ಚನ್ನಾಗಿ ಶಿಕ್ಷಿಸುವಂತವನು. "ನಿನಾದವಿತ್ರಾಸಿತ ದಾನವಃ" ಎಂಬದಾಗಿ ತನ್ನ ಧ್ವನಿಯಿಂದಲೇ ಪ್ರತಿಕೂಲರಾದ ದಾನವರನ್ನು ಭಯಪಡಿಸುವಂತವನೆಂದು ಶ್ರೀವಿಷ್ಣು ಪುರಾಣದಲ್ಲಿ ಹೇಳಲ್ಪಟ್ಟಿರುವುದು. ॥೨೦೮॥

## (೨೦೯ನೇ ನಾಮವು) ವಿಶ್ರುತಾತ್ಮಾ,

### ಓಮ್॥ ವಿಶ್ರುತಾತ್ಮನೇನಮಃ.

(ಶಂ॥ ಭಾ) ವಿಶೇಷವಾಗಿ ಕೇಳಲ್ಪಡುವ ಸತ್ಯ ಜ್ಞಾನಾದಿ ಲಕ್ಷಣವುಳ್ಳ ಆತ್ಮವುಳ್ಳವನು. (ವಿ॥ ಭಾ) ಸರ್ವದೇಶ ಸರ್ವಕಾಲಗಳಲ್ಲಿಯೂ ಮಹಾ ಪ್ರಸಿದ್ಧವಾಗಿರುವ ದಿವ್ಯಾದ್ಭುತ ಶ್ರೀನೃಸಿಂಹಚರಿತ್ರ ಸ್ವಭಾವವುಳ್ಳವನು. "ಅಶೇಷದೇವೇಶ ನರೇಶ್ವರೇಶ್ವರೈಃ" (ಶ್ರೀವಿಷ್ಣುಧರ್ಮ) ಎಂಬಿದೇ ಮೊದಲಾದವುಗಳಲ್ಲಿ ಇದು ಪ್ರಸಿದ್ಧವಾಗಿರುವದು. (ಮ) ಪ್ರಸಿದ್ಧವಾದ ಸ್ವಭಾವವುಳ್ಳವನು. ॥ ೨೦೯ ॥

## (೨೧೦ನೇ ನಾಮವು) ಸುರಾರಿಹಾ,

### ಓಮ್॥ ಸುರಾರಿಘ್ನೇನಮಃ.

(ವಿ॥ ಭಾ) ಅವನೇ ದೇವತೆಗಳಿಗೆ ಶತ್ರುವಾದ ಹಿರಣ್ಯಕಶಿಪುವಿನ ಎದೆಯನ್ನು ಸೀಳುವುದರ ಮುಖದಿಂದ ಅವನನ್ನು ಸಂಹರಿಸಿರುತ್ತಾನಾದುದರಿಂದ "ಸುರಾರಿಹಾ" ಎನ್ನಲ್ಪಡುವನು. ॥ ೨೧೦ ॥

ಈ ಪ್ರಕಾರವಾಗಿ (೨೨)ನೇ ಶ್ಲೋಕದಲ್ಲಿರುವ (೧೧) ನಾಮಗಳಿಗೂ " ನಾರಸಿಂಹ ಮಥಸ್ತೌತಿ ಸರ್ವಮೃತ್ಯು ನಿವಾರಣಂ ‖ ಮೃತ್ಯೋರ್ವಿರೋಧಿ ರೂಪೋಯೋ ಮೃತ್ಯು ಮೃತ್ಯು ಸ್ವರೂಪತಃ | "ಅಮೃತ್ಯು" (೨೦೦) ರಿತಿತಂಪ್ರಾಹು ಸ್ಸಪಾರ್ತ್ರೋ ಮೃತ್ಯುನಾಶಕಃ ‖ ಅನುಕೂಲಾಂ ಸ್ತುಟಸ್ಥಾಂಶ್ಚ ಪ್ರತಿಕೂಲಾ ನಪಿಸ್ವಯಂ | ನಿಯಂತುಂ ಚಯಥಾಯೋಗ್ಯಂ ಯಃಪಶ್ಯತಿಸ ' ಸರ್ವದೃಕ್ (೨೦೧) ‖ ರಿಪುದ್ವಿಷಾನಾಂ ನಿಷ್ಪೇಷಭೀಷಣ " ಸ್ಸಿಂಹ " (೨೦೨) ಉಚ್ಯತೆ | ಪ್ರಹ್ಲಾದಾದ್ಯೈಶ್ಚ " ಸಂಧಾತಾ " (೨೦೩) ಸಂಶ್ಲೇಷ ಕರಣಾಚ್ಚಸಃ ‖ ಪ್ರಹ್ಲಾದಾದ್ಯೈರ್ನಿತ್ಯ ಸಂಧಿರ್ಯಸ್ಯಸ್ಯಾ " ತ್ಸಂಧಿಮಾನ್ " (೨೦೪) ಸ್ಸ್ಮೃತಃ | ಅಪಚಾರೇಷ್ವ ಚಾಲ್ಯತ್ವಾ ತ್ಸಂಧಾನೇ " ಸ್ಥಿರ " (೨೦೫) ಉಚ್ಯತೇ ‖ ಸ್ತಂಭಜತ್ವಾದಿತರವ ನ್ನಜಾತತ್ವಾ " ದಜಃ " (೨೦೬) ಸ್ಸ್ಮೃತಃ| ದುಷ್ಕರಂ ಮರ್ಷಣಂಯಸ್ಯಪರ್ರೈ " ರ್ದ್ದುರ್ಮರ್ಷಣಃ " (೨೦೭) ಸ್ಸ್ಮೃತಃ ‖ ಸಮಸ್ತಾನ್ಕಂಟಕಾನ್‌ಶಾಸ್ತೀತ್ಯತ " ಶ್ಶಾಸ್ತೋ " (೨೦೮) ತಿಕೀರ್ತ್ಯತೆ| ವಿಸ್ಮಯೇನ ಶ್ರುತಂದೇವೈ ಸ್ನೃಸಿಂಹಂಯಸ್ಯಾಪದಾನಕಂ‖ ಶೀಲಂತ್ವೈ " ರ್ವಿಶ್ರುತಾತ್ಮಾ " (೨೦೯) ಸಮುಹತ್ಕೀರ್ತಿ ಪ್ರದೋಮನುಃ| ಹಿರಣ್ಯಕಶಿಪೋರ್ಹಂತಾ ಕೀರ್ತ್ಯತೇಸ " ಸುರಾರಿಹಾ " (೨೧೦) ‖ ಎಂಬೀ ಪ್ರಕಾರದಿಂದ ವಿವೃತಿಯನ್ನು ಕಾಣಬಹುದು.

ಮೂ‖ ಗುರುರ್ಗ್ಗುರುತಮೊ ಧಾಮ ಸತ್ಯ ಸ್ಸತ್ಯ
ಪರಾಕ್ರಮಃ | ನಿಮಿಷೊ ಽನಿಮಿಷ ಸ್ಸ್ರಗ್ವೀ
ವಾಚಸ್ಪತಿ ರುಧಾರಧೀಃ ‖೨೩‖

(೨೧೧ನೇ ನಾಮವು) ಗುರುರ್ಗ್ಗುರುತಮಃ,
ಓಮ್‖ ಗುರುತಮಾಯ ಗುರವೇನಮಃ.

(ವಿ‖ ಭಾ) ಇನ್ನು ಮುಂದೇ ಮತ್ಸ್ಯಾವತಾರವು ಪ್ರಸ್ತುತಿಸಲ್ಪಡುವುದು. ಅಶೇಷ ವಿದ್ಯಾ ಪರಮಾಚಾರ್ಯನಾಗಿರುವುದರಿಂದ ಶ್ರೇಷ್ಠನಾದ ಗುರುವಾದಕಾರಣ ಗುರುರ್ಗುರುತಮಃ " ಎನ್ನಲ್ಪಡುವನು. "ವೂ

ಜ್ಯಶ್ಚಗುರುರ್ಗರೀಯಾನ್ " ಎಂಬದಾಗಿ (ಗೀ|| ೧೧|| ೪೩) ಹೇಳಿರುತ್ತಾ ರಷ್ಟೆ. (ಶಂ) ಸರ್ವವಿದ್ಯೋಪ ದೇಶಕನು ಅಥವಾ ಸರ್ವರಿಗೂ ತಂದೆ ಯಾದವನು ಗುರುವೆನ್ನಲ್ಪಡುವನು (ಶಂ|| ಮ) " ಯೋಬ್ರಹ್ಮಾಣಂ" ಎಂಬ ಶ್ರುತಿಯನ್ನು ಅನುಸರಿಸಿ ಬ್ರಹ್ಮಾದಿಗಳಿಗೂ ಕೂಡ ಬ್ರಹ್ಮವಿದ್ಯಾ ಪ್ರವರ್ತಕನಾದ ಕಾರಣ " ಗುರುತಮಃ " ಎನ್ನಲ್ಪಡುವನೆಂದು (ಶಂ|| ಮ) ಇವರ ಭಾಷ್ಯಗಳಲ್ಲಿ ಎರಡು ನಾಮಗಳಾಗಿರುವುವು. || ೨೧೧ ||

## (೨೧೨ನೇ ನಾಮವು) ಧಾಮ,

### ಓಮ್|| ಧಾಮ್ನೇನಮಃ

(ಶಂ|| ಮ) " ನಾರಾಯಣ ಪರೋಜ್ಯೋತಿಃ " (ಯಾಜ್ಞಿ|| ೧೩) ಎಂಬ ಮಂತ್ರ ವರ್ಣಾನುಸಾರವಾಗಿ ಜ್ಯೋತಿಸ್ಸ್ವರೂಪನಾದವನೆಂತಲಾ ದರೂ; ಸಕಲೇಷ್ಟಾರ್ಥಗಳಿಗೂ ಆಸ್ಪದನಾಗಿರುವುದರಿಂದಲಾದರೂ; " ಧಾಮ " ಎನ್ನಲ್ಪಡುವನು. (ವಿ|| ಭಾ) ಸಂಹರಿಸಲ್ಪಡುವುದರಿಂದ ಅಸ್ಥಿರಗಳಾದ ಸ್ಥಾವರ ಜಂಗಮರೂಪಗಳಾಗಿರುವ ಬೀಜಗಳಿಗೆ ಆಧಾ ರವಾಗಿರುವ ಹಡಗಿಗೆ ಮತ್ಸ್ಯಾವತಾರದಲ್ಲಿ ನಾವಿಕನಾಗಿದ್ದುಕೊಂ ಡು ಅದಕ್ಕೆ ಆಶ್ರಯಭೂತನಾದ ಕಾರಣ " ಧಾಮ " ಎನ್ನಲ್ಪಡು ವನು. || ೨೧೨ ||

## (೨೧೩ನೇ ನಾಮವು) ಸತ್ಯಃ,

### ಓಮ್|| ಸತ್ಯಾಯನಮಃ

(ಶಂ|| ಭಾ) " ತಸ್ಮಾತ್ಸತ್ಯಂ ಪರಮಂವದಂತಿ " (ಯಾಜ್ಞಿ|| ೭೯) ಎಂಬ ಮಂತ್ರ ವರ್ಣಾನುಸಾರವಾಗಿ ಸತ್ಯವಚನ ರೂಪವಾದ ಧರ್ಮಸ್ವ ರೂಪನಾದ ಕಾರಣದಿಂದಲಾದರೂ ; " ಪ್ರಾಣಾವೈ ಸತ್ಯಂತೇಷಾ ಮೇವ ಸತ್ಯಂ " (ಬೃಹ || ೪ || ೧ || ೨೦) ಎಂಬಂತೆ ಸತ್ಯ ಶಬ್ದದಿಂದ ಹೇಳಲ್ಪ ಡುವ ಪ್ರಾಣಾದಿಗಳಿಗೂಕೂಡ ಸತ್ಯನಾದ ಕಾರಣದಿಂದಲಾದರೂ; (ಮ) ಜಗತ್ತಿಗಿಂತಲೂ ವಿಲಕ್ಷಣವಾದ ಸತ್ಯಸ್ವರೂಪನಾದ ಕಾರಣದಿಂ ದಲಾದರೂ (ವಿ || ಭಾ) ಮತ್ಸ್ಯಾವತಾರಕಾಲದಲ್ಲಿ ತನ್ನನ್ನು ಆಶ್ರಯಿ ಸಿದ ಸತ್ಯವ್ರತರೇ ಮೊದಲಾದ ಮನ್ವಾದಿಸತ್ಪುರುಷರಿಗೆ ಶ್ರೇಯಸ್ಕರ ನಾದುದರಿಂದ ಲಾದರೂ " ಸತ್ಯಃ " ಎನ್ನಲ್ಪಡುವನು. || ೨೧೩ ||

## (೨೧೮ನೇ ನಾಮವು) ಸತ್ಯಪರಾಕ್ರಮಃ,

### ಓಮ್॥ ಸತ್ಯಪರಾಕ್ರಮಾಯನಮಃ.

(ಶಂ ॥ ಮ) ವ್ಯರ್ಥವಲ್ಲದ ಪರಾಕ್ರಮವುಳ್ಳವನು. (ವಿ ॥ ಭಾ) ಆ ವರುಗಳಲ್ಲಿ ಕಪಟವಿಲ್ಲದ ವ್ಯಾಪಾರವುಳ್ಳವನು. ॥ ೨೧೮ ॥

## (೨೧೯ನೇ ನಾಮವು) ನಿಮಿಷಃ,

### ಓಮ್॥ ನಿಮಿಷಾಯನಮಃ.

(ಶಂ ॥ ಭಾ) ಯೋಗನಿದ್ರೆಯಿಂದ ಕಣ್ಣುಗಳನ್ನು ಮುಚ್ಚಿಕೊಂಡಿರುವಂತವನು. (ವಿ ॥ ಭಾ) ತನ್ನ ಭಕ್ತರ ವಿರೋಧಿಗಳನ್ನು ಕಟಾಕ್ಷಿಸದವನು. (ಮ) ತನ್ನ ಭಕ್ತರಿಗೆ ವಿರೊಧಿಗಳಾದ ದೈತ್ಯರೊಡನೆ ಸದಾ ದ್ವೇಷಿಸುವಂತವನು. ॥ ೨೧೯ ॥

## (೨೨೦ನೇ ನಾಮವು) ಅನಿಮಿಷಃ,

### ಓಮ್॥ ಅನಿಮಿಷಾಯನಮಃ.

(ಶಂ ॥ ಮ) ನಿತ್ಯವು ಪ್ರಬೊಧ ರೂಪನಾಗಿರುವುದರಿಂದಲಾದರೂ; (ಅಥವಾ) ಮತ್ಸ್ಯರೂಪನಾದುದರಿಂದಲಾದರೂ; “ಅನಿಮಿಷಃ” ಎನ್ನಲ್ಪಡುವನು. (ವಿ ॥ ಭಾ) ತನ್ನ ಭಕ್ತರಾದ ಸಾಧುಗಳ ವಿಷಯದಲ್ಲಿ ಕಣ್ಣುಗಳನ್ನು ಮುಚ್ಚಿಕೊಳ್ಳದೇ ತೆರದುಕೊಂಡಿರುವ ದಿವ್ಯವಿಮಾನ ಶರೀರನು. ॥ ೨೨೦ ॥

## (೨೨೧ನೇ ನಾಮವು) ಸ್ರಗ್ವೀ,

### ಓಮ್॥ ಸ್ರಗ್ವಿಣೇನಮಃ.

(ವಿ ॥ ಭಾ) ಇಂತಹತಿರ್ಯಗ್ಜಂತುವಾಗಿ ಅವತರಿಸಿದರೂ ಪರತ್ವಸೂಚಕವಾದ (ವಿ ॥ ಶಂ ॥ ಮ) ವೈಜಯಂತಿಎಂಬವನ ಮಾಲೆಯನ್ನು ಧರಿಸಿದವನು. ॥ ೨೨೧ ॥

## (೨೧೮ನೇ ನಾಮವು) ವಾಚಸ್ಪತಿಃ,
## ಓಮ್॥ ವಾಚಸ್ಪತಯೇನಮಃ,

(ವಿ॥ ಭಾ) ಅವನೇ ವೇದೋಪ ಬೃಂಹಣರೂಪವಾದ ಮತ್ಸ್ಯ ಪುರಾಣವನ್ನು ಉಪದೇಶಿಸಿದ ನಾದಕಾರಣ "ವಾಚಸ್ಪತಿಃ" ಎನ್ನಲ್ಪಡುವನು. (ಶಂ॥ ಮ) ವೇದ ವಿದ್ಯೆಗೆ ಪತಿಯಾದವನು. ॥ ೨೧೮ ॥

## (೨೧೯ನೇ ನಾಮವು) ಉದಾರಧೀಃ,
## ಓಮ್॥ ಉದಾರಧಿಯೇನಮಃ.

(ಶಂ॥ ಮ) ಸರ್ವಾರ್ಥವಿಷಯವಾದ ಬುದ್ಧಿಯುಳ್ಳವನು. "ವಾಚಸ್ಪತಿ ರುದಾರಧೀಃ" ಎಂಬೀ ಯೆರಡೂ ಸೇರಿ ಒಂದೇ ನಾಮವಾಗಿರುವುದು. (ವಿ॥ ಭಾ) ಈ ಪ್ರಕಾರವಾಗಿ ಸರ್ವರೂ ಉಜ್ಜೀವಿಸಬೇಕೆಂಬ ಸಂಕಲ್ಪದಿಂದ ಕೂಡಿದವನಾಗಿರುವುದರಿಂದ ಗಂಭೀರವಾದ ಮನಸ್ಸುಳ್ಳವನು "ಉದಾರಧೀಃ" ಎನ್ನಲ್ಪಡುವನು. ॥ ೨೧೯ ॥

ಈ ರೀತಿಯಾಗಿ (೨೩)ನೇ ಶ್ಲೋಕದಲ್ಲಿ ಪ್ರಸ್ತುತಗಳಾದ (೯) ನಾಮಗಳಿಗೂ "ಅಥಮತ್ಸ್ಯಾವತಾರಸ್ಯ ಪ್ರಸ್ತಾವಸ್ಸ ಪ್ರತನ್ಯತೇ। ಅಶೇಷವಿದ್ಯಾಚಾರ್ಯತ್ವಾ ತ್ಸಸ್ಮೃತೋ "ಗುರುತಮೋ ಗುರುಃ" (೨೧೧) ॥ ಚರಾಚರಾ ಧಾರತಯಾ "ಧಾಮ" (೨೧೨) ಇತಿ ಪರಿಚಕ್ಷತೇ। ಮನ್ವಾದಿಷ್ವಪಿ ಸಾಧುತ್ವಾ "ತ್ಸತ್ಯ" (೨೧೩) ಇತ್ಯಭಿಧೀಯತೇ ॥ ವೃತ್ತಿರ್ಯ್ಯಕ್ತೈ ತವಾಯುಸ್ಯ ಸಸ್ಸಾ "ತ್ಸತ್ಯ ಪರಾಕ್ರಮಃ" (೨೧೪)। ಯೋಸಾಸತಾಂನೇಕ್ಷತೇಹಿ "ನಿಮಿಷ" (೨೧೫) ಸ್ಸವಿರೋಧಿನಃ ॥ ಸದ್ರಕ್ಷಣೇ ಜಾಗರೂಕಸ್ಸತ್ರತೋ "ಹ್ಯನಿಮಿಷ" (೨೧೬) ಕ್ಯಸಃ। ಪರತ್ವಸೂಚನೀಯಾಚವೈ ಜಯನ್ತೀತಿ ಕೀರ್ತಿತಾ ॥ ತಯಾ ಸ್ರಜಾನಿತ್ಯಯೋಗಾ "ತ್ಸ್ರಗ್ವೀ" (೨೧೭) ತಿಪರಿಕೀರ್ತ್ಯತೇ ॥ ವೇದೋಪಬೃಂಹಣತ್ವಾದ್ಧಿ "ವಾಚಸ್ಪತಿ" (೨೧೮) ರಿತಿಸ್ಮೃತಃ। ಸರ್ವೋಜ್ಜೀವ್ಯ ಸಾರ್ವಜ್ಞಾ ದುಚ್ಯತೇಸ "ಉದಾರಧೀಃ" ॥ (೨೧೯) ಎಂಬೀ ರೀತಿಯಿಂದ ವಿವೃತಿಯನ್ನು ಕಾಣಬಹುದು.

ಮೂ॥ ಅಗ್ರಣೀ ರ್ಗ್ರಾಮಣೀ ಶ್ರೀಮಾ
ನ್ನ್ಯಾಯೋ ನೇತಾ ಸಮೀರಣಃ । ಸಹಸ್ರಮೂರ್ಧಾ
ವಿಶ್ವಾತ್ಮಾ ಸಹಸ್ರಾಕ್ಷ ಸ್ಸಹಸ್ರಪಾತ್ ॥೨೪॥

(೨೨೦ನೇ ನಾಮವು) ಅಗ್ರಣೀಃ,
ಓಮ್॥ ಅಗ್ರಣ್ಯೇನಮಃ.

(ಶಂ॥ ಭಾ) ಮುಮುಕ್ಷುಗಳಾದ ಭಕ್ತರುಗಳಿಗೆ ಶ್ರೇಷ್ಠವಾದ ಮುಕ್ತಿಸ್ಥಾನವನ್ನು ಹೊಂದಿಸುವಂತವನು. (ವಿ॥ ಭಾ) ಅಂತಹ ಉದಾರವಾದ ಮನಸ್ಸಿಗೆ ಅನುಗುಣವಾಗಿ ಶ್ರೇಷ್ಠವಾದ ಪದವಿಯನ್ನು ಕೊಡುವಂತವನು. ॥೨೨೦॥

(೨೨೧ನೇ ನಾಮವು) ಗ್ರಾಮಣೀಃ,
ಓಮ್॥ ಗ್ರಾಮಣ್ಯೇನಮಃ.

(ಶಂ॥ ಮ) ಭೂತಗಳ ಸಮುದಾಯವನ್ನು ಸಂಸಾರಿಗಳಿಗೆ ನಿಯಮಿಸುವಂತವನು. (ವಿ॥ ಭಾ) ನಿತ್ಯಸೂರಿಗಳ ಸಮಾಜವನ್ನು ಹೊಂದಿಸುವಂತವನು. ॥ ೨೨೧ ॥

(೨೨೨ನೇ ನಾಮವು) ಶ್ರೀಮಾನ್,
ಓಮ್॥ ಶ್ರೀಮತೇನಮಃ.

(ಶಂ॥ ಭಾ) ಸರ್ವಾತಿಶಾಯಿಯಾದ ಕಾಂತಿಯುಳ್ಳವನು. (ಮ) ವೇದವಿದ್ಯೆಯುಳ್ಳವನು. "ಸಾಹಿಶ್ರೀ ರಮೃತಾಸತಾಂ" ಎಂಬ ವಚನವು ಈ ಅರ್ಥವನ್ನು ಪ್ರಕಾಶಪಡಿಸುವುದು. ಇದರಿಂದ (ವಿ॥ ಪ್ರಕಾರ॥ ೨॥ ೧೮೦)ನೇ ನಾಮಗಳೊಡನೆ ಪುನರುಕ್ತಿ ದೋಷವಿಲ್ಲವು. (ವಿ॥ ಭಾ) "ಮತ್ಸ್ಯಃ ಕಮಲಲೋಚನಃ" ಎಂಬಂತೆ ಪರತ್ವ ಲಕ್ಷಣವಾದ ಐಶ್ವರ್ಯ ಪ್ರಕಾಶವುಳ್ಳವನು. ॥ ೨೨೨ ॥

## (೨೨೬ನೇ ನಾಮವು) ನ್ಯಾಯಃ,
## ಓಮ್॥ ನ್ಯಾಯಾಯನಮಃ.

(ಶಂ॥ ಭಾ) ಪ್ರಮಾಣಾನು ಗ್ರಾಹಕನೂ ಭೇದಕಾರಿಯೂ ಆದ ತರ್ಕರೂಪನು. (ಮ) ನ್ಯಾಯದಿಂದ ಕೂಡಿದವನು. (ವಿ॥ ಭಾ) ಬದ್ಧ ಚೇತನರಲ್ಲಿ ನ್ಯಾಯವಾದ ಕೃತ್ಯಗಳನ್ನು ಮಾಡುವಂತವನು. ॥೨೨೬॥

## (೨೨೮ನೇ ನಾಮವು) ನೇತಾ,
## ಓಮ್॥ ನೇತ್ರೇನಮಃ.

(ಶಂ॥ ಭಾ) ಲೋಕಯಾತ್ರಾ ನಿರ್ವಾಹಕನು. (ಮ) ಮೋಕ್ಷ ವನ್ನು ಹೊಂದಿಸುವಂತವನು. (ವಿ॥ ಭಾ) ಅಂತಹ ಭಕ್ತರು ಕೇಳಿಕೊಂಡದ್ದನ್ನು ಮಾಡುವುದರಿಂದ ನಿರ್ವಹಿಸುವಂತಹ ಸ್ವಭಾವವುಳ್ಳವನು. ಸಂಸಾರದಲ್ಲಿ ಮುಣುಗಿರುವವರನ್ನು ಉದ್ಧರಿಸುವುದಕ್ಕಾಗಿ ತಾವೂ ಮುಣುಗಿ ಉದ್ಧರಿಸುವಿಕೆಯು ಮಹಾತ್ಮರಿಗೆ ನ್ಯಾಯವೆ ತಾನೆ. ॥ ೨೨೮ ॥

## (೨೨೫ನೇ ನಾಮವು) ಸಮೀರಣಃ,
## ಓಮ್॥ ಸಮೀರಣಾಯನಮಃ.

(ಶಂ॥ ಮ) ಶ್ವಾಸರೂಪದಿಂದ ಭೂತಗಳನ್ನು ಚೇಷ್ಟಾಯುಕ್ತರನ್ನಾಗಿ ಮಾಡುವಂತವನು. (ಚೇಷ್ಟಾ-ವ್ಯಾಪಾರವು) (ವಿ॥ ಭಾ) ಬದ್ಧ ಚೇತನರುಗಳಿಗೆ ಇಷ್ಟವನ್ನುಂಟುಮಾಡುವ ಸ್ವಭಾವವುಳ್ಳವನು. ॥೨೨೫॥

ಈ ಅರ್ಥಕ್ಕೆ ಅವರ ಧ್ಯಾನಸಲ್ಲಿ "ಕೃತ್ವಾವಿಮಾನ ಮಯಿಮಂಸದ್ಯಃಪ್ರವೀ ವೇಶ ಶರ ಸಾತಲಂ । ವೇದಮೂರ್ತಿ ಸ್ತತೋವೇದಾ ನಾನಿನ್ಯೇ ಬ್ರಹ್ಮಣೋಂತಿಕಂ ॥ ಜ್ಞಾನಾದಿ ಗುಣಬೃಂದೇನ ಪಕ್ಷಭೂತೇನ ಭೂಷಿತಂ । ಸ್ತೋತ್ಯಬ್ರಹ್ಮ ಮದಂಶ್ಯಗ ನಿಸ್ಸೃತೇನವಿರಾಜಿತಂ ॥ ಕಲ್ಪಾವಸಾನ ಸಮಯೆ ವಹಂತಂ ಚೈವಚಿಂತಯೇತ್ । ನಾರರೂಪಾಂ ವಿತತಾಂಕ್ಷೋಣೀಂ ಪ್ರಜಾಪತಿ ಗುಣಾನ್ವಿತಾಂ ॥ ಮುಕ್ತಾಫಲ ನಿಭೇನೈವ ವಪುಷಾ ನಿರ್ಮಲೇನಚ । ಅನಿಮೀಲಿತನೇತ್ರಶ್ಚ ಮೀನಾತ್ಮಾ ಯತವಾಕ್ತಥಾ ॥" ಎಂಬ ಪ್ರಮಾಣಗಳಿರುವವು.

(ಮೀನರೂಪವನ್ನು ಧರಿಸಿ ತತ್ಕ್ಷಣದಲ್ಲಿಯೆ ರಸಾತಲವನ್ನು ಪ್ರವೇಶಿಸಿ ತದನಂತರದಲ್ಲಿ ವೇದಮೂರ್ತಿಯಾದ ಆ ಪರಮಪುರುಷನು ಅಸುರರಿಂದ ಅಪಹರಿಸಲ್ಪಟ್ಟ ವೇದಗಳನ್ನು ತಂದು ಚತುರ್ಮುಖನಲ್ಲಿ ಕೊಟ್ಟನು. ಜ್ಞಾನಾದಿಗಳೆಲ್ಲವೂ (ಪಕ್ಷಿಗಳಿಗೆ ಪಕ್ಷಗಳಂತೆ) ತನಗೆ ಅತ್ಯಂತ ಭೂಷಣ ಸ್ಥಾನೀಯವಾಗಿರಲು ತನ್ನಲ್ಲಿರುವ ಪರತ್ವ ವಿದೆನ್ನುವಂತೆ ತೋರಲ್ಪಡುವ ಶೃಂಗಗಳಿಂದ ಪ್ರಕಾಶಿಸುವಂತವನನ್ನಾಗಿಯೂ ಪ್ರಳಯದ ಕೊನೇಕಾಲದಲ್ಲಿ ಸಮಸ್ತವನ್ನೂ ವಹಿಸುವಂತವರನ್ನಾಗಿಯೂ ಚಿಂತಿಸಬೇಕು. ಸಕಲ ಪ್ರಜೆಗಳಿಗೂ ಪತಿಯಾದ ಪರಮಪುರುಷನ ಗುಣಗಳೊಡನೆ ಸಂಬಂಧಪಟ್ಟು ಅತಿ ವಿಸ್ತಾರವಾದ ಹಡಗಿನಂತೆ ಪ್ರಕಾಶಿಸುವ ಭೂಮಿಯನ್ನು ಮುತ್ತಿನಂತೆ ಅತಿ ನಿರ್ಮಲವಾದ ಶರೀರದಿಂದ ಧರಿಸಿ ಮೌನವುಳ್ಳವನಾಗಿಯೂ ತೆರೆದ ಕಣ್ಣುಳ್ಳವನಾಗಿಯೂ ಇರುವಂತೆ ಆ ಮೀನರೂಪಿಯಾದ ಪರಮಾತ್ಮನನ್ನು ಧ್ಯಾನಿಸಬೇಕೆಂದು ಪ್ರಮಾಣಾರ್ಥವು)

## (೨೨೬ನೇ ನಾಮವು) ಸಹಸ್ರಮೂರ್ಧಾ,

## ಓಮ್॥ ಸಹಸ್ರಮೂರ್ಧ್ನೇನಮಃ.

(ವಿ॥ ಭಾ) ಅನಂತರದಲ್ಲಿ ವಿದ್ಯಾಪ್ರವರ್ತನೋದ್ದೇಶ್ಯದಿಂದ ಅವತರಿಸಿರುವ ಈ ಮತ್ಸ್ಯಾವತಾರವನ್ನು ಪ್ರತಿಪಾದಿಸುವ ಪುರುಷಸೂಕ್ತವೇ ಮೊದಲಾದ ಪರವಿದ್ಯೆಗಳಲ್ಲಿ ಹೇಳಲ್ಪಡುವ " ಸಹಸ್ರಶೀರ್ಷಾ ಪುರುಷಃ " ಎಂಬಿದೇ ಮೊದಲಾದ ರೀತಿಗಳು ಹೇಳಲ್ಪಡುವುವು. (ಶಂ॥ ವಿ) ಸಹಸ್ರಶಿರಸ್ಸುಗಳುಳ್ಳವನು. ॥ ೨೨೬ ॥

## (೨೨೭ನೇ ನಾಮವು) ವಿಶ್ವಾತ್ಮಾ,

## ಓಮ್॥ ವಿಶ್ವಾತ್ಮನೇನಮಃ.

(ಶಂ॥ ಭಾ) ಪ್ರಪಂಚವನ್ನೆ ಆತ್ಮವಾಗಿವುಳ್ಳವನು (ಅಥವಾ) ಸರ್ವಾತ್ಮಕನು. (ವಿ॥ ಭಾ) ಈ ಜ್ಞಾನಶಕ್ತಿಗಳೆಂಬ ಯೆರಡು ಗುಣಗಳಿಂದ ಜಗತ್ತನ್ನು ವ್ಯಾಪಿಸುವಂತವನಾದಕಾರಣ " ವಿಶ್ವರೂಪ " ನೆನ್ನಲ್ಪಡುವನು. " ಸಭೂಮಿಂ ವಿಶ್ವತೋವೃತ್ವಾ " (ಪು॥ ಸೂ) ಯೊನ್ವೇಷಭೂತ ಸ್ವಷ್ಟ್ಯಂತರಾತ್ಮಾ (ತೈ॥ ನಾ) ಯೇನಸರ್ವ ಮಿದಂಪ್ರೋತಂ ॥ (ತೈ॥ ನಾ॥ ೬॥ ೫೦) ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ "

(ಗೀ॥ ೧೦॥ ೨೦) ಇತ್ಯಾದಿ ಪ್ರಮಾಣಗಳು ಪರಮಾತ್ಮನ ಸರ್ವ ವ್ಯಾಪಕತ್ವವನ್ನು ಹೇಳುವುವು. ॥ ೨೧೭ ॥

## (೨೨೮ನೇ ನಾಮವು) ಸಹಸ್ರಾಕ್ಷಃ,

### ಓಮ್॥ ಸಹಸ್ರಾಕ್ಷಾಯನಮಃ,

(ಶಂ॥ ವಿ) ಸಹಸ್ರ ಕಣ್ಣುಗಳುಳ್ಳವನು. ॥ ೨೨೮ ॥

## (೨೨೯ನೇ ನಾಮವು) ಸಹಸ್ರಪಾತ್,

### ಓಮ್॥ ಸಹಸ್ರಪದೇನಮಃ.

(ಶಂ॥ ವಿ) ಸಹಸ್ರ ಪಾದಗಳುಳ್ಳವನು. (ಶಂ) ಇದಕ್ಕೆ ಪುರುಷ ಸೂಕ್ತದಲ್ಲಿರುವ "ಸಹಸ್ರಾಕ್ಷ ಸ್ಸಹಸ್ರಪಾತ್" ಎಂಬ ವಾಕ್ಯವು ಜ್ಞಾಪಕವಾಗಿರುವುದು. (ವಿ॥ ಭಾ) ಇಲ್ಲಿನ ಸಹಸ್ರ ಶಬ್ದವು ಸಾವಿರವೆಂಬ ಪರಿಮಿತವಾದ ಸಂಖ್ಯೆಯನ್ನು ಹೇಳಿಲ್ಲವು; ಮತ್ತು ಅಸಂಖ್ಯೇಯಾರ್ಥವನ್ನು ಎಂದರೆ ಅನೇಕ ಶಿರಸ್ಸುಗಳು ಕಣ್ಣು ಶ್ರೀಪಾದ ಇವುಗಳುಳ್ಳನೆಂಬ ಅರ್ಥದಲ್ಲಿ ವರ್ತಿಸಿರುವುದು. ಈ ಪ್ರಕಾರವೇ "ವಿಶ್ವತಶ್ಚಕ್ಷುರುತ ವಿಶ್ವತೋಮುಖಃ" (ತೈ॥ ನಾ॥ ೬॥ ೧॥ ೧೨) ಸರ್ವತಃ ಪಾಣಿಪಾದಂತತ್ಸರ್ವತೋಽಕ್ಷಿ ಶಿರೋಮುಖಂ ॥ (ಗೀ॥ ೧೩॥ ೧೩)" ಇತ್ಯಾದಿ ಪ್ರಮಾಣಗಳು ಹೇಳುವುವು. ಮತ್ತು ಇಲ್ಲಿ ಹೇಳಿರುವ ಶಿರಸ್ಸು ಕಣ್ಣು ಪಾದಗಳೆಂಬವು ಇತರಗಳಾದ ಜ್ಞಾನ ಕರ್ಮೇಂದ್ರಿಯಗಳಿಗೆ ಉಪಲಕ್ಷಕಗಳಾಗಿರುವುವು. ಆಯಾ ಕರಣಗಳು ಮಾಡುವ ವ್ಯಾಪಾರಗಳನ್ನು ಹೇಳಿದಂತೆ ಆಯಿತೆಂದು ನಮ್ಮ ಪೂರ್ವೀಕರಾದ ಜ್ಞಾನಿಗಳು ಹೇಳುವರು. ಇದು ತಾನೇ ಅತ್ಯಂತೋಚಿತವೂ ಅನೇಕ ಶಾಸ್ತ್ರ ಸಮ್ಮತವೂ ಆಗಿರುವುದು. ॥ ೨೨೯ ॥

ಈ (೨೪) ನೇ ಶ್ಲೋಕದಲ್ಲಿ ಪ್ರಸ್ತುತಗಳಾದ ೯ ನಾಮಗಳಿಗೂ "ಮಹೋದಾರ ತಯಾಭೆರ್ತಾ ನಗ್ರಿಮಂ ಪಕ್ಷ್ಮಿಮಂಪದಂ । ನಯತೀತ್ಯಗ್ರಣೀಃ" (೨೮೦) ಶ್ಲೋಕೋಭೆಕ್ತಾ ಮೋಕ್ಷಪ್ರದೋಮನುಃ ।

ಗ್ರಾಮಂ ಸಮೂಹಂ ಸೂರೀಣಾಂ ನಯತಿ "ಗ್ರಾಮಣೀಃ" (೨೨೧) ಶ್ರೈ-
ಯಃ । ಮತ್ಸ್ಯರೂಪಾವತಾರೇಪಿ "ಶ್ರೀಮಾನ್" (೨೨೨) ಕಮಲನೇ-
ತ್ರಃ । ನ್ಯಾಯೋ" (೨೨೩) ಹಿಯುಕ್ತಕಾರಿತ್ವಾ ದ್ಯುಕ್ತೇಷ್ವೇವ
ವಿಶೇಷತಃ । ಭಕ್ತೈರ್ನಿಯುಕ್ತಂ ಯತ್ಕರ್ಮ "ನೇತಾ" (೨೨೪) ತತ್ಕ-
ರಣಾದಪಿ ॥ ಭಕ್ತೇಷ್ಟಚೇಷ್ಟಾ ಶೀಲತ್ವಾ "ತ್ಸಮೀರಣ" (೨೨೫)
ಉದಾಹೃತಃ । ಸಹಸ್ರಶಬ್ದೋಹ್ಯಾ ನಂತ್ಯಲಕ್ಷಕಸ್ಸಮುದಾಹೃತಃ ॥
"ಸಹಸ್ರಮೂರ್ಧಾ" (೨೨೬) ಸೋಽನನ್ತ ಶಿರಸ್ಕಃ ಕೀರ್ತ್ಯತೇತತಃ ।
ಸಹಸ್ರಮೂರ್ಧಾ ಸಸ್ವ್ಯದ್ವಾಪ್ರುಂ ಸೂಕ್ತಾದ್ಯುಕ್ತನಾಮವಾನ್ ॥ ಆ-
ಭ್ಯಾಂಚ ಜ್ಞಾನ ಕರ್ಮಭ್ಯಾಂ "ವಿಶ್ವಾತ್ಮಾ" (೨೨೭) ವ್ಯಾಪನಾತ್ಸ್ವ-
ತಃ ॥ ಅಕ್ಷಿಪಾದ ಪದೇ ಜ್ಞಾನ ಕರ್ಮೇಂದ್ರಿಯ ನಿದರ್ಶಕೇ । ತೇನಾನಂತ
ಜ್ಞಾನಕರ್ಮಾ "ಸಹಸ್ರಾಕ್ಷಃ ಸಹಸ್ರಪಾತ್" ॥ (೨೨೮॥ ೯) ಎಂ-
ಬೀ ರೀತಿಯಿಂದ ವಿವೃತಿಯನ್ನು ಕಾಣಬಹುದು.

**ಮೂ॥ ಆವರ್ತನೋ ನಿವೃತ್ತಾತ್ಮಾ ಸಂವೃತಾ**
**ಸ್ಸಂಪ್ರಮರ್ದನಃ । ಅಹಸ್ಸಂವರ್ತಕೋ ವಹ್ನಿ**
**ರನಿಲೋ ಧರಣೀಧರಃ ।೨೫।**

**(೨೩೦ನೇ ನಾಮವು) ಆವರ್ತನಃ,**

**ಓಮ್॥ ಆವರ್ತನಾಯನಮಃ.**

(ಶಂ॥ ವಿ॥ ಮ) ಸಂಸಾರ ಯಂತ್ರವನ್ನು ತಿರಿಗಿಸುವಂತವನು (ವಿ) ಇದಕ್ಕೆ "ತೇನೇದಂ ಭ್ರಾಮ್ಯತೇ ಬ್ರಹ್ಮಚಕ್ರಂ ॥ (ಭಾರ) ಭ್ರಾಮಯನ್ ಸರ್ವಭೂತಾನಿ ॥ (ಗೀ॥ ೧೮॥ ೬೧) ಕಾಲಚಕ್ರಂ ಜಗಚ್ಚಕ್ರಂ ಯುಗಚಕ್ರಂಚ ಕೇಶವಃ । ಆತ್ಮಯೋಗೇನಭಗವಾ ನ್ಪರಿವರ್ತಯತೇಽನಿಶಂ" (ಭಾರ॥ ಉ॥ ೬೭॥ ೧೨) ಇತ್ಯಾದಿ ಪ್ರಮಾಣಗಳು ಪರಮಾತ್ಮನು ಸಂಸಾರಚಕ್ರ ಭ್ರಮಣವನ್ನು ಮಾಡಿಸುವ ಸಂದರ್ಭವನ್ನು ಬೋಧಿಸುವುವು. "ತಸ್ಮಾದ್ವಿರಾಡ ಜಾಯತ" (ಪು॥ ಸೂ॥ ೫) ಇತ್ಯಾದಿಗಳಿಂದಲೂ ಈ ಅರ್ಥವು ಹೇಳಲ್ಪಡುವುದು. ॥ ೨೩೦ ॥

(೨೩೧ನೇ ನಾಮವು) ನಿವೃತ್ತಾತ್ಮಾ,

ಓಮ್|| ನಿವೃತ್ತಾತ್ಮನೇನಮಃ.

(ಶಂ|| ಮ) ಸಂಸಾರ ಬಂಧದಿಂದ ನಿವೃತ್ತವಾದ ಸ್ವರೂಪವನು. (ವಿ|| ಭಾ) ಸಂಸಾರ ವಿಭೂತಿಗಿಂತಲೂ ಶ್ರೇಷ್ಠವಾದ ನಿತ್ಯ ವಿಭೂತಿ ಎನ್ನಲ್ಪಡುವ ಸ್ವರೂಪ ವುಳ್ಳವನು. || ೨೩೧ ||

(೨೩೨ನೇ ನಾಮವು) ಸಂವೃತಃ,

ಓಮ್|| ಸಂವೃತಾಯನಮಃ.

(ಶಂ|| ಭಾ) ಆಚ್ಛಾದಿಕವಾದ ಅವಿದ್ಯೆಯಿಂದ ಮುಚ್ಚಲ್ಪಟ್ಟವನು. (ಮ) ಮಾಯೆಯಿಂದ ಮರೆಮಾಡಲ್ಪಡುವಂತವನು. (ವಿ|| ಭಾ) ತಮೋಗುಣದಿಂದ ಮೂಢರಾದವರಿಗೆ ಮರೆಯಾಗಿರುವಂತವನು. || ೨೩೨ ||

(೨೩೩ನೇ ನಾಮವು) ಸಂಪ್ರಮರ್ದನಃ,

ಓಮ್|| ಸಂಪ್ರಮರ್ದನಾಯನಮಃ.

(ಶಂ|| ಭಾ) ರುದ್ರಕಾಲಾಂತಕಾದಿ ವಿಭೂತಿಗಳಿಂದ ಚನ್ನಾಗಿ ಲೋಕರನ್ನು ಮರ್ದಿ (ಪೀಡಿ) ಸುವಂತವನು. (ಮ) ದುಷ್ಟರನ್ನು ಚನ್ನಾಗಿ ಮರ್ದನ ಮಾಡುವಂತವನು. (ವಿ|| ಭಾ|| ತನ್ನನ್ನು ತಿಳಿಯು ವದರಿಂದ ಬ್ರಹ್ಮವನ್ನು ಮರೆಮಾಡುವ ತಮಸ್ಸನ್ನು ನಾಶಪಡಿಸುವಂತ ವನು. ಇದಕ್ಕೆ " ತಮೇವಂ ವಿದ್ವಾ ನಮೃತ ಇಹಭವತಿ || (ಪು|| ಸೂ|| ೨೦) ಯುವಿನಂ ವಿದುರಮೃತಾಸ್ತೇ ಭವಂತಿ || ಅಥೇತರೆ ದುಃಖಮೇ ವಾಪಿಯಂತಿ (ಬೃ ||ಆ|| ಉ|| ೬|| ೪|| ೧೪) ಇತ್ಯಾದಿ ಪ್ರಮಾಣಗಳು ಭಗ ವದ್ವೇದನದಿಂದ ತಮಸ್ಸನ್ನು ದಾಟಿ ಮುಕ್ತನಾಗುವ ಪ್ರಕಾರವನ್ನು ಬೋಧಿಸುವುವು. || ೨೩೩ ||

(೨೩೪ನೇ ನಾಮವು) ಅಹಸ್ಸಂವರ್ತಕಃ,

ಓಮ್|| ಅಹಸ್ಸಂವರ್ತಕಾಯನಮಃ.

(ಶಂ|| ಭಾ) ಚನ್ನಾಗಿ ಹಗಲನ್ನು ಪ್ರವರ್ತಿಸುವಂತೆ ಮಾಡುವ ಸೂರ್ಯರೂಪನಾದುದರಿಂದ "ಅಹಸ್ಸಂವರ್ತಕಃ" ಎನ್ನಲ್ಪಡುವನು. (ವಿ|| ನು) ಹಗಲು ಮೊದಲಾಗ ಕಾಲವನ್ನು ನಡಿಸುವಂತವನು. (ವಿ|| ಭಾ) ಇದಕ್ಕೆ "ಸರ್ವೇನಿಮೇಷಾಜಜ್ಞಿರೇ ವಿದ್ಯುತಃ ಪುರುಷಾದಧಿ (ತೈ|| ನಾ| ೬| ೧|| ೮) ಕಾಲಚಕ್ರಂ "ಕಾಲಸ್ಯಹಿಚ" (ಭಾರ| ಉ| ೬೭| ೧೨|) ಇತ್ಯಾದಿ ಪ್ರಮಾಣಗಳಿರುವುವು. ಕಾಲವೆಂಬುವುದು ಭೂತ ಭವಿಷ್ಯದ್ವರ್ತಮಾನರೂಪವಾಗಿದ್ದುಕೊಂಡು ದೊಡ್ಡದು ಚಿಕ್ಕದು ಎಂಬ ಜ್ಞಾನವನ್ನುಂಟುಮಾಡತಕ್ಕದ್ದಾಗಿರುತ ಪರಮಪುರುಷನಿಗೆ ನಿತ್ಯವೂ ಕ್ರೀಡಾ ಪರಿಕರವಾಗುವುದೊಂದು ಅದನ್ನು ಪರಮಪುರುಷನು ಆರುಬಗೆಯಾದ ವಿಕಾರಗಳನ್ನುಂಟುಮಾಡತಕ್ಕದ್ದನ್ನಾಗಿಯೂ ಪ್ರಕೃತಿ ಪುರುಷರನ್ನು ಸೇರಿಸುವುದಕ್ಕೂ ಪ್ರತ್ಯೇಕಿಸುವುದಕ್ಕೂ ಕಾರಣವಾಗಿರುವಂತೆಯೂ ನಿಯಮಿಸುವನು. ಅದನ್ನು ಕೆಲವರು ಹಿಂದೇ ಹೇಳಲ್ಪಟ್ಟ ಕೆಲಸಗಳಿಗೆಂದೇರ್ಪಟ್ಟಿರುವ ಪ್ರಕೃತಿಯ ಪರಿಣಾಮ ಪರಂಪರೆ ಯೆನ್ನುವರು ಇನ್ನೂ ಕೆಲವರು ಅದು ಸ್ವತಂತ್ರವಾದದ್ದೆನ್ನುವರು. ಯಾವ ವಿಧದಿಂದಲಾದರೂ ಇದನ್ನು ಕುರಿತು ಶ್ರೀಪೌಷ್ಕರ ಸಂಹಿತೆಯಲ್ಲಿ ವಿಶೇಷವಾಗಿ ಹೇಳಲ್ಪಟ್ಟಿರುವುದು || ೨೩೪ ||

## (೨೩೫ನೇ ನಾಮವು) ವಹ್ನಿಃ,

## ಓಮ್|| ವಹ್ನಯೇನಮಃ.

(ಶಂ|| ಭಾ) ಹೋಮ ಮಾಡಲ್ಪಡುವ ದ್ರವ್ಯವನ್ನು (ಶಂ|| ಮ) ತಾನಾದುದರಿಂದ "ವಹ್ನಿಃ" ಎನ್ನಲ್ಪಡುವನು. (ವಿ|| ಭಾ) ದೇಶರೂಪದಿಂದ ಪ್ರಪಂಚವನ್ನು ವಹಿಸುವಂತವನು. ಅವುಗಳಲ್ಲಿ ಮೊದಲಿನ ದೇಶವು ಪರಮಪದವು. ಉಳಿದವು ಅಪೇಕ್ಷಿತಕಾಲದಲ್ಲಿ ಅಂಗೀಕರಿಸಲ್ಪಡಬಹುದಾದ ಆಕಾಶವು, ದಿಕ್ಕು, ಇದರ ಕೋಣಗಳೇ ಮೊದಲಾದವು. ದೇಶವೆಂದರೆ ಇಲ್ಲಿ ಇದು ಎಂಬ ಜ್ಞಾನಕ್ಕೆ ಕಾರಣವಾದದ್ದು; ಅದು ಬದ್ಧ ಮುಕ್ತನಿತ್ಯರೆಂಬ ಮೂರು ಬಗೆಯಾದ ಚೇತನರಿಗೂ ಅವನಿಂದ ಪ್ರಾಪ್ತವಾದದ್ದಾಗಿ ತಾನೆ ಇರುವುದು. || ೨೩೫ ||

## (೨೩೬ನೇ ನಾಮವು) ಅನಿಲಃ,

## ಓಮ್॥ ಅನಿಲಾಯನಮಃ·

(ಶಂ॥ ಭಾ) ಅನಾದಿಯಾದವನು ಅಥವಾ ಅನ್ನವನ್ನು ತಿನ್ನುವಂತ ವನು ; ( ಶಂ॥ ಮ ) ನಿಲಯ–ಸ್ಥಾನ, ವಿಲ್ಲದವನು. (ವಿ॥ ಭಾ) ಈ ರೀತಿ ಯಿಂದ ಸರ್ವರನ್ನೂ ಉಜ್ಜೀವಿಸುವಂತೆ ಮಾಡುವಂತವನು. ಇದರ ಕ ಲಾಮಾತ್ರ (ಸ್ವಲ್ಪಾಂಶಮಾತ್ರ) ವೇ ತಾನೇ ಗಾಳಿಯಾಗಿರುವುದು. " ಪ್ರಾಣಾದ್ವಾಯುರ ಜಾಯತ " (ಪು॥ ಸೂ) ಎಂದು ಪ್ರಮಾಣವೂ ಇರುವುದು. ॥ ೨೩೬ ॥

## (೨೩೭ನೇ ನಾಮವು) ಧರಣೀಧರಃ,

## ಓಮ್॥ ಧರಣೀಧರಾಯನಮಃ·

(ಶಂ॥ ಭಾ) ಶೇಷದಿಗ್ಗಜಾದಿ ರೂಪದಿಂದ ಅಥವಾ ಭೂವರಾಹ ರೂಪದಿಂದ (ಶಂ॥ ವಿ) ಭೂಮಿಯನ್ನು ಧರಿಸುವಂತವನು. (ವಿ॥ ಭಾ) ಎಂದರೆ ಆಧಾರಭೂತಗಳಾಗಿರುವ ಇತರ ವಸ್ತುಗಳೆಲ್ಲವನ್ನೂ ಧರಿಸುವಂ ತವನೆಂದರ್ಥವು. ಇದಕ್ಕೆ " ಸದಾಧಾರ ಪೃಥಿವೀಂದ್ಯಾ ಮುತೇಮಾಂ " (ಸಂಹಿತಾ॥೪॥೧॥೮) ಎಂಬೀ ಶ್ರುತಿಯೇ ಸಾಕ್ಷಿಯಾಗಿರುವುದು.॥೨೩೭॥

ಈ (೨೫)ನೇ ಶ್ಲೋಕದಲ್ಲಿ ಪ್ರಸ್ತುತಿಸಲ್ಪಟ್ಟ (೮) ನಾಮುಗಳಿ ಗೂ " ಸಂಸಾರಾಖ್ಯ ಘಟೀಯಂತ್ರೇ ಪರಿವರ್ತನ ಶೀಲತಃ | ಚಕ್ರವಚ್ಚ ವಿಶೇಷೇಣ " ಹ್ಯಾವರ್ತನ " (೨೩೦) ಇತೀರಿತಃ ॥ ತ್ರಿಪಾದ್ವಿಭೂತಿಕ ತ್ವೇನ ಭವಪಾರ ವಿಭೂತಿತಃ | ಉದ್ಗತಾತ್ಮ ಸ್ವರೂಪತ್ವಾ "ನ್ನಿವೃತಾತ್ಮೇ " (೨೩೧) ಕಥ್ಯತೇ ॥ ತಾಮಸಾನಾಂತು ಮೂಢಾನಾಂ ಗೂಢ ತ್ವಾ " ತ್ಸಂವೃತಃ " (೨೩೨) ಸ್ಮೃತಃ | ತಮಃಸ್ವವಿದ್ಯಯಾಸಮ್ಯ ಜ್ಮರ್ದನಾ " ತ್ಸಂಪ್ರಮರ್ದನಃ " (೨೩೩) ॥ ಅಹರ್ಲಕ್ಷಿತಕಾಲಸ್ಯ ಪರಿ ವೃತ್ತೇಶ್ಚಸಾಧನಂ | " ಅಹಸ್ಸಂವರ್ತಕ " (೨೩೪) ಇತಿಪ್ರಾಹುರ್ವೇ ದಾಂತ ಪಾರಗಾಃ " ವಿಶ್ವಸ್ಯದೇಶ ರೂಪೇಣ ವಹನಾ "ದ್ವಹ್ನಿ" (೨೩೫) ರುಚ್ಯತೆ | ಬದ್ಧಾದೇರ ನನಾದ್ಯೋಸಾ " ಅನಿಲಃ " (೨೩೬) ಪರಿಕೀರ್ತಿ ತಃ ॥ ಭೂತಧಾತಾಪ್ರಿಯಶ್ಚ ಧರಣೇರ್ಧಾರಣಾ " ದ್ಧರಣೀಧರಃ " (೨೩೭) ಎಂಬೀರೀತಿಯಿಂದ ವಿವೃತಿಯನ್ನು ಕಾಣಬಹುದು.

ಮೂ॥ ಸುಪ್ರಸಾದಃ ಪ್ರಸನ್ನಾತ್ಮಾ ವಿಶ್ವಸೃಡ್ವಿಶ್ವಭುಗ್ವಿಭುಃ। ಸತ್ಕರ್ತಾ ಸತ್ಕೃತಸ್ಸಾಧುರ್ಜಹ್ನುರ್ನಾರಾಯಣೋ ನರಃ ॥೨೬॥

(೨೩೮ನೇ ನಾಮವು) ಸುಪ್ರಸಾದಃ,

ಓಮ್॥ ಸುಪ್ರಸಾದಾಯನಮಃ.

(ಶಂ॥ ಭಾ) ಅತ್ಯಂತಾಪಕಾರಿಗಳಾದ ಶಿಶುಪಾಲಾದಿಗಳಿಗೂ ಕೂಡ ಮೋಕ್ಷವನ್ನು ಕೊಡುವಂತಹ ಮಂಗಳಕರವಾದ ದಿವ್ಯಾನುಗ್ರಹವುಳ್ಳವನು. (ಮ) ಭಕ್ತರಲ್ಲಿ ಅತ್ಯಂತ ಪ್ರಸಾದವುಳ್ಳವನು.

(ವಿ॥ ಭಾ) ಈ ರೀತಿಯಾಗಿ ಭೂಮಿಯನ್ನು ವಹಿಸಿದಮೇಲೆ ತನ್ನಲ್ಲಿ ಅಭಿಮುಖರಾದವರಿಗೆ ಅತ್ಯಂ ತಾನು ಗ್ರಹವನ್ನು ಮಾಡತಕ್ಕವನು. "ತಮಕ್ರತುಂ ಪಶ್ಯತಿ ವೀತಶೋಕೋ ಧಾತುಃ ಪ್ರಸಾದಾನ್ಮಹಿಮಾನಮಾಶಂ" (ಶ್ವೇ॥ ಉ॥ ೩॥ ೨೦) ಎಂಬದಾಗಿ ಯಾವ ಪ್ರಯತ್ನವನ್ನು ಮಾಡಿದರೂ ಸಾಧಿಸ ಲಶಕ್ಯನಾದ ಅವನನ್ನು ಅವನ ಅನುಗ್ರಹದಿಂದಲೆ ಯಾವದೊಂದು ಶೋಕವಿಲ್ಲದೆ ಕಾಣುವನೆಂದು ಅವನ ಅನುಗ್ರಹೈಕ ಸ್ವಭಾವವು ಶ್ರುತಿ ಪುರಾಣಾದಿಗಳಲ್ಲಿ ಕಾಣಲ್ಪಡುವದಷ್ಟೆ. ॥ ೨೩೮ ॥

(೨೩೯ನೇ ನಾಮವು) ಪ್ರಸನ್ನಾತ್ಮಾ,

ಓಮ್॥ ಪ್ರಸನ್ನಾತ್ಮನೇನಮಃ.

(ಶಂ॥ ಭಾ) ರಜಸ್ತಮೋ ಗುಣಗಳಿಂದ ಕಲುಷಿತವಾಗದ ಅಂತಃಕರಣವುಳ್ಳವನೆಂತಲಾದರೂ; ಕಾರುಣ್ಯ ಸ್ವರೂಪನೆಂತಲಾದರೂ ತಿಳಿಯಬೇಕು. ಮತ್ತು ಪ್ರಸನ್ನಾತ್ಮನೆಂದರೆ ಕಾರುಣಿಕ ಸ್ವಭಾವನು; ಅವಾಪ್ತ ಸರ್ವಕಾಮನು ಎಂದರೆ ಸರ್ವೇಷ್ಟಾರ್ಥಗಳನ್ನು ಅಮೋಘವಾಗಿ ಹೊಂದಿದವನೆಂತಲೂ ತಿಳಿಯಬಹುದು.

(ವಿ॥ ಭಾ) ಅವನು ಅನುಗ್ರಹೈಕ ಸ್ವಭಾವನಾಗಿರುವುದಕ್ಕೆ ಕಾರಣವೇನೆಂದರೆ:- ಅದಕ್ಕಾಗಿ; ಪ್ರಸನ್ನಾತ್ಮಾ—ತನಿಗೆ ತಾನೆ ಸಕಲೇಷ್ಟಾರ್ಥಗಳನ್ನು ಹೊಂದಿದವನಾಗಿರುವುದರಿಂದ ರಾಗಾದಿ ದೋಷಗಳಿಂದ

ಕಲುಷಿತವಾಗದ ಮನಸ್ಸುಳ್ಳವನು. "ಅವಿಜಿಘತ್ಸೋಽಪಿಪಾಸ ಸ್ಸತ್ಯ ಕಾಮ ಸ್ಸತ್ಯ ಸಂಕಲ್ಪಃ" (ಛಾಂದೋ|| ೮|| ೧|| ೫) ಎಂದು ಇವನ ನನ್ನು ನಾಶರಹಿತನೆಂತಲೂ, ದಾಹವಿಲ್ಲದವನೆಂತಲೂ, ಸತ್ಯವಾದ ಕೋರಿ ಕೆಯುಳ್ಳವನೆಂತಲೂ, ಸತ್ಯ ಪ್ರತಿಜ್ಞನೆಂತಲೂ, ಶ್ರುತಿಯು ಹೇಳು ವುದು. ಅಪೂರ್ಣನಾದ ಕೃಪಣನಲ್ಲವೊ ಸಮಯದಲ್ಲಿ ಸೇರಲಾಗದ ವನು; ಇವನಂತವನಲ್ಲವು. ಸುಖಾರಾಧ್ಯನಾದಕಾರಣ ಪ್ರಸನ್ನಾತ್ಮನಾಗಿ ರುವನು. || ೨೭೯ ||

## (೨೮೦ನೇ ನಾಮವು) ವಿಸ್ವಸ್ಸೃಟ್,

### ಓಮ್|| ವಿಶ್ವಸ್ಸೃಜೇನಮಃ·

(ವಿ|| ಭಾ) ಗುಣ ದೋಷಗಳನ್ನು ನೋಡದೆ ದಾಕ್ಷಿಣ್ಯದಿಂದ ಪ್ರ ಪಂಚವನ್ನು ಸೃಷ್ಟಿಸುವಂತಹವನು. (ಶಂ|| ಮ) ವಿಶ್ವಧೃಕ್-ಸಮಸ್ತವ ನ್ನು ಆಕ್ರಮಿಸುವಂತಹ ಸಾಮರ್ಥ್ಯವುಳ್ಳವನು. || ೨೮೦ ||

## (೨೮೧ನೇ ನಾಮವು) ವಿಶ್ವಭುಗ್ವಿಭುಃ,

### ಓಮ್|| ವಿಶ್ವಭುಗ್ವಿಭವೇನಮಃ·

(ವಿ|| ಭಾ) ಆ ಪ್ರಕಾರವೆ ಯೆಲ್ಲೆಲ್ಲಿಯೂ ವ್ಯಾಪಿಸಿ ಸಮಸ್ತವ ನ್ನೂ ಭುಜಿಸುವಂ (ತಿನ್ನುವಂ) ತವನು. "ಸರ್ವಾಣಿ ರೂಪಾಣಿ ವಿಚಿ ತ್ಯಧೀರಃ || ನಾಮಾನಿಕೃತ್ವಾ ಽಭಿವದನ್ಯದಾಸ್ತೇ" (ಪು|| ಸೂ|| ೧೬) ಎಂಬ ಪ್ರಮಾಣವು ಸಕಲ ರೂಪಗಳನ್ನೂ ಸಂಕಲ್ಪಮಾತ್ರದಿಂದ ರಚಿಸಿ ನಿರ್ವಿಕಾರನಾಗಿಯೂ, ನಾಮಗಳನ್ನು ಮಾಡಿ ತಾ ನದರಲ್ಲಿ ಸಂಬಂಧಿಸದೆ ಬೇರೆ ವಿಧದಿಂದಿರುವನೆಂದು ಹೇಳುವುದು.

(ಶಂ|| ಮ) ವಿಶ್ವಭುಕ್-ವಿಭುಃ; ಬೇರೆ ಬೇರೆ ನಾಮಗಳಾಗಿರುವವು. ವಿಶ್ವವನ್ನು ಎಂದರೆ ಸಮಸ್ತವನ್ನೂ ಅನುಭವಿಸುವಂತವನು; ಅಥವಾ (ಮ) ರಕ್ಷಿಸುವಂತವನು "ವಿಶ್ವಭುಕ್" ಎನ್ನಲ್ಪಡುವನು. ವಿಭುಃ- (ಶಂ) "ನಿತ್ಯಂ ವಿಭುಂ" ಎಂಬ ಪ್ರಮಾಣಾನುಸಾರವಾಗಿ ಹಿರಣ್ಯ ಗರ್ಭಾದಿ ರೂಪದೊಡನೆ ನಾನಾವಿಧವಾಗಿ ಆಗುವಂತವನು. (ಮ) ವ್ಯಾ ಪಕನು. || ೨೮೧ ||

## (೨೮೨ನೇ ನಾಮವು) ಸತ್ಕರ್ತಾ,

ಓಮ್॥ ಸತ್ಕರ್ತ್ರೇನಮಃ.

(ಶಂ॥ ಭಾ) ಪೂಜಿಸುವಂತವನು. (ಮ) ಸತ್ಕಾರ್ಯವನ್ನು ಮಾಡುವಂತನು. (ವಿ॥ ಭಾ) ಇಂತಹ ಒಳ್ಳೇ ಶೀಲವುಳ್ಳವನಾಗಿರುವುದರಿಂದಲೆ ಸಾಧುಜನರನ್ನು ಯೆದರ್ಗೊಂಡು ಸತ್ಕರಿಸುವಂತವನು. "ಸಜ್ಜನ ಪ್ರತಿಪೂಜಕಃ" ಎಂದು ಶ್ರೀರಾಮಾಯಣದಲ್ಲಿಯೂ ಹೇಳಿರುವುದಷ್ಟೆ. ॥ ೨೮೨ ॥

## (೨೮೩ನೇ ನಾಮವು) ಸತ್ಕೃತಃ,

ಓಮ್॥ ಸತ್ಕೃತಾಯನಮಃ.

(ಶಂ॥ ಮ) ಪೂಜ್ಯರಾದವರಿಂದಲೂ ಕೂಡ ಪೂಜಿಸಲ್ಪಡುವಂತವನು. (ವಿ॥ ಭಾ) ಸಾಧುಗಳಿಂದ ಪೂಜಿಸಲ್ಪಡತಕ್ಕವನು. ಎಂದರೆ ಅವರುಗಳು ಶ್ರದ್ಧಾಪೂರ್ವಕವಾಗಿ ಅಲ್ಪವಾದದ್ದನ್ನು ಸಮರ್ಪಿಸಿದರೂ ತನ್ನ ಮಹಿಮಾನುಗುಣವಾಗಿ ಅದನ್ನು ಕುರಿತು ಅಧಿಕವಾಗಿ ಸಂತೋಷಿಸುವನೆಂದರ್ಥವು ಇದಕ್ಕೆ "ಆಕೋಶ್ಯೇಕಾಂತಿನಸ್ಸರ್ವಾ ನ್ಪ್ರೀಣಾತಿ ಭಗವಾನ್ಹರಿಃ । ವಿಧಿಪ್ರಯುಕ್ತಾಂ ಪೂಜಾಂಚ ಗೃಹ್ಣಾತಿ ಶಿರಸಾ ಸ್ವಯಂ ॥ ಶಬರ್ಯಾ ಪೂಜಿತಸ್ಸಮ್ಯಕ್ ॥ (ರಾಮಾ॥ ಚಾ॥ ೧೯॥ ೨೯) ಮಾಲಾಕಾರೇಣಪೂಜಿತಃ ॥ (ವಿ॥ ಪ್ರ ೫॥ ೧೯॥ ೨೯) ಇತ್ಯಾದಿ ಪ್ರಮಾಣಗಳು ಪರಮೈಕಾಂತಿಗಳಿಂದ ತಾನು ಪೂಜಿಸಲ್ಪಟ್ಟು ಅವರನ್ನು ಪ್ರೀತಿಸುವ ಸ್ವಭಾವವನ್ನೂ, ಅವರುಗಳ ಪೂಜೆಯನ್ನು ಇವನು ಶಿರಸಾವಹಿಸುವಂತಹ ಆದರವನ್ನೂ ತೋರಿಸುವುವು. ॥ ೨೮೩ ॥

## (೨೮೪ನೇ ನಾಮವು) ಸಾಧುಃ,

ಓಮ್॥ ಸಾಧವೇನಮಃ.

(ಶಂ॥ ಭಾ) ನ್ಯಾಯ ಪ್ರವೃತ್ತಿಯುಳ್ಳವನು ಅಥವಾ ಸಾಧ್ಯ (ಫಲ) ಮಾತ್ರ ಸಾಧಕನು. (ವಿ॥ ಭಾ) ಅನನ್ಯ ಶರಣರಾದ ತನ್ನ ಭಕ್ತರಿಗೆ

ಅಪೇಕ್ಷಿತವಾದ ಕಾಲದಲ್ಲಿ ದೂತ್ಯ ಸಾರಥ್ಯ ಪರ್ಯಂತವಾದ ಕೆಲಸಗಳನ್ನು ಮಾಡುವಂತವನು. ‖ ೨೩೪ ‖

## (೨೩೫ನೇ ನಾಮವು) ಜಹ್ನುಃ,

### ಓಮ್‖ ಜಹ್ನವೇನಮಃ.

(ಶಂ‖ ಭಾ) ಪ್ರಳಯಕಾಲದಲ್ಲಿ ಜನರನ್ನು ಮರೆಮಾಡುವನು ಅಥವಾ ಭಕ್ತರಿಗೆ ಪರಮಪದವನ್ನು ಹೊಂದಿಸುವಂತವನು. (ವಿ‖ ಭಾ) ತನ್ನಲ್ಲಿ ಭಕ್ತಿಶೂನ್ಯರಾದವರಿಗೆ ತನ್ನ ಮಹಿಮೆಯನ್ನು ತೋರಿಸದವನು. ಇದಕ್ಕೆ "ಚಕ್ರಾಂತ ದ್ವಾಸುದೇವಸ್ಯ ಮಾಯಯಾ ವರ್ತತೇವಿಭೋಃ | ಸಾಪಹ್ನುವಂ ಪಾಂಡವೇಷು ಇತಿರಾಜಸು ಸತ್ತಮ ‖" ಎಂಬ ಪ್ರಮಾಣವು ಅತಿ ವಿಚಿತ್ರವಾದ ಶ್ರೀವಾಸುದೇವನ ಚಕ್ರದಿಂದ ಮೋಹಿತರಾಗಿ ಭಕ್ತಿ ಶೂನ್ಯರು ಭಗವನ್ಮಹಿಮೆಯನ್ನು ಕಾಣಲಾರರೆಂಬ ಅರ್ಥವನ್ನು ಬೋಧಿಸುವುದು ‖ ೨೩೫ ‖

## (೨೩೬ನೇ ನಾಮವು) ನಾರಾಯಣಃ,

### ಓಮ್‖ ನಾರಾಯಣಾಯನಮಃ.

(ಶಂ‖ ಭಾ) ನರನೆಂದರೆ ಆತ್ಮನು. ಅಂತಹ ಆತ್ಮದ ದಶೆಯಿಂದ ಆಕಾಶಾದಿ ಭೂತಗಳು ಹುಟ್ಟಿರುವುವು ; ಅಂತಹ ಭೂತಗಳಲ್ಲಿ ಕಾರಣ ರೂಪನಾಗಿ ವ್ಯಾಪಿಸಿರುವುದರಿಂದ ಅವು ಇವನಿಗೆ ವಾಸಸ್ಥಾನವಾಗಿರುವುವರಿಂದ "ನಾರಾಯಣಃ" ಎನ್ನಲ್ಪಡುವನು. ಇದಕ್ಕೆ "ಯಚ್ಚ ಕಿಂಚಿಜ್ಜಗತ್ಸರ್ವಂ ದೃಶ್ಯತೆ ಶ್ರೂಯತೆಪಿವಾ | ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯನಾರಾಯಣಸ್ಸ್ಥಿತಃ" ಎಂಬೀ (ಪ್ರ‖ ಸೂ) ವಚನವಿರುವುದು. (ಶಂ‖ ಮ) "ನರಾಜ್ಜಾತಾನಿ ತತ್ವಾನಿ ನಾರಾಣೀತಿತತೋವಿದುಃ | ತಾನ್ಯೇವಚಾಯನಂತಸ್ಯ ತೇನ ನಾರಾಯಣಸ್ಸ್ಮೃತಃ" ಎಂಬ ಪ್ರಮಾಣಾನುಸಾರವಾಗಿ "ನರನಿಂದ ಸಕಲ ತತ್ವಗಳೂ ಹುಟ್ಟಿರುವು ವಾದುದರಿಂದ ಸಕಲ ಭೂತಗಳು ನಾರ ಶಬ್ದದಿಂದ ಹೇಳಲ್ಪಡುವುವು ; ಅವುಗಳೆ ಇವನಿಗೆ ವಾಸಸ್ಥಾನವಾಗಿರುವಕಾರಣ 'ನಾರಾಯಣ' ನೆನ್ನಲ್ಪಡುವನು.

" ನಾರಾಣಾ ಮಯನಂ ಯಸ್ಮಾತ್ " ಎಂಬ ಪ್ರಮಾಣಾನುಸಾರವಾಗಿ ಸರ್ವ ಜೀವರಿಗೂ ಆಧಾರಭೂತನಾಗಿರುವುದರಿಂದಲಾದರೂ ; " ಆಪೋ ನಾರಾ ಇತಿಪ್ರೋಕ್ತಾಃ " ಎಂಬ ಮನುಸ್ಮೃತಿ ವಚನವನ್ನನುಸರಿಸಿ ಜಲವನ್ನೇ ನಿವಾಸವಾಗಿ ವುಳ್ಳವನೆಂತಲಾದರೂ ; " ನಾರಾಯಣಾಯ ನಮ ಇತ್ಯಮುಮೇವ ಮಂತ್ರಂ ಸಂಸಾರ ಘೋರವಿಷ ಸಂಹರಣಾಯ ಸತ್ಯಂ । ಶೃಣ್ವಂತು ಭವ್ಯ ಮತಯೋ ಯತಯೋ ಸ್ತರಾಗಾ ಉಚ್ಚೈಸ್ತರಾ ಮುಪದಿಶಾಮ್ಯಹ ಮೂರ್ಧ್ವಬಾಹುಃ " ಎಂಬೀ ನೃಸಿಂಹ ಪುರಾಣ ವಚನಾನುಸಾರವಾಗಿ ಶ್ರೀಮನ್ನಾರಾಯಣಮಂತ್ರವೇ ಸರ್ವ ಶ್ರೇಷ್ಠವಾದುದರಿಂದಲಾದರೂ ; ನಾರಾಯಣಃ ಎನ್ನಲ್ಪಡುವನೆಂದು ಇವನ ಜಗದ್ವ್ಯಾಪಕತ್ವವೂ ಜಗತ್ಕಾರಣತ್ವವೂ ಸರ್ವಾಧಾರತ್ವವೂ ಸರ್ವೋಪಾಸ್ಯತ್ವವೂ ಸರ್ವ ಫಲಪ್ರದತ್ವವೂ ಹೇಳಿಂದಂತೆ ಆಗುವುದು. (ವಿ॥ ಭಾ) ಈ ಪ್ರಕಾರವಾಗಿ ಸಮಸ್ತ ವಿಶೇಷಗಳಿಂದಲೂ ವಿಶೇಷಿಸಿ ಸಕಲೋಪನಿಷತ್ತುಗಳಲ್ಲಿ ಪ್ರತಿಯೊಂದು ಶಾಖೆಯಲ್ಲಿಯೂ ಓದಲ್ಪಡುವ ಪರವಸ್ತುವಿನ ಅಸಾಧಾರಣವಾದ ದಿವ್ಯ ನಾಮವನ್ನು ಇನ್ನು ಮುಂಚೆ ಹೇಳುತ್ತಾರೆ. " ಯಚ್ಚಕಿಂಚಿಜ್ಜಗತ್ಯಸ್ಮಿನ್ " (ಪು॥ ಸೂ) ಎಂಬ ಶ್ರುತಿಯೇ ಈ ನಾಮದ ಅರ್ಥವನ್ನು ಹೇಳುವುದು. ಇದಕ್ಕೆ ಅನೇಕಾರ್ಥಗಳು ರಹಸ್ಯ ಶಾಸ್ತ್ರದಲ್ಲಿ ಹೇಳಲ್ಪಡುವುದರಿಂದ ಅವು ರಹಸ್ಯವಾಗಿಯೇ ಗ್ರಹಿಸಲ್ಪಡಬೇಕಾದ ಕಾರಣ ಇಲ್ಲಿ ವಿವರಿಸುವುದಿಲ್ಲವು. ॥೨೪೬॥

## (೨೪೭ನೇ ನಾಮವು) ನರಃ,

## ಓಮ್॥ ನರಾಯನಮಃ.

(ಶಂ॥ ಭಾ) " ನಯತೀತಿ ನರಃಪ್ರೋಕ್ತಃ ಪರಮಾತ್ಮಾ ಸನಾತನಃ " ಎಂಬೀ ಪ್ರಮಾಣಾನುಸಾರವಾಗಿ (ಸದ್ಗತಿಯನ್ನು) ಹೊಂದಿಸುತ್ತಾನಾದುದರಿಂದ ಸನಾತನ ವಸ್ತುವಾದ ಪರಮಾತ್ಮನು ನರನೆನ್ನಲ್ಪಡುವನೆಂಬ ಅರ್ಥದಮೇಲೆ ಹೊಂದಿಸುವಂತವನು " ನರಃ " ಎನ್ನಲ್ಪಡುವನು. (ವಿ॥ ಭಾ) ಶಾಶ್ವತವಾದ ಚೇತನಾ ಚೇತನ ವೆನ್ನಲ್ಪಡುವ ವಿಭೂತಿಯುಳ್ಳವನು " ನರ " ನೆಂದು ಹಿಂದಿನ ನಾಮವನ್ನೇ ಗೂಢವಾಗಿ ವಿವರಿಸುವರು. ನಾಶವಿಲ್ಲದವನೆಂದು ಇದರ ಅರ್ಥವು. ॥ ೨೪೭ ॥

ಈ (೨೬)ನೇ ಶ್ಲೋಕದಲ್ಲಿರುವ (೧೦) ನಾಮಗಳಿಗೂ " ಪ್ರಸಾದ ಪರಮತ್ವಾಚ್ಚ " ಸುಪ್ರಸಾದಃ " (೨೩೯) ಪ್ರಕೀರ್ತಿತಃ ‖ ಅವಾಪ್ತ ಸರ್ವಕಾಮತ್ವಾ ದ್ಭಗಾದಿ ರಹಿತಂಮನಃ । ಯಸ್ಯಾಸ್ತಿಸ " ಪ್ರಸನ್ನಾತ್ಮಾ " (೨೩೯) ಚಿತ್ತತುಷ್ಟಿ ಪ್ರದೋಮನುಃ ‖ ವಿಶ್ವಂಜಗತ್ಸೃಜತಿಯೋ " ವಿಶ್ವಸೃ " (೨೪೦) ಟ್ಸಪ್ರಕೀರ್ತಿತಃ । ತತ್ಸೃಷ್ಟಂ ವ್ಯಾಪ್ಯವೈ ಭುಂಜನ್ನಾಪಾಲಯನ್ " ವಿಶ್ವಭುಗ್ವಿಭುಃ " (೨೪೧) ‖ " ಸತ್ಕರ್ತಾ " (೨೪೨) ಯಸ್ಸವಿಜ್ಞೇಯ ಸ್ಸಜ್ಜನ ಪ್ರತಿಪೂಜಕಃ । ಅರ್ಚಾದಿಭಿ ಸ್ಸಜ್ಜನೈರ್ಯಃ ಪೂಜಿತ " ಸ್ಸತ್ಕೃತಃ " (೨೪೩) ಸ್ಮೃತಃ ‖ ಸೇವಾಂ ಸಾರಥ್ಯ ದೂತ್ಯಾದ್ಯಾಂ " ಸಾಧುಃ " (೨೪೪) ಸಾಧಯತೀತಿಯಃ । ಅಭಕ್ತೇಷ್ವಾತ್ಮ ಮಹಾತ್ಮ್ಯ ನಿನ್ಯುಂತೆ " ರ್ಜನ್ಹು " (೨೪೫) ರುಚ್ಯತೆ ‖ ಅನ್ತರ್ಬಹಿಶ್ಚ ತತ್ಸರ್ವಂವ್ಯಾ " ನಾರಾಯಣಃ " (೨೪೬) ಸ್ಮೃತಃ । ರಃ ಕ್ಷಯೋಯಸ್ಯ ನಹ್ಯಸ್ತಿಸ " ನರ " (೨೪೭) ಸ್ಸಮುದಾಹೃತಃ " ಎಂಬೀ ರೀತಿಯಿಂದ ವಿವೃತಿಯನ್ನು ಕಾಣಬಹುದು.

ಮೂ‖ ಅಸಂಖ್ಯೇಯೋಽಪ್ರಮೇಯಾತ್ಮಾ
ವಿಶಿಷ್ಟ ಶ್ಶಿಷ್ಟಕೃ ಚ್ಛುಚಿಃ । ಸಿದ್ಧಾರ್ಥ ಸ್ಸಿದ್ಧ
ಸಂಕಲ್ಪಃ ಸ್ಸಿದ್ಧಿದ ಸಿದ್ಧಿಸಾಧನಃ ‖೨೭‖

## (೨೪೮ನೇ ನಾಮವು) ಅಸಂಖ್ಯೇಯಃ.

ಓಮ್‖ ಅಸಂಖ್ಯೇಯಾಯನಮಃ.

(ಶಂ‖ ಮ) ಯಾವನ ನಾಮರೂಪ ಕರ್ಮ ಗುಣಗಳು ಸಂಖ್ಯಾತೀತಗಳಾಗಿರುವುವೋ ಅವನು " ಅಸಂಖ್ಯೇಯಃ " ಎನ್ನಲ್ಪಡುವನು. (ವಿ‖ ಭಾ) ಯಾವ ಪರಮ ಪುರುಷನ ಇಂತಹ ಶಾಶ್ವತವಾದ ಚೇತನಾಚೇತನ ರೂಪಗಳಾಗಿರುವ ವಿಭೂತಿ ಸಮುದಾಯವು ಅಸಂಖ್ಯೇಯಗಳಾಗಿರುವುವೋ ಅವನು " ಅಸಂಖ್ಯೇಯಃ " ಎನ್ನಲ್ಪಡುವನು ‖ ೨೪೮ ‖

## (೨೪೯ನೇ ನಾಮವು) ಅಪ್ರಮೇಯಾತ್ಮಾ.

ಓಮ್‖ ಅಪ್ರಮೇಯಾತ್ಮನೇನಮಃ.

(ಶಂ|| ಭಾ) ಇಷ್ಟೇ ಎಂಬದಾಗಿ ಪರಿಮಿತಿರಹಿತವಾದ ರೂಪವುಳ್ಳವನು. (ವಿ|| ಭಾ) ಈ ರೀತಿಯಾಗಿ ಲೆಕ್ಕವಿಲ್ಲದ ಚೇತನಾ ಚೇತನಗಳೊಂದೊಂದರಲ್ಲಿಯೂ ಅಳವಿಲ್ಲದೆ ವ್ಯಾಪಿಸಿರುವುದರಿಂದ ಅಪರಿಚ್ಛೇದ್ಯ ಎಂದರ ಅಳವಿಡಲ್ಪಡದ ಸ್ವರೂಪವುಳ್ಳವನು. (ಮ) "ವೃಷಾಕಪಿರಮೇಯಾತ್ಮಾ || ಶ್ರೀಮಾನಮೇಯಾತ್ಮಾ" ಎಂಬ ಸ್ಥಲಗಳಲ್ಲಿರುವ "ಅಮೇಯಾತ್ಮಾ" ಎಂಬ ನಾಮಕ್ಕಿಂತಲೂ ಇಲ್ಲಿ 'ಪ್ರ' ಎಂಬ ಶಬ್ದವು ಅಧಿಕವಾಗಿರುವದರಿಂದ ನಾಮಭೇದವು. || ೨೪೯ ||

## (೨೫೦ನೇ ನಾಮವು) ವಿಶಿಷ್ಟಃ,

## ಓಮ್|| ವಿಶಿಷ್ಟಾಯನಮಃ.

(ಶಂ|| ಭಾ) "ವಿಶ್ವತಃ ಪರಮಂನಿತ್ಯಂ" (ಪ್ರ|| ಸೂ) ಎಂಬ ಶ್ರುತಿ ಪ್ರಮಾಣಾನುಸಾರವಾಗಿ ಸಮಸ್ತವನ್ನು ಅತಿಕ್ರಮಿಸಿದವನು ಎಂದರೆ ಸರ್ವ ಶ್ರೇಷ್ಠನಾದವನು. (ಮ) ಸರ್ವಾಧಿಕನು. (ವಿ|| ಭಾ) ಅವುಗಳನ್ನು ಅಪೇಕ್ಷಿಸದೆ ತಾನಾಗಿಯೇ ವಿಲಕ್ಷಣನಾಗಿರುವಂತವನು. || ೨೫೦ ||

## (೨೫೧ನೇ ನಾಮವು) ಶಿಷ್ಟಕೃತ್,

## ಓಮ್|| ಶಿಷ್ಟಕೃತೇನಮಃ

(ಶಂ|| ಮ) ಶಾಸನ ಮಾಡತಕ್ಕವನು. (ಶಂ) ಶಿಷ್ಟರನ್ನು ರಕ್ಷಿಸುವಂತವನು. ಅಥವಾ ಆಹಾರಗಳಿಂದ ಕಾಷ್ಠಗಳಂತೆ ಮಾಡುವಂತವನು. || ೨೫೧ ||

## (೨೫೨ನೇ ನಾಮವು) ಶುಚಿಃ,

## ಓಮ್|| ಶುಚಯೇನಮಃ.

(ಶಂ|| ಭಾ) ನಿರಂಜನನು. ಎಂದರೇ ಯಾವದರಲ್ಲಿಯೂ ಲೇಪಿಸದವನು. (ಮ) ಪರಿಶುದ್ಧನು. "ಶುಚಿರೂರ್ಜಿತಃ" ಎಂಬ ಸ್ಥಲದಲ್ಲಿರುವ ಶುಚಿ ಶಬ್ದಕ್ಕೆ ಪಾಪಿಗಳಿಗೆ ಶೋಕವನ್ನುಂಟುಮಾಡತಕ್ಕವನೆಂಬ ಅರ್ಥಭೇದವಿರುವದರಿಂದ ಇಲ್ಲಿ ಪುನರುಕ್ತಿ ದೋಷವಿಲ್ಲವು. (ವಿ|| ಭಾ) ಶಿಷ್ಟ ಕೃಚ್ಛುಚಿಃ, ಹಿಂದಿನ ನಾಮದಲ್ಲಿ ಹೇಳಿರುವಂತೆ ತಾನು ಮಾತ್ರವೇ ವಿಲಕ್ಷಣವಾಗಿರುವನಲ್ಲದೆ ತನ್ನ ಸಂಬಂಧದಿಂದ ಅವುಗಳನ್ನು (ಚೇತನಾ ಚೇತನವನ್ನು)

ಕೊಡತಕ್ಕನಿಗೆ ಯೋಗ್ಯವಾಗಿರುವಂತೆ ಕಲ್ಯಾಣ ವಸ್ತುಗಳನ್ನಾಗಿ ಮಾಡುವ ಮಹಾಕಾಂತಿ ವಿಶೇಷವುಳ್ಳವನು. ‖ ೨೫೨ ‖

(೨೫೩ನೇ ನಾಮವು) ಸಿದ್ಧಾರ್ಥಃ,

ಓಮ್‖ ಸಿದ್ಧಾರ್ಥಾಯನಮಃ.

(ಶಂ‖ ಮ) "ಸತ್ಯಕಾಮಃ" (ಛಾಂದೊ) ಎಂಬ ಶ್ರುತ್ಯನುಸಾರವಾಗಿ ಅಪೇಕ್ಷಿತ ಫಲವು ಯಾವನಿಂದ ಸಿದ್ಧವಾಗುವುದೋ ಅವನು "ಸಿದ್ಧಾರ್ಥಃ" ಎನ್ನಲ್ಪಡುವನು. (ವಿ‖ ಭಾ) ಸ್ವತಏವ ಅವಾಪ್ತ ಸಮಸ್ತ ಕಾಮನು. ಎಂದರೆ ಹೊಂದಲ್ಪಟ್ಟ ಸರ್ವೇಷ್ಟಾರ್ಥಗಳುಳ್ಳವನೆಂದರ್ಥವು. ‖೨೫೩‖

(೨೫೪ನೇ ನಾಮವು) ಸಿದ್ಧಸಂಕಲ್ಪಃ,

ಓಮ್‖ ಸಿದ್ಧಸಂಕಲ್ಪಾಯನಮಃ.

(ಶಂ‖ ಮ‖ ವಿ) ಸತ್ಯವಾದ ಸಂಕಲ್ಪವುಳ್ಳವನು ಎಂದರೆ ನೆರವೇರಲ್ಪಟ್ಟಸಂಕಲ್ಪವುಳ್ಳವನು (ವಿ) ಎಂದರೆ ಸ್ವಾತಂತ್ರ್ಯ ಪ್ರಯುಕ್ತವಾದ ಸ್ವೇಚ್ಛೆಯಿಂದ ಸಾಧಿಸಲ್ಪಟ್ಟ ಸರ್ವಾರ್ಥವುಳ್ಳವನೆಂದರ್ಥವು. "ಸತ್ಯಕಾಮ ಸ್ಸತ್ಯ ಸಂಕಲ್ಪಃ" (ಛಾಂ‖ ೮‖ ೧೫‖ ೧೦) ಎಂಬದಾಗಿ ಈ ಯರಡು ನಾಮಗಳ ಅರ್ಥವನ್ನೂ ಶ್ರುತಿಯು ಹೇಳುವದು. ‖ ೨೫೪ ‖

(೨೫೫ನೇ ನಾಮವು) ಸಿದ್ಧಿದಃ,

ಓಮ್‖ ಸಿದ್ಧಿದಾಯನಮಃ,

(ಶಂ‖ ವಿ) ಸಿದ್ಧಿಯನ್ನಪೇಕ್ಷಿಸುವ ಸಾಧಕರಿಗೆ ಅವರವರ ಅಧಿಕಾರಾನುಗುಣವಾಗಿ ಅಣಿಮಾ ಮಹಿಮಾ ಮೊದಲಾದ ಸಿದ್ಧಿಯನ್ನು ಕೊಡುವಂತವನು. ‖ ೨೫೫ ‖

(೨೫೬ನೇ ನಾಮವು) ಸಿದ್ಧಿಸಾಧನಃ,

ಓಮ್‖ ಸಿದ್ಧಿಸಾಧನಃ.

(ಶಂ‖ ಭಾ) ಕ್ರಿಯೆಗಳಿಗೆ ಸಾಧಕನಾಗಿರುವನು (ವಿ‖ ಭಾ) ಸಿದ್ಧಿಯಂತೆ ಪ್ರಿಯವಾಗಿ ತೋರುತಲಿರುವ ಸಾಧನವುಳ್ಳವನು. ಎಂದರೆ

ಲೋಕದಲ್ಲಿ ಒಂದು ಸುಖವನ್ನು ಹೊಂದುವದಕ್ಕಾಗಿ ಮಾಡುವ ಸಾಧನವು ಅದರ ಅನುಷ್ಠಾನ ಕಾಲದಲ್ಲಿ ಕಷ್ಟವಾಗಿ ಕಾಣುವದಷ್ಟೆ. ಆದರೆ ಇದು ಆರೀತಿಯಾಗಿಲ್ಲವು. "ಯೇತ್ವು ಧರ್ಮ್ಯಾಮೃತಮಿದಂ" (ಗೀ|| ೧೨|| ೨೦) ಎಂಬಂತೆ ಅವನನ್ನು ಹೊಂದುವದಕ್ಕಾಗಿ ಮಾಡುವ ಸಾಧನವು ಕೂಡ ಅವನ ಪ್ರಾಪ್ತಿಯು ಹೇಗಾದರೆ ಅತ್ಯಂತ ಪ್ರಿಯವೋ ಅದರಂತೆ ಅತ್ಯಂತ ಪ್ರಿಯವಾಗಿರುವುದರಿಂದ ಸಿದ್ಧಿಯಂತೆ ಪ್ರಿಯವಾದ ಸಾಧನವುಳ್ಳವನೆಂದು ಹೇಳಿತೆಂದರ್ಥವು. (ವ) ಜಪಾದಿಗಳ ಫಲವನ್ನು ಸಾಧಿಸಿ ಕೊಡುವಂತವನು. ||೨೬||

ಈ (೨೭)ನೇ ಶ್ಲೋಕದಲ್ಲಿ ಹೇಳಲ್ಪಟ್ಟಿರುವ (೭) ನಾಮಗಳಿಗೂ "ಅಗಣ್ಯ ನರಸಂಖ್ಯೋಯಸ್ಸೋ "ಽಸಂಖ್ಯೇಯಃ" (೨೪೮) ಪ್ರಕೀರ್ತಿತಃ | ಏಕೈಕಶೋ "ಽಪ್ರಮೇಯಾತ್ಮಾ" (೨೪೯) ಅಸಂಖ್ಯಾತಾ ವಿಭೂತಯಃ || ತಾಸಾಂ ಚೈವಾಪ್ರಮೇಯಾತ್ಮಾ ವ್ಯಾಪನಾದ್ಬಹಿರನ್ತತಃ | ವಿಲಕ್ಷಣೋ "ವಿಶಿಷ್ಟ" (೨೫೦) ಯಸ್ಸರ್ವಾಂಸ್ತಾನನಪೇಕ್ಷ್ಯಸಃ || ಸ್ವಾನುಕೂಲ ಶುಭಾನ್ಕುರ್ವನ್ ಸ್ವಸಂಬಂಧೇನ ತಾ ನ್ಸ್ವಯಂ | ಅನಾಧೇಯ ಮಹಾದೀಪ್ತಿ "ಶ್ಶಿಷ್ಟಕೃ-ಚ್ಛುಚಿ" (೨೫೧-೨) ರುಚ್ಯತೇ|| ಸಿದ್ಧಾಃ ಪ್ರಾಪ್ತಾಯಸ್ಯ ಸರ್ವೇಹ್ಯರ್ಥಾ "ಸ್ಸಿದ್ಧಾರ್ಥ"(೨೫೩) ಈರಿತಃ | ಅವಾಪ್ತ ಸರ್ವಕಾಮೋವಾ 'ಸಿದ್ಧಾರ್ಥ' ಇತಿ ಕಥ್ಯತೇ || ಸತ್ಯಸಂಕಲ್ಪ ವತ್ತ್ವಾಚ್ಚ "ಸಿದ್ಧಸಂಕಲ್ಪ" (೨೫೪) ಈರಿತಃ | "ಸಿದ್ಧಿದೋ" (೨೫೫) ಹ್ಯಣಿಮಾದ್ಯಷ್ಟ ಸಿದ್ಧೇರ್ದಃ ಕಾಯದಾನತಃ || ತತ್ಸಿದ್ಧೇಶ್ಚಾಪಿ ಹೇತುತ್ವಾ "ತ್ಸಿದ್ಧಿಸಾಧನ" (೨೫೬) ಈರಿತಃ" ಎಂಬೀ ರೀತಿಯಿಂದ ವಿವೃತಿಯನ್ನು ಕಾಣಬಹುದು.

ಮೂ|| ವೃಷಾಹೀ ವೃಷಭೋ ವಿಷ್ಣು ರ್ವೃಷ
ಪರ್ವಾ ವೃಷೋದರಃ | ವರ್ಧನೋ ವರ್ಧಮಾನಶ್ಚ
ವಿವಿಕ್ತ ಶ್ಶ್ರುತಿಸಾಗರಃ ||೨೮||

(೨೫೭ನೇ ನಾಮವು) ವೃಷಾಹೀ,

ಓಮ್|| ವೃಷಾಹಿಣೇನಮಃ.

(ಶಂ॥ ಭಾ) ವೃಷ ಶಬ್ದದಿಂದ ಧರ್ಮವು ಬೋಧಿಸಲ್ಪಡುವದು. ಅಂತಹ ಧರ್ಮವನ್ನೇ ಪ್ರಕಾಶ ಸಾಧರ್ಮ್ಯದಿಂದ ಯಜ್ಞವಿಶೇಷವಾಗಿವುಳ್ಳವನು. (ವಿ॥ ಮ) ಧರ್ಮವಾದ ದಿನವುಳ್ಳವನು ; ಎಂದರೆ ಇವನನ್ನು ಹೊಂದುವ ಮೊದಲನೆ ದಿನವು ಸಮಸ್ತವಾದ ಮಂಗಳಕ್ಕೂ ಅಂಕುರಾರ್ಪಣಮಾಡುವ ದಿವಸದಂತೆ ಧರ್ಮರೂಪವಾಗಿರುವದೆಂದರ್ಥವು. "ಅದ್ಯಮೇ ಸಫಲಂ ಜನ್ಮ ಸುಪ್ರಭಾತಾಚಮೇನಿಶಾ | ಯದುನ್ನಿದ್ರಾಬ್ಜ ಪತ್ರಾಕ್ಷಂ ವಿಷ್ಣೋ ರ್ದೃಕ್ಷ್ಯಾಮ್ಯಹಂ ಮುಖಂ " (ವಿ॥ ಪು॥ ೫॥ ೧೭॥ ೭) ತಾನಿಶಾಸ್ತೇಚ ದಿವಸಾಃ " ಇತ್ಯಾದಿ ಪ್ರಮಾಣಗಳು ಈ ಅರ್ಥವನ್ನು ಬೋಧಿಸುವುವು. ॥೨೫೭॥

## (೨೫೮ನೇ ನಾಮವು) ವೃಷಭಃ,

### ಓಮ್॥ ವೃಷಭಾಯನಮಃ.

(ಶಂ॥ ಮ) ಭಕ್ತಾಭೀಷ್ಟಪ್ರದಾಯಕನು. (ವಿ॥ ಭಾ) ಈ ಪ್ರಕಾರವಾಗಿ ತನ್ನನ್ನು ಶರಣಹೊಂದುವಂತಹ ಸಂಸಾರಿಗಳ ತಾಪಗಳೆಲ್ಲವೂ ತೀರುವಂತೆ ವರ್ಷಿಸುವಂತವನು. ॥೨೫೮॥

## (೨೫೯ನೇ ನಾಮವು) ವಿಷ್ಣುಃ,

### ಓಮ್॥ ವಿಷ್ಣವೇನಮಃ.

(ಶಂ॥ ಭಾ) ಸಮಸ್ತವನ್ನು ಆಕ್ರಮಿಸುವಂತವನು. (ವಿ॥ ಭಾ) ಈ ರೀತಿಯಾಗಿ ವರ್ಷಿಸಿಕೊಂಡೆ ವ್ಯಾಪಿಸಿಕೊಂಡಿರುವಂತವನು ; ಎಂದರೆ ಪ್ರಾಣಿಗಳಿಗೆ ಯಾವ ಯಾವ ಕಾಲದಲ್ಲಿ ಯಾವಯಾವ ಅಪೇಕ್ಷಿತಗಳಿರುವುವೊ ಅವುಗಳನ್ನು ಅಪೇಕ್ಷಿಸಿದ ಕ್ಷಣದಲ್ಲಿಯೇ ಕೊಟ್ಟುಕೊಂಡು ಸದಾ ಸಂಗಡಲೆ ಇರುವಂತವನು. "ನತದಸ್ತಿವಿನಾಯತ್ಸ್ಯಾನ್ಮಯಾಭೂತಂ ಚರಾಚರಂ " ಎಂಬದಾಗಿ ಗೀತೆಯಲ್ಲಿ ನನ್ನನ್ನು ವಿನಾ ಧರಿಸುವಂತಹ ಭೂತವು ಯಾವದೂ ಇಲ್ಲವೆಂದು (೧೦॥ ೩೯) ಹೇಳಿರುತ್ತಾರೆ. (ಮ) ವಿಶೇಷವಾದ ಬಲಪ್ರಾಣಗಳಿಂದ ಕೂಡಿದವನು ; ಭಕ್ತಾಭೀಷ್ಟವನ್ನು ವಿಶೇಷವಾಗಿ ಕೊಡುವಂತವನು; ಅಥವಾ, ವಿಶೇಷವಾಗಿ ಫಲವನ್ನು ಕೊಡುವಂತವನು. ॥೨೫೯॥

## (೨೬೦ನೇ ನಾಮವು) ವೃಷಪರ್ವಾ,

ಓಮ್॥ ವೃಷಪರ್ವಣೇನಮಃ.

(ಶಂ॥ ಭಾ) ಪರಂಧಾಮವನ್ನು ಹೊಂದಬೇಕೆಂದಿಚ್ಛೈಯಿಸುತಲಿರುವ ಮುಮುಕ್ಷುಗಳಿಗೆ ಸೋಪಾನಪರ್ವಗಳನ್ನುಂಟು ಮಾಡುವಂತವನು "ವೃಷಪರ್ವಾ" ಎನ್ನಲ್ಪಡುವನು. (ವಿ॥ ಮ) ಧರ್ಮಕ್ಕೆ ಸೋಪಾನದಂತೆ ಇರುವಂತವನು. (ವಿ) ವೃಷಾಃ–ವರ್ಣಾಶ್ರಮ ಧರ್ಮಗಳು, ಅವುಗಳೇ ಯಾವ ತನ್ನನ್ನು ಹೊಂದಿಸುವ ಮಾರ್ಗಕ್ಕೆ ಸೋಪಾನ ಪರ್ವಗಳಂತೆ ಇರುವುವೊ ಅವನು ವೃಷಪರ್ವಾ. ॥೨೬೦॥

## (೨೬೧ನೇ ನಾಮವು) ವೃಷೋದರಃ,

ಓಮ್॥ ವೃಷೋದರಾಯನಮಃ.

(ಶಂ॥ ಮ) ಪ್ರಜೆಗಳನ್ನು ವರ್ಷಿಸುವಂತಹ ಹೊಟ್ಟೆಯುಳ್ಳವನು. (ವಿ॥ ಭಾ) ಆರಾಧಕರು ತಮ್ಮಗಳಿಗೆ ಪ್ರಾಪ್ತವಾದ ಹವಿಸ್ಸೇ ಮೊದಲಾದವುಗಳನ್ನು ಸ್ವೀಕರಿಸುವುದರಿಂದಲಾದರೂ; ಸಮಸ್ತರಾದ ಆರ್ತಜನರಿಗೆ ಆಸ್ಪದವಾಗಿರುವುದರಿಂದಲಾದರೂ; ಅತ್ಯಂತ ಧಾರ್ಮಿಕವಾದ ಹೊಟ್ಟೆಯುಳ್ಳವನು "ವೃಷೋದರಃ" ಎನ್ನಲ್ಪಡುವನು. ॥೨೬೧॥

## (೨೬೨ನೇ ನಾಮವು) ವರ್ಧನಃ,

ಓಮ್॥ ವರ್ಧನಾಯನಮಃ.

(ಶಂ॥ ಮ) ವೃದ್ಧಿಹೊಂದಿಸುವಂತವನು. (ವಿ॥ ಭಾ) ತನ್ನಭಕ್ತರನ್ನು ತಾಯಿಯಂತೆ ಉದರದಲ್ಲಿಟ್ಟು ವೃದ್ಧಿಪಡಿಸುವಂತವನು. ॥೨೬೨॥

## (೨೬೩ನೇ ನಾಮವು) ವರ್ಧಮಾನಃ,

ಓಮ್॥ ವರ್ಧಮಾನಾಯನಮಃ.

[illegible] ಮ) ಪ್ರಪಂಚ ರೂಪದಿಂದ ವೃದ್ಧಿಹೊಂದುವಂತವನು. (ವಿ॥ ಭ [illegible] ಗಳನ್ನು ವೃದ್ಧಿಪಡಿಸಿ ತಾನೂ ವೃದ್ಧಿಹೊಂದುವಂತ

ವನು. ಈ ಪ್ರಕಾರಗಳಿಂದ ಅಳವಿಡಲಾಗದ ಸಮೃದ್ಧಿಯುಳ್ಳವನೆಂತಲೂ ಹೇಳಬಹುದು. ‖೨೬೩‖

## (೨೬೪ನೇ ನಾಮವು) ವಿವಿಕ್ತಃ,
## ಓಮ್‖ ವಿವಿಕ್ತಾಯನಮಃ.

(ಶಂ‖ ಭಾ) ಈ ರೀತಿಯಾಗಿ ವೃದ್ಧಿಹೊಂದುತಲಿದ್ದರೂ ಏಕಾಂತನಾಗಿಯೇ (ವಿವಿಕ್ತನಾಗಿಯೇ) ಇರುವಂತವನು. (ವಿ‖ ಭಾ) ಈ ರೀತಿಯಾಗಿ ಲೋಕಾತೀತವಾದ ವೃತ್ತಾಂತವುಳ್ಳವನಾದುದರಿಂದ ಏಕಾಂತನಾದವನು. (ಮ) ಸರ್ವಭೂತಗಳಲ್ಲಿ ತಾನು ಇದ್ದರೂ ಅವುಗಳಿಗಿಂತಲೂ ಭಿನ್ನನಾಗಿಯೇ ಇರುವಂತವನು. ‖೨೬೪‖

## (೨೬೫ನೇ ನಾಮವು) ಶ್ರುತಿಸಾಗರಃ,
## ಓಮ್‖ ಶ್ರುತಿಸಾಗರಾಯನಮಃ.

(ಶಂ‖ ಭಾ) ನದಿಗಳಿಗೆ ಸಮುದ್ರದಂತೆ ವೇದಗಳಿಗೆ ಆವಾಸಭೂತನು (ವಿ‖ ಮ) ಇಂತಹ ಗುಣಗಳನ್ನು ಪ್ರತಿಪಾದಿಸುವ ಶ್ರುತಿಗಳಿಗೆಲ್ಲವೂ ನದಿಗಳಿಗೆ ಸ್ಥಾನವಾದ ಸಮುದ್ರದಂತೆ ಪರ್ಯವಸಾನ ಭೂಮಿಯಾಗಿರುವಂತವನು. ಎಂದರೆ ಸಮಸ್ತ ವೇದಗಳಿಂದಲೂ ಪ್ರತಿಪಾದ್ಯನಾದವನೆಂದರ್ಥವು. "ನಾರಾಯಣಪರಾವೇದಾಃ ‖ (ಭಾಗ‖ ೨‖ ೫‖ ೧೫) ವೇದೈಶ್ಚ ಸರ್ವೈರಹಮೇವ ವೇದ್ಯಃ" (ಗೀ‖ ೧೫‖ ೧೫) ಇತ್ಯಾದಿ ಪ್ರಮಾಣಗಳು ಸಮಸ್ತ ಶ್ರುತಿ ಪ್ರತಿಪಾದ್ಯನನ್ನಾಗಿ ಪರಮಾತ್ಮನನ್ನು ಹೇಳುವುವು. ‖೨೬೫‖

ಈ (೨೮)ನೇ ಶ್ಲೋಕದಲ್ಲಿ ಪ್ರತಿಪಾದಿಸಲ್ಪಡುವ (೯) ನಾಮಗಳಿಗೂ "ವೃಷೋಹಿ ಧರ್ಮಸ್ತದ್ರೂಪ ಮಹರ್ಯಸ್ಯೆದಿವಂ ಸ್ಮೃತಂ । ಪ್ರಥಮಾಭಿ ಗಮನಾಖ್ಯಂ "ವೃಷಾಹೀ" (೨೫೭) ಸಪ್ರಕೀರ್ತಿತಃ ‖ ಅಭಿಗಚ್ಛದ್ಭ್ಯಕ್ತಜನಾನ್ ಸುಧಾ ವರ್ಷಣತೋಽನ್ವಯಂ। "ವೃಷಭ" (೨೫೮) ಸ್ಸಮಾಖ್ಯಾತ ಸ್ಸಿಂಚನ್ ಭಯ ಹರೋ ಮನಃ‖ "ವಿಷ್ಣು" (೨೫೯) ಸ್ಸಾಸ್ರನವಿನಾ ಭಾವಾ ದ್ವ್ಯಾಪ್ತಸ್ಯ ವ್ಯಾಪಕ ಭಾವತಃ । ವೃಷಾ ಪರ್ವಾ

ಶ್ರಮಾ ಧರ್ಮಾಃ ಪರ್ವಾಣ್ಯಾ ರೋಹಣೆತುತೆ | ಯಸ್ಯಸಂತಿ ಸದಾಸೊ ಯಂ "ವೃಷಪರ್ವಾ" (೨೬೦) ಪ್ರಕೀರ್ತಿತಃ || ಭಕ್ತ್ಯೈ ರುಪಾಹೃತಾಂ ಪೂಜಾ ಮುಪಹಾರಾಂಶ್ಚ ಧರ್ಮತಃ | ಕೃತ್ವೋದರೆ ಯೊ ಜಯತಿ ಸ "ವೃಷೋದರ" (೨೬೧) ಉಚ್ಯತೆ || ಮಾತೃವಜ್ಜಠರೆ ಕೃತ್ವಾ ಭಕ್ತಾನ್ ವರ್ಧಯತಿ ಸ್ವಯಂ| "ವರ್ಧನಃ" (೨೬೨) ಪ್ರೊಚ್ಯತೇ ನಿತ್ಯಂ ಸಪ್ತಾರ್ಣ್ನೊ ವೃದ್ಧಿದೋ ಮನುಃ|| ವರ್ಧಯಂಸ್ತಾನ್ ಸ್ವಯಮಪಿ "ವರ್ಧಮಾನ" (೨೬೩) ಶ್ಚ ವರ್ಧನಾತ್ | ಲೋಕೋತ್ತರಾದಿ ವೃತ್ತಾಂತಾನ್ ಸ್ವೈ ರೈ ಕಾಂತಾನ್ಗುಣ ಬೃಂಹಿತಾನ್ || "ವಿವಿಕ್ತ" (೨೬೪) ಇತಿ ವಿಖ್ಯಾತಃ ಪಾವನತ್ವ ಪ್ರದೋಮನುಃ || ನದೀನಾಂ ಸಾಗರ ಇವ ಸ್ವಗುಣೋಕ್ತಿ ವಿಧಾ ಜುಷಾಂ | ಶ್ರುತೀನಾ ಮವಸಾನತ್ವಾ ತ್ಕಥ್ಯತೆ "ಶ್ರುತಿಸಾಗರಃ" (೨೬೫) ಎಂಬೀ ರೀತಿಯಾಗಿ ವಿವೃತಿಯನ್ನು ಕಾಣಬಹುದು.

ಮೂ|| ಸುಭುಜೊ ದುರ್ಧರೊ ವಾಗ್ಮೀ ಮಹೇಂ
ದ್ರೋ ವಸುದೊ ವಸುಃ | ನೈಕರೂಪೊ ಬೃಹ
ದ್ರೂಪ ಶ್ಶಿಪಿವಿಷ್ಟಃ ಪ್ರಕಾಶನಃ ||೨೯||

(೨೬೬ನೇ ನಾಮವು) ಸುಭುಜಃ,

ಓಮ್|| ಸುಭುಜಾಯನಮಃ.

ಮ) ಜಗದ್ರಕ್ಷಕಗಳೂ ಮಂಗಳಕರಗಳೂ ಆದ ಭುಜಗಳು ಳ್ಳವನು. (ವಿ|| ಭಾ) ತನ್ನನ್ನು ಶರಣ ಹೊಂದಿರುವ ಆಶ್ರಿತ ಜನರ ಭಾರ ವನ್ನು ವಹಿಸಿರುವ ಸುಂದರಗಳಾದ ತೋಳುಗಳುಳ್ಳವನು. ||೨೬೬||

(೨೬೭ನೇ ನಾಮವು) ದುರ್ಧರಃ,

ಓಮ್|| ದುರ್ಧರಾಯನಮಃ.

(ಶಂ|| ಭಾ) ಅನ್ಯರಿಂದ ಧರಿಸಲಶಕ್ಯಗಳೂ, ಲೋಕಧಾರಕಗಳೂ ಆದ ಪೃಥಿವ್ಯಾದಿ ಭೂತಗಳನ್ನು ತಾನು ಧರಿಸುತ ತಾನು (ಮ) ಯಾವ ನಿಂದಲೂ ಧರಿಸಲಶಕ್ಯನಾಗಿರುವಂತವನು "ದುರ್ಧರಃ" ಎನ್ನಲ್ಪಡುವನು.

(ಅಥವಾ) ಮುಮುಕ್ಷು ಜನಗಳಿಂದ ಧ್ಯಾನಕಾಲದಲ್ಲಿ ಅತ್ಯಂತ ಪ್ರಯಾಸದಿಂದ ಧರಿಸಲ್ಪಡುವಂತವನು. (ವಿ|| ಭಾ) ಅಂತಹ ಭುಜ ಬಲದಿಂದ ಪ್ರಳಯಕಾಲದಲ್ಲುಂಟಾದ ಸಮುದ್ರ ವೇಗವನ್ನು ಸಣ್ಣ ಮಕ್ಕಳು ಕೇವಲ ಕ್ರೀಡೆಯಿಂದ ಮರಳುಗಳಿಂದ ಕಟ್ಟಿರುವ ಸೇತುವೆಗಳಿಂದ ಹೇಗಾದರೆ ನಿರೋಧಿಸುವುದಕ್ಕೆ ಆಗುವುದಿಲ್ಲವೋ; ಅದರಂತೆ ಯಾರಿಂದಲೂ ಧರಿಸಲಶಕ್ಯವಾದ ವೇಗವುಳ್ಳವನು. ||೨೬೭||

## (೨೬೮ನೇ ನಾಮವು) ವಾಗ್ಮೀ,
### ಓಮ್|| ವಾಗ್ಮಿನೇನಮಃ.

(ಶಂ|| ಭಾ) ವೇದ ರೂಪವಾದ ವಾಕ್ಕು ಯಾವ ಪರಮಾತ್ಮನಿಂದ ಹೊರಪಡುವುದೋ ಅವನು "ವಾಗ್ಮೀ" ಎನ್ನಲ್ಪಡುವನು. (ವಿ|| ಭಾ) ಆ ರೀತಿಯಾಗಿಯೇ ಅತ್ಯಂತವಾಗಿ ಕೊಂಡಾಡಲ್ಪಡುವ ವಾಕ್ಕುಳ್ಳವನು. ಅದು ವೇದ ರೂಪವೂ ಜಯಶೀಲವೂ ಮಧುರವೂ ಗಂಭೀರವೂ ಪ್ರಿಯವೂ ಹಿತವೂ ಆಗಿರುವುದರಿಂದ ಅವನ ವಾಕ್ಕು ಕೊಂಡಾಡಲ್ಪಡುವುದು. ಇದಕ್ಕೆ "ವಾಗ್ವಿವೃತಾಶ್ಚವೇದಾಃ" ಉತ್ತರೋತ್ತರ ಯುಕ್ತೌಚ ವಕ್ತಾ ವಾಚಸ್ಪತಿರ್ಯಥಾ | ಭೂಯಃ ಕಥಯತೃಪ್ತಿರ್ಹಿಶೃಣ್ವತೋ ನಾಸ್ತಿಮೇಽಮೃತಂ || ಬುದ್ಧಿಮಾನ್ ಮಧುರಾ ಭಾಷೀ ಪೂರ್ವಭಾಷೀ ಪ್ರಿಯಂವದಃ|| ಈರಯಂತಂ ಭಾರತೀಂ ಭಾರತಾನಾಂ || ಓಘ ಮೇಘ ಸ್ವನಃ ಕಾಲೆ" ಇತ್ಯಾದಿ ಪ್ರಮಾಣಗಳು ಇವನ ವಾಕ್ಕಿನ ಗಾಂಭೀರ್ಯಾದಿ ಗುಣಗಳನ್ನು ಪ್ರಕಾಶಪಡಿಸುವುವು. ||೨೬೮||

## (೨೬೯ನೇ ನಾಮವು) ಮಹೇಂದ್ರಃ,
### ಓಮ್|| ಮಹೇಂದ್ರಾಯನಮಃ.

(ಶಂ|| ಭಾ) ಮಹತ್ತಾದ ಇಂದ್ರನು, ಎಂದರೆ ಇಂದ್ರಾದಿಗಳಾದ ಈಶ್ವರರಿಗೂ ಕೂಡ ಈಶ್ವರನು. (ವಿ|| ಭಾ) ಈ ರೀತಿಯಾಗಿ ಸರ್ವತ್ರ ವ್ಯಾಪ್ತನಾಗಿರುವುದರಿಂದ ಶ್ಲಾಘ್ಯವಾದ ಪರಮೈಶ್ವರ್ಯಯುಕ್ತನಾದವನು "ಮಹೇಂದ್ರಃ" ಎನ್ನಲ್ಪಡುವನು. ||೨೬೯||

(೨೭೦ನೇ ನಾಮವು) ವಸುದಃ,
ಓಮ್॥ ವಸುದಾಯನಮಃ.

(ಶಂ॥ ಮ) ಧನವನ್ನು ಕೊಡುವಂತವನು. (ಶಂ) " ಅನ್ನಾದೋ ವಸುದಾನಃ " ಇತಿ ಶ್ರುತಿಃ. (ವಿ॥ ಭಾ) ಈ ರೀತಿಯಾಗಿ ಯಾರಿಂದಲೂ ತಿರಸ್ಕರಿಸಲಶಕ್ಯನಾದ ಮಹೇಂದ್ರನಾಗಿರುವುದರಿಂದ ಮಹಾ ಮಹಿಮ ಶಾಲಿಯಾಗಿದ್ದರೂ ಧನಾದಿ ಕ್ಷುದ್ರ ಪುರುಷಾರ್ಥಗಳನ್ನು ಅಪೇಕ್ಷಿಸುವವರಿಗೆ ಅವುಗಳನ್ನು ಕೊಡುವಂತವನು. ॥೨೭೦॥

(೨೭೧ನೇ ನಾಮವು) ವಸುಃ,
ಓಮ್॥ ವಸವೇನಮಃ.

(ಶಂ॥ ಭಾ) ಕೊಡಲ್ಪಡುವ ಧನವುಕೂಡ ಅಂತಹ ಪರಮಾತ್ಮನೇ ಆಗಿರುವುದರಿಂದ " ವಸುಃ " ಎನ್ನಲ್ಪಡುವನು (ಶಂ॥ ಮ) ಮಾಯೆಯಿಂದ ಸ್ವಸ್ವರೂಪವನ್ನು ಮರೆಮಾಡುವಂತವನು. (ಶಂ) " ವಸುರಂತರಿಕ್ಷಸತ್ " ಎಂಬ ಶ್ರುತ್ಯನುಸಾರವಾಗಿ ಅಂತರಿಕ್ಷವಾಸಿಯಾದ ಭಾಸ್ಕರಾತ್ಮಕನು. (ವಿ॥ ಭಾ) ಮಹಾತ್ಮರಾದ ಭಕ್ತರಿಗೆ ತಾನೆ ಧನವಾಗಿರತಕ್ಕವನು. (ಮ) ಇಲ್ಲಿ ಅರ್ಥಭೇದವಿರುವದರಿಂದ "ವಸುರ್ವಸುಮನಾಃ" ಎಂಬ ನಾಮದೊಡನೆ ಪುನರುಕ್ತಿ ಇಲ್ಲವು. ॥೨೭೧॥

(೨೭೨ನೇ ನಾಮವು) ನೈಕರೂಪಃ,
ಓಮ್॥ ನೈಕರೂಪಾಯನಮಃ.

(ವಿ॥ ಭಾ) ಹಿಂದೇ ಹೇಳಿರುವ ಮಹಿಮೆಗೆ ತಕ್ಕ ವಿಶ್ವರೂಪವನ್ನು ಹೇಳುತ್ತಾರೆ ಅವರವರುಗಳ ಅಭಿಪ್ರಾಯಾನುಸಾರವಾಗಿ ನಾನಾ ರೂಪಗಳನ್ನು ಧರಿಸಿದವನು. (ಶಂ॥ ಮ) ಈ ಅರ್ಥವನ್ನೇ ಆದರಿಸುತ್ತಾರೆ. ॥೨೭೨॥

(೨೭೩ನೇ ನಾಮವು) ಬೃಹದ್ರೂಪಃ,
ಓಮ್॥ ಬೃಹದ್ರೂಪಾಯನಮಃ.

(ಶಂ॥ ಭಾ) ಅತ್ಯಂತ ಮಹತ್ತಾದ ಭೂತಗಳನ್ನು ಧರಿಸುವುದಕ್ಕೆ ಯೋಗ್ಯವಾದ ಮಹಾವರಾಹಾದಿ ರೂಪವುಳ್ಳವನು. (ಮ) ಮಹತ್ತಾದ ರೂಪವುಳ್ಳವನು. (ವಿ॥ ಭಾ) ಆಯಾ ಭಗವದ್ರೂಪಗಳಲ್ಲಿ ದಿಕ್ಕುಗಳನ್ನೂ ಆಕಾಶಾದಿಗಳನ್ನೂ ಒಂದೊಂದೆ ವ್ಯಾಪಿಸುವಂತಹ ಮಹತ್ತಾದ ರೂಪ ವುಳ್ಳವನು. ॥೨೩೩॥

## (೨೩೪ನೇ ನಾಮವು) ಶಿಪಿವಿಷ್ಟಃ,
## ಓಮ್॥ ಶಿಪಿವಿಷ್ಟಾಯನಮಃ.

(ಶಂ॥ಮ) ಪಶುಗಳಲ್ಲಿ ಯಜ್ಞರೂಪದಿಂದ ಇರುವಂತವನು. "ಯಜ್ಞೋ ವೈವಿಷ್ಣುಃ ॥ ಪಶವಶ್ಶಿಪಿರ್ಯಜ್ಞ ಏವ ಪಶುಷು ಪ್ರತಿ ತಿಷ್ಠತಿ" ಇತ್ಯಾದಿ ಶ್ರುತಿ ಪ್ರಮಾಣಗಳೇ ಈ ಅರ್ಥಬೋಧಕಗಳಾಗಿರುವುವು. (ಅಥವಾ) (ಶಂ॥ ವಿ॥ಮ) "ಶಿಪಯೊರಶ್ಮಯ ಉಚ್ಯಂತೆ ತೈರಾವಿಷ್ಟಃ॥" ಎಂಬದಾಗಿ ಯಾಸ್ಕರೂ, ಇದನ್ನನುಸರಿಸಿ "ಶಿಪಿ ವಿಷ್ಟೇತಿ ಯಚ್ಚಾಸ್ಯ ಪತಿಂ ರೋಮಚ ಯದ್ಭವೇತ್ | ತೇನಾಪಿ ವಿಷ್ಟಂ ಯತ್ಕಿಂಚಿ ಚ್ಛಿಪಿ ವಿಷ್ಟಂಹಿ ತತ್ಸ್ಮೃತಂ" ಎಂಬದಾಗಿ ಮಹರ್ಷಿ ವಚನದಿಂದಲೂ; ಶಿಪಿ ಎಂದರೆ ಕಿರಣಗಳು; ಅವುಗಳನ್ನು ವ್ಯಾಪಿಸಿ ಎಂದರೆ ಅವುಗಳಲ್ಲಿ ಪ್ರವೇಶಿಸಿರುವಂತವನು " ಶಿಪಿ ವಿಷ್ಟಃ " ಎನ್ನಲ್ಪಡುವನು. (ಶಂ॥ ಮ) "ಶೈತ್ಯಾಚ್ಛಯನಯೊ ಗಾಚ್ಚ ಶೀತವಾರಿ ಪ್ರಚಕ್ಷತೆ | ತತ್ಪುನಾ ದುಕ್ಷಣಾಚ್ಚೈವ ಶಿಪಯೊ ರಶ್ಮಯೊ ಮತಾಃ ॥ ತೇಷು ಪ್ರವೇಶಾ ದ್ವಿಶ್ವೇಶ ಶ್ಶಿಪಿವಿಷ್ಟ ಇಹೊಚ್ಯತೆ " ಎಂಬ ಪ್ರಮಾಣವು ಈ ನಾಮವನ್ನು ನಿರ್ವಚನಮಾಡುವದು. ॥೨೩೪॥

## (೨೩೫ನೇ ನಾಮವು) ಪ್ರಕಾಶನಃ,
## ಓಮ್॥ ಪ್ರಕಾಶನಾಯನಮಃ.

(ಶಂ॥ ಮ) ಸಮಸ್ತಕ್ಕೂ ಪ್ರಕಾಶಕನು. (ವಿ॥ ಭಾ) ಇಂತಹ ದಿವ್ಯ ರೂಪವನ್ನು ನೋಡಬೇಕೆಂದು ಅಪೇಕ್ಷಿಸುವ ಅರ್ಜುನಾದಿಗಳಿಗೆ ಸ್ವಸ್ವರೂಪವನ್ನು ಪ್ರಕಾಶಪಡಿಸುವಂತವನು. "ದಿವ್ಯಂದಾಮಿತೇ ಚಕ್ಷುಃ ಪಶ್ಯಮೇ ಯೋಗಮೈಶ್ವರಂ " (ಗೀ॥ ೧೧) ಎಂಬದಾಗಿ ಇಂತಹ ದಿವ್ಯ

ರೂಪವನ್ನು ನೋಡುವುದಕ್ಕೆ ಸಾಧನವಾದ ದಿವ್ಯ ಚಕ್ಷುಸ್ಸನ್ನು ನಿನಗೆ ಕೊಡುವೆನು; ನನ್ನ ಈಶ್ವರ ಯೋಗವನ್ನು ನೋಡೆಂದು ಶ್ರೀಗೀತಾ(೧೧) ನೇ ಅಧ್ಯಾಯದಲ್ಲಿ ಶ್ರೀಕೃಷ್ಣನೇ ಅನುಗ್ರಹಿಸಿರುತ್ತಾನೆಯಷ್ಟೆ. ||೨೭೫||

ಈ (೨೯)ನೇ ಶ್ಲೋಕದಲ್ಲಿರುವ ೧೦ ನಾಮಗಳಿಗೂ "ಪ್ರಪನ್ನ ಭರಣೇ ಧುರ್ಯ ಭುಜೋಯಃ "ಸುಭುಜ" (೨೬೬) ಸ್ಮೃತಃ | ಪರ್ವೈ ದುರ್ಧರ್ವಾರವೇಗೋಯೊ "ದುರ್ಧರ" (೨೬೭) ಸ್ಸಚ ಕಥ್ಯತೆ || ವೇದ ಲಕ್ಷಣ ವಕ್ತೃತ್ವಾ "ದ್ವಾಗ್ಮೀ" (೨೬೮) ಪ್ರಿಯಹಿತೋಕ್ತಿತಃ | ಪರಮೈಶ್ವರ್ಯ ವತ್ತ್ವೇನ "ಮಹೇಂದ್ರ" (೨೬೯) ಇತಿ ಶಬ್ದ್ಯತೆ || "ವಸುದೋ" (೨೭೦) ಧನ ದಾನಾಚ್ಚ ಧನಾಯದ್ಭ್ಯೋ ವಿಶೇಷತಃ| ಸರ್ವಸ್ಯ ಹರಿ ರೂಪತ್ವಾದ್ಧನಂ ಯಸ್ಮಾ "ದ್ವಸು" (೨೭೧) ಸ್ಮೃತಃ || ಯಸ್ಸದಾ ಬಹು ರೂಪಶ್ಚ "ನೈಕರೂಪ" (೨೭೨) ಸ್ಸಕೀರ್ತಿತಃ | ತತ್ತಜ್ಜನ ಜ್ಞಾನಯೋಗ್ಯಂ ರೂಪಂ ಯಸ್ಯ ವಿಶೇಷತಃ | "ನೈಕರೂಪ" ಸ್ಸಮುದ್ದಿಷ್ಟ ಸ್ಸರ್ವ ಪ್ರತ್ಯಯ ಗೋಚರಃ || ವ್ಯಾಪ್ನುವದ್ಯಸ್ಯ ರೂಪಂತು "ಬೃಹದ್ರೂಪ" (೨೭೩) ಸ್ಸಕೀರ್ತಿತಃ | ಶಿಪಯೊ ರಶ್ಮಯಃ ಪ್ರೋಕ್ತಾ ವ್ಯಾಪ್ಯತೇಷ್ವಪಿ ವರ್ತನಾತ್ || "ಶಿಪಿ ವಿಷ್ಟ" (೨೭೪) ಸ್ಸಮಾಖ್ಯಾತ ಸ್ಸೂರ್ಯೇಂದ್ವಗ್ನ್ಯಾದಿ ರೂಪವತ್ | ದಿವ್ಯರೂಪಂ ದಿದೃಕ್ಷುಭ್ಯಃ ಪಾರ್ಥಾದಿಭ್ಯೋ ವಿಶೇಷತಃ || ರೂಪಂ ಪ್ರಕಾಶಯತಿ ಯಸ್ಸ "ಪ್ರಕಾಶನ" (೨೭೫) ಈರಿತಃ" ಎಂಬೀ ರೀತಿಯಾಗಿ ವಿವೃತಿಯನ್ನು ಕಾಣಬಹುದು.

ಮೂ|| ಓಜಸ್ತೇಜೋದ್ಯುತಿಧರಃ ಪ್ರಕಾಶಾತ್ಮಾ ಪ್ರತಾಪನಃ| ಋದ್ಧ ಸ್ಸ್ಪಷ್ಟಾಕ್ಷರೋ ಮನ್ತ್ರ ಶ್ಚಂದ್ರಾಂಶು ರ್ಭಾಸ್ಕರದ್ಯುತಿಃ ||೩೦||

(೨೭೬ನೇ ನಾಮವು) ಓಜಸ್ತೇಜೋದ್ಯುತಿಧರಃ,

ಓಮ್|| ಓಜಸ್ತೇಜೋದ್ಯುತಿಧರಾಯನಮಃ.

(ಶಂ|| ವಿ|| ಮ) ಓಜಃ-ಬಲವು, ತೇಜಃ-ಪರಾಕ್ರಮವು, ಶೌರ್ಯಾದಿ ಗುಣಗಳು; ದ್ಯುತಿ-ದೀಪ್ತಿಯು ಎಂದರೆ ಕಾಂತಿಯು, ಇವುಗಳನ್ನು

ಧರಿಸಿರುವಂತವನು. ಅಥವಾ (ಶಂ) ಓಜಸ್ತೇಜಃ ಎಂತಲೂ; ದ್ಯುತಿಧರಃ ಎಂತಲೂ; ಯೆರಡು ನಾಮಗಳಾಗಿರುವುವು. "ಬಲಂ ಬಲವತಾಂಚಾಹಂ॥ ತೇಜಸ್ತೇಜಸ್ವಿನಾಂ" ಎಂಬ ಗೀತಾ ೧೧ನೇ ಅಧ್ಯಾಯದ ವಚನಾನುಸಾರವಾಗಿ ಬಲ ತೇಜಸ್ಸುಗಳನ್ನೇ ಸ್ವರೂಪವಾಗಿವುಳ್ಳವನಾದಕಾರಣ "ಓಜಸ್ತೇಜಃ" ಎಂತಲೂ; ಜ್ಞಾನ ಲಕ್ಷಣವಾದ ಕಾಂತಿಯನ್ನು ಧರಿಸಿರುವ ಕಾರಣದಿಂದ "ದ್ಯುತಿಧರಃ" ಎಂತಲೂ; ಹೇಳಲ್ಪಡುವನು. ॥೨೭೬॥

## (೨೭೭ನೇ ನಾಮವು) ಪ್ರಕಾಶಾತ್ಮಾ,

## ಓಮ್॥ ಪ್ರಕಾಶಾತ್ಮನೇನಮಃ.

(ವಿ॥ ಭಾ) ಮೂರ್ಖರಾದ ಧೃತರಾಷ್ಟ್ರಾದಿಗಳು ಕೂಡ ಸಮ್ಮತಿಸುವಂತಹ ಪ್ರಕಾಶವಾದ ಶ್ರೇಷ್ಠ ಪ್ರಭಾವವುಳ್ಳವನು. ಹೀಗೆಯೇ "ತ್ವಮೇವ ಪುಂಡರೀಕಾಕ್ಷ ಸರ್ವಸ್ಯ ಜಗತಃ ಪ್ರಭುಃ। ತಸ್ಮಾನ್ಮೇ ಯಾದವ ಶ್ರೇಷ್ಠ ಪ್ರಸಾದಂ ಕರ್ತುಮರ್ಹಸಿ" (ಭಾರ॥ ಉ॥) ಎಂದು ಧೃತರಾಷ್ಟ್ರ ವಾಕ್ಯವಿರುವುದು. (ಶಂ॥ ಮ) ಪ್ರಕಾಶ ಸ್ವರೂಪನು. ॥೨೭೭॥

## (೨೭೮ನೇ ನಾಮವು) ಪ್ರತಾಪನಃ,

## ಓಮ್॥ ಪ್ರತಾಪನಾಯನಮಃ.

(ಶಂ॥ ಭಾ) ಸೂರ್ಯನೇ ಮೊದಲಾದ ತನ್ನ ವಿಭೂತಿಗಳಿಂದ ಸಮಸ್ತವನ್ನು (ಶಂ॥ ಮ) ಸಂತಾಪ ಪಡಿಸುವಂತವನು. (ವಿ॥ ಭಾ) "ಭಾಸಸ್ತವೋಗ್ರಾಃ ಪ್ರತಪಂತಿ" ಎಂಬ (ಗೀ॥ ೧೧) ವಚನಾನುಸಾರವಾಗಿ ಉಗ್ರವಾದ ಕಾಂತಿಯುಳ್ಳವನು. ॥೨೭೮॥

## (೨೭೯ನೇ ನಾಮವು) ಋದ್ಧಃ,

## ಓಮ್॥ ಋದ್ಧಾಯನಮಃ.

(ವಿ॥ ಮ) ಪೂರ್ಣಿಮಾ ಚಂದ್ರ ದರ್ಶನದಿಂದ ವೃದ್ಧಿಹೊಂದುತಲಿರುವ ಸಮುದ್ರದಂತೆ ವೃದ್ಧಿಹೊಂದುತಲಿರುವಂತವನು. (ಶಂ) ಧರ್ಮಜ್ಞಾನ ವೈರಾಗ್ಯ ಸಮೃದ್ಧಿಯುಳ್ಳವನು. ॥೨೭೯॥

(೨೮೦ನೇ ನಾಮವು) ಸ್ಪಷ್ಟಾಕ್ಷರಃ,
ಓಮ್|| ಸ್ಪಷ್ಟಾಕ್ಷರಾಯನಮಃ.

(ಶಂ|| ಮ) ಉದಾತ್ತವೂ ಓಂಕಾರ ಲಕ್ಷಣವೂ ಆದ ಅಕ್ಷರವುಳ್ಳವನು. (ವಿ|| ಭಾ) ಇಂತಹ ಸಮೃದ್ಧಿಯಿಂದ ವೇದವಾಕ್ಯಗಳಿಗೆ ತಾತ್ಪರ್ಯಗಳನ್ನುಂಟುಮಾಡುವುದರಿಂದ ವೇದಾಕ್ಷರಗಳನ್ನು ಸೃಷ್ಟಿಸುವಂತವನು. ವೇದ ಪ್ರತಿಪಾದ್ಯನೆಂದರ್ಥವು. ||೨೮೦||

(೨೮೧ನೇ ನಾಮವು) ಮಂತ್ರಃ,
ಓಮ್|| ಮಂತ್ರಾಯನಮಃ.

(ಶಂ|| ಭಾ) ಋಗ್ಯಜುಸ್ಸಾಮ ರೂಪಗಳಾದ ಮಂತ್ರರೂಪನು, ಅಥವಾ; ಮಂತ್ರಗಳಿಂದ ಬೋಧಿಸಲ್ಪಡುವನು. (ವಿ|| ಭಾ) ಮನನ ಮಾಡುವಂತವರನ್ನು ಕಾಪಾಡುವಂತವನು. (ಮ) ಭಕ್ತರನ್ನು ಮನನ ಮಾಡುವಂತವನು. ಮನನವೆಂದರೆ ಚಿಂತನವು. ||೨೮೧||

(೨೮೨ನೇ ನಾಮವು) ಚಂದ್ರಾಂಶುಃ,
ಓಮ್|| ಚಂದ್ರಾಂಶವೇನಮಃ.

(ಶಂ|| ಭಾ) ಸಂಸಾರತಾಪವೆಂಬ ಸೂರ್ಯತಾಪದಿಂದ ಸಂತಪ್ತ ಹೃದಯರಾದವರಿಗೆ ಚಂದ್ರನಂತೇ ಆಹ್ಲಾದಕರನಾದವನು. (ವಿ|| ಭಾ) ಈ ಪ್ರಕಾರವಾಗಿ ತನ್ನನ್ನು ಮನನಮಾಡತಕ್ಕವರ ಸಂತಾಪವನ್ನು ಪರಿಹರಿಸಿ "ತೇಶಂ ಸೋಮಮಿವೋದ್ಯಂತಂ" ಎಂಬಂತೆ ಆಹ್ಲಾದವನ್ನುಂಟುಮಾಡುವ ಕಾಂತಿಯುಳ್ಳವನು. (ಮ) ಆಹ್ಲಾದಕರವಾದ ಕಿರಣಗಳುಳ್ಳವನು. ||೨೮೨||

(೨೮೩ನೇ ನಾಮವು) ಭಾಸ್ಕರದ್ಯುತಿಃ,
ಓಮ್|| ಭಾಸ್ಕರದ್ಯುತಯೇನಮಃ.

(ಶಂ|| ಮ) ಸೂರ್ಯಕಾಂತಿಗೆ ಸಮಾನವಾದ ಕಾಂತಿಯುಳ್ಳವನು. (ವಿ|| ಭಾ) ಶತ್ರುಗಳನ್ನು ತಿರಸ್ಕರಿಸುವಂತಹ ಪ್ರಭಾವಶಾಲಿಯಾದಕಾ

ರಣ "ಭಾಸ್ಕರದ್ಯುತಿಃ" ಎನ್ನಲ್ಪಡುವನು. "ರಕ್ಷಾಂಸಿ ಭೀತಾನಿದಿಶೋದ್ರವಂತಿ" (ಗೀ॥ ೧೧॥ ೩೬) "ಶರಜಾಲಾಂಶುವಾನ್ ಶೂರಃ ಕಪೇ ರಾಮ ದಿವಾಕರಃ। ಶತ್ರುರಕ್ಷೋ ಮಯಂತೋಯ ಮುಪಶೋಷಂ ನಯಿಷ್ಯತಿ" (ಶ್ರೀಮದಾ್ರ) ಎಂಬೀ ಪ್ರಮಾಣಗಳೀ ಅರ್ಥದಲ್ಲಿ ವರ್ತಿ ಸುವುವು. ॥೨೮೩॥

ಈ (೩೦)ನೇ ಶ್ಲೋಕದಲ್ಲಿರುವ ೮ ನಾಮಗಳಿಗೂ "ಅಸಾಧಾರಣ ಸಾಮರ್ಥ್ಯಂ ತೇಜಶ್ಚ ಪರಿಪಠ್ಯತೆ ॥ ಕೀರ್ತ್ರ್ಯಾದ್ಯುತಿರೌಜ್ವಲ್ಯಂ ತಾನಿ ಧತ್ತೇಚ ಯಸ್ಸದಾ। "ಓಜಸ್ತೇಜೋದ್ಯುತಿಧರೊ" (೨೭೬) ಹ್ಯೇಕ ನಾಮಾ ಪ್ರಕೀರ್ತಿತಃ ॥ ಮುಖ್ಯೈರಪಿ ಸದಾ ಸಮ್ಯಕ್ಪ್ರತಿಪನ್ನ ಸ್ವಭಾವ ವಾನ್ । ಯಸ್ಸಸ್ಯಾತ್ತು "ಪ್ರಕಾಶಾತ್ಮಾ" (೨೭೭) ತೀಕ್ಷ್ಣಭಾವಃ "ಪ್ರತಾಪನಃ" (೨೭೮) ॥ ಪೂರ್ವೇಣೊ ಜಲಧಿರ್ಯದ್ವ ದ್ಬುದ್ಧಿಮಾನ್ "ಬುದ್ಧ" (೨೭೯) ಉಚ್ಯತೆ। ಸ್ಪಷ್ಟೀ ಕೃತಾಶ್ಚ ವೇದಾರ್ಥಾ ಯಸ್ಮಾತ್ "ಸ್ಪಷ್ಟಾಕ್ಷರೋ" (೨೮೦) ಮತಃ ॥ ಮಂತಾರಂತ್ರಾಯತ ಇತಿ "ಮಂತ್ರ" (೨೮೧) ಶ್ಚಾಸ್ಯಭಿ ಧೀಯತೆ। ಕ್ಲಮಹಾರಿ ಮಹಾ ಹ್ಲಾದ ತೇಜಸ್ಕರತಯಾಪಿಚ ॥ ಮಂತ್ರಾಣಾಮೇವ "ಚಂದ್ರಾಂಶು" (೨೮೨) ರಾಹ್ಲಾದ ಫಲದೋ ಮನುಃ। ಪರಪ್ರಭಾವಾ ಭಿಭವ ಲಕ್ಷಣ ದ್ಯುತಿಮಾಂಶ್ಚಯಃ ॥ ಸ "ಭಾಸ್ಕರದ್ಯುತಿಃ" (೨೮೩) ಪ್ರೋಕ್ತಾ ನೇತ್ರವೈಮಲ್ಯದೋ ಮನುಃ ॥" ಎಂಬೀ ರೀತಿಯಾಗಿ ವಿವೃತಿಯನ್ನು ಕಾಣಬಹುದು.

ಮೂ॥ ಅಮೃತಾಂಶೂದ್ಭವೊ ಭಾನು ಶ್ಯಶ ಬಿಂದು ಸ್ಸುರೇಶ್ವರಃ । ಔಷಧಂ ಜಗತಸ್ಸೇತು ಸ್ಸತ್ಯಧರ್ಮಪರಾಕ್ರಮಃ ॥೩೧॥

(೨೮೪ನೇ ನಾಮವು) ಅಮೃತಾಂಶೂದ್ಭವಃ,

ಓಮ್॥ ಅಮೃತಾಂಶೂದ್ಭವಾಯನಮಃ.

(ಶಂ॥ ಮ) ಅಮೃತಾರ್ಥಿಗಳಾಗಿ ದೇವಾಸುರರು ಕ್ಷೀರ ಸಮುದ್ರವನ್ನು ಕಡೆಯುವ ಕಾಲದಲ್ಲಿ ಅಮೃತಕಿರಣನಾದ ಚಂದ್ರನು ಯಾವ

ಪರಮಪುರುಷನಿಂದ ಉದ್ಭವಿಸಿದನೊ ಅವನು "ಅಮೃತಾಂಶೂದ್ಭವಃ" ಎನ್ನಲ್ಪಡುವನು. (ವಿ॥ ಭಾ) ಸಮಸ್ತ ತಾಪಗಳನ್ನು ಹರಿಸಿ ಆಪ್ಯಾಯನಕಾರಿಯಾಗಿರುವ ಮೃತ ಸಂಜೀವನವಾದ ಅಮೃತ ಕಿರಣಗಳೊಡನೆ ಕೂಡಿರುವ ಚಂದ್ರನು ಕೂಡಾ ಪರಮಪುರುಷನ ಹೃದಯಗತವಾದ ಶೈತ್ಯಾದಿ ಗುಣ ಸಂಬಂಧದಿಂದುಂಟಾಗಿರುತ್ತಾನಾದುದರಿಂದ "ಅಮೃತಾಂ ಶೂದ್ಭವಃ" ಎನ್ನಲ್ಪಡುವನು. "ಚಂದ್ರಮಾ ಮನಸೋ ಜಾತಃ" (ಪು॥ ಸೂ) ಇತ್ಯಾದಿ ಪ್ರಮಾಣಗಳೀ ಅರ್ಥವನ್ನು ಬೋಧಿಸುವುವು. ॥೨೮೪॥

## (೨೮೫ನೇ ನಾಮವು) ಭಾನುಃ,

## ಓಮ್॥ ಭಾನವೇನಮಃ.

(ಶಂ॥ ಭಾ) "ತಮೇವ ಭಾನ್ತ ಮನುಭಾತಿ ಸರ್ವಂ" ಎಂಬಂತೆ ಪ್ರಕಾಶಿಸುವಂತವನಾದಕಾರಣದಿಂದಲೂ; (ವಿ॥ ಭಾ) ಅಧಿಕವಾದ ಪ್ರಕಾಶವುಳ್ಳ ಸೂರ್ಯನುಕೂಡ ಇವನ ತೇಜಸ್ಸಿನ ಏಕದೇಶದಿಂದ ಉಪಜೀವಿಸುವಂತಹ ತೇಜಸ್ಸುಳ್ಳವನಾದ ಕಾರಣದಿಂದಲೂ; "ಭಾನುಃ" ಎನ್ನಲ್ಪಡುವನು. ಇದಕ್ಕೆ "ಯಸ್ಯಾದಿತ್ಯೋಭಾಮುಪಯುಜ್ಯಭಾತಿ" ಇತ್ಯಾದಿ ಪ್ರಮಾಣಗಳನ್ನರಿಯಬೇಕು. ॥೨೮೫॥

## (೨೮೬ನೇ ನಾಮವು) ಶಶಬಿಂದುಃ,

## ಓಮ್॥ ಶಶಬಿಂದವೇನಮಃ.

(ಶಂ॥ ಭಾ) "ಪುಷ್ಣಾಮಿ ಚೌಷಧೀ ಸ್ಸರ್ವಾ ಸ್ಸೋಮೊ ಭೂತ್ವಾ ರಸಾತ್ಮಕಃ" ಎಂಬ ಗೀತಾ ವಚನಾನುಸಾರವಾಗಿ ಶಶವೆಂಬ ಗುರುತ್ತುಳ್ಳ ಚಂದ್ರನು ಸರ್ವೌಷಧಿಗಳನ್ನು ಹೇಗಾದರೆ ಪೋಷಿಸುತ್ತಾನೆಯೊ ಅದರಂತೆ ಇವನೂ ಪ್ರಜೆಗಳನ್ನು ಪೋಷಿಸುತ್ತಾನಾದುದರಿಂದ "ಶಶಬಿಂದುಃ" ಎನ್ನಲ್ಪಡುವನು. (ವಿ॥ ಭಾ) ಕುಟಿಲ ಮಾರ್ಗದಲ್ಲಿ ಹೋಗುವಂತವರನ್ನು ಅಪಲಾಪಿಸುವಂತವನು. ॥೨೮೬॥

## (೨೮೭ನೇ ನಾಮವು) ಸುರೇಶ್ವರಃ,

## ಓಮ್॥ ಸುರೇಶ್ವರಾಯನಮಃ.

(ಶಂ|| ಭಾ) ಶೋಭನವಾದ ಫಲವನ್ನು ಕೊಡುವಂತಹ ದೇವತೆಗಳಿಗೆ ಪ್ರಭುವಾದವನು. (ವಿ|| ಭಾ) ಹಾಗೆಯೇ ಸನ್ಮಾರ್ಗ ಪ್ರವರ್ತನವುಳ್ಳ ದೇವಪ್ರಕೃತಿ ಯಾದವರಿಗೆ ನಿರ್ವಾಹಕನು. ||೨೯೭||

## (೨೯೮ನೇ ನಾಮವು) ಔಷಧಂ,
## ಓಮ್|| ಔಷಧಾಯನಮಃ,

(ಶಂ|| ವಿ|| ಮ) ಸಂಸಾರವೆಂಬ ತೀವ್ರವಾದ ವಿಷವನ್ನು ಹರಿಸುವಂತಹ ಪ್ರಭಾವವುಳ್ಳವನು. (ವಿ) "ದೇವಾದೇವರ್ಷ ಯಶ್ಶೈವ ಯಂ ವಿದುರ್ದುಃಖ ಭೇಷಜಂ || ಏಕಾಗ್ರತಾ ಮೂಲ್ಯಬಲೇ ನ ಲಭ್ಯಂ ಭವೌಷಧತ್ವಂ ಭಗವಾನ್ ಕಿಲೈಕಃ" ಇತ್ಯಾದಿ ಪ್ರಮಾಣಗಳೇ ಅರ್ಥವನ್ನು ಪ್ರತಿಪಾದಿಸುವುವು. ||೨೯೮||

## (೨೯೯ನೇ ನಾಮವು) ಜಗತಸ್ಸೇತುಃ,
## ಓಮ್|| ಜಗತಸ್ಸೇತವೇನಮಃ.

(ಶಂ|| ವಿ|| ಮ) ಒಳ್ಳೇದುಕೆಟ್ಟದ್ದೆಂಬದನ್ನು ಒಂದಾಗಿ ಕಲೆತು ಹಾಕದಂತೆ ಪ್ರತ್ಯೇಕಿಸುವಂತವನು. (ಅಥವಾ) (ಶಂ) ವರ್ಣಾಶ್ರಮಾದಿ ಸಾಂಕರ್ಯದಿಂದ ಜಗತ್ತಿಗೆ ನಾಶವನ್ನುಂಟುಮಾಡದವನು. ಇಲ್ಲಿ "ಏಷ ಸೇತುರ್ವಿಧರಣ ಏಷಾಂ ಲೋಕಾನಾ ಮಸಂಭೇದಾಯ" (ಬೃಹದಾ|| ೬|| ೪|| ೨೨) ಎಂಬೀ ಪ್ರಮಾಣವನ್ನರಿಯಬೇಕು. (ವಿ) ಆದುದರಿಂದಲೆ ತಾನೆ ಪ್ರಾಣಿಗಳಿಗೆ ತಾವು ಮಾಡದ ಕರ್ಮಕ್ಕೆ ಫಲವು ಪ್ರಾಪ್ತವಾಗಿಯೂ ಮಾಡಿದ ಕರ್ಮಗಳಿಗೆ ಫಲವಿಲ್ಲದೆಯೂ ಇರುವುದಿಲ್ಲವು. ||೨೯೯||

## (೩೦೦ನೇ ನಾಮವು) ಸತ್ಯಧರ್ಮಪರಾಕ್ರಮಃ,
## ಓಮ್|| ಸತ್ಯಧರ್ಮಪರಾಕ್ರಮಾಯನಮಃ.

(ಶಂ|| ಭಾ) ಸತ್ಯವಾದ ಧರ್ಮ ಜ್ಞಾನಾದಿ ಗುಣಗಳನ್ನೂ ಪರಾಕ್ರಮವನ್ನೂ ವುಳ್ಳವನು. (ವಿ|| ಭಾ) ಇಂತಹ ಧರ್ಮಗಳನ್ನೂ ಪರಾಕ್ರಮಗಳನ್ನೂ ಚೇಷ್ಟಿತಗಳನ್ನೂ ಅಮೋಘವಾಗಿ ವುಳ್ಳವನು. ಈ ಪ್ರಕಾರ

ವಾಗಿ ತಾನೇ ಅರ್ಜುನನು ಗೀತೆಯಲ್ಲಿ "ಸರ್ವಮೇತದೃತಂ ಮನ್ಯೇ ಯನ್ಮಾಂವದಸಿ ಕೇಶವ" ಎಂಬದಾಗಿ ಇವನ ಗುಣ ವಿಭೂತಿ ಚೇಷ್ಟಿತಾದಿ ಗಳನ್ನು ಸತ್ಯಗಳನ್ನಾಗಿ ಹೇಳಿರುವನು. (ಮ) ಸತ್ಯವೂ ಧರ್ಮವೂ ಪರಾಕ್ರಮವೂ ವುಳ್ಳವನು. ‖೨೯೦‖

ಈ (೩೧)ನೇ ಶ್ಲೋಕದಲ್ಲಿ ಪ್ರತಿಪಾದಿಸಲ್ಪಟ್ಟ ಯೇಳು ನಾಮ ಗಳಿಗೂ "ಸರ್ವತಾಪ ಹರಸ್ಯೈವ ಮೃತಸಂಜೀವನಸ್ಯಚ | ಅಮೃತಾಂಶೋರ್ಹಿತಜ್ಞತ್ವಾ "ದಮೃತಾಂಶೂದ್ಭವಃ" (೨೮೪) ಸ್ಮೃತಃ ‖ ರವೇ ಸ್ತೇಜಸ್ಕರತ್ವಾಚ್ಚ "ಭಾನು" (೨೮೫) ರಿತ್ಯಭಿಧೀಯತೆ | ಶಶಪ್ಲುತ ಗತಿಃ ಪ್ರೋಕ್ತೋ ಬಿಂದು ಸ್ತಸ್ಯ ನಿವರ್ತಕಃ ‖ ಕೌಟಿಲ್ಯ ಗತಿ ವಿಧ್ವಂಸೀ "ಶಶಬಿಂದು" (೨೮೬) ರುದಾಹೃತಃ | ಧರಾತ್ಮ ಋಜಾಗತೀನಾಂ ಯಸ್ಸ "ಸುರೇಶ್ವರ" (೨೮೭) ಈರಿತಃ ‖ ಭವತೀವ್ರ ವಿಷಂ ಹರಾತ್ "ಹ್ಯೌಷಧಂ" (೨೮೮) ಯಸ್ಸ ಉಚ್ಯತೆ | ನಿರೋಧಾ "ಜ್ಜಗತ ಸ್ಸೇತು" (೨೮೯) ಸ್ಸದಸದ್ವರ್ಗ ಸಂಕರೇಃ ‖ ಸತ್ಯಾ ಹ್ಯವಿತಥಾ ಧರ್ಮಾ ಗುಣಾಯಸ್ಯ ಪರಾಕ್ರಮಾಃ | ಚೇಷ್ಟಿತಾನಿಚ ಸಂತೀತಿ "ಸತ್ಯ ಧರ್ಮ ಪರಾಕ್ರಮಃ" (೨೯೦) ‖ ಎಂಬೀ ರೀತಿಯಾಗಿ ವಿವೃತಿಯನ್ನು ಕಾಣಬಹುದು.

ಮೂ‖ ಭೂತಭವ್ಯಭವನ್ನಾಥಃ ಪವನಃ ಪಾ
ವನೋ ಽನಲಃ | ಕಾಮಹಾ ಕಾಮಕೃ ತ್ಕಾಂತಃ
ಕಾಮಃ ಕಾಮಪ್ರದಃ ಪ್ರಭುಃ ‖೩೨‖

(೨೯೧ನೇ ನಾಮವು) ಭೂತಭವ್ಯಭವನ್ನಾಥಃ,
ಓಮ್‖ ಭೂತಭವ್ಯಭವನ್ನಾಥಾಯನಮಃ.

(ಶಂ‖ ಭಾ) ಭೂತ ಭವಿಷ್ಯ ದ್ವರ್ತಮಾನಗಳೆಂಬ ಕಾಲತ್ರಯ ಗಳಲ್ಲಿಯೂ ಉಂಟಾಗುವ ಭೂತ ಸಮುದಾಯಗಳಿಂದ ಯಾಚಿಸಲ್ಪಡು ವಂತವನು. ಅಥವಾ ಅಂತಹ ಭೂತಗಳ ದಶೆಯಿಂದ ಪ್ರಾರ್ಥಿಸಲ್ಪಡು ವಂತವನು. ಯದ್ವಾ ಅವುಗಳಿಗೆ ಅಪೇಕ್ಷಿತನಾಗಿರುವಂತವನು.

(ವಿ|| ಭಾ) ಇಂತಹ ಸ್ವಾಮಿತ್ವವೂ ಅಥವಾ ಐಶ್ವರ್ಯವೂ; ತಾತ್ಕಾಲಿಕದಲ್ಲಿ ಮಾತ್ರವೇ ಇಲ್ಲವು. ಮತ್ತು ಭೂತ ಭವಿಷ್ಯ ದ್ವರ್ತಮಾನಗಳೆಂಬ ತ್ರೈಕಾಲಿಕದಲ್ಲಿಯೂ ಇವನಿಗೆ ಇರುವುವಾದುದರಿಂದ "ಭೂತಭವ್ಯ ಭವನ್ನಾಥಃ" ಎನ್ನಲ್ಪಡುವನು. ಇದನ್ನೆ "ಭೂತಭವ್ಯ ಭವನ್ನಾಥಃ ಕೇಶವಃ ಕೇಶಿಸೂದನಃ | ಪ್ರಕಾರ ಸ್ಸರ್ವವೃಷ್ಣೀನಾ ಮಾಪತ್ಸ್ವಭಯದೋಽರಿಹಾ ||" (ಭಾರ|| ಸಭಾಪ|| ೩೮|| ೨೩) ಎಂಬದಾಗಿ ಹೇಳಿರುವರು. ||೭೯೧||

## (೭೯೨ನೇ ನಾಮವು) ಪವನಃ,

### ಓಮ್|| ಪವನಾಯನಮಃ.

(ವಿ|| ಭಾ) ಈ ಪ್ರಕಾರವಾಗಿ ಯಾವಾಗಲೂ ಯೆಲ್ಲೆಲ್ಲಿಯೂ ಸ್ವಭಾವದಿಂದಲೆ ಬೀಸುತಾ ಸಂಚರಿಸುವಂತವನು ಇವನ ಸಂಬಂಧದಿಂದಲೆ ವಾಯುವಿಗೂ ಕೂಡ ಸದಾ ಬೀಸುತಲಿರುವ ಸಾಮರ್ಥ್ಯವುಂಟಾಗಿರುವುದು. ಪವಿರ್ಗತ್ಯರ್ಥಃ (ಶಂ) "ಪವನಃ ಪವತಾ ಮಸ್ಮಿ" ಎಂಬೀ ಪ್ರಮಾಣೋಪನ್ಯಾಸವು. ||೭೯೨||

## (೭೯೩ನೇ ನಾಮವು) ಪಾವನಃ,

### ಓಮ್|| ಪಾವನಾಯನಮಃ.

(ವಿ|| ಭಾ) ಆ ರೀತಿಯಾಗಿಯೇ ತನ್ನ ಸಂಬಂಧವನ್ನು ಹೊಂದಿರುವ ಗಂಗಾದಿ ನದಿಗಳನ್ನೂ ಕೂಡ ಜಗತ್ತಿಗೆಲ್ಲವೂ ಪಾವನಗಳನ್ನಾಗಿ ಮಾಡುವಂತವನು. "ಪಾವನ ಸ್ಸರ್ವ ಲೋಕಾನಾಂ ತ್ವಮೇವ ರಘುನಂದನ" ಎಂಬೀ ಪ್ರಮಾಣವೂ ಈ ಅರ್ಥದಲ್ಲಿ ವರ್ತಿಸಿರುವುದು. ||೭೯೩||

## (೭೯೪ನೇ ನಾಮವು) ಅನಲಃ,

### ಓಮ್|| ಅನಲಾಯನಮಃ.

(ಶಂ|| ಭಾ) ಪ್ರಾಣಗಳನ್ನು ಆತ್ಮವನ್ನಾಗಿ ಅಲಂಕರಿಸುವಂತಹ ಜೀವನಾದ ಕಾರಣದಿಂದಲಾದರೂ; ಪ್ರಾಣಗಳನ್ನು ಗ್ರಹಿಸುತ್ತಾನಾದುದರಿಂದಲಾದರೂ; "ಅ ಗಂಧ ಮರಸಂ" ಎಂಬಂತೆ ಗಂಧರಹಿತನಾ

ದುದರಿಂದಲಾದರೂ ; ಸಾಕೆಂಬ ಪರ್ಯಾಪ್ತಿ ರಹಿತನಾದುದರಿಂದಲಾದರೂ; ಲೋಕ ಸಂಹಾರಕನಾದುದರಿಂದಲಾದರೂ ; " ಅನಲಃ " ಎನ್ನಲ್ಪಡುವನು. (ವಿ|| ಭಾ) ಈ ರೀತಿಯಾಗಿ ನಾನಾ ವಿಧವಾಗಿ ಭಕ್ತರಿಗೆ ಉಪಕಾರವನ್ನು ಮಾಡಿದರೂ ಸಾಕೆಂಬ ಅಲಂಬುದ್ಧಿ ಯಿಲ್ಲದವನು. ಇಂತಹ ಶಕ್ತಿಯ ಲೇಶಮಾತ್ರದಿಂದಲೆ ತಾನೆ ಅಗ್ನಿಗೂ ಕೂಡ ಅನಲನೆಂಬ ಹೆಸರುಂಟಾಗಿರುವುದು. ||೨೯೪||

(೨೯೫ನೇ ನಾಮವು) ಕಾಮಹಾ,

ಓಮ್|| ಕಾಮಘ್ನೇನಮಃ.

(ಶಂ|| ಭಾ) ಮುಮುಕ್ಷುಗಳೂ ಭಕ್ತರೂ ಹಿಂಸಕರೂ ಆದವರ ಅಪೇಕ್ಷಿತಗಳನ್ನು ಹರಿಸುವಂತವನು (ಮ) ಅಮೃತಾರ್ಥಿಗಳಾದ ದೈತ್ಯರ ಇಷ್ಟವನ್ನು ನಾಶಪಡಿಸುವಂತವನು. (ವಿ|| ಭಾ) ಇಂತಹ ತನ್ನ ಗುಣಾತಿಶಯಗಳನ್ನೆಲ್ಲಾ ತಿಳಿದವರುಗಳಿಗೆ ಶಬ್ದಾದಿ ವಿಷಯಗಳಲ್ಲಿ ಅಪೇಕ್ಷೆಯನ್ನು ನಾಶಪಡಿಸುವಂತವನು. " ನ ಕಾಮ ಕಲುಷಂ ಚಿತ್ತಂ ಮಮ ತೇ ಪಾದಯೋ ಸ್ಸ್ಥಿತಂ " ಎಂಬೀ ಪ್ರಮಾಣವು ಈ ವಿಷಯದಲ್ಲಿರುವುದು. ||೨೯೫||

(೨೯೬ನೇ ನಾಮವು) ಕಾಮಕೃತ್,

ಓಮ್|| ಕಾಮಕೃತೇನಮಃ.

(ಶಂ|| ಭಾ) ಕಾಮುಕರಿಗೆ ಇಷ್ಟವನ್ನುಂಟುಮಾಡತಕ್ಕವನು. ಅಥವಾ ; (ಶಂ||ಮ) ಕಾಮನೆಂದರೆ ಪ್ರದ್ಯುಮ್ನನು ; ಅವನಿಗೆ ಜನಕನು. (ವಿ|| ಭಾ) ಭೋಗ ಮೋಕ್ಷಾದಿಗಳನ್ನು ಅಪೇಕ್ಷಿಸುವಂತೆ ಮಾಡುವಂತವನು. ||೨೯೬||

(೨೯೭ನೇ ನಾಮವು) ಕಾಂತಃ,

ಓಮ್|| ಕಾಂತಾಯನಮಃ.

(ಶಂ|| ಭಾ) ಅತ್ಯಂತ ಪ್ರಿಯನು. (ಮ) ಲಕ್ಷ್ಮೀಕಾಂತನು. (ವಿ|| ಭಾ) ಸೌಂದರ್ಯ ಸೌಕುಮಾರ್ಯವೇ ಮೊದಲಾದ ದಿವ್ಯದೇಹ ಗುಣಗಳಿಂದ ಅತ್ಯಂತ ಮನೋಹರನಾದವನು. ||೨೯೭||

(೨೯೮ನೇ ನಾಮವು) ಕಾಮಃ,
ಓಮ್॥ ಕಾಮಾಯನಮಃ.

(ಶಂ॥ ಭಾ) ಪುರುಷಾರ್ಥಾಪೇಕ್ಷಿಗಳಿಂದ ಅಪೇಕ್ಷಿಸಲ್ಪಡತಕ್ಕವನು. (ವಿ॥ ಭಾ) ಶೀಲೌದಾರ್ಯಾದಿಗಳಾದ ಆತ್ಮಗುಣಗಳಿಂದ ಅತ್ಯಂತ ಮನೋಹರನಾದವನು. ಇಂತಹ ಗುಣ ಲೇಶಮಾತ್ರದಿಂದಲೆ ತಾನೆ ಮನ್ಮಥನು ಲೋಕರನ್ನು ಹುಚ್ಚರನ್ನಾಗಿ ಮಾಡುವನು. (ಮ) ಜಗತ್ಸೃಷ್ಟ್ಯಾದಿಗಳನ್ನು ಕುರಿತು ಆಲೋಚಿಸತಕ್ಕವನು. ॥೨೯೮॥

(೨೯೯ನೇ ನಾಮವು) ಕಾಮಪ್ರದಃ,
ಓಮ್॥ ಕಾಮಪ್ರದಾಯನಮಃ.

(ಶಂ॥ ಭಾ) ಭಕ್ತರುಗಳಿಗೆ ಇಷ್ಟಾರ್ಥಗಳನ್ನು ಅಧಿಕವಾಗಿ ಕೊಡುವಂತವನು. (ವಿ॥ ಭಾ) ಪರಮಾತ್ಮ ಪ್ರಾಪ್ತಿಯನ್ನಪೇಕ್ಷಿಸತಕ್ಕವರಿಗೂ ಇತರ ಕ್ಷುದ್ರ ಪುರುಷಾರ್ಥಾಪೇಕ್ಷಿಗಳಿಗೂ ಅವರವರ ಮನೋರಥಾನುಗುಣವಾದ ಅಭೀಷ್ಟಗಳನ್ನು ಕೊಡುವಂತವನು. ಈ ವಿಷಯದಲ್ಲಿ "ಏಕೋ ಬಹೂನಾಂ ಯೊ ವಿದಧಾತಿ ಕಾಮಾನ್" (ಕಠ॥ ೨॥ ೫) ಎಂಬೀ ಪ್ರಮಾಣವು ಜಾಗರೂಕವಾಗಿರುವುದು. ॥೨೯೯॥

(೩೦೦ನೇ ನಾಮವು) ಪ್ರಭುಃ,
ಓಮ್॥ ಪ್ರಭವೇನಮಃ.

(ಶಂ॥ ಭಾ) ಪ್ರಕರ್ಷೇಣ ಭವತೀತಿ ಪ್ರಭುಃ-ಅಧಿಕವಾಗಿ ಆಗುವಂತವನು. (ಮ) ಪ್ರಕರ್ಷೇಣ ಭವತೆ ಪ್ರಾಪ್ನೋತೀತಿ ಪ್ರಭುಃ-ಅಧಿಕವಾಗಿ (ಸಮಸ್ತವನ್ನೂ) ಹೊಂದುವಂತವನು. "ಪ್ರಭುರೀಶ್ವರಃ" ಎಂಬ ಕಡೆಯಲ್ಲಿರುವ ಪ್ರಭು ಶಬ್ದವು ಸಮರ್ಥನೆಂಬ ಅರ್ಥದಲ್ಲಿರುವ ಕಾರಣ ಪುನರುಕ್ತಿ ಇಲ್ಲವು. (ವಿ॥ ಭಾ) ಇಂತಹ ಅತ್ಯಂತ ಮನೋಹರನಾದ ಕಾರಣ ಸಕಲಪ್ರಾಣಿಗಳ ಹೃದಯವನ್ನೂ ಅಪಹರಿಸುವುದರಲ್ಲಿ ಸಮರ್ಥನಾದವನು. "ರಾಮಃ ಕಮಲ ಪತ್ರಾಕ್ಷ ಸ್ಸರ್ವಸತ್ವ ಮನೋಹರಃ" (ಶ್ರೀರಾ॥) ಎಂಬೀ ವಚನವು ಈ ಅರ್ಥವನ್ನು ಬೋಧಿಸುವುದು. ॥೩೦೦॥

ಈ ರೀತಿಯಾಗಿ ಶ್ರೀಪರಾಶರ ಭಟ್ಟಾಚಾರ್ಯ ಭಾಷಿತವಾದ
ಭಗವದ್ಗುಣ ದರ್ಪಣವೆಂಬ ಶ್ರೀವಿಷ್ಣು ಸಹಸ್ರನಾಮ ಭಾಷ್ಯದಲ್ಲಿ
ತೃತೀಯ ಶತಕವು ಸಮಾಪ್ತವು.

ಈ (೩೨)ನೇ ಶ್ಲೋಕದಲ್ಲಿರುವ (೧೦) ನಾಮಗಳಿಗೂ "ಐಶ್ವರ್ಯಂ ಯಸ್ಯ ಸ್ವಾಮ್ಯಂವಾ ತ್ರಿಕಾಲೇಷ್ವಪಿ ಯಸ್ಯಾಸಃ | "ಭೂತಭವ್ಯಭವನ್ನಾಥಃ" (೨೯೧) ಇತ್ಯುಕ್ತಸ್ಸದ್ಭಿರಾದರಾತ್ ‖ ಸದಾ ಸ್ವಯಂತು ಸರ್ವತ್ರ ಪ್ರವಾಹ ಇತಿ ನಿತ್ಯಶಃ | "ಪವನಃ" (೨೯೨) ಪ್ರವಹತಿ ಯಃ ಕಸ್ಯತೆವೇಗದೋ ಮನುಃ ‖ ಯಸ್ಸ್ವಸಂಬಂಧಿ ಗಂಗಾದೀನ್ ಪಾವನಾನ್ಲೋಕ ಪಾವನಾನ್ | ಸ "ಪಾವನ" (೨೯೩) ಇತಿ ಖ್ಯಾತಃ ಪಾವನತ್ವ ಪ್ರದೋ ಮನುಃ ‖ ಅಪರ್ಯಾಪ್ತೋಹಿ ಭಕ್ತೇಭ್ಯೋ ಪ್ಯುಪಕೃತ್ಯ ಪುನಃ ಪುನಃ | ಅನುಗ್ರಹಂ ಯಃ ಕರೋತಿ ಸೋ "ಽನಲಃ" (೨೯೪) ಪರಿಕೀರ್ತಿತಃ ‖ ಪುಂಸಾಂ ಸ್ವದರ್ಶಿನಾಂ ಯೋಸೌ ಸ್ಪೃಹಾಂಚ ವಿಷಯಾಂತರೆ | ಹತವಾನ್ "ಕಾಮಹಾ" (೨೯೫) ಪ್ರೋಕ್ತ ಸ್ಸರ್ವಾಶಾ ಪೂರಕೋ ಮನುಃ ‖ ಸ್ವಪಾದ ಪದ್ಮೇ ರಾಗಾದಿ ಕರಣಾ "ತ್ಕಾಮಕೃ" (೨೯೬) ತ್ಸ್ಮೃತಃ | ಸೌಂದರ್ಯಾದಿ ಗುಣೈಃ "ಕಾಂತೋ" (೨೯೭) ಮನೋಹರತಯಾಭೃಶಂ ‖ ಸ್ವಕಾಮ್ಯ ಕ್ಷುದ್ರಕಾಮ್ಯೇಭ್ಯೋ ಯಥಾರ್ಥಂ ಕಾಮ್ಯದಾನತಃ | "ಕಾಮಪ್ರದ" (೨೯೮) ಸ್ಸಮಾಖ್ಯಾತೋಹ್ಯಷ್ಟಾಕ್ಷ್ಣೋ ಮನುರುತ್ತಮಃ ‖ ಸರ್ವೇಷಾಂ ಚಿತ್ತಹರಣೆ "ಪ್ರಭುಃ" (೩೦೦) ಪ್ರಭವತೀತಿಯಃ" ಎಂಬಂತೆ ನಿರುಕ್ತಿಯನ್ನು ಕಾಣಬಹುದು.

ಇನ್ನು ಮುಂದೆ ಚತುರ್ಥ ಶತಕವು.

ಮೂ‖ ಯುಗಾದಿಕೃ ದ್ಯುಗಾವರ್ತೋ ನೈಕ
ಮಾಯೊ ಮಹಾಶನಃ | ಅದೃಶ್ಯೋ ವ್ಯಕ್ತರೂ
ಪಶ್ಚ ಸಹಸ್ರಜಿ ದನಂತಜಿತ್ ‖೩೩‖

(೩೦೧ನೇ ನಾಮವು) ಯುಗಾದಿಕೃತ್,

ಓಮ್‖ ಯುಗಾದಿಕೃತೇನಮಃ.

(ಶಂ‖ ಭಾ) ಕಾಲಭೇದವನ್ನು ಮಾಡತಕ್ಕವನು. ಅಥವಾ ;
ಮ) ಯುಗಗಳಿಗೆ (ಮೊದಲನೇ) ಆರಂಭವನ್ನು ಮಾಡುವಂತವನು ‖೩೦೧‖

(ಶಂ|| ಮ) ಪ್ರಕಾರವಾಗಿ ತೃತೀಯ ಶತಕವು ಪೂರ್ಣವಾಯಿತು. (ವಿ|| ಭಾ) ಯುಗಾಂತ ಕಾಲದಲ್ಲಿಯೂ ಕೂಡ ಯುಗಕ್ಕೆ ಆದಿಯನ್ನು ಮಾಡತಕ್ಕವನು. ಇವನು ತಾನೆ ಪ್ರಳಯಕಾಲದಲ್ಲಿಯೂ ಕೂಡ ಪ್ರಪಂಚವನ್ನು ಮುಣುಗಿ ಹೋಗದಂತೆ ಪ್ರವರ್ತಿಸುವಂತವನು. ||೩೦೧||

## (೩೦೨ನೇ ನಾಮವು) ಯುಗಾವರ್ತಃ,

### ಓಮ್|| ಯುಗಾವರ್ತಾಯನಮಃ.

(ಶಂ|| ಮ) ತಾನು ಕಾಲರೂಪಿಯಾಗಿ ಕೃತಾದಿ ಯುಗಗಳನ್ನು ತಿರುಗುವಂತೆ ಮಾಡುವಂತವನು (ವಿ|| ಭಾ) ತಾನು ಮಾಡುವ ಧರ್ಮ ವ್ಯವಸ್ಥೆಯಿಂದ ಕೃತಾದಿ ಯುಗಗಳನ್ನು ಪುನಃ ಪುನಃ ತಿರುಗುವಂತೆ ಮಾಡುವಂತವನು. ||೩೦೨||

## (೩೦೩ನೇ ನಾಮವು) ನೈಕಮಾಯಃ,

### ಓಮ್|| ನೈಕಮಾಯಾಯನಮಃ.

(ಶಂ|| ಭಾ) ಹೊರಗಡೆ ಮಾಯೆಯುಳ್ಳವರಲ್ಲಿ ಒಂದು ಮಾಯೆಯುಳ್ಳವನಲ್ಲವೆಂದರೆ ಅನೇಕ ಮಾಯೆಯುಳ್ಳವನು. (ವಿ|| ಭಾ) ಸಣ್ಣಬಾಲಕ ರೂಪಿಯಾಗಿರುವುದು, ಅಪರಿಮಿತವಾದ ಲೋಕಗಳನ್ನು ಹೊರಪಡಿಸುವುದು, ಯಾವದೊಂದು ಆಧಾರವಿಲ್ಲದೆ ಏಕಾರ್ಣವಾವಸ್ಥೆಯನ್ನು ಹೊಂದಿರುವ ಪ್ರಳಯಕಾಲದಲ್ಲಿ ಒಂದು ಆಲದ ಯೆಲೆಯಲ್ಲಿ ಶಯನಮಾಡಿಕೊಂಡಿರುವದೇ ಮೊದಲಾದ ಅನೇಕ ಆಶ್ಚರ್ಯ ಚೇಷ್ಟಿತಗಳುಳ್ಳವನು ಇಲ್ಲಿನ ಮಾಯಾ ಶಬ್ದವು ಮಿಥ್ಯಾ ವಿಷಯವನ್ನು ಹೇಳುವುದೆಂದು ತಿಳಿಯಕೂಡದು. ಸತ್ಯವಾದ ವಿಷಯಗಳಲ್ಲಿಯೂ ಮಾಯಾ ಶಬ್ದ ಪ್ರಯೋಗವು ಅಧಿಕವಾಗಿ ಕಾಣಲ್ಪಡುವುದು. ಅದು ಎಲ್ಲೆಂಪರೆ:—"ಮಾಯಾಂತು ಪ್ರಕೃತಿಂ ವಿದ್ಯಾತ್" (ಶ್ವೆ ೪|| ೯) ಎಂಬ ವಾಕ್ಯವು ಅನೇಕಾರ್ಥಗಳನ್ನೂ ಅನೇಕ ಕಾರ್ಯಗಳನ್ನೂ ಮಾಡುವ ಸತ್ಯವಾದ ಪ್ರಕೃತಿಯಲ್ಲಿಯೂ; "ಮಾಯಾ ವಯುನಂ ಜ್ಞಾನಂ || ಸಂಖ್ಯಾತಾ ದೇವಮಾಯಯಾ||

ವಿಶ್ವಾನಿ ದೇವ ವಯುನಾನಿ ವಿದ್ವಾನ್" ಎಂಬದಾಗಿ ಜ್ಞಾನದಲ್ಲಿಯೂ; "ತೇನಮಾಯಾ ಸಹಸ್ರಂ ತಚ್ಛಂಬರಸ್ಯಾ ಶುಗಾಮಿನಾ | ಬಾಲಸ್ಯ ರಕ್ಷತಾದೇಹ ಮೇಕೈಕಶ್ಯೇ ನ ಸೂದಿತಂ" (ವಾರಾಹ) ಎಂಬದಾಗಿ ತತ್ವ ಜ್ಞಾನದಿಂದ ಬಾಧಿಸಲ್ಪಡದೆ ಅಸ್ತ್ರಮಾತ್ರದಿಂದಲೇ ಬಾಧಿಸಲ್ಪಡುವುದರಲ್ಲಿಯೂ; ಮಾಯಾ ಶಬ್ದ ಪ್ರಯೋಗವಿರುವುದು ಇನ್ನು "ಮೇಘೋದಯಸ್ಸಾಗರ ಸನ್ನಿವೃತ್ತಿರಿಂದೋರ್ವಿಭಾಗ ಸ್ಸ್ಫುರಿತಾನಿವಾಯೋಃ | ವಿದ್ಯುದ್ವಿಭಂಗೋ ಗತಿರುಷ್ಣ ರಶ್ಮೇ ರ್ವಿಷ್ಣೋ ರ್ವಿಚಿತ್ರಾಃ ಪ್ರಭವಂತಿ ಮಾಯಾಃ" ಎಂಬದಾಗಿ ಜ್ಞಾನಾಧಿಕರಿಂದ ಮಹಾಶ್ಚರ್ಯಕರವಾದ ವಿಷಯದಲ್ಲಿ ಮಾಯಾ ಶಬ್ದವೂ, ಆರಣ್ಯ ಪರ್ವದಲ್ಲಿ ಮಾರ್ಕಂಡೇಯರಿಂದಲೂ ಆಲದ ಯೆಲೆಮೇಲೆ ಮಲಗಿರುವನೇ ಮೊದಲಾದ ಆಶ್ಚರ್ಯಗಳು ಹೇಳಲ್ಪಟ್ಟಮೇಲೆ "ತತೋಮೇ ಪೃಥಿವೀಪಾಲ ವಿಸ್ಮಯಸ್ಸು ಮಹಾನಭೂತ್ | ಲೋಕಂ ದೃಷ್ಟ್ವಾ ಸಮಸ್ತಂಚ" ಎಂದು ಉಪಕ್ರಮಿಸಿ "ಇತ್ಯುಕ್ತ್ವಾಂತರ್ಹಿತಸ್ತತ್ರ ಸ ದೇವಃ ಪರಮಾದ್ಭುತಃ | ಆಶ್ಚರ್ಯಂ ಭರತ ಶ್ರೇಷ್ಠ" (ಭಾರ|| ಆ|| ೧೮೮--೯೪) ಎಂಬದಾಗಿ ನಿರ್ದೋಷ ಪ್ರತ್ಯಕ್ಷ ಸಿದ್ಧವಾದ ಅದೇ ವಿಷಯದಲ್ಲಿ ಬಹ್ವಾಶ್ಚರ್ಯಾರ್ಥ ಪ್ರಯೋಗವೂ ಬಹುಳವಾಗಿ ಮಾಡಲ್ಪಟ್ಟಿರುವುದು. (ಮ) ಅನೇಕಗಳಾದ ಮಾಯೆಯುಳ್ಳವನು. "ಇಂದ್ರೋ ಮಾಯಾಭಿಃ ಪುರುರೂಪ ಈಯತೆ" ಎಂಬದಾಗಿ ಶ್ರುತಿ ಇರುವುದು. ಇಲ್ಲಿನ ಇಂದ್ರ ಶಬ್ದವು ಪರಮೇಶ್ವರನನ್ನು ಬೋಧಿಸುವುದು. ಈ ಮಾಯೆಗೆ ಅಲ್ಲಲ್ಲಿ ಕಾಣಲ್ಪಡುವ ಏಕ ವಚನವು ಜಾತ್ಯೇಕ ವಚನವಾಗಿರುವುದು. ಭಗವದ್ಗತವಾದ ಜ್ಞಾನಾನಂದಾದಿಗಳಿಗೆ ಅನೇಕತ್ವವಿಲ್ಲವು. ಕೆಲವರು ಮಾಯಾ ಎಂಬುವುದೇನೊ ಒಂದಾಗಿಯೇ ಇರುವುದು. ಅಲ್ಲಲ್ಲಿ ಕಾಣಲ್ಪಡುವ ಬಹುವಚನವು ಇದರ ಶಕ್ತಿ ಬಹುತ್ವವನ್ನು ತೋರಿಸುವುದೆಂತಲೂ ಹೇಳುತ್ತಾರೆ. ||೩೦೩||

(೩೦೪ನೇ ನಾಮವು) ಮಹಾಶನಃ,

ಓಮ್|| ಮಹಾಶನಾಯನಮಃ.

(ಶಂ|| ವಿ|| ಮ) ಸಮಸ್ತ ಪ್ರಪಂಚವನ್ನು ನುಂಗುವುದರಿಂದ ಮಹತ್ತಾದ ಆಹಾರವುಳ್ಳವನು. (ವಿ) "ಯತ್ಕಿಂಚಿನ್ಮಯಾಲೋಕೆ ದೃಷ್ಟಂ

ಸ್ಥಾವರ ಜಂಗಮಂ | ತದಪಶ್ಯ ಮಹಂ ಸರ್ವಂ ತಸ್ಯ ಕುಕ್ಷೌ ಮಹಾತ್ಮನಃ || " (ಭಾರ|| ಅರ|| ೧೯೪=೧೨೨) ಎಂಬೀ ವಚನವು ಈ ಅರ್ಥವನ್ನು ಬೋಧಿಸುವುದು. ||೩೦೪||

## (೩೦೫ನೇ ನಾಮವು) ಅದೃಶ್ಯಃ,

### ಓಮ್|| ಅದೃಶ್ಯಾಯನಮಃ.

(ಶಂ|| ಭಾ) ಸಮಸ್ತಗಳಾದ ಬುದ್ಧೀಂದ್ರಿಯಗಳಿಗೆ ಅಗೋಚರನು. (ವಿ|| ಭಾ) ಇಂತವನೆಂದು ನೆನೆಯಲಶಕ್ಯವಾದ ವೃತ್ತಾಂತವುಳ್ಳವನು. ಇದು " ಕಧನ್ವಯಂ ಶಿಶುಶ್ಶೇತೆ ಲೋಕೇನಾಶ ಮುಪಾಗತೆ | ತಪಸಾ ಚಿಂತಯಂಶ್ಚಾಪಿ ತಂ ಶಿಶುಂ ನೋಪಲಕ್ಷಯೆ " (ಭಾರ|| ಅರ|| ೧೯೪|| ೯೪) ಎಂಬ ವಚನದಿಂದ ಬೋಧಿತವಾಗುವುದು. (ಮ) ಸ್ಥೂಲದೃಷ್ಟಿಯುಳ್ಳವರಿಗೆ ಗೋಚರನಾಗದವನು. ||೩೦೫||

## (೩೦೬ನೇ ನಾಮವು) ವ್ಯಕ್ತರೂಪಃ,

### ಓಮ್|| ವ್ಯಕ್ತರೂಪಾಯನಮಃ.

(ಶಂ|| ಭಾ) ಸ್ಥೂಲರೂಪದಿಂದ ವ್ಯಕ್ತವಾದ ಸ್ವರೂಪವುಳ್ಳವನು, ಅಥವಾ ; ಸ್ವಯಂಪ್ರಕಾಶನಾದ ಕಾರಣ ಯೋಗಿಗಳಿಗೆ ವ್ಯಕ್ತರೂಪನು. (ವಿ|| ಭಾ) ಇಂತವನೆಂದು ನೆನೆಯಲಶಕ್ಯವಾದ ವೃತ್ತಾಂತವುಳ್ಳವನಾಗಿದ್ದರೂ ಭಕ್ತರಾದ ಮಾರ್ಕಂಡೇಯಾದಿಗಳಿಗೆ ಸುಖವಾಗಿ ಕಾಣುವದಕ್ಕೆ ಯೋಗ್ಯವಾದ ದಿವ್ಯಮಂಗಳ ವಿಗ್ರಹವುಳ್ಳವನು. " ಅತಸೀಪುಷ್ಪಸಂಕಾಶ ಶ್ರೀವತ್ಸ ಕೃತ ಲಕ್ಷಣಃ| ಸಾಕ್ಷಾಲ್ಲಕ್ಷ್ಮ್ಯಾ ಇವಾ ವಾಸಸ್ಸುಸ್ಸದಾ ಪ್ರತಿ ಭಾತಿಮೆ || (ಭಾರ|| ಅ|| ೧೯೪|| ೯೬) ತಸ್ಯ ತಾಮ್ರ ತಲೌತಾತ ಚರಣೌ ಸುಪ್ರತಿಷ್ಠಿತೌ | ಸುಜಾತ ಮೃದುರಕ್ತಾಭಿ ರಂಗುಲೀಭಿರಲಂಕೃತೌ|| ಪ್ರಣತೇನ ಮಾಯಾ ಮೂರ್ಧ್ನಾ ಗೃಹೀತ್ವಾಹ್ಯಭಿವಂದಿತೌ" (ಭಾ|| ಅರ|| ೧೯೯|| ೪೧) ಇಂತಹ ಪ್ರಮಾಣಗಳು ಇವನ ವ್ಯಕ್ತರೂಪತ್ವವನ್ನು ಬೋಧಿಸುವುವು. ||೩೦೬||

## (೩೦೭ನೇ ನಾಮವು) ಸಹಸ್ರಜಿತ್,

### ಓಮ್|| ಸಹಸ್ರಜಿತೇನಮಃ.

(ಶಂ॥ ಭಾ) ಅನೇಕ ಸಹಸ್ರ ರಾಕ್ಷಸರನ್ನು ಜಯಿಸಿದವನು. (ವಿ॥ ಭಾ) "ಯಾವದ್ಯುಗಾನಾಂ ವಿಪ್ರರ್ಷೇ ಸಹಸ್ರಂ ಪರಿವರ್ತ್ತತೆ । ತಾವತ್ಸ್ವಪಿಮಿ" (ಭಾರ॥ ಅರ॥ ೧೮೯॥ ೪೧) ಎಂಬ ವಚನಾನುಸಾರವಾಗಿ ಸಹಸ್ರಯುಗವುಳ್ಳ ಕಲ್ಪಾಂತದವರಿಗೂ ಶಯನಮಾಡಿಕೊಂಡೇ ಸರ್ವೋನ್ನತನಾಗಿ ಪ್ರಕಾಶಿಸುತಲಿರುವಂತವನು. ॥೩೦೭॥

## (೩೦೮ನೇ ನಾಮವು) ಅನಂತಜಿತ್,

### ಓಮ್॥ ಅನಂತಜಿತೇನಮಃ.

(ಶಂ॥ ಭಾ) ಸರ್ವಸ್ಥಲಗಳಲ್ಲಿಯೂ ಅಚಿಂತ್ಯ ಶಕ್ತಿ ಯುಳ್ಳವನಾದ ಕಾರಣ ಸಕಲ ಭೂತಗಳನ್ನೂ ಯುದ್ಧಕ್ರೀಡೆಯಲ್ಲಿ ಜಯಿಸುವಂತವನು. (ವಿ॥ ಭಾ) "ಅಂತಕ್ಶರೀರೇ ತಸ್ಯಾಹಂ ವರ್ಷಾಣಾ ಮಧಿಕಂ ಶತಂ । ನಹಿ ಪಶ್ಯಾಮಿ ತಸ್ಯಾಹಮನ್ತಂ ದೇವಸ್ಯ ಕರ್ಹಿಚಿತ್ ॥ ಆಸಾದಯಾಮಿ ನೈವಾಂತಂ ತಸ್ಯರಾಜನ್ಮಹಾತ್ಮನಃ" (ಭಾರ॥ ಅ॥ ೧೨೪॥ ೧೨೫) ಎಂಬಂತೆ ಸ್ವಲ್ಪವಾದ ಶಿಶುರೂಪನಾಗಿದ್ದರೂ ಕೂಡ ಇವನ ಮಹಿಮಾತಿಶಯವನ್ನು ಯಾರೂ ಯಾವ ಕಾಲದಲ್ಲಿಯೂ ಯಾವ ವಿಧದಲ್ಲಿಯೂ ತಿಳಿಯಲಶಕ್ಯನಾಗಿರುವಂತವನು. ॥೩೦೮॥

ಈ ಪ್ರಕಾರವಾಗಿ ಈ (೩೩)ನೇ ಶ್ಲೋಕದಲ್ಲಿ ಪ್ರತಿಪಾದಿಸಲ್ಪಡುವ (೮) ನಾಮಗಳಿಗೂ; "ನ್ಯಗ್ರೋಧಶಾಯೀ ಭಗವಾನ್ ಪುರಾಣಪುರುಷೋತ್ತಮಃ । ಕರೋತ್ಯಾದಿ ಯುಗಸ್ಯಾಂತೇ "ಯುಗಾದಿಕೃ" (೩೦೧) ದುದೀರಿತಃ ॥ ಧರ್ಮ ವ್ಯವಸ್ಥಯಾ ಸ್ವಸ್ಯ ಯುಗಾದ್ಯಾ ವರ್ತನಾನ್ಮಹುಃ । "ಯುಗಾವರ್ತ" (೩೦೨) ಸ್ಸಮಾಖ್ಯಾತಃ ಕಾಲರೂಪಧರೋ ಹರಿಃ ॥ ಮುಗ್ಧಾರ್ಭಕ ಸ್ವರೂಪೇಣ ಜಗನ್ನಿ ರ್ಭರಣಾದಪಿ । ವಟೈಕಪತ್ರಶಯನಾ ನ್ನಿರಾಲಂಬ ಜಲೇಮುಹುಃ ॥ ಅನಂತಾಶ್ಚರ್ಯ ಸಂಯುಕ್ತೋ "ನೈಕಮಾಯ" (೩೦೩) ಸ್ಸುಸಂಸ್ಮೃತಃ ॥ ಭುವನಾನಾಂನಿಗರಣಾ "ನ್ಮಹಾಶನ" (೩೦೪) ಇತೀರಿತಃ । ಅತರ್ಕ್ಯ ವೃತ್ತಾಂತ ತಯಾ ಜಗತಃ ಪ್ರಲಯೇಪಿಯಃ । ನಲಬ್ಧಶ್ಚಿಂತ್ಯಮಾನೋಪಿ ಸೋ "ಽದೃಶ್ಯ" (೩೦೫) ಇತಿ ಕಥ್ಯತೆ ॥ ಮಹಾಜಲೆ ಸಂಚರತೋ ಮಾರ್ಕಂಡೇಯಸ್ಯ ಧೀಮತಃ । ದೃಶ್ಯೋಯೋ "ವ್ಯಕ್ತರೂಪ" (೩೦೬) ಸ್ಸಾಸ್ಯ ದ್ದಿವ್ಯ ವಿಗ್ರ

ಣ ಧಾರಣಾತ್ ‖ ಸಹಸ್ರಯುಗ ಸಂಖ್ಯಾಕಂ ಸರ್ವಕಲ್ಪಾಂತಮೇವಹಿ | ಶಯಾನ ಏವ ಜಯತಿ " ಸಹಸ್ರಜಿ " (೩೦೭) ದಿತಿ ಸ್ಮೃತಿಃ ‖ ಮತಸ್ಯ ಶಿಶುರೂಪಸ್ಯ ಕದಾಚಿತ್ಕ್ಶಿದೇವಹಿ | ಕಥಂ ಚಿದವಧಿರ್ನಾಸ್ತಿ ವೃದ್ಧಿರ್ವಿಷ್ಣೋಃ ಪರಮಾತ್ಮನಃ ‖ ತಸ್ಮಾ " ದನಂತಜಿ " (೩೦೮) ದಿತಿವೇದ್ಯರ್ಷ್ಯೋ ಜಯ ದೋ ಮನುಃ " ಎಂಬಂತೇ ನಿರುಕ್ತಿಯನ್ನು ಕಾಣಬಹುದು.

ಮೂ‖ ಇಷ್ಟೋಽವಿಶಿಷ್ಟ ಶ್ಶಿಷ್ಟೇಷ್ಟ ಶ್ಶಿಖಂ
ಡೀ ನಹುಷೋ ವೃಷಃ | ಕ್ರೋಧಹಾ ಕ್ರೋಧ
ಕೃ ತ್ಕರ್ತಾ ವಿಶ್ವಬಾಹು ರ್ಮಹೀಧರಃ ‖೩೪‖

(೩೦೯—೩೧೦ನೇ ನಾಮವು) ಇಷ್ಟೋಽವಿಶಿಷ್ಟಃ,
ಓಮ್‖ ಇಷ್ಟಾಯನಮಃ. ಓಮ್‖ ಅವಿಶಿಷ್ಟಾಯನಮಃ.

(ಶಂ‖ ಮ) ಪರಮಾನಂದಾತ್ಮಕನಾದ ಕಾರಣ ಪ್ರಿಯನಾಗಿರುವುದರಿಂದಲೂ; ಯಜ್ಞದಿಂದ ಪೂಜಿಸಲ್ಪಡುವಂತವನಾದಕಾರಣದಿಂದಲೂ; ಇಷ್ಟಃ. (ವಿ‖ ಭಾ) ಈ ಪ್ರಕಾರವಾಗಿ ತನ್ನ ಹೊಟ್ಟೆಯಲ್ಲಿ ಧರಿಸಲ್ಪಡುವ ಪ್ರಾಣಿಗಳನ್ನು ತಾರತಮ್ಯವಿಲ್ಲದೆ ತನ್ನ ಕೃಪಾಮಾತ್ರದಿಂದ ತಾಯಿಯಂತೆ ಇಷ್ಟದಿಂದ ಕಾಯುವಂತವನು. (ಶಂ) ವಿಶಿಷ್ಟಃ—ಸಕಲ ಭೂತಗಳಿಗೂ ಅನ್ತರ್ಯಾಮಿಯಾಗಿದ್ದುಕೊಂಡು ಮಹತ್ವವುಳ್ಳವನಾಗಿರುವುದರಿಂದಲೂ; ಸರ್ವರಿಗೂ ಹಿರಿಯನಾದಕಾರಣದಿಂದಲೂ, 'ವಿಶಿಷ್ಟಃ' ಎನ್ನಲ್ಪಡುವನು. (ಮ) ವಿಶಿಷ್ಟಃ—ಸರ್ವಾಧಿಕನು. ‖೩೦೯—೩೧೦‖

(೩೧೧ನೇ ನಾಮವು) ಶಿಷ್ಟೇಷ್ಟಃ,
ಓಮ್‖ ಶಿಷ್ಟೇಷ್ಟಾಯನಮಃ.

(ಶಂ‖ ಭಾ) ಬ್ರಹ್ಮವೇದಿಗಳಿಗೆ ಇಷ್ಟನು. ಮತ್ತು "ಪ್ರಿಯೋಹಿ ಜ್ಞಾನಿನೋತ್ಯರ್ಥ ಮಹಂಸಚ ಮಮಪ್ರಿಯಃ " (ಭ‖ ಗೀ ) ಎಂಬ ವಚನಾನುಸಾರವಾಗಿ ಶಿಷ್ಟಜನರೆ ಯಾವ ಪರಮಾತ್ಮನಿಗೆ ಇಷ್ಟರಾಗಿರುವರೋ ಅವನು ಶಿಷ್ಟೇಷ್ಟಃ. ಅಥವಾ; ಶಿಷ್ಟರಿಂದ ಪ್ರಾರ್ಥಿಸಲ್ಪಡುವಂತವನು. (ವಿ‖ ಭಾ) ಬ್ರಹ್ಮಜ್ಞಾನಿಗಳಾದ ಮಾರ್ಕಂಡೆಯಾದಿಗಳೆಲ್ಲರು

ಶ್ರೇಷ್ಠವಾದ ಪುರುಷಾರ್ಥವೆಂದು ಯಾವನನ್ನು ಅಪೇಕ್ಷಿಸುವರೊ ಅವನು "ಶಿಷ್ಟೇಷ್ಟಃ" ಎನ್ನಲ್ಪಡುವನು. ಈ ಅರ್ಥವು "ಸತ್ವಸ್ಥಾ ನಿರಹಂಕಾರಾ ನಿತ್ಯ ಮಧ್ಯಾತ್ಮಕೋವಿದಾಃ | ಮಾಮೇವ ಸತತಂ ವಿಪ್ರಾಶ್ಚಿಂತಯಂತ ಉಪಾಸತೆ ॥ (ಭಾ॥ ಅ॥ ೧೪೯॥ ೧೬೭) "ಆಸೀನಂತಂ ನರವ್ಯಾಘ್ರಂ ಪಶ್ಯಾಮ್ಯಮಿತ ತೇಜಸಂ" (ಭಾ॥ ಆರ॥ ೧೮೮॥ ೧೨೯) ಎಂಬೀ ಪ್ರಮಾಣಗಳಲ್ಲಿ ಸಿದ್ಧವಾಗುವುದು. ॥೩೧೧॥

## (೩೧೨ನೇ ನಾಮವು) ಶಿಖಂಡೀ,

## ಓಮ್॥ ಶಿಖಂಡಿನೇನಮಃ·

(ಶಂ॥ ಮ) ಗೋಪವೇಷಧರನಾದ ಕೃಷ್ಣಾವತಾರದಲ್ಲಿ ನವಿಲುಗರಿಯನ್ನು ಧರಿಸಿದನಾದಕಾರಣ "ಶಿಖಂಡೀ." (ವಿ॥ ಭಾ) ಅಪರಿಮಿತವೂ ಯಾರಿಂದಲೂ ತಿರಸ್ಕರಿಸಲಶಕ್ಯವೂ ಆದ ಐಶ್ವರ್ಯವೆಂಬ ಪರಮತೇಜಸ್ಸನ್ನೆ ಶಿಖಂಡವಾಗಿ, ಅಥವಾ ಶಿರೋಭೂಷಣವಾಗಿ ವುಳ್ಳವನು. ॥೩೧೨॥

## (೩೧೩ನೇ ನಾಮವು) ನಹುಷಃ,

## ಓಮ್॥ ನಹುಷಾಯನಮಃ

(ಶಂ॥ ವಿ॥ ಮ) ತನ್ನಮಾಯೆಯಿಂದ ಭೂತಗಳನ್ನು ಕಟ್ಟುವಂತವನು. ॥೩೧೩॥

## (೩೧೪ನೇ ನಾಮವು) ವೃಷಃ,

## ಓಮ್॥ ವೃಷಾಯನಮಃ.

(ಶಂ॥ ಮ) "ವೃಷೋಹಿ ಭಗವಾನ್ ಧರ್ಮಸ್ಸ್ಮೃತೋ ಲೋಕೇಷು ಭಾರತ | ನೈಘಂಟುಕ ಪದಾಖ್ಯಾನೈರ್ವಿದ್ಧಿಮಾಂ ವೃಷ ಇತ್ಯುತ" (ಭಾರ॥ ಶಾನ್ತಿ॥ ೩೪೩॥ ೫೪) ಎಂಬೀ ಭಾರತ ವಚನಾನುಸಾರವಾಗಿ ಇಷ್ಟಾರ್ಥಗಳನ್ನು ವರ್ಷಿಸುವುದರಿಂದ "ವೃಷಃ" ಎನ್ನಲ್ಪಡುವನು. (ವಿ॥ ಭಾ) ಸಾಗರದಲ್ಲಿ ಈಜುತ್ತಾ ಶಾಂತರಾದ ಮಾರ್ಕಂಡೇಯರೇ ಮೊದಲಾದವರ ತಾಪವು ಅಡಗುವಂತೆ ಅಮೃತೋಪಮವಾದ ತನ್ನಕಾಂತಿಯಿಂದಲೂ ಮಾತುಗಳಿಂದಲೂ ಸಂಜೀವಿಸುವಂತವನು. ॥೩೧೪॥

## (೩೧೫ನೇ ನಾಮವು) ಕ್ರೋಧಹಾ,

### ಓಮ್|| ಕ್ರೋಧಘ್ನೇನಮಃ.

(ಶಂ||ಮ) ಸಾಧುಗಳ ಕೋಪವನ್ನು ಪರಿಹರಿಸುವಂತವನು. (ವಿ||ಭಾ) ಕಾಶ್ಯಪ ಋಷಿಯು ಪ್ರಾರ್ಥಿಸಿದ ಮಾತ್ರದಲ್ಲಿಯೇ ೨೧ ಸಲ ಕ್ಷತ್ರಿಯರನ್ನು ನಾಶಮಾಡುವ ಕೋಪವನ್ನು ಹತವನ್ನಾಗಿ ಮಾಡಿದವನು, ಎಂದರೆ ಅವರ ವಿಷಯವಾದ ಕೋಪವನ್ನು ಪಿತೃವಾಕ್ಯದಲ್ಲಿರುವ ಗೌರವದಿಂದ ಬಿಟ್ಟವನೆಂದರ್ಥವು. ||೩೧೫||

## (೩೧೬ನೇ ನಾಮವು) ಕ್ರೋಧಕೃತ್,

### ಓಮ್|| ಕ್ರೋಧಕೃತೇನಮಃ.

(ಶಂ|| ಮ) ಅಸಾಧುಗಳಲ್ಲಿ ಕೋಪವನ್ನು ಮಾಡುವಂತವನು. (ಶಂ) ಕ್ರಿಯತ ಇತಿ ಕರ್ಮ-ಜಗತ್ತು, ಅಂತಹ ಜಗತ್ತಿಗೆ ಕರ್ತಾ. "ಏತೇಷಾಂ ಪುರುಷಾಣಾಂ ಯಃಕರ್ತಾ ಯಸ್ಯ ಚೈತತ್ಕರ್ಮ ಸವೈವೇದಿತವ್ಯಃ" (ಕೌಷೀ||೪||೧೮) ಎಂಬೀ ಶ್ರುತ್ಯನುಸಾರವಾಗಿ ಈ ಅರ್ಥವು. ಅದವಾ; ಕೋಪಿಷ್ಠರಾದ ದೈತ್ಯಾದಿಗಳನ್ನು ನಾಶಪಡಿಸುವಂತವನೆಂಬದಾಗಿ "ಕ್ರೋಧಕೃತ್ಕರ್ತಾ" ಎಂಬ ಇದು ಏಕನಾಮವಾಗಿಯೂದರೂ ಆಗುವುದು. (ವಿ|| ಭಾ) ಮೊದಲು ಅವರುಗಳಿಗೆ ಕೋಪವನ್ನುಂಟುಮಾಡಿದವನು. ||೩೧೬||

## (೩೧೭ನೇ ನಾಮವು) ಕರ್ತಾ,

### ಓಮ್|| ಕರ್ತ್ರೇನಮಃ.

(ವಿ|| ಭಾ) ಅಂತಹ ಕೋಪದಿಂದ ಕಾರ್ತವೀರ್ಯಾರ್ಜುನನನ್ನು ಸಂಹರಿಸಿದವನು. (ಮ) ಜಗತ್ಸೃಷ್ಟಿಕರ್ತನು. ||೩೧೭||

## (೩೧೮ನೇ ನಾಮವು) ವಿಶ್ವಬಾಹುಃ,

### ಓಮ್|| ವಿಶ್ವಬಾಹವೇನಮಃ.

(ಶಂ|| ಭಾ) ಸರ್ವರಿಗೂ ಆಧಾರನಾದಕಾರಣ "ವಿಶ್ವಬಾಹುಃ" ಎನ್ನಲ್ಪಡುವನು. ಅಥವಾ ಅನೇಕ ಬಾಹುಗಳುಳ್ಳವನು. (ವಿ|| ಭಾ) ಈ

ರೀತಿಯಾಗಿ ದುಷ್ಟನಿಗ್ರಹಾರ್ಥವಾಗಿ (ವಿ|| ಮ) ಸುತ್ತುಮುತ್ತಲೂ ಹೊರಟಿರುವ ಬಾಹುಗಳುಳ್ಳವನು. ||೩೦೮||

(೩೦೯ನೇ ನಾಮವು) ಮಹೀಧರಃ,

ಓಮ್|| ಮಹೀಧರಾಯನಮಃ

(ಶಂ|| ಭಾ) ಪೂಜೆಯನ್ನಾದರೂ ಭೂಮಿಯನ್ನಾದರೂ ಧರಿಸಿದವನು. (ವಿ|| ಭಾ) ಈ ರೀತಿಯಾಗಿ ಭಾರವನ್ನು ನಿರಾಕರಿಸಿ ಭೂಮಿಯನ್ನು ಕಾದವನು. ||೩೦೯||

ಈ ರೀತಿಯಾಗಿ (೩೪)ನೇ ಶ್ಲೋಕದಲ್ಲಿ ಪ್ರತಿಪಾದಿಸಲ್ಪಡುವ (೧೦) ನಾಮಗಳಿಗೂ "ಇಷ್ಟೋ" (೩೦೯) "ವಿಶಿಷ್ಟಃ" (೩೦೦) ಕಥಿತ ಸ್ವಸ್ವರಕ್ಷಣ ತತ್ಪರಃ | ಮಾರ್ಕಂಡೇಯ ದ್ವಿಜಾದೀನಾಂ ಪಂಡಿತೇಷ್ವಗ್ರಯಾಯಿನಾಂ | ಉತ್ಕೃಷ್ಟ ಪುರುಷಾರ್ಥತ್ವೇ ನೇಷ್ಟಃ "ಶಿಷ್ಟೇಷ್ಟ" (೩೦೧) ಉಚ್ಯತೇ | ಅಸ್ಯಪ್ರದೃಶ್ಯಮೈಶ್ವರ್ಯಂ ಪರಂ ಯತ್ತೇಜ ಆಸ್ಥಿತಂ || ತಚ್ಛಿಖಂಡಂತು ಯಸ್ಯಾಸ್ತಿ ತ "ಚ್ಛಿಖಂಡೀ" (೩೦೨) ಚಕ್ಷತೇ | ಜೀವಾನ್ಸ್ವಮಾಯ ಯಾನಿತ್ಯಂ "ನಹುಷೋ" (೩೦೩) ನಹ್ಯತೀತಿಯಃ || ಸಾಗರಸ್ಯೋದರೇ ಯಶ್ಚ ವಸನ್ವೃತರೂಪಯಾ | ಸ್ವದೇಹಕ್ಯಾಂತ್ಯಾ ವಾಚಾಪಿ ಸಮ್ಯಗಾಶ್ವಾಸಯ ನ್ಮರುಃ || ಬಹುಶಸ್ಸಿಂಚತಿಚಯೋ "ವೃಷ" (೩೦೪) ಸ್ಸಪರಿಪಠ್ಯತೇ | ಕಾಶ್ಯಪಸ್ಯ ಪ್ರಾರ್ಥನಯಾ ಯಃ ಕ್ರೋಧಂ ಕ್ಷತ್ರಹಾನಿದಂ || ಹತವಾನ್ "ಕ್ರೋಧಹಾ" (೩೦೫) ಪ್ರೋಕ್ತ ಸ್ಸಡರ್ಸ್ಸಃ ಕ್ರೋಧನಾಶಕಃ | "ಕ್ರೋಧಕೃತ್" (೩೦೬) ಕ್ಷತ್ರಿಯೇಭ್ಯೋ ಯಃ ಪೂರ್ವಃ ಕ್ರೋಧಂ ಕರೋತಿಸಃ || ಕ್ರುದ್ಧೇತೋಃ ಕಾರ್ತವೀರ್ಯಸ್ಯ ಛೇತ್ತಾ "ಕರ್ತೇ" (೩೦೭) ತಿ ಶಬ್ದ್ಯತೇ | ವಿಶ್ವಸ್ಮಿ ಬಾಹೂ ಯಸ್ಯೇತಿ "ವಿಶ್ವಬಾಹುಃ" (೩೦೮) ಪ್ರಕೀರ್ತಿತಃ || ಭಾರಾವತರಣಂ ಕೃತ್ವಾ ಗಾಂಧತ್ತೇಸ "ಮಹೀಧರಃ" (೩೦೯) ಎಂಬೀರೀತಿಯಾಗಿ ವಿವೃತಿಯನ್ನು ಕಾಣಬಹುದು.

ಮೂ|| ಅಚ್ಯುತಃ ಪ್ರಥಿತಃ ಪ್ರಾಣಃ ಪ್ರಾಣದೋ ವಾಸವಾನುಜಃ | ಅಪಾಂನಿಧಿ ರಧಿಷ್ಠಾನ ಮಪ್ರಮತ್ತಃ ಪ್ರತಿಷ್ಠಿತಃ ||೩೫||

## (೩೨೦ನೇ ನಾಮವು) ಅಚ್ಯುತಃ,
## ಓಮ್|| ಅಚ್ಯುತಾಯನಮಃ.

(ಶಂ|| ಭಾ) ಜನನ ಮರಣ ವೃದ್ಧ್ಯಾದಿ ಷಡ್ಭಾವ ವಿಕಾರಗಳಿಲ್ಲದವನು. (ವಿ|| ಭಾ) ಬ್ರಹ್ಮಾದಿಗಳಿಗೆ ಸಮಾನನಾಗಿ ಅವತರಿಸಿದರೂ ಕೂಡ (ವಿ|| ಮ) ಶಾಶ್ವತವಾದ ಐಶ್ವರ್ಯವುಳ್ಳವನು ||೩೨೦||

## (೩೨೧ನೇ ನಾಮವು) ಪ್ರಥಿತಃ,
## ಓಮ್|| ಪ್ರಥಿತಾಯನಮಃ.

(ಶಂ|| ಭಾ) ಜಗತ್ಸೃಷ್ಟ್ಯಾದಿ ಕಾರ್ಯವುಳ್ಳವನೆಂದು ಪ್ರಸಿದ್ಧನಾದವನು. (ವಿ|| ಭಾ) ಹಿಂದಿನ ನಾಮದಲ್ಲಿ ಹೇಳಿರುವಂತೆ ಪ್ರಸಿದ್ಧನಾದ ಮಹಾ ಪುರುಷನು. "ತಸ್ಯನಾಮ ಮಹದ್ಯಶಃ || (ತೈ|| ೨|| ೧|| ೯) ಯಶಸ್ಸೈಕ ಭಾಜನಂ" (ಶ್ರೀರಾ|| ಕಿ||) ಎಂಬೀ ವಚನಗಳಲ್ಲಿ ಈ ಅರ್ಥವು ಪ್ರಸಿದ್ಧವು. ||೩೨೧||

## (೩೨೨ನೇ ನಾಮವು) ಪ್ರಾಣಃ,
## ಓಮ್|| ಪ್ರಾಣಾಯನಮಃ.

(ಶಂ|| ಭಾ) "ಪ್ರಾಣೋವಾ ಅಹ ಮಸ್ಮೀತಿ ಬಹ್ವೃಚಾಃ" ಎಂಬಂತೆ ಪ್ರಾಣವಾಯುವೆಂಬ ಸೂತ್ರಾತ್ಮದೊಡನೆ ಪ್ರಜೆಗಳನ್ನು ಜೀವಿಸುವಂತೆ ಮಾಡುವಂತವನು (ವಿ|| ಭಾ) ತನ್ನನ್ನು ಆಶ್ರಯಿಸಿದವರಿಗೆ ಜೀವನ ಭೂತನು "ಪ್ರಾಣೋಽಸ್ಮಿ ಪ್ರಜ್ಞಾತ್ಮಾ ತನ್ಮಾಯು ರಮೃತ ಮಿತ್ಯುಪಾಸ್ವ || (ಕೌಷೀ) ಅಮೃತಂ ದೇವಾನಾಮಾಯುಃ ಪ್ರಜಾನಾಂ || ಪ್ರಾಣಸ್ತಥಾನುಗಮಾತ್" (ಬ್ರ|| ಸೂ|| ೧|| ೧|| ೨೯) ಇತ್ಯಾದಿಗಳು ಈ ಅರ್ಥ ಬೋಧಕಗಳಾಗಿರುವುವು (ಮ) ಅಧಿಕವಾಗಿ ಕೂಗುವಂತವನು. ||೩೨೨||

## (೩೨೩ನೇ ನಾಮವು) ಪ್ರಾಣದಃ,
## ಓಮ್|| ಪ್ರಾಣದಾಯನಮಃ.

(ಶಂ॥ ಭಾ) ದೇವತೆಗಳಿಗೂ ರಾಕ್ಷಸರಿಗೂ ಬಲವನ್ನು ಕೊಡುವಂತವನು. ಅಥವಾ ಅದನ್ನು ಖಂಡಿಸುವಂತವನು. (ವಿ॥ ಭಾ) ಇನ್ನು ಮುಂದಿನ ನಾಮಗಳು ಕೂರ್ಮಾವತಾರವನ್ನು ಕುರಿತು ಪ್ರವರ್ತಿಸುವುವು. ದೇವತೆಗಳು ಸಮುದ್ರವನ್ನು ಕಡೆಯುವಾಗ ಅದಕ್ಕೆ ಅವಶ್ಯಕವಾದ ಬಲವನ್ನು ಕೊಟ್ಟವನು (ಮ) ದೈತ್ಯರ ಪ್ರಾಣಗಳನ್ನು ಖಂಡಿಸುವಂತವನು. ಅಥವಾ ವೇದರೂಪವಾಗಿರುವ ಶ್ರೇಷ್ಠವಾದ ಶಬ್ದವನ್ನು ಚತುರ್ಮುಖನಿಗೆ ಕೊಡುವಂತವನು ‖೩೧೩‖

## (೩೧೪ನೇ ನಾಮವು) ವಾಸವಾನುಜಃ,

## ಓಮ್॥ ವಾಸವಾನುಜಾಯನಮಃ

( ವಿ॥ ಭಾ ) ಅಮೃತಾಪೇಕ್ಷೆಯಾದ ಇಂದ್ರನಿಗೋಸ್ಕರ ಅವನ ತಮ್ಮನಾಗಿ ಹುಟ್ಟಿದವನು. ‖೩೧೪‖

## (೩೧೫ನೇ ನಾಮವು) ಅಪಾಂನಿಧಿಃ,

## ಓಮ್॥ ಅಪಾಂನಿಧಯೇನಮಃ.

(ಶಂ॥ ಭಾ) " ಸಾರಸಾ ಮಸ್ಮಿ ಸಾಗರಃ " (ಗೀ॥ ೧೦) ಎಂಬಂತೆ ಜಲವು ಯಾವನಲ್ಲಿ ಇರುವುವೊ ಅವನು " ಅಪಾಂನಿಧಿಃ " ಎನ್ನಲ್ಪಡುವನು. (ವಿ॥ ಭಾ) ಕಡೆಯಲ್ಪಡುವ ಮಹಾರ್ಣವವನ್ನು ಧರಿಸುವುದರಿಂದ " ಅಪಾಂನಿಧಿಃ " ಎನ್ನಲ್ಪಡುವನು. (ಮ॥ ಭಾ) ಕರ್ಮಗಳಿಗೆ ಆಧಾರ ಭೂತನು. ನೀರಿನಂತೆ ಸ್ವಚ್ಛವಾಗಿರುವ ಗುಣಗಳಿಗೆ ನಿಧಿಯೆಂತಲೂ ಹೇಳಬಹುದು. ‖೩೧೫‖

## (೩೧೬ನೇ ನಾಮವು) ಅಧಿಷ್ಠಾನಂ,

## ಓಮ್॥ ಅಧಿಷ್ಠಾನಾಯನಮಃ.

(ಶಂ॥ ಭಾ) "ಮತ್ಸ್ಥಾನಿ ಸರ್ವಭೂತಾನಿ" (ಗೀ॥ ೧೧) ಎಂಬಂತೆ ಸಕಲ ಭೂತಗಳೂ ಉಪಾದಾನಕಾರಣವಾಗಿ ಯಾವುದರಲ್ಲಿವೆಯೊ ಅಂತಹ ಬ್ರಹ್ಮವು " ಅಧಿಷ್ಠಾನಂ " ಎನ್ನಲ್ಪಡುವುದು (ವಿ॥ ಭಾ) (ಕ್ಷೀರ

ಸಮುದ್ರವನ್ನು ಕಡೆಯುವ ಕಾಲದಲ್ಲಿ) ಸುತ್ತುತಲಿರುವ ಮಂದರ ಪರ್ವತಕ್ಕೆ ಆಧಾರಭೂತನಾಗಿರುವಂತವನು. (ಮ|| ಭಾ) ಸರ್ವರಿಗೂ ಆಶ್ರಯನು. ||೩೦೬||

## (೩೦೭ನೇ ನಾಮವು) ಅಪ್ರಮತ್ತಃ,

## ಓಮ್|| ಅಪ್ರಮತ್ತಾಯನಮಃ.

(ಶಂ|| ಭಾ) ಆಯಾ ಅಧಿಕಾರಿಗಳು ಮಾಡುವ ಕರ್ಮಗಳಿಗೆ ಅನುರೂಪವಾದ ಫಲವನ್ನು ಕೊಡುವುದರಲ್ಲಿ ಜಾಗರೂಕನು. (ವಿ|| ಭಾ) ಇಂತವರ ರಕ್ಷಣದಲ್ಲಿ ಎಂದರೆ ಸಮುದ್ರ ಮಥನಕಾಲದಲ್ಲಿ ತನ್ನ ಭಕ್ತರ ರಕ್ಷಣದಲ್ಲಿ ಜಾಕರೂಕನಾಗಿರುವಂತವನು. (ಮ) ಜಾಗರೂಕನು.||೩೦೭||

## (೩೦೮ನೇ ನಾಮವು) ಪ್ರತಿಷ್ಠಿತಃ,

## ಓಮ್|| ಪ್ರತಿಷ್ಠಿತಾಯನಮಃ.

(ವಿ|| ಭಾ) ತಾನು ಬೇರೊಂದನ್ನು ಅಪೇಕ್ಷಿಸದೆ (ಶಂ|| ಮ) ತನ್ನ ಮಹಿಮೆಯಲ್ಲಿ ತಾನೇ ಪ್ರತಿಷ್ಠಿತನಾಗಿರುವಂತವನು. ಈ ಅರ್ಥವು "ಸಭಗವಃ ಕ್ವ ಪ್ರತಿಷ್ಠಿತಃ ಸ್ವೇಮಹಿಮ್ನಿ ಪ್ರತಿಷ್ಠಿತಃ" (ಛಾಂ|| ೭|| ೨೪|| ೧) ಎಂಬೀ ಮೊದಲಾದ ಪ್ರಮಾಣ ಸಿದ್ಧವು ||೩೦೮||

ಈ ಶ್ಲೋಕದಲ್ಲಿ ಪ್ರತಿಪಾದಿಸಲ್ಪಡುವ ೯ ನಾಮಗಳಿಗೂ "ಚ್ಯವನೋತ್ಪತ್ತಿ ಯುಕ್ತೇಷು ಬ್ರಹ್ಮೇಂದ್ರ ವರುಣಾದಿಷು| ಯಸ್ಮಾನ್ನಚ್ಯವತೇಸ್ಥಾನಾ ತ್ತಸ್ಮಾ ತ್ಸಂಕೀರ್ತ್ಯತೇ "ಽಚ್ಯುತಃ" || ಸಾಧರ್ಮ್ಯೇಣಾವತಾರೇಽಪಿ ಬ್ರಹ್ಮೇಂದ್ರ ವರುಣಾದಿಭಿಃ | ನಸ್ಯೈವೈಶ್ವರ್ಯಾತ್ಪ್ರಚ್ಯುತೋ ಯಸ್ಸೋ "ಽಚ್ಯುತಃ" (೩೦೦) ಪರಿಕೀರ್ತಿತಃ || ಅಚ್ಯುತತ್ವೇನ ಲೋಕೇಸ್ಮಿನ್ ಪ್ರಖ್ಯಾತಃ "ಪ್ರಥಿತಃ" (೩೦೧) ಸ್ಮೃತಃ | ಪುಂಸಾಂ ಜೀವಿತ ರೂಪತ್ವಾತ್ "ಪ್ರಾಣ" (೩೦೨) ಇತ್ಯಭಿಧೀಯತೇ || ಮರುತಾಂಬಲದಾನಾದ್ಧಿ ಸಮುದ್ರ ಮಥನೇಭೃಶಂ | "ಪ್ರಾಣದಃ" (೩೦೩) ಚ ಸಮುದ್ದಿಷ್ಟಃ ಕರ್ಮರೂಪ ತಯಾಹಿಸಃ|| ವಾಸವಸ್ಯಾನುಜತ್ವೇನಜಾತತ್ವಾತ್ "ವಾಸವಾನುಜಃ" (೩೦೪) "ಅಪಾಂನಿಧಿಃ" (೩೦೫) ಮಥ್ಯಮಾನ ಮಹಾರ್ಣವ ವಿಧಾರಣಾತ್ | ಭ್ರಾಮ್ಯಮಾಣಂ ಮಂದ

ರಾದ್ರಿಂ ಧೃತವಾನ್ಯೋ ಮಹಾಜಲೇ ॥ " ಅಧಿಷ್ಠಾನಂ " (೩೨೬) ತಪೋ ವಾಹು ರಧಿಷ್ಠಾನ ಪ್ರದೋಮನುಃ ॥ ಅತ್ಯಂತಾ ವಹಿತ ಪ್ರಾಣೋ " ಹ್ಯ ಪ್ರಮತ್ತಃ " (೩೨೭) ಪ್ರಕೀರ್ತಿತಃ । ಸ್ವೇಮಹಿಮ್ನಿ ಸ್ಥಿತೋ ಯಸ್ತು ಸ " ಪ್ರತಿಷ್ಠಿತ " (೩೨೮) ಉಚ್ಯತೇ ॥ " ಎಂಬೀ ರೀತಿಯಾಗಿ ವಿವೃತಿ ಯನ್ನು ಕಾಣಬಹುದು.

ಮೂ॥ ಸ್ಕಂದ ಸ್ಸ್ಕಂದಧರೋ ಧುರ್ಯೋ ವರ
ದೋ ವಾಯುವಾಹನಃ । ವಾಸುದೇವೋ ಬೃಹ
ದ್ಭಾನು ರಾದಿದೇವಃ ಪುರಂದರಃ ॥೩೬॥

(೩೨೯ನೇ ನಾಮವು) ಸ್ಕಂದಃ,

ಓಮ್॥ ಸ್ಕಂದಾಯನಮಃ.

(ಶಂ॥ ಭಾ) ಅಮೃತರೂಪದೊಡನೆ ಸ್ರವಿಸುತ್ತಾನೆ, ಎಂದರೆ ಹೋ ಗುತ್ತಾನೆ. ಅಥವಾ ವಾಯುರೂಪದಿಂದ ಶೋಷಿಸುವಂತೆ ಮಾಡುತ್ತಾ ನಾದ ಕಾರಣ " ಸ್ಕಂದಃ " ಎನ್ನಲ್ಪಡುವನು (ವಿ॥ ಭಾ) ತಾನಾಗಿಯೇ ಅಸುರಾದಿಗಳನ್ನು ಶೋಷಿಸುವಂತವನು. (ಮ) ಮುಕ್ತನು ಯಾವನಲ್ಲಿ ಹೋಗುತ್ತಾನೆಯೊ ಅಥವಾ ಅಧರ್ಮಶೋಷಕನು ಯಾವನೊ ಅವನು " ಸ್ಕಂದಃ " ಎನ್ನಲ್ಪಡುವನು. ॥೩೨೯॥

(೩೩೦ನೇ ನಾಮವು) ಸ್ಕಂದಧರಃ,

ಓಮ್॥ ಸ್ಕಂದಧರಾಯನಮಃ.

(ಶಂ॥ ಭಾ) ಧರ್ಮಮಾರ್ಗವನ್ನು ಧರಿಸಿರುವಂತವನು. (ವಿ॥ ಮ) ಸ್ಕಂದನೆಂಬ ದೇವಸೇನಾಪತಿಗೆ ಧಾರಕನು. (ವಿ) " ಸೇನಾನೀನಾ ಮ ಹಂ ಸ್ಕಂದಃ " (ಗೀ॥ ೧೦) ಎಂಬದಾಗಿ ಸ್ಕಂದನನ್ನು ಭಗವದ್ವಿಭೂತಿ ಯನ್ನಾಗಿ ಹೇಳಿರುತ್ತಾರಷ್ಟೆ. ॥೩೩೦॥

(೩೩೧ನೇ ನಾಮವು) ಧುರ್ಯಃ,

ಓಮ್॥ ಧುರ್ಯಾಯನಮಃ.

(ಶಂ॥ ವಿ॥ ಮ) ಲೋಕಗಳ ಭಾರವನ್ನು ವಹಿಸುವಂತವನು. ॥೩೩೧॥

## (೩೩೧ನೇ ನಾಮವು) ವರದಃ,

### ಓಮ್॥ ವರದಾಯನಮಃ.

(ಶಂ॥ ಮ) ಭಕ್ತರುಗಳಿಗೆ ಇಷ್ಟಾರ್ಥಗಳನ್ನು ಕೊಡುವಂತವನು. (ಶಂ) ಅಥವಾ "ಗೌರ್ವೈವರಃ" ಎಂಬ ಶ್ರುತ್ಯನುಸಾರವಾಗಿ ಯಜ್ಞದಲ್ಲಿ ದಕ್ಷಿಣೆಯನ್ನು ಯಜಮಾನ ರೂಪದಿಂದ ಕೊಡುವಂತವನು. (ವಿ॥ ಭಾ) ಲೋಕಕಾರ್ಯಗಳನ್ನು ನಿರ್ವಹಿಸುವ ಇಂದ್ರಾದಿಗಳಿಗೂ ಕೂಡ ವರವನ್ನು ಕೊಡುವಂತವನು. ॥೩೩೦॥

## (೩೩೨ನೇ ನಾಮವು) ವಾಯುವಾಹನಃ,

### ಓಮ್॥ ವಾಯುವಾಹನಾಯನಮಃ.

(ಶಂ॥ ಭಾ) ಏಳು ವಿಧಗಳಾದ ವಾಯುಗಳನ್ನು ವಹಿಸುವಂತವನು. (ವಿ॥ ಭಾ) ಅದು ಹೇಗೆಂದರೆ:—ಜಗತ್ಪ್ರಾಣನಾದ ವಾಯುವನ್ನುಬೀಸುವಂತೆ ಮಾಡುವಂತವನು. (ಮ) ಶ್ರೀರಾಮಾವತಾರದಲ್ಲಿ ವಾಯುವನ್ನು ವಾಹನವಾಗಿವುಳ್ಳವನು. ॥೩೩೩॥

## (೩೩೪ನೇ ನಾಮವು) ವಾಸುದೇವಃ,

### ಓಮ್॥ ವಾಸುದೇವಾಯನಮಃ.

(ವಿ॥ ಭಾ) ಇನ್ನು ಮುಂದೆ ದ್ವಿಷಟ್ಕವಾದ (೧೨ ಆದ) ಅಧ್ಯಾತ್ಮ ವಿಚಾರವು. (ಶಂ॥ ವಿ॥ ಮ) ಸೂರ್ಯನು ಕಿರಣಗಳಿಂದ ಅತಿಮಹತ್ತಾದ ಪ್ರಪಂಚವನ್ನು ಮುಚ್ಚಿಕೊಳ್ಳುವಂತೆ ಪ್ರಪಂಚವನ್ನು ವ್ಯಾಪಿಸಿಕೊಂಡು ತಾಯಿಯು ಗರ್ಭದಲ್ಲಿಂತೆ ತನ್ನಲ್ಲಿ ಅವುಗಳನ್ನಿರುವಂತೆಯೂ ತಾನು ಅವುಗಳಲ್ಲಿ ವ್ಯಾಪಿಸಿಯೂ ಇರುವಂತವನು ಇದಕ್ಕೆ "ಛಾದಯಾಮಿ ಬೃಹದ್ವಿಶ್ವಂ ಭೂತ್ವಾ ಸೂರ್ಯ ಇವಾಂ ಶುಭಿಃ | ಸರ್ವಭೂತಾಧಿ ವಾಸಶ್ಚ ವಾಸುದೇವ ಸ್ತತಸ್ಸ್ಮೃತಃ" ಎಂಬೀ (ಭಾ॥ ಮೋಕ್ಷಧರ್ಮ॥ ೧೬೬ನೇ ಅ) ಪ್ರಮಾಣವನ್ನರಿಯಬೇಕು. ಅಥವಾ ದೇವಃ ಎಂದರೆ ಹಿಂದೇ ವಿವರಿಸಿರುವಂತೆ ಕ್ರೀಡಿಸುವಂತವನು ಜಯಶೀಲನು, ಪ್ರಕಾಶಿಸುವಂತವನು, ಸ್ತೋತ್ರಮಾಡಲ್ಪಡುವಂತವನು, ಹೋಗುವಂತವನು, ಎಂದರ್ಥವು. ಇದ

ರಿಂದ ಜಗದ್ವ್ಯಾಪಕನಾಗಿ ಕ್ರೀಡಿಸುವುದೇ ಮೊದಲಾದ ಅರ್ಥಗಳು ಯೋರ್ಗ್ಯಡುವುವು. ವಸತೀತಿ ವಾಸುಃ, ವಾಸುಶ್ಚಾಸೌ ದೇವಶ್ಚ ವಾಸುದೇವಃ ; ಎಂದು ವಿಗ್ರಹವು "ವಸನಾತ್ಸರ್ವ ಭೂತಾನಾಂ ವಸುತ್ವಾ ದ್ದೇವಯೋನಿತಃ | ವಾಸುದೇವ ಸ್ತತೋಜ್ಞೇಯ ಸ್ಸರ್ವೇಷಾಮಪಿ ಪಠ್ಯತೇ ‖ (ಭಾ‖ ಉ‖ ೬೮‖ ೩) ಸರ್ವತ್ರಾಸೌ ಸಮಸ್ತಂಚ ವಸತ್ಯ ತ್ರೇತಿವೈಯತಃ | ತತಸ್ಸವಾಸುದೇವೇತಿ ವಿದ್ವದ್ಭಿಃ ಪರಿಪಠ್ಯತೇ " (ವಿ‖ ಪು‖ ೧‖ ೨‖ ೧೨) ಇತ್ಯಾದಿ ಪ್ರಮಾಣಗಳನ್ನು ಉಕ್ತವಾದ ಅರ್ಥದಲ್ಲಿ ಕಂಡುಕೊಳ್ಳ ಬೇಕು. (ಪ) ರಹಸ್ಯವಾದ್ದರಿಂದ ಅತ್ಯಂತವಾಗಿ ಪ್ರಕಟಿತವಾಗಲಾರದು. ‖೩೩೪‖

## (೩೩೫ನೇ ನಾಮವು) ಬೃಹದ್ಭಾನುಃ,

### ಓಮ್‖ ಬೃಹದ್ಭಾನವೇನಮಃ.

(ಪ‖ ಭಾ) ಇದನ್ನೇ ಮುಂದೇ ವಿವರಿಸುತ್ತಾರೆ. ಅದರಲ್ಲಿ ಭೋಗವಿಭೂತಿಯಾದ ಪರಮಾಕಾಶವಾಗಿ ಪ್ರಕಾಶಿಸುತಲಿರುವ ಪ್ರಕಾರವನ್ನು ಹೇಳುತ್ತಾರೆ. ( ವಿ‖ ಮ ) ಮಹತ್ತಾದ ಕಿರಣಗಳುಳ್ಳವನು. (ಶಂ) ಸೂರ್ಯ ಚಂದ್ರರನ್ನು ಹೊಂದಿಯೂ ಅಧಿಕಗಳೂ ಆದ ಕಿರಣಗಳಿಂದ ಲೋಕಗಳನ್ನು ಪ್ರಕಾಶಪಡಿಸುವಂತವನು. ‖೩೩೫‖

## (೩೩೬ನೇ ನಾಮವು) ಆದಿದೇವಃ,

### ಓಮ್‖ ಆದಿದೇವಾಯನಮಃ.

(ಪ‖ ಭಾ) ಇನ್ನು ಮುಂದೆ ಲೀಲಾವಿಭೂತಿಯೋಗವು ಹೇಳಲ್ಪಡುವುದು. ಆದಿಕಾಲದಲ್ಲಿ ಕ್ರೀಡಿಸುವಂತವನು. ಇದಕ್ಕೆ " ಸಂಪ್ರಯೋಜ್ಯ ವಿಯೋಜ್ಯಾಯಂ ಕಾಮಕಾರ ಕರಃ ಪ್ರಭುಃ | ಕ್ರೀಡತೇ ಭಗವಾನ್ವಿಷ್ಣುಃ ‖ (ಅ‖ ೩೦‖ ೪೦) ಅಪ್ರಮೇಯೋನಿಯೋಜ್ಯಶ್ಚ ಯತ್ರಕಾಮಗಮೋವಶೀ | ಮೋದತೇ ಭಗವಾನ್ ವಿಷ್ಣು ರ್ಬಾಲಃ ಕ್ರೀಡನಕ್ಯೆರಿವ " (ಭಾರ‖ ಸ‖ ೬೨‖ ೩೪) ಇತ್ಯಾದಿ ಪ್ರಮಾಣಗಳೇ ಅರ್ಥದಲ್ಲಿರುವುವು. (ಶಂ‖ ಭಾ) ಆದಿಕಾರಣನಾದ ದೇವನು. ಅಥವಾ ದ್ಯೋತನಾದಿ ಗುಣಗಳುಳ್ಳವನು. ‖೩೩೬‖

## (೩೩೭ನೇ ನಾಮವು) ಪುರಂದರಃ,

## ಓಮ್॥ ಪುರಂದರಾಯನಮಃ.

(ವಿ॥ ಶಂ॥ ಮ) ತ್ರಿಪುರಾಸುರರೇ ಮೊದಲಾದ ಶತ್ರುಗಳ ಪುರಗಳನ್ನು ವಿನಾಶಪಡಿಸುವಂತವನು. (ವಿ) ಇದು ಮೊದಲು ನಾಲ್ಕು ನಾಮಗಳಿಂದ ಪ್ರಪಂಚವನ್ನು ಮುಚ್ಚಿಕೊಂಡಿರುವ ಅಂತಹ ದುಷ್ಟನಿಗ್ರಹ ಪ್ರಕಾರವು ಹೇಳಲ್ಪಡುವುದು. ಇಲ್ಲಿ ಹೇಳಿರುವ ತ್ರಿಪುರವಿದಾರಣವು ಅಸುರ ಪಿಶಾಚ ವಿದ್ಯುತ್ಪಾತವೆ ಮೊದಲಾದ ಆಧಿದೈವಿಕ ಭಯನಿವಾರಣಕ್ಕೂ ನಿದರ್ಶಕವಾಗಿರುವುದು. ॥೩೩೭॥

ಈ (೩೬)ನೇ ಶ್ಲೋಕದಲ್ಲಿ ಪ್ರಸ್ತುತಿಸಲ್ಪಟ್ಟ (೯) ನಾಮಗಳಿಗೂ; "ಅಸುರಾದೀನ್ ಶೋಷಯತಿ "ಸ್ಕಂದಃ" (೩೨೯) ಸ್ಕಂದಯತೀತಿಯಃ | ಸ "ಸ್ಕಂದಧರ" (೩೩೦) ಆಖ್ಯಾತಷ್ಷಡಾನ ನವಿಧಾರಣಾತ್॥ ಭುವನಂ ಧೃತವಾನ್ "ಧುರ್ಯಃ" (೩೩೧) "ವರದೋ" (೩೩೨) ಅಭೀಷ್ಟದಸ್ಸ್ಮೃತಃ | ಜಗತ್ಪ್ರಾಣಂ ವಹತಿಯೊ "ವಾಯುವಾಹನ" (೩೩೩) ಉಚ್ಯತೇ॥ ಸರ್ವಭೂತಾನ್ವಾಸ ಯತಿ ವಾಸುಸ್ಸ ಪರಿಕೀರ್ತಿತಃ| ದಿವಿನಾತೋರಪಿ ಕ್ರೀಡಾದ್ಯರ್ಥಕತ್ವಾ ದ್ವಿಶೇಷತಃ ॥ ವಾಸುಶ್ಚಾಸೌ ದೇವಶ್ಚೇತಿ "ವಾಸುದೇವಃ" (೩೩೪) ಪ್ರಕೀರ್ತಿತಃ | ಸರ್ವಭೂತೇಷ್ವಪಿವಸನ್ ಸ್ವಸ್ಮಿನ್ ಭೂತಾನಿ ವಾಸಯನ್ ॥ ಯಃ ಕ್ರೀಡತಿ ಮುದಾಯದ್ವಾ "ವಾಸುದೇವ" ಸ್ಸ ಉಚ್ಯತೆ ॥ ಸರ್ವತ್ರಾಸೌ ಸಮಸ್ತಂಚ ವಸತ್ಯತ್ರೇತಿವೈಯತಃ | ತತಸ್ಸವಾಸುದೇವೇತಿ ವಿದ್ವದ್ಭಿಃ ಪರಿಪಠ್ಯತೆ ॥ ಬೃಹಂತೋ ಭಾನವೊ ಯಸ್ಯ ಸ "ಬೃಹದ್ಭಾನು" (೩೩೫) ರುಚ್ಯತೆ | ಯಃ ಕ್ರೀಡತೀ "ತ್ಯಾದಿದೇವಃ" (೩೩೬) ಪಾದಾತ್ಮಕ ವಿಭೂತಿಭಿಃ ॥ "ಪುರಂದರ" (೩೩೭) ಇತಿಖ್ಯಾತ ಸ್ತ್ರಿಪುರಾಣಾಂ ವಿದಾರಣಾತ್ ॥" ಎಂಬೀ ರೀತಿಯಿಂದ ವಿವರಣವನ್ನು ಕಾಣಬಹುದು.

ಮೂ॥ ಅಶೋಕ ಸ್ತಾರಣ ಸ್ತಾರ ಶೂರ ಶ್ಶೌರಿ
ರ್ಜನೇಶ್ವರಃ | ಅನುಕೂಲ ಶ್ಶತಾವರ್ತಃ ಪದ್ಮೀ
ಪದ್ಮನಿಭೇಕ್ಷಣಃ ॥೩೭॥

(೩೩೮ನೇ ನಾಮವು) ಅಶೋಕಃ,
ಓಮ್|| ಅಶೋಕಾಯನಮಃ.

(ಶಂ|| ಭಾ) ಶೋಕಾದಿ ಷಡೂರ್ಮಿಗಳಿಲ್ಲದವನು. (ವಿ|| ಭಾ) ಆಧ್ಯಾತ್ಮಿಕಗಳಾದ ಶೋಕ ಮೋಹ ಹಶಿವು ಮೊದಲಾದವುಗಳಿಗೆ ವಿರೋಧಿಯಾಗಿ ಅವುಗಳಿಂದ ಕಾಪಾಡುವಂತವನು. ||೩೩೮||

(೩೩೯ನೇ ನಾಮವು) ತಾರಣಃ,
ಓಮ್|| ತಾರಣಾಯನಮಃ.

(ಶಂ|| ಮ) ಸಂಸಾರ ಸಾಗರೋತ್ತಾರಕನು. (ವಿ|| ಭಾ) ಆಧಿಭೌತಿಕಗಳಾದ, 'ಶತ್ರುಗಳು, ಕಳ್ಳರು, ವ್ಯಾಧಿ' ಯೇ ಮೊದಲಾದವುಗಳಿಂದ ಕಾಪಾಡುವಂತವನು ||೩೩೯||

(೩೪೦ನೇ ನಾಮವು) ತಾರಃ,
ಓಮ್|| ತಾರಾಯನಮಃ.

(ಶಂ|| ವಿ) ಗರ್ಭಜನ್ಮ ಜರಾಮರಣಾದಿಗಳಾದ ಸಮಸ್ತ ಸಾಂಸಾರಿಕ ಭಯಗಳಿಂದ ಬಿಡಿಸುವಂತವನು. (ವಿ|| ಮ) ಪ್ರಣವ ಪ್ರತಿಪಾದ್ಯನು. ಇದು ಅಧರ್ವ ಶಿರಸ್ಸಿನಲ್ಲಿ ಹೇಳಲ್ಪಟ್ಟಿರುವುದು. ಮತ್ತು "ಅಪಹತ ಪಾಪ್ಮಾ" ಇತ್ಯಾದಿ ಶ್ರುತಿಯು ಈ ವಿಷಯವನ್ನೇ ಬೋಧಿಸುವುದು. ||೩೪೦||

(೩೪೧ನೇ ನಾಮವು) ಶೂರಃ,
ಓಮ್|| ಶೂರಾಯನಮಃ.

(ಶಂ|| ಭಾ) ವಿಕ್ರಮಶಾಲಿಯು. (ವಿ|| ಭಾ) ಜಯಶೀಲವಾದ ಸ್ವಭಾವವುಳ್ಳವಿಕೆಯನ್ನು ಹೇಳುತ್ತಾರೆ. ಸಮರ್ಥನಾದ ಜಯಶೀಲನು. ||೩೪೧||

(೩೪೨ನೇ ನಾಮವು) ಶೌರಿಃ,
ಓಮ್|| ಶೌರಯೇನಮಃ.

(ಶಂ|| ಮ) ಶೂರರಾದವರ ಕುಲದಲ್ಲಿ ಹುಟ್ಟಿದವನು. (ವಿ|| ಭಾ) ಈ ಸಮಸ್ತವನ್ನೂ ತನ್ನಲ್ಲಿ ಅತ್ಯಂತ ಭಕ್ತರಾದವರಿಗೆ ತೋರಿಸುವುದಕ್ಕಾಗಿ ಅವರುಗಳ ಸಮೀಪಕ್ಕೆ ಹೋಗುವ ಪ್ರಕಾರವು ಹೇಳಲ್ಪಡುವುದು. ಶೂರನಾದ ವಸುದೇವ ಕುಮಾರನು. ||೩೪೦||

## (೩೪೩ನೇ ನಾಮವು) ಜನೇಶ್ವರಃ,
## ಓಮ್|| ಜನೇಶ್ವರಾಯನಮಃ.

(ಶಂ|| ಭಾ) ಸಕಲ ಜಂತುಗಳಿಗೂ ಪ್ರಭುವು. (ವಿ|| ಭಾ) ಈ ರೀತಿಯಾಗಿ ಸರ್ವಾತಿಶಾಯಿಯಾಗಿ ಉಜ್ವಲಿಸುತಲಿರುವ ಐಶ್ವರ್ಯವೆಂಬ ಮಹಾಪ್ರಭಾವವುಳ್ಳವನಾಗಿರುವುದರಿಂದ ಜನರಿಗೆಲ್ಲಾ ಪ್ರಭುವಾದವನು. ||೩೪೩||

## (೩೪೪ನೇ ನಾಮವು) ಅನುಕೂಲಃ,
## ಓಮ್|| ಅನುಕೂಲಾಯನಮಃ.

(ಶಂ|| ಭಾ) ಸರ್ವಭೂತಗಳಿಗೂ ಆತ್ಮರೂಪನಾಗಿರುವುದರಿಂದಲಾದರೋ; ಪ್ರಾತಿಕೂಲ್ಯವನ್ನು ಸ್ವಲ್ಪವೂ ಮಾಡದವನಾಗಿರುವುದರಿಂದಲೂ; 'ಅನುಕೂಲಃ' ಎನ್ನಲ್ಪಡುವನು. (ವಿ|| ಭಾ) ಇಂತವನಾಗಿದ್ದರೂ ಸ್ವಭಾವದಿಂದಲೆ ಮಹತ್ತ್ವವುಳ್ಳವನಾಗಿ ಸರ್ವದಾಮದಾಭಿಮಾನಾದಿಗಳಿಲ್ಲದವನಾದುದರಿಂದ ಮರ್ಯಾದೆಯನ್ನತಿಕ್ರಮಿಸದವನು ಅಥವಾ ಭಕ್ತಪರತಂತ್ರನು. (ಮ) ಸತ್ಪುರುಷರಿಗೆ ಅನುಕೂಲನು.

## (೩೪೫ನೇ ನಾಮವು) ಶತಾವರ್ತಃ,
## ಓಮ್|| ಶತಾವರ್ತಾಯನಮಃ.

(ಶಂ|| ಭಾ) ಧರ್ಮಸಂಸ್ಥಾಪನಾರ್ಥವಾಗಿ ನೂರುಸಲ ಅವತರಿಸುವಂತವನೆಂತಲಾದರೂ ನಾಡೀಶತಗಳಲ್ಲಿ ಪ್ರಾಣರೂಪದೊಡನೆ ಇರುವಂತವನೆಂತಲಾದರೂ ತಿಳಿಯಬೇಕು (ವಿ|| ಭಾ) ನೂರು ಸುಳಿಗಳುಳ್ಳವನು. ಎಂದರೆ ಈ ಪ್ರಕಾರವಾಗಿ ವೇಲಾತೀತವಾದ ತನ್ನ ಐಶ್ವರ್ಯವನ್ನು ಸ್ವೇಚ್ಛೆಯಾಗಿ ಹೋಗದಂತೆ ತಡೆಮಾಡುವುದರಿಂದ ಸಂಕಟವಾದ ಸ್ಥಲಗಳಲ್ಲಿ ಹೋಗುವ

ದಕ್ಕೆ ಆಗದ ಪ್ರವಾಹವು ಸುಳಿಗಳೊಡನೆ ಕೂಡಿಕೊಂಡಿರುವಂತೆಯೂ ಸಂಕುಚಿತವಾದ ಸ್ಥಳದಲ್ಲಿ ಹೋಕ್ಕಿರುವ ಸಮುದ್ರದಂತೆಯೂ ಸುಳಿಗಳಿಂದ ಕೂಡಿರುವಂತೆ ಕಾಣಿಸುವಂತವನು. (ಮ) ಸಂಸಾರಿಗಳ ಸಮೂಹವನ್ನು ತಿರಿಗಿಸುವಂತವನೆಂತಲಾದರೂ ನಾಡೀಶತಗಳಲ್ಲಿರುವಂತವನೆಂತಲಾದರೂ ಆಗಬಹುದು. ‖೩೮೫‖

## (೩೮೬ನೇ ನಾಮವು) ಪದ್ಮೀ,

## ಓಮ್‖ ಪದ್ಮಿನೇನಮಃ

(ಶಂ‖ ಮ) ಪದ್ಮವನ್ನು ಕೈಯ್ಯಲ್ಲುಳ್ಳವನು (ವಿ‖ ಭಾ) ಈ ರೀತಿಯಾಗಿ ವಾಸುದೇವನನ್ನು ಗುಣದಿಂದ ಪ್ರಕಾಶಪಡಿಸಿ ಸ್ವರೂಪದಿಂದಲೂ ವಿವರಿಸುತ್ತಾರೆ. ಲೀಲಾಪದ್ಮದೊಡನೆ ನಿತ್ಯಯೋಗ ವಿರುವುದರಿಂದ 'ಪದ್ಮೀ' ಎನ್ನಲ್ಪಡುವನು. ‖೩೮೬‖

## (೩೮೭ನೇ ನಾಮವು) ಪದ್ಮನಿಭೇಕ್ಷಣಃ,

## ಓಮ್‖ ಪದ್ಮನಿಭೇಕ್ಷಣಾಯನಮಃ.

(ಶಂ‖ ಭಾ) ಪದ್ಮಕ್ಕೆ ಸಮಾನವಾದ ಕಣ್ಣುಗಳುಳ್ಳವನು (ವಿ‖ ಭಾ) ನಿರ್ಮಲವಾದ ಕಮಲದಂತೆ ಆಶ್ರಿತರ ಶ್ರಮ ನಿವಾರಣಕ್ಕಾಗಿ ರಮಣೀಯವಾದ ಕಟಾಕ್ಷವುಳ್ಳವನು. ‖೩೮೭‖

ಈ (೩೭)ನೇ ಶ್ಲೋಕದಲ್ಲಿ ಪ್ರಕೃತಗಳಾಗಿರುವ(೧೦) ದಿವ್ಯನಾಮಗಳಿಗೂ "ಅಶೋಕ" (೩೭೮) ಶೋಕಮೋಹಾದಿ ನಾಶಕಃ ಪರಿಕೀರ್ತಿತಃ | ಯ "ಸ್ತಾರಣ" (೩೭೯) ಸ್ತಾರಯತಿ ವೈರಿವ್ಯಾಧ್ಯಾದಿ ಭೀತಿತಃ ‖ "ತಾರ" (೩೮೦) ಸ್ಸಂಸಾರ ಭಯತೋನಿತ್ಯಂ ತಾರಯತೀತಿಸಃ | ವಿಜಿಗೀಷುತಯಾ ಜೈತ್ರ ಸ್ಸಮರ್ಥ "ಶ್ಯೂರ" (೩೮೧) ಉಚ್ಯತೇ | ಶೂರಸ್ಯ ವಸುದೇವಸ್ಯ ಯೋಽಪತ್ಯಂ "ಶೌರಿ" (೩೮೨) ರುಚ್ಯತೇ ‖ ಪ್ಲವನೊ ಜ್ವಲನೈಶ್ವರ್ಯ ಮಹೌಘಸ್ಸ್ಯ "ಜ್ಜನೇಶ್ವರಃ" (೩೮೩) ಸ್ವಭಾವತೋ ಮಹತ್ವೇಪಿ ಮದವಿಸ್ಮಯ ವರ್ಜನಾತ್ | ಭಕ್ತೈಕ ಪ್ರವಣೊ ನಿತ್ಯ "ಮನುಕೂಲ" (೩೮೪) ಇತಿ ಸ್ಮೃತಃ ‖

ಐಶ್ವರ್ಯ ಜೃಂಭಿತಾಭಿಖ್ಯಾ ಆವರ್ತ್ಯಾಯುಸ್ಯ ನಿತ್ಯಶಃ | ಶತಂಸಂತಿ "ಶತಾವರ್ತಃ" (೩೪೫) ವಸ್ಸ್ವರ್ಣೋ ಭುಕ್ತಿ ಮುಕ್ತಿದಃ || ಗುಣತೋ ವಾಸುದೇವತ್ವ ಮುಕ್ತಂ ರೂಪಾದಿ ರುಚ್ಯತೇ | ಲೀಲಾ ಪದ್ಮಧರೋ ನಿತ್ಯಂ 'ಪದ್ಮೀ' (೩೪೬)' ತಿ ಪರಿಕೀರ್ತ್ಯತೇ || ಸ್ವಚ್ಛಾಂಬುಜಾತ ಸದೃಶವೀಕ್ಷಣಂ ಶ್ರಮಹಾರಿಚ | ಯಸ್ಯಾಸ್ತಿ ಭಕ್ತರಕ್ಷಾಯಾಂ ಸಸೂಸ್ಯ "ತ್ಪದ್ಮನಿಭೇಕ್ಷಣಃ" || (೩೪೭) ಎಂಬೀ ರೀತಿಯಗಾಗಿ ವಿವೃತಿಯನ್ನು ಕಾಣಬಹುದು.

ಮೂ|| ಪದ್ಮನಾಭೋಽರವಿಂದಾಕ್ಷಃ ಪದ್ಮಗರ್ಭಶ್ಶರೀರಭೃತ್ | ಮಹರ್ದ್ಧಿಃ ಋದ್ಧೋ ವೃದ್ಧಾತ್ಮಾ ಮಹಾಕ್ಷೋ ಗರುಡಧ್ವಜಃ ||೩೮||

(೩೪೮ನೇ ನಾಮವು) ಪದ್ಮನಾಭಃ,

ಓಮ್|| ಪದ್ಮನಾಭಾಯನಮಃ.

(ಶಂ|| ಮ) ಕಮಲದ ನಾಭಿಯೆಂದರೆ ಮಧ್ಯಪ್ರದೇಶವು, ಅಲ್ಲಿರುವಂತವನು. (ಅಥವಾ) (ಶಂ) ಚತುರ್ದಶ ಭುವನಾತ್ಮಕವಾದ ಪದ್ಮವನ್ನು ನಾಭಿಯಲ್ಲುಳ್ಳವನು. (ಮ) ಇದರಿಂದ "ಪದ್ಮನಾಭೋಽಮರ ಪ್ರಭುಃ|| ಪದ್ಮನಾಭಃ ಪ್ರಜಾಪತಿಃ" ಎಂಬ ಸ್ಥಲಗಳಲ್ಲಿರುವ ನಾಮಗಳಿಗಿಂತಲೂ ಅರ್ಥಭೇದವು ಸಿದ್ಧವು. (ವಿ|| ಭಾ) ಪದ್ಮದಂತೆ ಇರುವ ನಾಭಿಯುಳ್ಳವನು. ||೩೪೮||

(೩೪೯ನೇ ನಾಮವು) ಅರವಿಂದಾಕ್ಷಃ,

ಓಮ್|| ಅರವಿಂದಾಕ್ಷಾಯನಮಃ.

(ಶಂ|| ವಿ) ಅರವಿಂದದಂತೆ ಸುಂದರವಾದ ಕಣ್ಣುಗಳುಳ್ಳವನು ||೩೪೯||

(೩೫೦ನೇ ನಾಮವು) ಪದ್ಮಗರ್ಭಃ,

ಓಮ್|| ಪದ್ಮಗರ್ಭಾಯನಮಃ.

(ಶಂ|| ಭಾ) ಹೃದಯಕಮಲ ಮಧ್ಯದಲ್ಲಿ ಉಪಾಸ್ಯನಾಗಿರುವಂತವನು. (ವಿ|| ಭಾ) ತನ್ನಂತೆ ಪರಿಮಳಯುಕ್ತವಾಗಿಯೂ ಮೃದುವಾಗಿ

ಯೂ ಇರುವ ಆಸನ ಪದ್ಮದಲ್ಲಿಯಾದರೂ ಉಪಾಸಕರ ಹೃದಯಕಮಲ ದಲ್ಲಿಯಾದರೂ; ಇರುವಂತವನು. (ಮ) ಪದ್ಮಕ್ಕೆ ಸಮಾನವಾದ ಕಾಂತಿ ಯುಳ್ಳವನು. ‖೩೫೦‖

(೩೫೧ನೇ ನಾಮವು) ಶರೀರಭೃತ್,

ಓಮ್‖ ಶರೀರಭೃತೇನಮಃ.

(ಶಂ‖ ಭಾ) ಪ್ರಾಣಿಗಳ ಶರೀರಗಳನ್ನು ಅನ್ನರೂಪದಿಂದ ಧರಿಸು ವಂತವನು. ಅಥವಾ ತನ್ನ ಮಾಯೆಯಿಂದ ಶರೀರಗಳನ್ನು ಧರಿಸುವಂತ ವನು. (ಮ) ಸೃಷ್ಟಿಮಾಡಬೇಕೆಂಬ ಅಪೇಕ್ಷೆಯಿಂದ ಅವತಾರ ಶರೀರ ಗಳನ್ನು ಧರಿಸುವಂತವನು. (ವಿ‖ ಭಾ) ಈ ಪ್ರಕಾರವಾಗಿ ಶುಭಾಶ್ರಯ ವಾದ ತನ್ನ ಗುಣಗಳಿಂದ ತನಿಗೆ ಶರೀರಭೂತರಾದ ಉಪಾಸಕರನ್ನು ಪೋಷಿಸುವಂತವನು. ಉಪಾಸ್ಯನಾದ ಪರಮಪುರುಷನ ಗುಣಗಳು ತಾನೆ ಉಪಾಸಕರಿಗೆ ಪೋಷಕಗಳಾಗಿರುವುವು. " ವಸತಿಹೃದಿ ಸನಾತನೇಚ ತಸ್ಮಿನ್ಭವತಿ ಪುಮಾ‌ಞ್ ಜಗತೋಽಸ್ಯ ಸೌಮ್ಯರೂಪಃ " (ವಿ‖ ಪು‖ ೩‖ ೭‖ ೨೮) " ರಕ್ಷತೆ ಭಗವಾನ್ವಿಷ್ಣು ರ್ಭಕ್ತಾನಾತ್ಮ ಶರೀರವತ್ " ಎಂ ಬಂತೆ ಉಪಾಸಕರು ತಾನೆ ಅವನಿಗೆ ಆತ್ಮವಾಗಿಯೂ ಶರೀರವಾಗಿಯೂ ಇರುವರು. ‖೩೫೧‖

(೩೫೨ನೇ ನಾಮವು) ಮಹರ್ದ್ಧಿಃ,

ಓಮ್‖ ಮಹರ್ದ್ಧಯೇನಮಃ.

(ಶಂ‖ ಮ) ಅಧಿಕವಾದ ಐಶ್ವರ್ಯವುಳ್ಳವನು. (ವಿ‖ ಭಾ) ಇನ್ನು ಮುಂದೆ ವಿಭೂತಿಗಳ ಮುಖವಾಗಿಯೂ ಅವನೇ ವಿವರಿಸಲ್ಪಡುವನು. ಅವರುಗಳ ಯೋಗಕ್ಷೇಮಕ್ಕೆ ಬೇಕಾದ ಅಪಾರವಾದ ವಿಭೂತಿಯುಳ್ಳ ವನು. ವಿಭೂತಿಃ-ಐಶ್ವರ್ಯವು. ‖೩೫೨‖

(೩೫೩ನೇ ನಾಮವು) ಋದ್ಧಿಃ,

ಓಮ್‖ ಋದ್ಧಾಯನಮಃ.

(ಶಂ ಭಾ) ಪ್ರಪಂಚ ರೂಪದಿಂದ ವೃದ್ಧಿಹೊಂದುವಂತವನು. (ವಿ‖ ಭಾ) ಭಕ್ತರುಗಳಿಗೆ ಸಮೃದ್ಧಿಯುಂಟಾದರೆ ಅದೇ ತನಿಗೂ ಸಮೃದ್ಧಿ

ಯಾಗಿವುಳ್ಳವನು ಈ ಅಂಶವು "ಅಭಿಷಿಚ್ಯಚಲಂ ಕಾಯಾಂ" (ಶ್ರೀ॥ ಬಾ॥ ೧೧೯೦) ಎಂಬ ಪ್ರಕರಣದಲ್ಲಿ ಶ್ರೀವಿಭೀಷಣರಿಗೆ ಪಟ್ಟಾಭಿಷೇಕ ವನ್ನು ಮಾಡಿದ್ದರಿಂದ ತಾನು ಕೃತಕೃತ್ಯನಾದಂತೆ ಭಾವಿಸಿದ ಸಂದರ್ಭದಲ್ಲಿ ಸೂಚಿತವಾಗುವುದು. (ಮ) ವರ್ಧಿಷ್ಣುವು. ॥೩೫೩॥

## (೩೫೪ನೇ ನಾಮವು) ವೃದ್ಧಾತ್ಮಾ,

## ಓಮ್॥ ವೃದ್ಧಾತ್ಮನೇನಮಃ.

(ಶಂ॥ ಮ) ಪುರಾತನವಾದ ಆತ್ಮವುಳ್ಳವನು, ಎಂದರೆ:—ಪುರಾಣ ಪುರುಷನು. (ವಿ॥ ಭಾ) ಇಂತಹ ಮಹತ್ತಾದ ಮಹಿಮೆಯನ್ನು ಏಕ ದೇಶದಲ್ಲಿ ಅಡಗಿಸಿಕೊಳ್ಳುವಹಾಗೆ ಅತ್ಯಂತವಾಗಿ ವೃದ್ಧಿಹೊಂದಿದ ದಿವ್ಯಾತ್ಮ ಸ್ವರೂಪವುಳ್ಳವನು. ॥೩೫೪॥

## (೩೫೫ನೇ ನಾಮವು) ಮಹಾಕ್ಷಃ,

## ಓಮ್॥ ಮಹಾಕ್ಷಾಯನಮಃ.

(ಶಂ॥ ಮ) ದೊಡ್ಡದಾದ ಕಣ್ಣುಗಳುಳ್ಳವನು. (ವಿ॥ ಭಾ) ಪೂಜ್ಯ ವಾದ ಚಕ್ರವುಳ್ಳವನು. ಎಂದರೆ ಪರಮಪುರುಷನನ್ನು ವಹಿಸುವುದ ರಿಂದ ಚಕ್ರದೊಡನೆ ಸಾಮ್ಯವಿರುವ ಕಾರಣ ಅಕ್ಷವೆಂದು ವೇದಸ್ವರೂಪಿ ಯಾದ ಗರುಡನು ಹೇಳಲ್ಪಡುವನು. ಅಂತಹ ಗರುಡನನ್ನೇ ವಾಹನವಾಗಿ ವುಳ್ಳವನೆಂದರ್ಥವು ॥೩೫೫॥

## (೩೫೬ನೇ ನಾಮವು) ಗರುಡಧ್ವಜಃ,

## ಓಮ್॥ ಗರುಡಧ್ವಜಾಯನಮಃ.

(ಶಂ॥ ವಿ॥ ಮ) ಗರುಡನನ್ನೇ ಧ್ವಜವಾಗಿ ವುಳ್ಳವನು. (ವಿ) ಇದೇ ಅಲ್ಲವೇ ಸರ್ವೇಶ್ವರನಿಗೆ ಅಸಾಧಾರಣವಾದ ಗುರುತು. ॥೩೫೬॥

ಈ ರೀತಿಯಾಗಿ (೩೮)ನೇ ಶ್ಲೋಕದಲ್ಲಿ ಪ್ರತಿಪಾದಿಸಲ್ಪಟ್ಟ (೯) ನಾಮಗಳಿಗೂ "ನಾಭಿಶ್ಚ ಪದ್ಮವದ್ಯಸ್ಯ "ಪದ್ಮನಾಭ" (೩೪೮) ಸ ಉಚ್ಯತೇ। ರಕ್ತಾರವಿಂದ ನಯನ "ಸ್ತ್ವರವಿಂದಾಕ್ಷ" (೩೪೯) ಈರಿ

ತಃ ‖ ಯೋಗಿಹೃತ್ಪುಂಡರೀಕಸ್ಥಃ "ಪದ್ಮಗರ್ಭ" (೩೫೦) ಸ್ಸ ಉಚ್ಯತೇ | ಯೋಗಿ ಹೃತ್ಕಂಜ ಮಧ್ಯಸ್ಥ ಸ್ಸ್ವದೇಹಂತಂ ಬಿಭರ್ತಿಯಃ ‖ "ಶರೀರಭೃ" (೩೫೧) ತ್ಸಕಥಿತೋವಸ್ವರ್ಣೊ ಭುಕ್ತಿ ಮುಕ್ತಿದಃ | ಸಏವ ವಾಸುದೇವೋಥಭೂತಿಭಿಶ್ಚ ವಿವ್ರಿಯತೆ ‖ ತದ್ಯೋಗ ಕ್ಷೇಮವಹನ ನಿರ್ಮರ್ಯಾದ ವಿಭೂತಿತಃ | "ಮಹರ್ದ್ಧಿಃ" (೩೫೨) ತತ್ಸಮೃದ್ಧ್ಯಾಯ ಸ್ಸಮೃದ್ಧ "ಸ್ತ್ವೃದ್ಧ" (೩೫೩) ಉಚ್ಯತೇ ‖ ಮಹಿಮಾನಂ ಚಾಲಕರ್ಯ ಪ್ರವೃದ್ಧ ಸ್ಸರ್ವತೋಧಿಕಂ | ಆತ್ಮಾ ಸ್ವರೂಪಂ ಯಸ್ಯೇತಿ ಸ "ವೃದ್ಧಾತ್ಮೇ" (೩೫೪) ತಿ ಕೀರ್ತ್ಯತೆ ‖ ಅಕ್ಷಸ್ಸುತಾರೋಕ್ಷ ವಹನಾದ್ರಥಾವಯವಸಾಮ್ಯತಃ | ಮಹಾನ್ಪೂಜ್ಯಸ್ಸಯಸ್ಯಾಸ್ತಿ ಸ "ಮಹಾಕ್ಷ" (೩೫೫) ಇತಿ ಸ್ಮೃತಃ ‖ ಸಏವ ತುರ್ಧ್ವಜೋಯಸ್ಯಸ ಉಕ್ತೋ "ಗರುಡಧ್ವಜಃ" ‖ (೩೫೬) ಎಂಬೀ ರೀತಿಯಾಗಿ ವಿವೃತಿಯನ್ನು ಕಾಣಬಹುದು.

ಮೂ‖ ಅತುಲ ಶ್ಶರಭೋ ಭೀಮ ಸ್ಸಮಯಜ್ಞೋ ಹವಿರ್ಹರಿಃ | ಸರ್ವಲಕ್ಷಣಲಕ್ಷಣ್ಯೋ ಲಕ್ಷ್ಮೀವಾನ್ ಸಮಿತಿಂಜಯಃ ‖೩೯‖

(೩೫೭ನೇ ನಾಮವು) ಅತುಲಃ,

ಓಮ್‖ ಅತುಲಾಯನಮಃ.

(ಶಂ‖ ವಿ‖ ಮ) "ನತಸ್ಯಪ್ರತಿಮಾಸ್ತಿ ಯಸ್ಯನಾಮ ಮಹದ್ಯಶಃ‖ (ತೈ‖೨) ನತ್ವತ್ಸಮೊಸ್ತ್ಯಭ್ಯಧಿಕಃ ಕುತೋನ್ಯಃ" (ಗೀ ೧೧) ಎಂಬಂತೆ ತನಿಗೆ ಸಮಾನವಾದ ಬೇರೊಂದು ವಸ್ತುವಿಲ್ಲದವನು. ‖೩೫೭‖

(೩೫೮ನೇ ನಾಮವು) ಶರಭಃ,

ಓಮ್‖ ಶರಭಾಯನಮಃ.

(ಶಂ‖ ಭಾ) ನಾಶಹೊಂದುವ ಸ್ವಭಾವವುಳ್ಳ ಶರೀರಗಳು ಶರಶಬ್ದದಿಂದ ಹೇಳಲ್ಪಟ್ಟು ಅಂತಹ ಶರೀರಗಳಲ್ಲಿ ಪ್ರತ್ಯಗಾತ್ಮ ಸ್ವರೂಪನಾಗಿ ಪ್ರಕಾಶಿಸುವಂತವನು. (ವಿ‖ ಭಾ) ತನ್ನಿಂದ ಮಾಡಲ್ಪಟ್ಟ ಮರ್ಯಾದೆ

ಯನ್ನು ಮೀರುವಂತವರಿಗೆ ಶಿಕ್ಷಕನು. (ಮ) ವೇಗದಿಂದಲೂ ತೇಜಸ್ಸಿನಿಂದಲೂ ಶರ (ಬಾಣ) ಗಳಂತೆ ಪ್ರಕಾಶಿಸುವಂತವನು. ‖೩೫೮‖

## (೩೫೯ನೇ ನಾಮವು) ಭೀಮಃ,
## ಓಮ್‖ ಭೀಮಾಯನಮಃ.

(ಶಂ‖ ವಿ‖ ಮ) ಆದುದರಿಂದಲೆ ಅವರುಗಳಿಗೆ (ತನ್ನ ಆಜ್ಞಾತಿಲಂಘನವನ್ನು ಮಾಡತಕ್ಕವರಿಗೆ) ಭಯಂಕರನು. (ವಿ‖ ಮ) ಇಂತವನಲ್ಲಿ ಭಯಪಟ್ಟು ತಾನೆ ಅಗ್ನಿವಾಯ್ವಾದಿಗಳು ತಮ್ಮತಮ್ಮಗಳ ಮರ್‍ಯಾದೆಯನ್ನು ಮೀರದೇ ಇರುವರು. ‖೩೫೯‖

## (೩೬೦ನೇ ನಾಮವು) ಸಮಯಜ್ಞಃ,
## ಓಮ್‖ ಸಮಯಜ್ಞಾಯನಮಃ.

(ಶಂ‖ ಮ‖ ಭಾ) ಸೃಷ್ಟಿಸ್ಥಿತಿ ಲಯಕಾಲಗಳನ್ನು ತಿಳಿದವನು. ಅದವಾ ಷಟ್ಸಿದ್ಧಾಂತಗಳನ್ನು ತಿಳಿದವನು. ಅಧವಾ (ಶಂ‖ಮ) "ಸಮತ್ವ ಮಾರಾಧನ ಮಚ್ಯುತಸ್ಯ" (ಭಾಗ‖ ೭‖) ಎಂಬಂತೆ ಸಮದರ್ಶನರೂಪವಾದ ಯಜ್ಞವುಳ್ಳವನು. (ವಿ‖ ಭಾ) ಸಮಯವನ್ನು ತಿಳಿದವನು. ಎಂದರೆ ಅಂತಹ ಅಗ್ನ್ಯಾದಿ ದೇವತೆಗಳಲ್ಲಿ ಅಗ್ನಿಯು ಊರ್ಧ್ವಾಕಾರವಾಗಿ ಜ್ವಲಿಸುತಲಿರಬೇಕೆಂತಲೂ; ವಾಯುವು ಸದಾ ಬೀಸುತಲಿರಬೇಕೆಂತಲೂ; ಈ ರೀತಿಯಾಗಿಯೇ ಅವರವರುಗಳಿಗೆ ತಕ್ಕಂತೆ ಇರುತಲಿರುವ ಅಧಿಕಾರ ನಿಯಮವನ್ನು ಕಂಡವನೆಂದರ್ಥವು. ಅಧವಾ ಭಕ್ತರುಗಳಿಗೆ ತನ್ನನ್ನು ಕೊಡುವಂತಹ ಅವಸರವು ಸಮಯವೆನ್ನಲ್ಪಡುವುದು. ಅದನ್ನು ತಿಳಿದವನು. ಅಭಯ ಪ್ರದಾನವನ್ನು ಮಾಡುವ ಸಮಯವನ್ನು ತಿಳಿದವನೆಂತಲಾದರೂ ಹೇಳಬಹುದು. ‖೩೬೦‖

## (೩೬೧ನೇ ನಾಮವು) ಹವಿರ್ಹರಿಃ,
## ಓಮ್‖ ಹವಿರ್ಹರಯೇನಮಃ.

(ಶಂ‖ ಮ‖ ಭಾ) "ಅಹಂಹಿ ಸರ್ವಯಜ್ಞಾನಾಂ ಭೋಕ್ತಾಚ ಪ್ರಭುರೇವಚ" (ಗೀ‖ ೯) ಎಂಬ ವಚನಾನುಸಾರವಾಗಿ ಯಜ್ಞಗಳಲ್ಲಿ ಹವಿ

ಭಾರ್ಗವವನ್ನು ಹರಿಸುವಂತವನು. ಅಥವಾ (ಶಂ) ಹವಿಃ‖ ಹರಿಃ‖ ಎಂಬ ದಾಗಿ ಯರಡು ನಾಮಗಳಾಗಿರುವುವು "ಅಬಧ್ನನ್ ಪುರುಷಃ ಪುಶುಂ" (ಪು‖ ಸೂ) ಎಂಬಂತೆ ಹವಿಸ್ಸುಗಳಿಂದ ಹೋಮಮಾಡಲ್ಪಡುವಂತವನಾ ದುದರಿಂದ 'ಹವಿಃ' ಎನ್ನಲ್ಪಡುವನು. ಸ್ಮೃತಿಮಾತ್ರದಿಂದ ಪುರುಷರ ಪಾಪವನ್ನೂ ಮತ್ತು ಅವಿದ್ಯಾ, ತತ್ಕಾರ್ಯವಾದ ಸಂಸಾರವನ್ನೂ ಅಪ ಹರಿಸುವುದರಿಂದಲಾದರೂ; ಹರಿದ್ವರ್ಣ ವುಳ್ಳವನಾದುದರಿಂದಲಾದರೂ 'ಹರಿಃ' ಎನ್ನಲ್ಪಡುವನು. ಈ ಅರ್ಥವು "ಹರಾಮ್ಯಘಂಚ ಸ್ಮರ್ತ್ರೂ ಣಾಂ ಹವಿರ್ಭಾಗಂ ಕ್ರತುಷ್ವಹಂ | ವರ್ಣಶ್ಚ ಮೇಹರಿರ್ವೇತಿ ತಸ್ಮಾದ್ಧ ರಿರಹಂ ಸ್ಮೃತಃ" (ಶಾಂತಿ ಪ‖ ೩೪೩‖ ೩೯) ಎಂಬೀ ವ್ಯಾಸ ವಚನದಲ್ಲಿ ಕಾಣಬರುದು. (ವಿ‖ ಭಾ) ಹವಿಃ-ಶ್ರುತಿ ಸಿದ್ಧವಾದ ಸಮಯವನ್ನು ತಿಳಿದು ಅವರುಗಳಿಗೆ ಶ್ರೀಯನ್ನು ಕೊಡುವಂತವನು. ಅವರುಗಳು ಕೊಡುವ ಹವಿಸ್ಸನ್ನು ಸ್ವೀಕರಿಸುವಂತವನು. ಹರಿಃ-ಅವರುಗಳ ಮೋಕ್ಷ ವಿರೋಧಿಯಾದ ಪಾಪವರ್ಗವನ್ನು ಪರಿಹರಿಸುವಂತವನು. ಈ ಅರ್ಥವು "ಹರಿರ್ಹರತಿ ಪಾಪಾನಿ ದುಷ್ಟಚಿತ್ತೈರಪಿ ಸ್ಮೃತಃ | ಅನಿಚ್ಛಯಾಪಿ ಸಂಸ್ಪೃಷ್ಟೋ ದಹತ್ಯೇವಹಿ ಪಾವಕಃ" ಎಂಬೀ ಪ್ರಮಾಣ ಸಿದ್ಧವಾಗಿ ರುವುದು 'ಹವಿರ್ಹರಿಃ' ಎಂಬದಾಗಿ ಏಕನಾಮವಾಗಿರುವುದು. ಇಲ್ಲಿ (ಶಂ) ಭಾಷ್ಯೋದಾಹೃತವಾದ ಶಾಂತಿಪರ್ವಪ್ರಮಾಣವನ್ನೂ ಅನುಸಂಧಿಸಬೇಕು. ‖೩೬೧‖

## (೩೬೨ನೇ ನಾಮವು) ಸರ್ವಲಕ್ಷಣಲಕ್ಷಣ್ಯಃ, ಓಮ್‖ ಸರ್ವಲಕ್ಷಣಲಕ್ಷಣ್ಯಾಯನಮಃ

(ಶಂ‖ ಭಾ) ಸರ್ವ ಪ್ರಮಾಣಗಳಿಂದ ಯಾವ ಜ್ಞಾನವುಂಟಾಗುವು ದೊ ಅದು ಸರ್ವ ಲಕ್ಷಣವೆನ್ನಲ್ಪಡುವುದು. ಅದಕ್ಕೆ ತಕ್ಕವನು ಎಂದರೆ (ಮ) ಸರ್ವ ಪ್ರಮಾಣಗಳಿಂದಲೂ ಕಾಣಲ್ಪಡುವಂತವನು (ವಿ‖ ಭಾ) ಇನ್ನುಮುಂದೆ ಲಕ್ಷ್ಮೀಪತಿಯಾದ ವಿಗ್ರಹವು ಹೇಳಲ್ಪಡುವುದು. ಸಾಕ್ಷಾ ಲ್ಲಕ್ಷ್ಮೀದೇವಿಯು ಯಾವಾಗಲೂ ಆಲಿಂಗನಮಾಡಿಕೊಂಡಿರುವಳೆಂಬ ಸೌಭಾಗ್ಯವನ್ನು ತಿಳಿಸುವ ಸಮಸ್ತಗಳಾದ ಲಕ್ಷಣಗಳಿಂದಲೂ ಕೂಡಿರು ವನೆಂದು ತಿಳಿಯಲ್ಪಡತಕ್ಕವನು. ಈ ಅರ್ಥವು "ಧ್ಯಾಯೇ ತ್ಕಮಲ

ಗರ್ಭಾಭಂ ದೇವಂ ಲಕ್ಷ್ಮೀಪತಿಂ ತತಃ | ಕಮಲಾಲಯಹೇತೀಕ ವಿಭೂಷಿತ ಕರದ್ವಯಂ ‖ ಪುಂಡರೀಕಾಕ್ಷ ಸಕಲ ಸುಖ ಸೌಭಾಗ್ಯವಾರಿಧೇ ” ಎಂಬೀ ಪ್ರಮಾಣಗಳಲ್ಲಿ ಕಾಣಲ್ಪಡುವುದು. ‖೨೬೨‖

## (೨೬೩ನೇ ನಾಮವು) ಲಕ್ಷ್ಮೀವಾನ್,
## ಓಮ್‖ ಲಕ್ಷ್ಮೀವತೇನಮಃ.

(ವಿ‖ ಭಾ) ಅದರಂತೆಯೇ ಶ್ರೀದೇವಿಯೊಡನೆ ನಿತ್ಯವಾಗಿ ಕಲೆತಿರುವಂತವನು. (ಶಂ) ಲಕ್ಷ್ಮೀದೇವಿಯನ್ನು ವಕ್ಷಸ್ಸ್ಥಲದಲ್ಲಿ ನಿತ್ಯವಾಗಿ ವುಳ್ಳವನು. ‖೨೬೩‖

## (೨೬೪ನೇ ನಾಮವು) ಸಮಿತಿಂಜಯಃ,
## ಓಮ್‖ ಸಮಿತಿಂಜಯಾಯನಮಃ.

(ಶಂ‖ ವಿ‖ ಮ) ಯುದ್ಧದಲ್ಲಿ ಜಯಿಸುವಂತವನು. (ವಿ) ಎಂದರೆ ತಂದೆಯಂತೆ ಹಿತಕಾರಿಯಾಗಿರುವುದರಿಂದ ಸಕಲ ಲೋಕ ತಂದೆಯಾದ ತನ್ನಲ್ಲಿ ದಾಸ್ಯವನ್ನು ಮಾಡುವ ವಿಷಯದಲ್ಲಿ ವಿವಾದ ಯುದ್ಧವನ್ನು ಮಾಡುತಲಿರುವ ಜೀವಕೋಟಿಗಳನ್ನು ಈ ಲಕ್ಷ್ಮೀದೇವಿಯ ಮೂಲಕವಾಗಿ ವಶಪಡಿಸಿ ಜಯಿಸುವಂತವನು. ‖೨೬೪‖

ಈ ೨೮ನೇ ಶ್ಲೋಕದಲ್ಲಿ ಪ್ರತಿಪಾದಿಸಲ್ಪಟ್ಟ (೮) ನಾಮಗಳಿಗೂ “ ಗರುಡಧ್ವಜವತ್ವಾದ್ಧಿ “ ಅತುಲೋ ” (೨೫೭) ಽನುಪಮಸ್ಸ್ಮೃತಃ | ಸ್ವಾಜ್ಞಾತಿ ಲಂಘಿನಃ ಪುಂಸಶ್ಶಿಕ್ಷಣಾ “ ಚ್ಛರಭ ” (೨೫೮) ಸ್ಸ್ಮೃತಃ‖ “ ಭೀಮೊ ” (೨೫೯) ಯಸ್ಮಾದ್ಬಿಭ್ಯತಿತು ಶರಭಾತ್ಪವನಾದಯಃ | ಅಗ್ನ್ಯಾದೀನಾಂಚ ಸಮಯ ಮೂರ್ಧ್ನಿ ಪ್ರಜ್ವಲನಾದಿಕಂ ‖ ಯೋಜಾನಾತ್ಯಧಿಕಾರಂಚ “ ಸಮಯಜ್ಞೋ ” (೨೬೦) ಸ್ಸಕೀರ್ತಿತಃ | ಸಮಯಂ ಶ್ರುತಿ ಸಿದ್ಧಂಯೊ ಜ್ಞಾತ್ವಾತೇಭ್ಯಶ್ಶ್ರಿಯಂಮುದಾ ‖ ದತ್ತೇಽಹುತಂ ಹವಿಸ್ತೈಕ್ಯೈ ದೀಯತೇ ಸ “ ಹವಿ ” ಸ್ಸ್ಮೃತಃ | ಹರತೀತಿ ಹರಿರ್ವಿಷ್ಣುರನ್ನದಾನೇಷು ನಿತ್ಯಶಃ‖ “ಹವಿರ್ಹರಿ” (೨೬೧) ರಿತಿಪ್ರೋಕ್ತೋಽಹ್ಯಷ್ಟಾರ್ಣಕ್ಯೈಕ ನಾಮಕಃ | “ ಸರ್ವಲಕ್ಷಣ ಲಕ್ಷಣ್ಯೋ ” (೨೬೨) ಲಕ್ಷ್ಮೀಚರಣ ಚಿಹ್ನಿತಃ ‖ ಲಕ್ಷ್ಮ್ಯಾಚ ನಿತ್ಯಯುಕ್ತತ್ವಾ “ ಲ್ಲಕ್ಷ್ಮೀವಾ ”

(೩೬೩) ನಿತಿ ಕಥ್ಯತೆ | ಚೇತನಾನಾಂ ಸದಾಸತ್ವ ವಿವಾದಂ ಜಯತೀತಿ ಯಃ ‖ " ಸಮಿತಿಂಜಯ " (೩೬೪) ಆಖ್ಯಾತ ಸ್ಸರ್ವ ದುಃಖ ಶನಾಶ್ರಯಃ " ಎಂಬಂತೆ ವಿವೃತಿಯನ್ನು ಕಾಣಬಹುದು

ಮೂ‖ ವಿಕ್ಷರೊ ರೋಹಿತೋ ಮಾರ್ಗೋ ಹೇ
ತು ರ್ದಾಮೋದರ ಸ್ಸಹಃ | ಮಹೀಧರೊ ಮಹಾ
ಭಾಗೋ ವೇಗವಾ ನಮಿತಾಶನಃ ‖೪೦‖

(೩೬೫ನೇ ನಾಮವು) ವಿಕ್ಷರಃ,

ಓಮ್‖ ವಿಕ್ಷರಾಯನಮಃ.

(ಶಂ‖ ಮ) ನಾಶವಿಲ್ಲದವನು. ವಿಗತಃ ಕ್ಷರಃ ಯಸ್ಮಾತ್ (ವಿ‖ ಭಾ) ಈ ರೀತಿಯಾಗಿ ಭಕ್ತರಲ್ಲಿರುವ ಪ್ರೇಮಗೆ ಯೆಂದಿಗೂ ನಾಶವಿಲ್ಲದವನು.

(೩೬೬ನೇ ನಾಮವು) ರೋಹಿತಃ,

ಓಮ್‖ ರೋಹಿತಾಯನಮಃ.

(ಶಂ‖ ಭಾ) ರೋಹಿತ ವರ್ಣವಾದ ಮೂರ್ತಿಯನ್ನು ಅಥವಾ ಮತ್ಸ್ಯ ಮೂರ್ತಿಯನ್ನು ವಹಿಸಿದವನು. (ವಿ‖ ಭಾ) ಲಕ್ಷ್ಮೀಪತಿಯಾದ ಮೂರ್ತಿಗೆ ಕಮಲಪುಷ್ಪದ ಒಳಗೆ ಇರುವ ವರ್ಣದಂತೆ ದಿವ್ಯದೇಹವಿರುವುದರಿಂದ ಕೆಂಪಾಗಿರುವಂತವನು. (ಮ) ಪ್ರಪಂಚ ರೂಪವಾದ ಅಂಕುರವನ್ನು ಅಂಕುರಿಸುವಂತೆ ಮಾಡುವಂತವನು. ‖೩೬೬‖

(೩೬೭ನೇ ನಾಮವು) ಮಾರ್ಗಃ,

ಓಮ್‖ ಮಾರ್ಗಾಯನಮಃ.

(ಶಂ‖ ವಿ‖ ಮ) ಇಷ್ಟಸಿದ್ಧಿಗಾಗಿ ಉಪಾಸಕರಿಂದ ಹುಡುಕಲ್ಪಡುವಂತವನು. ಅಥವಾ (ಶಂ) ಪರಮಾನಂದವು ಯಾವನಿಂದ ಹೊಂದಲ್ಪಡುವುದೊ ಅವನು 'ಮಾರ್ಗಃ' ಎನ್ನಲ್ಪಡುವನು. ‖೩೬೭‖

(೩೬೮ನೇ ನಾಮವು) ಹೇತುಃ,

ಓಮ್‖ ಹೇತವೇನಮಃ.

(ಶಂ|| ಭಾ) ಉಪಾದಾನ ಕಾರಣವೂ ನಿಮಿತ್ತ ಕಾರಣವೂ ಅವನೇ ಆಗಿರುವುದರಿಂದ 'ಹೇತುಃ' ಎನ್ನಲ್ಪಡುವನು. (ಮ) ಸಮಸ್ತಕ್ಕೂ ಕಾರಣನು. (ವಿ) ಇಷ್ಟಸಿದ್ಧಿಗೆ ಕಾರಣನಾದವನು ||೩೬೮||

(೩೬೯ನೇ ನಾಮವು) ದಾಮೋದರಃ,

ಓಮ್|| ದಾಮೋದರಾಯನಮಃ.

(ಶಂ|| ಭಾ) ದಮ ಎಂದರೆ ಇಂದ್ರಿಯ ನಿಗ್ರಹವು, ಇದೇ ಮೊದಲಾದ ಸಾಧನದಿಂದುಂಟಾಗುವ ಪರಿಶುದ್ಧ ಜ್ಞಾನದಿಂದ ಹೊಂದಲ್ಪಡುವಂತವನು. "ದಮಾದ್ದಾಮೋದರಂ ವಿದುಃ" ಎಂಬದಾಗಿ ಶ್ರೀಮಹಾಭಾರತದಲ್ಲಿರುವುದು. ಅಥವಾ (ಶಂ|| ಮ) ಯಾವನ ಹೊಟ್ಟೆಯಲ್ಲಿ ಹಗ್ಗವು ಕಟ್ಟಲ್ಪಟ್ಟಿರುವುದೊ ಅವನು ದಾಮೋದರನು. ಈ ಅರ್ಥವು "ತಯೊರ್ಮಧ್ಯಗತಂ ಬದ್ಧಂ ದಾಮ್ನಾಗಾಢಂ ತಯೊದರೆ | ತತಶ್ಚ ದಾಮೋದರತಾಂ ಸಯಯೌ ದಾಮ ಬಂಧನಾತ್" ಎಂಬ ಬ್ರಹ್ಮ ಪುರಾಣ ವಚನದಿಂದ 'ಆ ವೃಕ್ಷಗಳ ಮಧ್ಯದಲ್ಲಿ ಯಶೋದಾದೇವಿಯಿಂದ ಕಟ್ಟಲ್ಪಟ್ಟವರಳಿನೊಡನೆ ಬದ್ಧನಾದ ಕಾಲದಲ್ಲಿ ಸೊಂಟದಲ್ಲಿ ಹಗ್ಗವಿರುವ ಪ್ರಯುಕ್ತವಾಗಿ ದಾಮೋದರನೆನ್ನಲ್ಪಟ್ಟನೆಂಬ' ಈ ಅರ್ಥ ಏರ್ಪಡುವುದು ಮತ್ತು (ಶಂ|| ವಿ|| ಮ) "ದಾಮಾನಿ ಲೋಕನಾಮಾನಿ ಭಾಂತಿಯಸ್ಯೋದರಾಂತರೆ | ತೇನದಾಮೋದರೊ ದೇವಃ" ಎಂಬ ವ್ಯಾಸ ವಚನದಿಂದಲೂ ದಾಮೋದರ ನೆನ್ನಲ್ಪಡುವನು. ಲೋಕಗಳೆನ್ನಲ್ಪಡುವ ಮಾಲಿಕೆಗಳು ಯಾವನ ಹೊಟ್ಟೆಯಲ್ಲಿರುವುವೊ ಅಂತವನು ದಾಮೋದರ ನೆನ್ನಲ್ಪಡುವನೆಂದರ್ಥವು. (ವಿ||ಭಾ) ದೇವತೆಗಳಿಗೆ ಸುಖವನ್ನು ಆಶಿಸುವುದರಿಂದ ದಾಮೋದರ ನೆಂತಲಾದರೂ ; ಈ ರೀತಿಯಾಗಿ ಲಕ್ಷ್ಮೀದೇವಿಯೂ ಕೂಡ ಅಪೇಕ್ಷಿಸುವ ಚಾತುರ್ಯವುಳ್ಳವನಾಗಿದ್ದರೂ ಆಶ್ರಿತ ವಾತ್ಸಲ್ಯದಿಂದ ಯಶೋದಾದೇವಿಯು ತನ್ನ ಹೊಟ್ಟೆಯನ್ನು ಹಗ್ಗದಿಂದ ಕಟ್ಟಲು ಅದರಿಂದ ಬದ್ಧನಾಗಿ "ತತಸ್ಸದಾಮೋದರತಾಂ ಪ್ರಯಯೌ ದಾಮ ಬಂಧನಾತ್" ( ವಿ|| ಪು|| ೫ ) ಎಂಬಂತೆ ದಾಮೋದರನಾಗಿರುವನು. ||೩೬೯||

(೩೭೦ನೇ ನಾಮವು) ಸಹಃ,

ಓಮ್|| ಸಹಾಯನಮಃ.

(ಶಂ|| ಮ) ಸರ್ವರನ್ನು ತಿರಸ್ಕರಿಸುವಂತವನು. ಅಥವಾ, ಭಕ್ತಾ ಪರಾಧಗಳನ್ನು ಕ್ಷಮಿಸುವಂತವನು. (ವಿ|| ಭಾ) ಈ ರೀತಿಯಿಂದ ಯಶೋದಾದೇವಿಯಿಂದುಂಟಾದ ಬಂಧವನ್ನೂ ಅವಳು ತನ್ನನ್ನು ಹೊಡೆದರೆ ಅದನ್ನೂ, ಮತ್ತು ಬೆದರಿಸಿದರೆ ಅದನ್ನೂ ಸಹ ಸಹಿಸುವಂತವನು. ||೩೭೦||

## (೩೭೧ನೇ ನಾಮವು) ಮಹೀಧರಃ,

## ಓಮ್|| ಮಹೀಧರಾಯನಮಃ.

(ಶಂ||ಭಾ) ಭೂಮಿಯನ್ನು ಪರ್ವತರೂಪದೊಡನೆ ಧರಿಸುವಂತವನು. " ವನಾನಿ ವಿಷ್ಣು ರ್ಗಿರಯೊ ದಿಶಶ್ಚ " (೨|| ೧೨|| ೩೮) ಎಂಬ ವಚನವೇ ಈ ಅರ್ಥವನ್ನು ಹೇಳುವುದು (ವಿ|| ಭಾ) ಭೂಭಾರ ನಿರಾಕರಣದಿಂದ ಭೂಮಿಯನ್ನು ಕಾಪಾಡುವಂತವನು. (ಮ) ವರಾಹಾವತಾರವನ್ನು ಮಾಡಿ ಭೂಮಿಯನ್ನು ಧರಿಸಿದವನು. ||೩೭೧||

## (೩೭೨ನೇ ನಾಮವು) ಮಹಾಭಾಗಃ,

## ಓಮ್|| ಮಹಾಭಾಗಾಯನಮಃ.

(ಶಂ|| ಭಾ) ಸ್ವೇಚ್ಛೆಯಿಂದ ಅವತಾರ ಶರೀರಗಳನ್ನು ಹೊಂದಿ ಅಧಿಕಗಳೂ ಭಾಗಜನ್ಯಗಳೂ ಆದ ಭೋಜನಗಳನ್ನು ಅನುಭವಿಸುವಂತವನು, ಅಥವಾ ಅವತಾರಗಳಲ್ಲಿ ಮಹತ್ತಾದ ಭಾಗ್ಯವುಳ್ಳವನು (ವಿ|| ಭಾ) ಮಹತ್ತಾದ ಸೌಭಾಗ್ಯವುಳ್ಳವನು. ಎಂದರೆ ನೀಳಾದೇವಿಯೇ ಮೊದಲಾದ ೧೬ ಸಾವಿರ ಸ್ತ್ರೀಜನರೂ ; ದಿವ್ಯ ಕನ್ನಿಕೆಯಾದ ಶ್ರೀರುಕ್ಮಿಣೀದೇವಿಯೂ ; ಸತ್ಯಭಾಮಾ ಜಾಂಬವತೀ ಮೊದಲಾದ ಮಹಿಷಿಯರೂ ; ಆಶೆಯೊಡನೆ ವರಿಸುವಂತಹ ಸೌಭಾಗ್ಯವುಳ್ಳವನೆಂದರ್ಥವು. (ಮ) ತನ್ನ ವ್ಯಾಪ್ತಿಗೆ ಅನುಗುಣವಾಗಿ ಪ್ರಪಂಚ ರೂಪವಾದ ಮಹತ್ತಾದ ಅಂಶವುಳ್ಳವನು. ||೩೭೨||

## (೩೭೩ನೇ ನಾಮವು) ವೇಗವಾನ್,

## ಓಮ್|| ವೇಗವತೇನಮಃ.

(ಶಂ॥ ಭಾ) " ಅನೇಜದೇಕಂ ಮನಸೋಜವೀಯಃ " (ಈಶೋಪ) ಎಂಬಂತೆ ಮನಸ್ಸಿಗಿಂತಲೂ ಅತಿಶಯಿತವಾದ ವೇಗವುಳ್ಳವನು. (ವಿ॥ ಭಾ) ಮನುಷ್ಯರಂತೆ ಕ್ರೀಡಿಸುವಾಗಲೂ ಕೂಡ ಅಸದೃಶವಾದ ಪರಮೈಶ್ವರ್ಯ ಶಾಲಿಯಾಗಿರುವುದರಿಂದ ವೇಗಶಾಲಿಯಾದವನು. ॥೩೭೩॥

## (೩೭೪ನೇ ನಾಮವು) ಅಮಿತಾಶನಃ,

### ಓಮ್॥ ಅಮಿತಾಶನಾಯನಮಃ.

(ಶಂ॥ ಭಾ) ಸಂಹಾರಕಾಲದಲ್ಲಿ ಸಮಸ್ತವನ್ನು ಭುಜಿಸುವಂತವನು. (ವಿ॥ ಭಾ) ಅದು ಹೇಗೆಂದರೆ:—ಇಂದ್ರನಿಗೆಂಬದಾಗಿ ಗೋಪಾಲ ಜನರು ಯೇರ್ಪಡಿಸಿದ್ದ ಆಹಾರವನ್ನು ಸ್ವೀಕರಿಸಿದವನು. ಇದನ್ನು ನೋಡಿ ಗೋಪಾಲಕರೆಲ್ಲರೂ ಇವನು ದೇವನೊ ಅಥವಾ ದಾನವನೊ ಎಂದು " ದೇವೋವಾ ದಾನವೋವಾತ್ವಂ " ಎಂಬೀ ರೀತಿಯಾಗಿ ಅತಿ ಶಂಕೆಯನ್ನು ಮಾಡಿರುವರು. (ಮ) ಅಧಿಕವಾದ ಆಹಾರವುಳ್ಳವನು. ॥೩೭೪॥

ಈ (೪೦)ನೇ ಶ್ಲೋಕ ಪ್ರತಿಪಾದ್ಯಗಳಾದ (೧೦) ನಾಮಗಳಿಗೂ " ಉಕ್ತಸ್ನೇಹಸ್ಯಾಕ್ಷರಣಾ " ದ್ವ್ಯಕ್ಷರಃ " (೩೬೫) ಪರಿಕೀರ್ತಿತಃ। ಪದ್ಮಸ್ಯ ಗರ್ಭಭೂತತಯಾ "ರೋಹಿತಃ" (೩೬೬) ಪರಿಕೀರ್ತಿತಃ ॥ ಉಪಾಸಕೈರ್ಮೃಗ್ಯಮಾಣೋ " ಮಾರ್ಗೋ " (೩೬೭) ವಾಂಛಿತ ಸಿದ್ಧಯೆ। ವಾಂಛಿತಾರ್ಥ ನಿದಾನತ್ವಾ " ದ್ಧೇತು " (೩೬೮) ರಿತ್ಯಭಿ ಧೀಯತೇ ॥ ದಾಮಾನಿ ಲೋಕನಾಮಾನಿ ಹ್ಯುದರೇ ಯಸ್ಯ ಸಂತಿಸಃ। "ದಾಮೋದರ" (೩೬೯) ಇತಿ ಖ್ಯಾತೋ ಯಶೋದಾ ದಾಮ ಬಂಧನಾತ್ ॥ ದೇವಾನಾಂ ಸುಖಶಂಸಿತ್ವಾ ದ್ದಮಾ ದ್ದಾಮೋದರೋಪಿವಾ। ಯಶೋದಾ ಕೃತಬಂಧಾದಿ ಸಹನಾ "ತ್ಸಹ" (೩೭೦) ಈರಿತಃ॥ ಭೂಭಾರನಾಶನೇನಜ್ಯಾಧಾರಣಾತ್ಸ " ಮಹೀ ಧರಃ " (೩೭೧) ರುಕ್ಮಿಣ್ಯಾದಿ ಬಹುಸ್ತ್ರೀಭಿಃ " ಮಹಾಭಾಗಃ " (೩೭೨) ಸ್ವಯಂವೃತಃ। ದುರ್ವಾರ ಪರಮೈಶ್ವರ್ಯ ಪ್ರಸರತ್ವಾ ದ್ವಿಶೇಷತಃ। ಮನುಷ್ಯಧರ್ಮೇ ಬಾಲ್ಯೇಪಿ " ವೇಗವಾ " (೩೭೩) ನಿತಿ ಶಬ್ದ್ಯತೇ ॥ ಇಂದ್ರಾಯ ಕಲ್ಪಿತಂಗೋಪೈ ರಮಿತಂ ಚಾಶನಂ ಸ್ವಯಂ। ಭುಕ್ತವಾನ್ಯಶ್ಚ ನಿಶ್ಶೇಷಂ ಪ್ರೋಚ್ಯತೇಸೊ "ಽಮಿತಾಶನಃ "॥ (೩೭೪) ಎಂಬೀ ರೀತಿಯಿಂದ ವಿವೃತಿಯನ್ನು ಕಾಣಬಹುದು.

ಮೂ॥ ಉದ್ಭವಃ ಕ್ಷೋಭಣೋ ದೇವ ಶ್ರೀ
ಗರ್ಭಃ ಪರಮೇಶ್ವರಃ । ಕರಣಂ ಕಾರಣಂ ಕರ್ತಾ
ವಿಕರ್ತಾ ಗಹನೋ ಗುಹಃ ॥೪೧॥

(೩೭೫ನೇ ನಾಮವು) ಉದ್ಭವಃ,
ಓಮ್॥ ಉದ್ಭವಾಯನಮಃ.

(ಶಂ॥ ಭಾ) ಪ್ರಪಂಚ ಸೃಷ್ಟಿಗೆ ಉಪಾದಾನ ಕಾರಣನಾದವನು. ಅಥವಾ ಸಂಸಾರೋದ್ಗತನು ಎಂದರೆ ಸಂಸಾರ ಸಂಬಂಧ ವಿಲ್ಲದವನು. (ವಿ॥ ಭಾ) "ದಾಮೋದರಂ ಬಂಧಹರಂ" ಎಂಬ (ವಿ॥ ಪು॥ ೧॥ ೯॥ ೧೪೪) ವಚನಾನುಸಾರವಾಗಿ ತನಿಗೆ ಯಶೋದಾದೇವಿಯಿಂದ ಪ್ರಾಪ್ತವಾದಬಂಧ ನವನ್ನು ನೆನೆಸಿದವರಿಗೂ ಕೂಡ ಸಂಸಾರಬಂಧ ವಿಮೋಚಕನಾದಕಾರಣ ಸಂಸಾರ ವಿಲ್ಲದವನು. (ಮ) ಪ್ರಪಂಚವು ಯಾವನಿಂದುಂಟಾಗುವುದೋ ಅವನು 'ಉದ್ಭವಃ' ಎನ್ನಲ್ಪಡುವನು. ॥೩೭೫॥

(೩೭೬ನೇ ನಾಮವು) ಕ್ಷೋಭಣಃ,
ಓಮ್॥ ಕ್ಷೋಭಣಾಯನಮಃ.

(ಶಂ॥ ಮ) ಸೃಷ್ಟಿಕಾಲದಲ್ಲಿ ಪ್ರಕೃತಿ ಪುರುಷರನ್ನು ಪ್ರವೇಶಿಸಿ ಅವರನ್ನು ಸೃಷ್ಟಿಕಾರ್ಯಕ್ಕೆ ಅಭಿಮುಖವಾಗಿ ಮಾಡುವಂತವನು. ಇದಕ್ಕೆ "ಪ್ರಕೃತಿಂ ಪುರುಷಂಚೈವ ಪ್ರವಿಶ್ಯಾತ್ಮೇಚ್ಛಯಾ ಹರಿಃ । ಕ್ಷೋಭಯಾ ಮಾಸ ಭಗವಾನ್ ಸರ್ಗಕಾಲೇ ವ್ಯಯಾ ವ್ಯಯೌ" ಎಂಬ ಶ್ರೀವಿಷ್ಣು ಪುರಾಣ ವಚನವು ಆಧಾರವಾಗಿರುವುದು (ವಿ॥ ಭಾ) ಬಂಧಕ್ಕೆ ಯೋಗ್ಯ ವಾದವುಗಳನ್ನೂ ಬಂಧಕವಾಗಿರುವ ಪ್ರಕೃತಿಯನ್ನೂ ಕಾರ್ಯೋನ್ಮುಖ ವಾಗಿ ಮಾಡುವಂತವನು. ॥೩೭೬॥

(೩೭೭ನೇ ನಾಮವು) ದೇವಃ,
ಓಮ್॥ ದೇವಾಯನಮಃ.

(ಶಂ॥ ಭಾ) "ಏಕೋದೇವಃ" ಎಂಬ ಶ್ರುತಿ ಪ್ರಮಾಣಾನುಸಾರ ವಾಗಿ ಸೃಷ್ಟ್ಯಾದಿ ವ್ಯಾಪಾರಗಳಿಂದ ಕ್ರೀಡಿಸುವುದರಿಂದಲಾದರೂ ;

ಸುರಾದಿಗಳನ್ನು ಜಯಶೀಲರನ್ನಾಗಿ ಮಾಡುವುದರಿಂದಲಾದರೂ ; ಸರ್ವ ಭೂತಗಳಲ್ಲಿಯೂ ತಾನೇ ಇದ್ದುಕೊಂಡು ವ್ಯವಹರಿಸುವುದರಿಂದಲಾದರೂ ; ಮತ್ತು ತಾನೇ ಆತ್ಮರೂಪವಾಗಿ ಪ್ರಕಾಶಿಸುವುದರಿಂದಲಾದರೂ ; ಸ್ತೋತ್ರಾರ್ಹವಾದ (ಗುಣಾದಿಗಳಿಂದ) ವುಗಳಿಂದ ಸ್ತುತಿಸಲ್ಪಡುವುದರಿಂದಲಾದರೂ ; ಯೆಲ್ಲೆಲ್ಲಿಯೂ ಹೋಗುವುದರಿಂದಲಾದರೂ; "ದೇವಃ" ಎನ್ನಲ್ಪಡುವನು. (ವಿ॥ ಭಾ) ವ್ಯಾಘ್ರ ವರಾಹಾದಿಗಳನ್ನು ಲೋಕರು ಬಂಧಿಸುವಂತೆ ಮಾಯಾ ಪಾಶದಿಂದ ಜೀವರನ್ನು ಬಂಧಿಸಿ ಕ್ರೀಡಿಸುವಂತವನು. (ಮ) ಕ್ರೀಡಿಸುವಂತವನು. ॥೩೨೭॥

## (೩೨೮ನೇ ನಾಮವು) ಶ್ರೀಗರ್ಭಃ,

## ಓಮ್॥ ಶ್ರೀಗರ್ಭಾಯನಮಃ.

(ಶಂ॥ ಭಾ) ಯಾವ ಪರಮಾತ್ಮನ ಉದರ ಮಧ್ಯದಲ್ಲಿ ಜಗದ್ರೂಪವಾದ ವಿಭೂತಿ ಇರುವುದೋ ಅವನು " ಶ್ರೀಗರ್ಭಃ " ಎನ್ನಲ್ಪಡುವನು. (ವಿ॥ ಭಾ) ಇಂತಹ ಭೋಗ ಕ್ರೀಡಾದಿಗಳೊಡನೆ ಕೂಡಿ ಶ್ರೀಮಹಾಲಕ್ಷ್ಮೀ ದೇವಿಯನ್ನು ಮನಸ್ಸಂತೋಷಪಡಿಸಿ ವೃದ್ಧಿಪಡಿಸುವಂತವನು. (ಮ) ಲಕ್ಷ್ಮೀದೇವಿಯನ್ನು ಗರ್ಭದಲ್ಲಿಟ್ಟುಕೊಂಡಿರುವಂತವನು. ॥೩೨೮॥

## (೩೨೯ನೇ ನಾಮವು) ಪರಮೇಶ್ವರಃ,

## ಓಮ್॥ ಪರಮೇಶ್ವರಾಯನಮಃ.

(ಶಂ॥ ಭಾ) ಅತ್ಯಧಿಕವಾಗಿ ನಿಯಮಿಸುವಂತಹ ಸ್ವಭಾವವುಳ್ಳವನು. " ಸಮಂ ಸರ್ವೇಷು ಭೂತೇಷು ತಿಷ್ಠಂತಂ ಪರಮೇಶ್ವರಂ " (ಗೀ॥ ೧೩॥ ೨೭) ಎಂಬ ವಚನವೂ ಇದಕ್ಕೆ ಆಧಾರವಾಗಿರುವುದು. (ವಿ॥ ಭಾ) ಈ ರೀತಿಯಾಗಿ ಶ್ರೀದೇವಿಯು ಅತ್ಯಂತ ಪ್ರೀತಿಯೊಡನೆ ತಾನಾಗಿ ಸೇರಿರುವುದರಿಂದ ಸಾರ್ಥಕವಾದ ಪರಮೈಶ್ವರ್ಯವುಳ್ಳವನು. " ಅತೀವ ರಾಮ ಶ್ಶುಶುಭೇಽತಿಕಾಮಯಾ ವಿಭುಃ ಶ್ರಿಯಾ ವಿಷ್ಣು ರಿವಾಮರೇಶ್ವರಃ " (ಶ್ರೀಮದ್ರಾ॥ ಬಾ॥ ೭೭॥ ೩೩) ಎಂದು ಇದಕ್ಕೆ ಪ್ರಮಾಣ ವಿರುವುದು. ॥೩೨೯॥

## (೩೪೦ನೇ ನಾಮವು) ಕರಣಂ,

### ಓಮ್॥ ಕರಣಾಯನಮಃ.

(ಶಂ॥ ಭಾ) ಜಗದುತ್ಪತ್ತಿಯಲ್ಲಿ ಸಾಧಕತಮನಾಗಿರುವಂತವನು. (ವಿ॥ ಭಾ) ತನ್ನನ್ನು ಹೊಂದುವುದಕ್ಕೆ ತಾನೇ ಸಾಧಕತಮನು. ಜ್ಞಾನ ಕಾರಣಗಳಾದ ಕಿವಿ ಕಣ್ಣು ಮೊದಲಾದವುಗಳಿಗೂ ಕಾರ್ಯ ನಿರ್ವರ್ತಕ ಗಳಾದ ಕೈಕಾಲು ಮೊದಲಾದವುಗಳಿಗೂ ಕೂಡ ಇವನ ಶಕ್ತಿಯ ಏಕ ದೇಶದಿಂದ ತಾನೆ " ಚಕ್ಷುಶ್ಚದ್ರಷ್ಟವ್ಯಂಚ ನಾರಾಯಣಃ, ಶ್ರೋತ್ರಂಚ ಶ್ರೋತವ್ಯಂಚ ನಾರಾಯಣಃ," ಎಂಬಂತೆ ಸಾಧಕ ತಮತ್ವವು ಮಹೋಪ ನಿಷದಾದಿಗಳಲ್ಲಿ ಓದಲ್ಪಟ್ಟಿರುವುದು. ॥೩೪೦॥

## (೩೪೧ನೇ ನಾಮವು) ಕಾರಣಂ,

### ಓಮ್॥ ಕಾರಣಾಯನಮಃ.

( ಶಂ॥ ಭಾ ) ಪ್ರಪಂಚಕ್ಕೆ ಉಪಾದಾನಕಾರಣನು. (ವಿ॥ ಭಾ) ಹಿಂದಿನ ನಾಮದಲ್ಲಿ ಪ್ರಕೃತಗಳಾದ ಜ್ಞಾನಾದಿ ಕಾರಣಗಳಿಂದ ಪ್ರಾಣಿ ಗಳಿಗೆ ಆಯಾ ಕಾರ್ಯಗಳನ್ನು ಮಾಡಿಸುವಂತವನು. ॥೩೪೧॥

## (೩೪೨ನೇ ನಾಮವು) ಕರ್ತಾ,

### ಓಮ್॥ ಕರ್ತ್ರೇನಮಃ.

(ಶಂ॥ ಭಾ) ಸ್ವತಂತ್ರನಾದ ನಿಮಿತ್ತಕಾರಣನು. (ಮ) ಸಂಸಾರ ಛೇದಕನು. ಇದರಿಂದ " ಕ್ರೋಧಕೃತ್ಕರ್ತಾ " ಎಂಬ ನಾಮದೊಡನೆ ಅಪೌನರುಕ್ತ್ಯವು (ವಿ॥ ಭಾ) ಸ್ವತಂತ್ರನಾದ ಕರ್ತಾ, ಎಂದರೆ ಕರ್ತೃ ತ್ವಕ್ಕೆ ಅಧಿಕಾರಿಯಾಗಿ ಅದರ ಫಲಭೋಕ್ತಾ ಆದ ಜೀವನು ಹೇಗಾದರೆ ತನ್ನ ಸುಖದುಃಖಗಳಿಗೆ ಅಭಿಮಾನಿಯಾಗಿರುವನೊ ಅದರಂತೆ ಸರ್ವೇಶ್ವ ರನೂ ಅಂತಹ ಜೀವರಿಗಿಂತಲೂ ಅಧಿಕವಾಗಿ ಅವರುಗಳ ಸುಖದುಃಖ ಗಳಿಗೆ ಅಭಿಮಾನಿಯಾಗಿರುವನು. ವೇದಾಂತದಲ್ಲಿ " ಬಹುಸ್ಯಾಂ " ಎಂಬ ದಾಗಿ ತಾನೇ ಬಹುವಾಗುವಂತೆ ಬಹುಭವನ ಸಂಕಲ್ಪವನ್ನು ಮಾಡಿರು ವುದಾಗಿ ಹೇಳುವುದರಿಂದ ಇವನು ಸರ್ವಜೀವರ ಸುಖದುಃಖಗಳಿಗೆ ಅಭಿ

ಮಾನಿಯಾಗಿರುವುದು ಸಹಜವೇ ಸರಿ ; ಅನ್ಯಥಾ ಈ ಅರ್ಥವು ಸಂಗತ ವಾಗಲಾರದಷ್ಟೆ.—ಮತ್ತು ಈ ಅರ್ಥವು "ವ್ಯಸನೇಷು ಮನುಷ್ಯಾಣಾಂ ಭೃಶಂ ಭವತಿ ದುಃಖಿತಃ | ಉತ್ಸವೇಷುಚ ಸರ್ವೇಷು ಪಿತೇವ ಪರಿತುಷ್ಯತಿ " ಎಂಬದಾಗಿ (ಶ್ರೀಮದ್ರಾ|| ಅ|| ೨|| ೪೦) ಮನುಷ್ಯರಿಗೆ ಪ್ರಾಪ್ತವಾದ ವ್ಯಸನವನ್ನು ಕಂಡರೆ ತನಿಗೆ ವ್ಯಸನವು ಪ್ರಾಪ್ತವಾದರೆ ಹೇಗಾದರೆ ದುಃಖಿಸುವನೊ ಅದರಂತೆ ದುಃಖಿತನಾಗುವನೆಂತಲೂ, ಯಾರಿಗಾದರೂ ಉತ್ಸವಕಾಲವು ಪ್ರಾಪ್ತವಾದರೆ ತನ್ನ ಮಗನ ಉತ್ಸವದಲ್ಲಿ ಸಂತೋಷಿಸುವ ತಂದೆಯಂತೆ ಸಂತೋಷಿಸುವನೆಂತಲೂ ಹೇಳಿರುವುದರಿಂದ ವ್ಯಕ್ತವಾಗುವುದು. ||೩೪೨||

## (೩೪೩ನೇ ನಾಮವು) ವಿಕರ್ತಾ,

### ಓಮ್|| ವಿಕರ್ತ್ರೇನಮಃ.

( ಶಂ|| ಭಾ ) ವಿಚಿತ್ರ ಭುವನ ನಿರ್ಮಾಣವನ್ನು ಮಾಡತಕ್ಕವನು. (ಮ) ವಿಶೇಷವಾಗಿ ಮಾಡುವಂತವನು. (ವಿ|| ಭಾ) ಆದುದರಿಂದಲೇನೆ ಜೀವರು ಅಂತಹ ಸುಖಾದಿ ಫಲಗಳನ್ನು ಅನುಭವಿಸಿದಾಗ ತಾನು ಹರ್ಷ ಶೋಕಗಳಿಗೆ ಒಳಪಟ್ಟು ವಿಕಾರಿಯಾಗುವನು. ಆದರೆ ಬ್ರಹ್ಮಕ್ಕೆ ವಿಕಾರವುಂಟೆಂದು ಹೇಳಿದರೆ ಅದು ದೋಷವಲ್ಲವೊ ? ಎಂದು ಶಂಕಿಸದೆ ತನಿಗೋಸ್ಕರವಾಗಿ ವಿಕಾರವು ಪ್ರಾಪ್ತವಾದರೆ ಮಾತ್ರ ದೋಷವಲ್ಲದೆ ಅನ್ಯರಿಗಾಗಿ ಹೊಂದುವ ವಿಕಾರವು ದೋಷವಲ್ಲವೆಂದು ತಿಳಿಯಬೇಕು ಇದನ್ನು ಅಂಗೀಕರಿಸದ ಪಕ್ಷದಲ್ಲಿ ಅನ್ಯರ ದುಃಖವನ್ನು ನೋಡಿ ದುಃಖಿಸುವ ಸ್ವಭಾವವೆಂಬ ದಯಾದಿ ಗುಣಗಳು ಇವನಿಗೆ ಹೇಗೆ ಸಂಗತವಾಗುವುವು ||೩೪೩||

## (೩೪೪ನೇ ನಾಮವು) ಗಹನಃ,

### ಓಮ್|| ಗಹನಾಯನಮಃ.

(ಶಂ|| ಭಾ) ಅವನ ಸ್ವರೂಪವಾದರೂ ಸಾಮರ್ಥ್ಯವಾದರೂ ಚೇಷ್ಟಿತಗಳಾದರೂ ತಿಳಿಯುವುದಕ್ಕೆ ಅಶಕ್ಯವಾದುದರಿಂದ " ಗಹನಃ " ಎನ್ನಲ್ಪಡುವನು. (ಮ) ಗಂಭೀರ ಪುರುಷನು. (ವಿ|| ಭಾ) ಬುದ್ಧಿಗೆ

ಗೋಚರನಾಗದವನು. ಎಂದರೆ ಈ ಪ್ರಕಾರವಾಗಿ ಪ್ರಾಣಿಗಳ ಜ್ಞಾನಾಯತನವಾದ ಆತ್ಮಕ್ಕೂ ಭೋಗಕ್ಕೂ ಅದರ ಉಪಕರಣಗಳಿಗೂ ತಾನು ಅಭಿಮಾನಿಯಾಗಿರುವದೆಂಬ ಮಹಾ ಗುಣಯುಕ್ತನಾಗಿರುವುದರಿಂದ ಆ ವಿಷಯದಲ್ಲಿ ಈ ರೀತಿಯಾದವನೆಂದು ಹೇಳುವಂತಹ ಬುದ್ಧಿಗೆ ಗೋಚರನಾಗದವನೆಂದರ್ಥವು. ಈ ವಿಷಯದಲ್ಲಿ "ಸತ್ಯೈವ ಸಂತಂನವಿಜಾನಂತಿ ದೇವಾಃ" ಎಂಬಿದೇ ಮೊದಲಾದ ಅನೇಕ ಪ್ರಮಾಣಗಳನ್ನರಿಯಬೇಕು. ‖೩೪೪‖

## (೩೪೫ನೇ ನಾಮವು) ಗುಹಃ,

### ಓಮ್‖ ಗುಹಾಯನಮಃ.

(ಶಂ‖ ಭಾ) ಮಾಯೆಯಿಂದ ತನ್ನ ಸ್ವರೂಪಾದಿಗಳನ್ನು ಮುಚ್ಚಿಕೊಳ್ಳುವಂತವನು (ವಿ‖ ಭಾ) ಹಿಂದೇ ಹೇಳಿರುವ ರೀತಿಯಿಂದ ಭಕ್ತರನ್ನು ಕಾಯುವಂತವನು. ‖೩೪೫‖

ಈ (೪೧)ನೇ ಶ್ಲೋಕದಲ್ಲಿ ಪ್ರತಿಪಾದಿಸಲ್ಪಡುವ (೧೧) ನಾಮಗಳಿಗೂ "ಸಮುದ್ಧತೋಽಭವೋ ಯಸ್ಮಾತ್ "ಉದ್ಭವಃ" (೩೩೫) ಪರಿಕೀರ್ತಿತಃ | ಪ್ರಕೃತೇರ್ಬಂಧನಾರ್ಹಾಣಾಂ ಕ್ಷೋಭಣಾತ್ "ಕ್ಷೋಭಣಃ" (೩೩೬) ಸ್ಮೃತಃ ‖ ವ್ಯಾಘ್ರಾದಿವಜ್ಜೀವ ತತೇರ್ಮಾಯಾಪಾಶೇನ ಬಂಧನಂ | ಕೃತ್ವಾವಿನಿತ್ಯಂ ಕ್ರೀಡತಿಯಸ್ಸ "ದೇವಃ" (೩೩೭) ಪರಿಕೀರ್ತಿತಃ ‖ ಶ್ರೀಃ ಕ್ರೀಡಾಭೋಗಸಾಹಿತ್ಯಾ ದ್ವರ್ಧನೀಯಾ ಹರೇರಿತಿ | "ಶ್ರೀಗರ್ಭಃ" (೩೩೮) ಪರಮೈಶ್ವರ್ಯ ಯುಕ್ತತ್ವಾತ್ "ಪರಮೇಶ್ವರಃ" (೩೩೯) ‖ ಸ್ವಪ್ರಾಪ್ತಿ ಸಾಧಕತಮಂ ಜೀವಾನಾಂ "ಕರಣಂ" (೩೪೦) ವಿದುಃ | ಜೀವಾನಾಂ ಚಕ್ಷುರಾದೀನ್ ಯೋ ಹೇತೂನ್ಕಾರಯತೀತಿಸಃ ‖ ಪ್ರೋಚ್ಯತೇ "ಕಾರಣಂ" (೩೪೧) "ಕರ್ತಾ" (೩೪೨) ಸ್ವತಂತ್ರಃ ಪರಿಕೀರ್ತಿತಃ | ವಿಕುರ್ವಾಣೋ "ವಿಕರ್ತಾ" (೩೪೩) ಯೋ ಹರ್ಷಶೋಕಾದಿಭಿ ಸ್ಸ್ಮೃತಃ ‖ ಬುದ್ಧ್ಯಾಯತನ ಭೋಗೋಪ ಕರಣಾದಿಷು ದೇಹಿನಾಂ| ತದಭಿನ್ನಾಭಿಮಾನಾತ್ಮಾ ಮಹಾಗುಣಗಣೇಷುಚ‖ "ಗಹನೋ" (೩೪೪) ಹ್ಯತಿಭೂಮಿತ್ವಾ ದ್ರಕ್ಷತೀತಿ "ಗುಹ" (೩೪೫) ಸ್ಸ್ಮೃತಃ‖" ಎಂಬಂತೆ ವಿವೃತಿಯನ್ನು ಕಾಣಬಹುದು.

ಮೂ|| ವ್ಯವಸಾಯೋ ವ್ಯವಸ್ಥಾನ ಸ್ಸಂಸ್ಥಾನ ಸ್ಸ್ಥಾನದೋ ಧ್ರುವಃ | ಪರರ್ಧಿಃ ಪರಮಸ್ಪಷ್ಟ ಸ್ತುಷ್ಟಃ ಪುಷ್ಟ ಶ್ಶುಭೇಕ್ಷಣಃ ||೪೨||

(೩೮೬ನೇ ನಾಮವು) ವ್ಯವಸಾಯಃ,

ಓಮ್|| ವ್ಯವಸಾಯಾಯನಮಃ.

(ಶಂ|| ಭಾ) ಸತ್ ಚಿತ್‌ಮಾತ್ರ ಸ್ವರೂಪನು. (ವಿ|| ಭಾ) ಇನ್ನು ಮುಂದೆ ಧ್ರುವಮೂರ್ತಿಯನ್ನು ಕುರಿತು ಪ್ರಸ್ತುತಿಸುವರು. ಜ್ಯೋತಿಶ್ಚಕ್ರಗಳೆಲ್ಲವನ್ನೂ ಅತಿಶಯವಾಗಿ ತನ್ನಲ್ಲಿ ಬಂಧಿಸುವಂತವನು. ಧ್ರುವಮೂರ್ತಿಯಾದ ಪರಮಾತ್ಮನು ನಕ್ಷತ್ರಗಳಿಗೆಲ್ಲವೂ ಆಧಾರವಾದ ಆಕಾಶ ಶರೀರಕನಾಗಿರುವುದರಿಂದ ಈರೀತಿಯಾಗಿ ಹೇಳಿತೆಂದರಿಯಬೇಕು. (ಮ) ನಿಶ್ಚಯಿಸತಕ್ಕವನು. ||೩೮೬||

(೩೮೭ನೇ ನಾಮವು) ವ್ಯವಸ್ಥಾನಃ,

ಓಮ್|| ವ್ಯವಸ್ಥಾನಾಯನಮಃ.

(ಶಂ|| ಮ) ಸರ್ವ ವ್ಯವಸ್ಥಾಪಕನು. ಮತ್ತು ಲೋಕಪಾಲಾದ್ಯಧಿಕಾರಿಗಳೂ ಜರಾಯುಜಸ್ವೇದಜಾಂಡಜೋದ್ಭಿಜಗಳಾದ ಪ್ರಾಣಿಗಳೂ ಬ್ರಾಹ್ಮಣಾದಿ ವರ್ಣಗಳೂ ಬ್ರಹ್ಮಚರ್ಯಾದಿಗಳಾದ ನಾಲ್ಕು ಆಶ್ರಮಗಳೂ ಎಂಬೀ ವರ್ಣಾಶ್ರಮಾದಿ ಧರ್ಮಗಳಿಗೆ ವ್ಯವಸ್ಥಾಪಕನು. (ವಿ|| ಭಾ) ಕಲೆ ಎಂತಲೂ ಮುಹೂರ್ತವೆಂತಲೂ ಹೇಳಲ್ಪಡುವ ಮತ್ತು ಇದೇ ಮೊದಲಾದ ಕಾಲಾವಯವಗಳನ್ನೆಲ್ಲವೂ ತನ್ನಲ್ಲಿ ತಾನೆ ಸ್ಥಾಪಿಸಿಕೊಂಡಿರುವಂತವನು. ||೩೮೭||

(೩೮೮ನೇ ನಾಮವು) ಸಂಸ್ಥಾನಃ,

ಓಮ್|| ಸಂಸ್ಥಾನಾಯನಮಃ.

(ಶಂ|| ಭಾ) ಯಾವ ಪರಮಾತ್ಮನಲ್ಲಿ ಭೂತಗಳಿಗೆ ಪ್ರಲಯವೆನ್ನಲ್ಪಡುವ ಸ್ಥಿತಿಯು ಚನ್ನಾಗಿರುವುದೋ ಅವನು "ಸಂಸ್ಥಾನಃ" ಎನ್ನ

ಲ್ಪಡುವನು. (ವಿ॥ ಮ) ಸಮಸ್ತವೂ ಸಾಮಾನ್ಯವಾಗಿ ಯಾವ ಪರಮಾತ್ಮನಲ್ಲಿರುವುದೊ ಅವನು " ಸಂಸ್ಥಾನಃ " ಎನ್ನಲ್ಪಡುವನು. ॥೩೯೮॥

(೩೯೯ನೇ ನಾಮವು) ಸ್ಥಾನದಃ,

ಓಮ್॥ ಸ್ಥಾನದಾಯನಮಃ.

( ಶಂ॥ ಭಾ ) ಧ್ರುವನೇ ಮೊದಲಾದವರಿಗೆ ಕರ್ಮಾನುಗುಣವಾದ ಸ್ಥಾನವನ್ನು ಕೊಡುವಂತವನು. (ವಿ॥ ಭಾ) ಉತ್ತಮವಾದ ಪರಮಪದವೆಂಬ ತನ್ನ ಸ್ಥಾನವನ್ನು ಕೊಡುವಂತವನು. (ಮ) ಇಂದ್ರಾದಿಗಳಿಗೆ ಸ್ವರ್ಗಾದಿ ರೂಪಗಳಾದ ಸ್ಥಾನಗಳನ್ನು ಕೊಡುವಂತವನು. ॥೩೯೯॥

(೪೦೦ನೇ ನಾಮವು) ಧ್ರುವಃ,

ಓಮ್॥ ಧ್ರುವಾಯನಮಃ.

(ಶಂ॥ ಭಾ) ನಾಶವಿಲ್ಲದವನು. (ಮ) ನಿಶ್ಚಲನಾದವನು. (ವಿ॥ಬಾ) ಉತ್ತಮವಾದ ತನ್ನ ಸ್ಥಾನವನ್ನು ಕೊಡುವುದರಿಂದ ಸಾಮಾನ್ಯನಾದ ಧ್ರುವವನ್ನು ಕೂಡ ಶಾಶ್ವತನನ್ನಾಗಿಮಾಡಿದವನು. ॥೪೦೦॥

(೪೦೧ನೇ ನಾಮವು) ಪರರ್ಧಿಃ,

ಓಮ್॥ ಪರರ್ಧಯೇನಮಃ.

(ಶಂ॥ ಮ) ಅಧಿಕವಾದ ವಿಭೂತಿಯುಳ್ಳವನು. (ವಿ॥ ಭಾ) ಇನ್ನು ಮುಂದೆ ಮೃತರಾದವರನ್ನು ಕೂಡ ಸಂಜೀವಿಸುವಂತಹ ಶ್ರೀರಾಮ ವೃತ್ತಾಂತವು ಹೇಳಲ್ಪಡುವುದು. ಸರ್ವೇಶ್ವರನಾಗಿರುವುದಕ್ಕಿಂತಲೂ ಶ್ರೇಷ್ಠವಾದ ಐಶ್ವರ್ಯವುಳ್ಳವನು. " ವಿಷ್ಣುನಾಸದೃಶೋ ವೀರ್ಯೇ ಸೋಮವತ್ಪ್ರಿಯ ದರ್ಶನಃ " (ಶ್ರೀರಾ॥ ಬಾ॥ ೧॥ ೧೮) ಎಂಬಂತೆ ಶ್ರೀರಾಮದೇವರ ಗುಣಗಳ ಏಕದೇಶಕ್ಕೆ ದೃಷ್ಟಾಂತವಾಗಿ ಚಂದ್ರನೇ ಮೊದಲಾದವರನ್ನು ಹೇಳಿರುವಂತೆ ಶ್ರೇಷ್ಠರಲ್ಲದ ಅಂತಹ ಚಂದ್ರಾದಿಗಳಿಗೆ ಸಮಾನವಾಗಿ ಪರಮಪುರುಷನನ್ನು ಕೂಡ ದೃಷ್ಟಾಂತವಾಗಿ ಹೇಳಿರುತ್ತದೆಯೆಷ್ಟೆ! ಮತ್ತೂ ಪರತ್ವಾವಸ್ಥೆಯೂ ಕೂಡ ಈ ಅವತಾರದಲ್ಲಿಯೇ ತಾನೆ " ಅವ್ಯಕ್ತಮಕ್ಷರಂ ಬ್ರಹ್ಮ ನಿರ್ಮಿತಂ । ದೇವಾನಾಂ ಹೃದಯಂ

ಸೌಮ್ಯಂ ಗುಹ್ಯಂ ರಾಮಃ ಪರಂ ತಪಃ ” (ಶ್ರೀರಾ|| ಅ|| ೨|| ೩೩) ಎಂಬಿದೇ ಮೊದಲಾದವುಗಳಿಂದ ಹೇಳಲ್ಪಟ್ಟಿರುವುದು. ||೩೯೧||

## (೩೯೨ನೇ ನಾಮವು) ಪರಮಸ್ಪಷ್ಟಃ,

## ಓಮ್|| ಪರಮಸ್ಪಷ್ಟಾಯನಮಃ.

(ಶಂ||ಭಾ) ಅನ್ಯರಿಗೆ ಅಧೀನವಾದ ಸಿದ್ಧಿಯುಳ್ಳವನಲ್ಲವಾದಕಾರಣ ದಿಂದಲೂ ಸಂವಿದಾತ್ಮ (ಜ್ಞಾನಾತ್ಮ) ನಾಗಿರುವುದರಿಂದಲೂ “ ಪರಮ ಸ್ಪಷ್ಟಃ ” ಎನ್ನಲ್ಪಡುವನು. (ವಿ|| ಭಾ) “ ವ್ಯಕ್ತಮೇಷ ಮಹಾ ಯೋಗೀ ಪರಮಾತ್ಮಾ ಸನಾತನಃ ” (ಶ್ರೀರಾ|| ಯು|| ೧೧೪|| ೧೪) ಎಂ ಬಂತೆ ತನ್ನ ಪರತ್ವವು ಸ್ಪಷ್ಟವಾಗಿ ಗೋಚರವಾಗುವಂತೆ ಪ್ರಕಾಶಿಸು ವಂತವನು. (ಮ) ಸ್ಪಷ್ಟವಾದ ಆನಂದಾದಿ ಗುಣಗಳುಳ್ಳವನು. ||೩೯೨||

## (೩೯೩ನೇ ನಾಮವು) ತುಷ್ಟಃ,

## ಓಮ್|| ತುಷ್ಟಾಯನಮಃ

(ಶಂ|| ಭಾ) ಪರಾನಂದ ರೂಪನು. (ವಿ|| ಭಾ) ಪ್ರೀತಿಯುಳ್ಳವನು. ಎಂದರೆ ಮತ್ತೊಬ್ಬರಿಗೆ ಇಲ್ಲದ ಪರತ್ವದಶೆಗಿಂತಲೂ ಈ ಅವತಾರದಲ್ಲಿ ಇತರ ಮನುಷ್ಯರೇ ಮೊದಲಾದವರಿಗೂ ಕೂಡ ಯೋಗ್ಯವಾದ ದಶರಥ ಪುತ್ರನಾಗುವ ಸ್ವಭಾವದೊಡನೆ ಜಗದ್ರಕ್ಷಕತ್ವಭಾವವೂ ವುಳ್ಳವನಾದ ಕಾರಣ ಅತ್ಯಂತ ಪ್ರೀತನಾಗಿರುವಂತವನು. ||೩೯೩||

## (೩೯೪ನೇ ನಾಮವು) ಪುಷ್ಟಃ,

## ಓಮ್|| ಪುಷ್ಟಾಯನಮಃ.

(ಶಂ|| ಭಾ) ಸರ್ವಕಾಲದಲ್ಲಿಯೂ ಸಂಪೂರ್ಣನು. (ವಿ|| ಭಾ) ಇಂ ತಹ ಮಹಾಗುಣಗಳಿಂದ ಪರಿಪೂರ್ಣನು. ||೩೯೪||

## (೩೯೫ನೇ ನಾಮವು) ಶುಭೇಕ್ಷಣಃ,

## ಓಮ್|| ಶುಭೇಕ್ಷಣಾಯನಮಃ.

(ಶಂ॥ ಭಾ) ಸಾಮಾನ್ಯ ಮನುಷ್ಯರಿಗೆ ಶುಭವರ್ಧಕವಾಗಿಯೂ ಮುಮುಕ್ಷುಗಳಿಗೆ ಮೋಕ್ಷಪ್ರದವಾಗಿಯೂ ಭೋಗಾರ್ಥಿಗಳಿಗೆ ಭೋಗವನ್ನು ಕೊಡತಕ್ಕದ್ದಾಗಿಯೂ ಪಾಪಿಗಳಿಗೆ ಪಾಪಾನುಗುಣವಾದ ಫಲವನ್ನು ಕೊಡತಕ್ಕದ್ದಾಗಿಯೂ ಹೃದಯ ಗ್ರಂಥಿಯ ಸಮಸ್ತ ಸಂಶಯ ವಿಚ್ಛೇದಕ್ಕೆ ಕಾರಣವಾಗಿಯೂ ಸರ್ವಕರ್ಮ ವಿದ್ಯಾವಿನಾಶಕವಾಗಿಯೂ ಇರುವ ದೃಷ್ಟಿಯುಳ್ಳವನು. (ವಿ॥ ಭಾ) ಇಂತಹ ಐಶ್ವರ್ಯಶೀಲಾದಿಗಳ ಅತಿಶಯವನ್ನು ತೋರಿಸುವಂತವುಗಳೂ, ಶೀತಲವೂ, ವಿಶಾಲವೂ, ಗಂಭೀರವೂ ಆದ ಕಮಲಪುಷ್ಪದಂತೆ ಸುಂದರವಾದ ಕಣ್ಣುಗಳುಳ್ಳವನು. ಈ ಅರ್ಥವು "ಸುಭ್ರೂರಾಯತ ತಾಮ್ರಾಕ್ಷಃ" (ಶ್ರೀರಾ॥ ಅ॥ ೨॥ ೪೩) ಇತ್ಯಾದಿಗಳಲ್ಲಿ ಕಾಣಲ್ಪಡುವುದು. (ಅಥವಾ) ತನ್ನನ್ನು ನೋಡುವುದು ತಾನು ನೋಡುವುದೆಂಬೀ ಯೆರಡೂ ಶುಭವಾಗಿರುವಂತೆ ಪ್ರಕಾಶಿಸುವಂತವನು. ಇದು "ಯಶ್ಚರಾಮಂ ನಪಶ್ಯೇತ್ತುಯಂಚ ರಾಮೋ ನಪಶ್ಯತಿ । ನಿಂದಿತಸ್ಸವಸೇಲ್ಲೋಕೇ ಸ್ವಾತ್ಮಾಪ್ಯೇನಂ ವಿಗರ್ಹತೆ" (ಶ್ರೀರಾ॥ ಅ॥ ೧೭॥ ೧೪) ಇತ್ಯಾದಿಗಳಲ್ಲಿ ಸ್ಪಷ್ಟವು ॥೩೯೫॥

ಈ (೪೨)ನೇ ಶ್ಲೋಕದಲ್ಲಿ ಪ್ರತಿಪಾದ್ಯಗಳಾದ (೧೦) ನಾಮಗಳಿಗೂ "ಜ್ಯೋತಿಶ್ಚಕ್ರಂ ಧ್ರುವೇನಿತ್ಯಂ ಪೀಯತೇ ಬಧ್ಯತೇ ಯತಃ । "ವ್ಯವಸಾಯ" (೩೯೬) ಸ್ತತೋಽಜ್ಞೇಯೋ ಭರಣಾಧಾರಮೂರ್ತಿಮಾನ್ ॥ ಕಲಾಮುಹೂರ್ತಾದಿ ಮಯೋ ಧ್ರುವೇ ಕಾಲೇಽವತಿಷ್ಠತೆ । ಯಸ್ಮಾತ್ತಸ್ಮಾತ್ "ವ್ಯವಸ್ಥಾನೋ" (೩೯೭) ಹ್ಯಷ್ಟಾರ್ಣೋ ಸ್ಥಾನಮೋ ಮನುಃ ॥ ಧ್ರುವೇ ಸಮಾಪ್ಯತ ಇತಿ "ಸಂಸ್ಥಾನ" (೩೯೮) ಸ್ಸರ್ವಮುಚ್ಯತೆ । ಸದಿವ ಪರಮಾಕಾಶ ವಾಪ್ರಾಪ್ತಿ ಹೇತುತ್ವತಸ್ಸದಾ ॥ ಪ್ರೋಚ್ಯತೇ "ಸ್ಥಾನದ" (೩೯೯) ಇತಿ ಸಪ್ತಾರ್ಣೋ ಮನು ನಾಮಕಃ । ಅವಾರ್ಚೀನಂ ಧ್ರುವಮಪಿ ತುಂಗಸ್ಥಾನ ಪ್ರದಾನತಃ ॥ ಧ್ರುವೀಚಕ್ರಾರ ಯಸ್ಮಾದ್ಧಿ "ಧ್ರುವ" (೪೦೦) ಸ್ತಸ್ಮಾತ್ಪ್ರಕೀರ್ತಿತಃ । ಕಲ್ಯಾಣಾನಾಂ ಪರಾಣಾಂಚ ಗುಣಾನಾಮೃದ್ಧಿತ ಸ್ಸದಾ ॥ ಪರಾವಸ್ಥತಯಾ ಚೈವ "ಪರರ್ದ್ಧಿ" (೪೦೧) ರಿತಿ ಕಥ್ಯತೆ । ಸಾಕ್ಷಾದ್ದೃಷ್ಟಸ್ವಪಾರಂ ಯಃ "ಪರಮಸ್ಪಷ್ಟ" (೪೦೨) ಉಚ್ಯತೆ ॥ ಲಾಭಾ ದ್ದಾಶರಥಿತ್ವಸ್ಯ ಜಗತಃ ಪಾಲನಸ್ಯಚ । ಮನುಷ್ಯತ್ವೇಽಪಿಯಃ ಪ್ರೀತಸ್ಸ "ತುಷ್ಟ" (೪೦೩)

ಇತಿ ಕಥ್ಯತೇ ‖ ಗುಣೈರ್ಶ್ವೈರ್ಯಾನೃಶಂಸ್ಯಾದ್ಯೈಃ ಪೂರ್ಣಃ "ಪುಷ್ಟ" (೩೯೪) ಇತೀರಿತಃ | ಸೌಶೀಲ್ಯೈಶ್ವರ್ಯ ಪಿಶುನಂ ಶೀತಲಂ ದೀರ್ಘವಾಯತಂ ‖ ತಾಮ್ರಂಚಲೋಚನಂ ಯಸ್ಯಸ "ಶುಭೇಕ್ಷಣ" (೩೯೫) ಈರಿತಃ | ಸ್ವಕರ್ಮ ಕರ್ತ್ರೇಕಂಚೈವ ಶುಭಂಯಸ್ಯೇತಿ ದರ್ಶನಂ‖ "ಶುಭೇಕ್ಷಣ" ಸ್ಮೃತ್ " ಎಂಬಂತೆ ನಿರುಕ್ತಿಯನ್ನು ಕಾಣಬಹುದು.

ಮೂ॥ ರಾಮೊ ವಿರಾಮೊ ವಿರತೋ ಮಾರ್ಗೋ
ನೇಯೊ ನಯೊ ಽನಯಃ | ವೀರ ಶ್ಶಕ್ತಿಮತಾಂ
ಶ್ರೇಷ್ಠೋ ಧರ್ಮೊ ಧರ್ಮವಿದುತ್ತಮಃ ‖೪೩‖

(೩೯೬ನೇ ನಾಮವು) ರಾಮಃ,

ಓಮ್‖ ರಾಮಾಯನಮಃ

( ಶಂ‖ ಮ‖ ಭಾ ) "ರಮನ್ತೇ ಯೊಗಿನೊಽನನ್ತೇ ನಿತ್ಯಾನಂದೇ ಚಿದಾತ್ಮನಿ | ಇತಿ ರಾಮಪದೇನೈತ ತ್ಪರಂ ಬ್ರಹ್ಮಾಭಿ ಧೀಯತೆ " ಎಂಬಂತೆ ನಿತ್ಯಾನಂದವುಳ್ಳವನೂ ಜ್ಞಾನಸ್ವರೂಪನೂ ದೇಶಕಾಲ ವಸ್ತು ಪರಿಚ್ಛೇದ ಶೂನ್ಯನೂ ಆದ ಯಾವ ಪರಮಾತ್ಮನಲ್ಲಿ ಯೋಗಿಗಳು ನಿತ್ಯವಾಗಿ ರಮಿಸಿಕೊಂಡಿರುವರೊ ಅಂತವನು "ರಾಮಃ" ಎನ್ನಲ್ಪಡುವನು. (ಶಂ) ಮತ್ತು ಸ್ವೇಚ್ಛೆಯಿಂದ ಅತ್ಯಂತ ರಮಣೀಯವಾದ ದಿವ್ಯ ಶರೀರವನ್ನು ವಹಿಸುವುದರಿಂದ ದಾಶರಥಿರಾಮನೆಂತಲೂ ಆಗಬಹುದು. (ಮ) ಆದರೆ " ರಾಮೇತಿ ರಾಮ ರಾಮೇತಿ ರಮೇ ರಾಮೇ ಮನೋರಮೆ | ಸಹಸ್ರನಾಮಭಿಸ್ತುಲ್ಯಂ ರಾಮನಾಮ ವರಾನನೇ" ಎಂಬದಾಗಿ ಶ್ರೀಸಹಸ್ರನಾಮದಲ್ಲಿ ಒಂದಾದ ಶ್ರೀರಾಮನಾಮವೇ ಸಹಸ್ರನಾಮ ಪಾರತುಲ್ಯವಾಗಿರುವಲ್ಲಿ ಸಹಸ್ರನಾಮ ಪಾರಾಯಣದಿಂದ ಪ್ರಯೋಜನವೇನೆಂದು ಶಂಕಿಸದೆ ದೇಹಾವಸಾನ ಸಮಯದಲ್ಲಿ ಕಫ ವಾತ ಪಿತ್ತಾದಿಗಳಿಂದ ವ್ಯಾಕುಲವನ್ನು ಹೊಂದಿರುವ ಮನಸ್ಸುಳ್ಳವರಿಗೆ ಸಹಸ್ರನಾಮ ಪಾರಾಯಣವು ಅಸಾಧ್ಯವಾಗಿರುವಾಗ ಅಂತಹ ಸಮಯದಲ್ಲಿ ಒಂದಾದ ರಾಮನಾಮವೇ ಸಹಸ್ರನಾಮಕ್ಕೆ ಸಮಾನವಾಗುವುದೆಂದರಿಯಬೇಕು, ಆದುದರಿಂದಲೇನೆ

" ಮುಮೂರ್ಷೋರ್ದಕ್ಷಿಣೇ ಕರ್ಣೇ ಯಸ್ಯ ಕಸ್ಯಾಪಿವೈ ಶಿವಃ | ಉಪದೇಕ್ಷ್ಯತಿ ಮನ್ಮಂತ್ರಂ ಸಮುಕ್ತೋ ಭವಿತಾ " ಎಂಬದಾಗಿ ಶ್ರೀಕಾಶೀಕ್ಷೇತ್ರದಲ್ಲಿ ಮೃತರಾಗುವ ಯಾರಿಗಾದರೂ ಶ್ರೀಕಂಠನು ಅಂತಿಮ ಕಾಲದಲ್ಲಿ ಶ್ರೀರಾಮನಾಮವನ್ನು ಬಲಕಿವಿಯಲ್ಲಿ ಉಪದೇಶಿಸುವನೆಂದು ಶ್ರುತಿಯು ಹೇಳುವುದು. (ವಿ|| ಭಾ) ತನ್ನ ಗುಣಗಳನ್ನೂ ರೂಪಗಳನ್ನೂ ಕಂಡು ವಶಪಟ್ಟಿರುವ ಸಕಲ ಪ್ರಾಣಿಗಳೂ " ರಾಮೋ ರಮಯತಾಂ ಶ್ರೇಷ್ಠಃ || ಗುಣಾಭಿರಾಮಂ ರಾಮಂಚ " ಎಂಬ ರೀತ್ಯಾ ತನ್ನಲ್ಲಿ ರಮಿಸುವಂತೆ ಇರುವಂತವನು. ||೩೯೬||

## (೩೯೭ನೇ ನಾಮವು) ವಿರಾಮಃ,

## ಓಮ್|| ವಿರಾಮಾಯನಮಃ.

( ಶಂ|| ಮ ) ಇವನಲ್ಲಿ ಪ್ರಾಣಿಗಳಿಗೆ ಅವಸಾನವಿರುವುದರಿಂದ "ವಿರಾಮಃ" ಎನ್ನಲ್ಪಡುವನು. (ವಿ|| ಭಾ) ವರಪ್ರದರಾದ ಬ್ರಹ್ಮಾದಿಗಳೂ, ಅವರುಗಳು ಕೊಟ್ಟ ಅವಧ್ಯತ್ವಾದಿ ವರಗಳೂ, ಅಂತಹ ವರವನ್ನು ಪಡೆದ ರಾವಣಾದಿಗಳೂ ಇವನನ್ನು ಸೇರದೇ ವಿರಾಮವನ್ನು ಹೊಂದುವುದರಿಂದ " ವಿರಾಮಃ " ಎನ್ನಲ್ಪಡುವನು. ||೩೯೭||

## (೩೯೮ನೇ ನಾಮವು) ವಿರತಃ,

## ಓಮ್|| ವಿರತಾಯನಮಃ.

(ಶಂ|| ಮ) ವಿರಜಃ ಎಂದು ಪಾಠವು. " ವಿರಜಃ ಪರ ಆಕಾಶಾತ್ " ಎಂಬ ಶ್ರುತಿ ಪ್ರಮಾಣಾನುಸಾರವಾಗಿ ವಿಷಯಸೇವಾ ವಿಷಯದಲ್ಲಿ ರಜೋಗುಣವಿಲ್ಲದವನೆಂದರೆ ವಿಷಯಾಪೇಕ್ಷಾ ರಹಿತನೆಂದರ್ಥವು. ( ವಿ|| ಭಾ ) ವಿರತಃ-ಸ್ವಭಾವವಾಗಿಯೇ ಯಾವದೊಂದನ್ನೂ ಅಪೇಕ್ಷಿಸದವನಾದಕಾರಣ ಅತಿ ಕ್ಷುದ್ರಗಳಾದ ರಾಜ್ಯಾದಿಗಳನ್ನು ಅಪೇಕ್ಷಿಸದೆ " ನಚಾಸ್ಯ ಮಹತೀಂ ಲಕ್ಷ್ಮೀಂ ರಾಜ್ಯನಾಶೋಪ ಕರ್ಷತಿ " (ಶ್ರೀಮದ್ರಾ|| ಅ|| ೧೬|| ೩೩) " ಲೋಕ ಕಾಂತಸ್ಯ ಕಾಂತತ್ವಂ ಶೀತರಶ್ಮೇರಿವ ಕ್ಷಪಾ " (ಶ್ರೀರಾ||) " ಸಪಿತುರ್ವಚನಂ ಶ್ರೀಮಾನಭಿಷೇಕಾತ್ಪರಂ ಪ್ರಿಯಂ" (ಶ್ರೀರಾ|| ಸುಂ|| ೩೩|| ೨೮) ಎಂಬಂತೆ ಉಪೇಕ್ಷಿಸುವಂತವನು. ||೩೯೮||

## (೩೬೭ನೇ ನಾಮವು) ಮಾರ್ಗಃ,

### ಓಮ್‖ ಮಾರ್ಗಾಯನಮಃ.

( ಶಂ‖ ಮ ) ಯಾವನನ್ನು ತಿಳಿದುಕೊಂಡು ಮುಮುಕ್ಷುಗಳು ಅಮೃತತ್ವವನ್ನು ಹೊಂದುವುದಕ್ಕಾಗಿ ಎಂದರೆ ಮೋಕ್ಷಪ್ರಾಪ್ತಿಗಾಗಿ ಯೋಗ್ಯರಾಗುವರೊ ಅವನೇ " ಮಾರ್ಗಃ " ಎನ್ನಲ್ಪಡುವನು. (ಶಂ) "ನಾನ್ಯಃ ಪಂಥಾ ವಿದ್ಯತೇ ಽಯನಾಯ" (ಮ) "ಏಷ ಪಂಥಾ ಏತತ್ಕರ್ಮ ಏತದ್ಬ್ರಹ್ಮೇತಿ ಬ್ರಾಹ್ಮಣಂ " ಎಂಬೀ ಪ್ರಮಾಣಗಳು ಉದಾಹರಿಸಲ್ಪಟ್ಟಿರುವುವು (ವಿ‖ ಭಾ) ಭರದ್ವಾಜಮುನಿಗಳಿಂದ ಹುಡುಕಲ್ಪಡುವಂತಹನು. " ವಿರಜೋಮಾರ್ಗಃ " ಎಂದು ಪಾಠವಾದಾಗ ನಿರ್ದೋಷವಾದ ಮಾರ್ಗವನ್ನು ತೋರಿಸುವಂತವನೆಂದು ಅರ್ಥವು. ಇದು (೩೬೮)ನೇ ನಾಮವೂ ಆಗಬಹುದು. ‖೩೬೭‖

## (೩೬೮ನೇ ನಾಮವು) ನೇಯಃ,

### ಓಮ್‖ ನೇಯಾಯನಮಃ.

(ಶಂ‖ ಭಾ) ಸಮೀಚೀನವಾದ ಜ್ಞಾನದಿಂದ ಜೀವನು ಪರಮಾತ್ಮನಾಗಿ ಹೊಂದಿಸಲ್ಪಡುವಂತವನು. (ವಿ‖ ಭಾ) ಸುಹೃತ್ತುಗಳಾದವರಿಂದ ನಿಯೊಗಿಸಲ್ಪಡುವಂತವನು. " ಆಜ್ಞಾಪ್ಯೋಹಂತಪಸ್ವಿನಾಂ " ಇತ್ಯಾದಿ ಪ್ರಮಾಣಗಳಲ್ಲಿ ತಪಸ್ವಿಗಳಾದ ಮಹರ್ಷಿಗಳಿಂದ ರಾವಣ ವಧಾದಿ ವ್ಯಾಪಾರಗಳನ್ನು ಕುರಿತು ಶ್ರೀರಾಮನು ಆಜ್ಞಾಪಿಸಲ್ಪಡಲು ಅದನ್ನು ತಪ್ಪದೇ ನಡಿಸಿರುವ ವೃತ್ತಾಂತವು ಇದಕ್ಕೆ ನಿದರ್ಶಕವಾಗಿರುವುದು. (ಮ) ಗುರುಗಳಿಂದ ಶಿಷ್ಯರಲ್ಲಿ ಸೇರಿಸಲ್ಪಡುವಂತವನು. ‖೩೬೮‖

## (೩೬೯ನೇ ನಾಮವು) ನಯಃ,

### ಓಮ್‖ ನಯಾಯನಮಃ.

( ಶಂ ‖ ಮ ) ಭಕ್ತರಿಗೆ ಮೋಕ್ಷವನ್ನು ಹೊಂದಿಸುವಂತವನು. "ಮಾರ್ಗೋ ನೇಯೋ ನಯಃ" ಎಂಬಂತೆ ಮೂರು ಬಗೆಯಾಗಿ ಈ ಒಂದು ಅರ್ಥವೇ ಹೇಳಲ್ಪಟ್ಟಿರುವುದು, (ವಿ‖ ಭಾ) ಅವರುಗಳೂ ಆ ರೀತಿಯಾ

ಗಿಯೇ ತಾನು ಹೇಳಿದ ಮಾರ್ಗದಲ್ಲಿ ಬರುವಂತೆ " ರಕ್ಷಿತವ್ಯಸ್ತ್ವಯಾ ಶಶ್ವದ್ಗರ್ಭಭೂತಾ ಸ್ತಪೋಧನಾಃ " (ಶ್ರೀಮದ್ರಾ॥ ಅ॥ ೧॥ ೨೦) ಎಂಬ ಕ್ರಮದಿಂದ ಪ್ರಕಾಶಿಸುವಂತವನು. ॥೪೦೦॥

ಈ ರೀತಿಯಾಗಿ ಶ್ರೀಪರಾಶರ ಭಟ್ಟಾರ್ಯ ಭಾಷಿತವಾದ
ಶ್ರೀಭಗವದ್ಗುಣ ದರ್ಪಣವೆಂಬ ಶ್ರೀವಿಷ್ಣು ಸಹಸ್ರನಾಮ ಭಾಷ್ಯದಲ್ಲಿಯೂ,
(ಮ) ಭಾಷ್ಯದಲ್ಲಿಯೂ
ಚತುರ್ಥ ಶತಕವು ಸಮಾಪ್ತವು.

## (೪೦೧ನೇ ನಾಮವು) ಅನಯಃ,
## ಓಮ್॥ ಅನಯಾಯನಮಃ.

(ಶಂ॥ ಮ) ತನಿಗೆ ಬೇರೊಬ್ಬ ಯಜಮಾನ ನಿಲ್ಲದವನು. (ವಿ॥ ಭಾ) ದುಷ್ಟಬುದ್ಧಿಯುಳ್ಳ ರಾವಣಾದಿಗಳಲ್ಲಿ ಸ್ವಲ್ಪವೂ ನಯವಾದ ಮಾರ್ಗದಲ್ಲಿರದವನು. ಅಥವಾ ಲೋಕಕ್ಕೆ ತಾನು ವಿನಾ ಬೇರೊಂದು ಶುಭವಾದ ವಿಷಯವಿಲ್ಲದಂತೆ ಇರುವಂತವನು. ॥೪೦೧॥ (ಶಂ) ಈ ರೀತ್ಯಾ ನಾಲ್ಕನೇ ಶತಕವು ಪೂರ್ಣವು.

## (೪೦೨ನೇ ನಾಮವು) ವೀರಃ,
## ಓಮ್॥ ವೀರಾಯನಮಃ.

(ಶಂ॥ ಭಾ) ವಿಕ್ರಮಶಾಲಿಯು. (ವಿ॥ ಭಾ) ರಾಕ್ಷಸ ಜನರಿಗೆ ಅತ್ಯಂತ ಭಯಹೇತುವಾಗಿರುವಂತವನು. " ಸ್ಮರನ್ ರಾಘವ ಬಾಣಾನಾಂ ವಿವ್ಯಥೆ " (ಶ್ರೀರಾ॥ ಯು॥ ೬೦॥ ೩) ಮಾತಂಗ ಇವ ಸಿಂಹೇನ ಗರುಡೇನೇವ ಪನ್ನಗಃ। ಅಭಿಭೂತೋಽಭವದ್ರಾಜಾ ರಾಘವೇಣ ಮಹಾತ್ಮನಾ॥ (ಶ್ರೀರಾ॥ ಯು॥ ೬೦॥ ೨) ವೃಕ್ಷೇ ವೃಕ್ಷೇಚ ಪಶ್ಯಾಮಿ ಚೀರಕೃಷ್ಣಾಜಿನಾಂಬರಂ। ಗೃಹೀತ ಧನುಷಂ ರಾಮಂ ಪಾಶಹಸ್ತಮಿವಾಂತಕಂ॥ " ಎಂಬಿದೇ ಮೊದಲಾದ ರಾವಣ ಮಾರೀಚಾವಸ್ಥೆಗಳು ಇದಕ್ಕೆ ನಿದರ್ಶಕವಾಗಿರುವುದು. ॥೪೦೨॥

## (೪೦೩ನೇ ನಾಮವು) ಶಕ್ತಿಮತಾಂಶ್ರೇಷ್ಠಃ,
## ಓಮ್॥ ಶಕ್ತಿಮತಾಂಶ್ರೇಷ್ಠಾಯನಮಃ.

(ಶಂ॥ ಭಾ) ಶಕ್ತಿಮಂತರಾದ ಬ್ರಹ್ಮಾದಿಗಳಿಗಿಂತಲೂ ಶ್ರೇಷ್ಠನು; (ವಿ॥ ಭಾ) ಶಕ್ತಿಯುಕ್ತರಾದ ದೇವಾದಿಗಳಿಗಿಂತಲೂ ಅತ್ಯಂತವಾಗಿ ಕೊಂಡಾಡಲ್ಪಡುವಂತವನು. "ಅಕ್ಷಯಂ ಮಧುಹಂತಾರಂ ಜಾನಾಮಿತ್ವಾಂ ಸುರೇಶ್ವರಂ" (ಶ್ರೀರಾ॥ ಬಾ॥ ೯೬॥ ೧೭) ಎಂಬದಾಗಿ ಶ್ರೀಭಾರ್ಗವ ರಾಮರ ವಾಕ್ಯವೇ ಈ ಅರ್ಥವನ್ನು ಬೋಧಿಸುವುದು. ॥೪೦೩॥

## (೪೦೪ನೇ ನಾಮವು) ಧರ್ಮಃ,
## ಓಮ್॥ ಧರ್ಮಾಯನಮಃ.

(ಶಂ॥ ಮ) ಸಮಸ್ತ ಭೂತಗಳನ್ನು ಧರಿಸುವುದರಿಂದಲಾದರೂ (ಶಂ) ಧರ್ಮಗಳಿಂದ ಆರಾಧಿಸಲ್ಪಡುವುದರಿಂದಲಾದರೂ (ಮ) ಧರ್ಮಸ್ವರೂಪನಾದುದರಿಂದಲಾದರೂ ಧರ್ಮವುಳ್ಳವನಾದುದರಿಂದಲಾದರೂ 'ಧರ್ಮಃ' ಎನ್ನಲ್ಪಡುವನು "ತಂತ್ವಾಭಗ" ಎಂಬ ಶ್ರುತಿಯಿಂದಲೂ "ಭಗವಾನ್" ಎಂಬ ಸ್ಮೃತಿಯಿಂದಲೂ ಧರ್ಮವುಳ್ಳವನೆಂಬ ಅರ್ಥವೇರ್ಪಡುವುದು. ಧರ್ಮಶಬ್ದವೂ ಭಗ ಶಬ್ದವೂ ಏಕಾರ್ಥ ಬೋಧಕವೆಂಬದಾಗಿ "ಐಶ್ವರ್ಯಸ್ಯ ಸಮಗ್ರಸ್ಯ ಧರ್ಮಸ್ಯ ಯಶಸಶ್ಶ್ರಿಯಃ" ಎಂಬ ಪ್ರಮಾಣದಿಂದ ಏರ್ಪಡುವುದು. ಯಜ್ಞಾದ್ಯನುಷ್ಠಾನದಿಂದುಂಟಾಗುವ ಧರ್ಮವು ಜೀವಗತವಾಗಿರುವುದು. ಪರಮಾತ್ಮನಲ್ಲಿ ಜನ್ಯ ಧರ್ಮವಿಲ್ಲವು; ಸ್ವಾಭಾವಿಕವಾಗಿ ಜ್ಞಾನ ವೈರಾಗ್ಯಾದಿಗಳಂತೆ ಧರ್ಮವು ನಿತ್ಯವಾಗಿರುವುದು. ಶ್ರುತಿಯಲ್ಲಿರುವ ಧರ್ಮ ಪ್ರತಿಷೇಧವು ಜನ್ಯಧರ್ಮ ಪ್ರತಿಷೇಧ ಪರವೆಂತಲೂ ಕೆಲವರು ಹೇಳುವುರು. (ವಿ॥ ಭಾ) ಭೋಗ ಮೋಕ್ಷಗಳೆಂಬೀ ಯೆರಡಕ್ಕೂ ಸಾಧನವಾಗಿರುವುದರಿಂದ "ಧರ್ಮಃ" ಎನ್ನಲ್ಪಡುವನು. ಇದನ್ನೇ "ಲೋಕಾನಾಂ ತ್ವಂ ಪರೋ ಧರ್ಮಃ" (ಶ್ರೀ॥ರಾ॥ ಯು॥ ೧೨೦॥ ೧೪) "ಧರ್ಮಾತ್ಮಾ ಸತ್ಯಸಂಧಶ್ಚ" (ಶ್ರೀ॥ ರಾ॥ ಯು॥ ೯೧॥ ೩೭) ಇತ್ಯಾದಿ ಚತುರ್ಮುಖ ಲಕ್ಷ್ಮಣಾದಿ ವಾಕ್ಯಗಳೂ ಬೋಧಿಸುವುವು. ॥೪೦೪॥

# (೪೦೫ನೇ ನಾಮವು) ಧರ್ಮವಿದುತ್ತಮಃ,

## ಓಮ್॥ ಧರ್ಮವಿದುತ್ತಮಾಯನಮಃ.

(ಶಂ॥ ಭಾ) ಶ್ರುತಿ ಸ್ಮೃತಿಗಳು ಯಾವ ಪರಮಾತ್ಮನ ಆಜ್ಞಾರೂಪ ಗಳಾಗಿರುವುವೊ ಅವನು "ಧರ್ಮ ವಿದುತ್ತಮಃ" ಎನ್ನಲ್ಪಡುವನು. (ವಿ॥ ಭಾ) ಧರ್ಮವನ್ನು ತಿಳಿದ ವಸಿಷ್ಠ ವಾಮದೇವ ಮಾರ್ಕಂಡೇಯರೇ ಮೊದಲಾದವರು ಕೂಡ ಧರ್ಮ ಸ್ವರೂಪ ಪರಿಜ್ಞಾನದಲ್ಲಿ ಇವನನ್ನಾಶ್ರಯಿ ಸುವುದರಿಂದಲಾದರೂ, ಧರ್ಮವನ್ನು ತಿಳಿದವರಲ್ಲಿ ಶ್ರೇಷ್ಠನಾದುದರಿಂದ ಲಾದರೂ "ಧರ್ಮ ವಿದುತ್ತಮಃ" ಎನ್ನಲ್ಪಡುವನು. ॥೪೦೫॥

ಈ (೪೩)ನೇ ಶ್ಲೋಕದಲ್ಲಿ ಪ್ರತಿಪಾದ್ಯಗಳಾದ (೧೦) ನಾಮಗಳಿ ಗೂ "ಸ್ವಗುಣೈ ರಮ್ಯತೆ" ರಾಮಃ" (೩೯೬) ಈರಿತಃ। ವರಪ್ರದೈ ರ್ಬ್ರಹ್ಮಮುಖೈರವಧ್ಯತ್ವಾದಿಭಿರ್ವರೈಃ ॥ ಯಸ್ಮಿನ್ವಿ ರಮ್ಯತ ಇತಿ ಸ "ವಿರಾಮಃ" (೩೯೭) ಪ್ರಕೀರ್ತಿತಃ। ನಿಸರ್ಗನೈರಪೇಕ್ಷ್ಯೇಣ ರಾಜ್ಯಾ ದೇಃ ಕೃಪಣಾದ್ಧಿಯಃ ॥ ವಿರಾಗೀ "ವಿರತಃ" (೩೯೮) ಸಸ್ಯಾತ್ಸುಸಾತ್ತ್ವಕಃ ಪರಮಾದ್ಭುತಃ। ಮೃಗ್ಯಮಾಣತಯಾ "ಮಾರ್ಗೋ" (೩೯೯) ಭರದ್ವಾಜಾದಿಭಿಸ್ಸದಾ ॥ ಪಾಠಸ್ತು "ವಿರಜೊಮಾರ್ಗಃ" (೩೯೮) ಇತಿ ನಿರ್ದೋಷ ದರ್ಶಿತಃ। ಪಂಥಾಸ್ತ್ಸ್ವದ್ಯೇನ "ವಿರಜೊಮಾರ್ಗಃ" ಸನ್ಮಾರ್ಗ ದರ್ಶನಾತ್ ॥ ನಿಯೊಗೆಯೊಗ್ಯಸ್ಸುಹೃದಾಂ ಯೊಽಸೌ "ನೇಯ" (೩೯೯) ಸ್ಸ ಉಚ್ಯತೆ। ಯಸ್ಮಿಂ ಸ್ತಪೂಧನಾ ನಿತ್ಯಂ ನೀಯಂತ ಇತಿ ವೈ "ನಯಃ॥" (೪೦೦) ಅಸುಹೃದ್ಭಿ ರ್ನಯೊ ಯಸ್ಯನಾಸ್ತೀ "ತ್ಯ ನಯ" (೪೦೧) ಉಚ್ಯತೆ। ಅಥವಾ ಜಗತಾಂ ಯಸ್ಮಾನ್ನಾನ್ಯೊಸ್ತೀ ತ್ಯನಯೊಽಥವಾ ॥ "ವೀರಃ" (೪೦೨) ಕಮ್ಪನ ಹೇತುತ್ವಾ ದ್ರಕ್ಷಸಾ ಮತಿ ಭೀಮತಃ । ಸುರಾದೀನಾಂ ಶಕ್ತಿಮತಾಂ ಯಃ ಪ್ರಶಸ್ಯ ತಮ ಸ್ಸ್ಮೃತಃ। ತಸ್ಮಾತ್ "ಚ್ಛಕ್ತಿಮತಾಂಶ್ರೇಷ್ಠೋ" (೪೦೩) ದಶಾರ್ಣ ಶ್ರೇಷ್ಠಮೋ ಮನುಃ। ನಿಶ್ರೇಯಸಾಭ್ಯುದಯಾಭ್ಯಾಂ "ಧರ್ಮ"(೪೦೪) ಸ್ಸರ್ವಸ್ಯ ಧಾರಣಾತ್ । ಧರ್ಮವಿತ್ಸೂತ್ತಮತ್ವಾಚ್ಚ ಧಾರಣಾ "ದ್ಧರ್ಮ ವಿದುತ್ತಮಃ" (೪೦೫) ಇತ್ಯಾದಿಯಾದ ವಿವೃತಿಯನ್ನು ಕಾಣಬಹುದು.

ಮೂ॥ ವೈಕುಣ್ಠಃ ಪುರುಷಃ ಪ್ರಾಣಃ ಪ್ರಾಣದಃ
ಪ್ರಣವಃ ಪೃಥುಃ । ಹಿರಣ್ಯಗರ್ಭ ಶ್ಶತ್ರುಘ್ನೋ
ವ್ಯಾಪ್ತೋ ವಾಯು ರಧೋಕ್ಷಜಃ ॥೪೪॥

(೪೦೬ನೇ ನಾಮವು) ವೈಕುಣ್ಠಃ,

ಓಮ್॥ ವೈಕುಣ್ಠಾಯನಮಃ.

(ಶಂ॥ ವಿ॥ ಮ) ವಿವಿಧಾಕುಣ್ಠಾ-ಗತೇಃ ಪ್ರತಿಹತಿಃ, ವಿಕುಣ್ಠಾ; ನಾನಾ ವಿಧಗಳಾದ ಗತಿ ಪ್ರತಿಹತಿಯು ಎಂದರೆ ವಿಘ್ನವು 'ವಿಕುಂಠಾ' ಎನ್ನಲ್ಪಡುವುದು. ಅದಕ್ಕೇ ಕರ್ತ್ತ ಆದವನು ವೈಕುಣ್ಠನೆನ್ನಲ್ಪಡುವನು. ಇದಕ್ಕೇ "ಮಯಾ ಸಂಶ್ಲೇಷಿತಾ ಭೂಮಿರದ್ಭಿರ್ವ್ಯೋಮಚ ವಾಯುನಾ । ವಾಯುಶ್ಚ ತೇಜಸಾ ಸಾರ್ಧಂ ವೈಕುಣ್ಠತ್ವಂ ತತೋ ಮಮ" (ಶ್ರೀಮನ್ಮಹಾಭಾರ॥ ಶಾನ್ತಿ॥ ೩೪೩॥ ೫೧) ಎಂಬೀ ಪ್ರಮಾಣಾನುಸಾರವಾಗಿ ಜಗದಾದಿಯಲ್ಲಿ ಬಿಡಿ ಬಿಡಿಯಾಗಿರುವ ಪಂಚ ಭೂತಗಳನ್ನು ಒಂದರಲ್ಲೊಂದು ಶೇರಿಸುವಂತವನಾಗಿ ಅವುಗಳ ಗತಿ ಪ್ರತಿರೋಧವನ್ನು ಮಾಡುವ ಅರ್ಥವನ್ನು ಬೋಧಿಸುವ ಈ ಪ್ರಮಾಣವೇ ಆಧಾರವಾಗಿರುವುದು. (ಮ) ವಿಕುಂಠಾದೇವಿಯ ಕುಮಾರನು. (ವಿ॥ ಭಾ) ಹೀಗೆಯೇ ಅಲ್ಲವೊ ಈ ಅವತಾರದಲ್ಲಿ ಇವನ ಸನ್ನಿಧಿಯಲ್ಲಿ ಪ್ರಾಣಿಗಳು ಒಂದೊರೊಡನೆ ಒಂದು "ರಾಮಮೇವಾನುಪಶ್ಯಂತೋ ನಾಭ್ಯಹಿಂಸನ್ ಪರಸ್ಪರಂ" (ಶ್ರೀರಾ॥ ಯು॥ ೧೩೧) ಎಂಬಂತೆ ಒಂದಕ್ಕೊಂದು ಅಪೇಕ್ಷೆಯುಳ್ಳವುಗಳಾಗಿಯೂ, ಇವನ ಅಸನ್ನಿಧಿಯಲ್ಲಿ ಯಾವದೊಂದನ್ನೂ ಅಪೇಕ್ಷಿಸದೆ "ವ್ಯಸೃಜನ್ಕಬಳಾ ನ್ನಾಗಾ ಗಾವೊ ವತ್ಸಾನಪಾಯಯನ್" (ಶ್ರೀರಾ) ಎಂಬಂತೆ ವೈರಾಗ್ಯವುಳ್ಳವುಗಳಾಗಿಯೂ ಇರುವುವು ॥೪೦೬॥

(೪೦೭ನೇ ನಾಮವು) ಪುರುಷಃ,

ಓಮ್॥ ಪುರುಷಾಯನಮಃ.

(ಶಂ॥ ಮ) "ಸಯತ್ಪೂರ್ವೋಸ್ಮಾತ್ಸರ್ವಸ್ಮಾತ್ಸರ್ವಾನ್ಪಾಪ್ಮನ ಔಷತ್ತಸ್ಮಾತ್ಪುರುಷಃ" (ಬೃ॥ ಆ॥ ೩॥ ೪॥ ೧) ಎಂಬ ಶ್ರುತ್ಯನುಸಾರವಾಗಿ ಸಮಸ್ತವಾದ ವಸ್ತುಗಳಗಿಂತಲೂ ಆದಿಯಾದುದರಿಂದಲಾದರೂ,

ಅಥವಾ ಸರ್ವವ್ಯಾಪ್ತನಾದುದರಿಂದಲಾದರೂ, ಸರ್ವ ಪಾಪಗಳನ್ನು ಪರಿಹರಿಸುವುದರಿಂದಲಾದರೂ; “ ಸಪವಾಯಂ ಪುರುಷ ಸ್ಸರ್ವಾಸು ಪೂರ್ಷು ಶೇತೇ ” (ಬೃ|| ಆ|| ೪|| ಶ್ಲೋ|| ೧೮) ಎಂಬ ಶ್ರುತ್ಯನುಸಾರವಾಗಿ ಶರೀರವೆಂಬ ಪುರದಲ್ಲಿ ಶಯನಿಸಿಕೊಂಡಿರುವುದರಿಂದಲಾದರೂ ‘ ಪುರುಷ ’ ನೆನ್ನಲ್ಪಡುವುನು. ( ವಿ|| ಭಾ ) “ ಪಾವನ ಸ್ಸರ್ವಲೋಕಾನಾಂ ತ್ವಮೇವ ರಘುನಂದನ ” (ಶ್ರೀರಾ|| ಉ|| ೮೩|| ೯) ಎಂಬಂತೆ ಪರಮಪಾವನಮೂರ್ತಿಯು. ||೪೦೭||

## (೪೦೮ನೇ ನಾಮವು) ಪ್ರಾಣಃ,
## ಓಮ್|| ಪ್ರಾಣಾಯನಮಃ.

( ಶಂ|| ಭಾ ) “ ಚೇಷ್ಟಾಂ ಕರೋತಿ ಶ್ವಸನ ರೂಪೇಣ ” ಎಂಬ ವಿಷ್ಣುಪುರಾಣ ವಚನಾನುಸಾರವಾಗಿ ಪ್ರಾಣಿ ಸಮೂಹದಲ್ಲಿ ಕ್ಷೇತ್ರಜ್ಞರೂಪದೊಡನೆಯಾದರೂ ಪ್ರಾಣರೂಪದೊಡನೆಯಾದರೂ ಚೇಷ್ಟಿಸುವಂತವನು. (ವಿ||ಮ) ಸರ್ವರನ್ನು ಜೀವಿಸುವಂತೆ ಮಾಡುವಂತವನು. ||೪೦೮||

## (೪೦೯ನೇ ನಾಮವು) ಪ್ರಾಣದಃ,
## ಓಮ್|| ಪ್ರಾಣದಾಯನಮಃ.

(ಶಂ|| ಭಾ) ಪ್ರಳಯಾದಿ ಕಾಲಗಳಲ್ಲಿ ಪ್ರಾಣಿಗಳ ಪ್ರಾಣಗಳನ್ನು ಖಂಡಿಸುವಂತವನು; ಅಥವಾ ಸೃಷ್ಟ್ಯಾದಿಯಲ್ಲಿ ಸರ್ವ ಪ್ರಾಣಿಗಳಿಗೂ ಅಂತರ್ಯಾಮಿ ರೂಪದೊಡನೆ ಪ್ರಾಣವನ್ನು ಕೊಡುವಂತವನು. (ವಿ|| ಭಾ) ಪ್ರಾಣಗಳನ್ನು ಕೊಡುವಂತವನು. ಆದುದರಿಂದಲೇ ತಾನೆ ಇವರ ವಿಯೋಗದಲ್ಲಿ “ ಅಪಿ ವೃಕ್ಷಾಃ ಪರಿಮ್ಲಾನಾ ಸ್ಸಪುಷ್ಪಾಂ ಕುರಕೋರಕಾಃ ” (ಶ್ರೀರಾ) ಎಂಬಂತೆ ಮರಗಳೂ ಕೂಡಾ ಬಾಡಿಹೋದವು. (ಮ) ಪ್ರಾಣಗಳನ್ನು ರಕ್ಷಿಸುವಂತವನು. ಇದರಿಂದ “ ಅಚ್ಯುತಃ ಪ್ರಥಿತಃ ಪ್ರಾಣಃ ಪ್ರಾಣದಃ ” ಎಂಬ ನಾಮದ್ವಯಕ್ಕಿಂತಲೂ ಭೇದವು ಸಿದ್ಧವು. ||೪೦೯||

## (೪೧೦ನೇ ನಾಮವು) ಪ್ರಣಮಃ,
## ಓಮ್|| ಪ್ರಣಮಾಯನಮಃ.

(ಶಂ|| ಭಾ) "ತಸ್ಮಾದೋಮಿತಿ ಪ್ರಣೌತಿ" ಎಂಬ ಶ್ರುತ್ಯನುಸಾರವಾಗಿ ನಮಸ್ಕಾರವನ್ನು ಮಾಡುವುದರಿಂದಲಾದರೂ "ಪ್ರಣಮಂತೀಹ ಯಂದೇವಾಸ್ತಸ್ಮಾತ್ಪ್ರಣವ ಉಚ್ಯತೇ" ಎಂಬೀ ಸನತ್ಕುಮಾರ ವಚನದಿಂದ ಸರ್ವದೇವತೆಗಳಿಂದ ನಮಸ್ಕರಿಸಲ್ಪಡುವುದರಿಂದಲಾದರೂ "ಪ್ರಣವಃ" ಎನ್ನಲ್ಪಡುವನು. (ವಿ|| ಭಾ) "ಹೃದಯಾ ನ್ಯಾಮಮಂಥೇವ ಜನಸ್ಯ ಗುಣವತ್ತಯಾ" (ಶ್ರೀರಾ|| ಅ|| ೭೫|| ೨) ಎಂಬಂತೆ ತನ್ನ ಗುಣಗಳಿಂದ ಚರಾಚರಗಳನ್ನು ಬಗ್ಗುವಂತೆ ಮಾಡಿಸುವಂತವನು (ಮ) ಅಕಾರ ಪ್ರತಿಪಾದ್ಯನು. ಅದವಾ ವೇದಗಳಿಂದ ನಮಸ್ಕರಿಸಲ್ಪಡುವಂತವನು, ಮತ್ತು ಸರ್ವದೇವ ನಮಸ್ಕೃತನು. (ಶಂ||ಮ|| ಪಾಠವು-ಪ್ರಣವಃ,) ||೪೧೦||

## (೪೧೧ನೇ ನಾಮವು) ಪೃಥುಃ,
## ಓಮ್|| ಪೃಥವೇನಮಃ.

(ಶಂ|| ಭಾ) ಪ್ರಪಂಚ ರೂಪದಿಂದ ವಿಸ್ತಾರವನ್ನು ಹೊಂದಿದವನು. (ವಿ|| ಭಾ) ಕೀರ್ತಿಯಿಂದ ವಿಸ್ತಾರವನ್ನು ಹೊಂದಿದವನು. ||೪೧೧||

## (೪೧೨ನೇ ನಾಮವು) ಹಿರಣ್ಯಗರ್ಭಃ,
## ಓಮ್|| ಹಿರಣ್ಯಗರ್ಭಾಯನಮಃ.

(ಶಂ||ಭಾ) ಹಿರಣ್ಯಗರ್ಭೋತ್ಪತ್ತಿಗೆ ಕಾರಣವೂ ಹಿರಣ್ಮಯವು ಆದ ಅಂಡವು ಯಾವ ಪರಮಾತ್ಮನ ವೀರ್ಯದಿಂದ ಹುಟ್ಟಿರುವುದೊ ಅಂತಹ ಅಂಡವನ್ನೇ ಗರ್ಭದಲ್ಲಿವುಳ್ಳವನು "ಹಿರಣ್ಯಗರ್ಭ" ನು. (ವಿ|| ಭಾ) ಅ|| ಅವತಾರ ಕಾಲವರ್ತಿಗಳಲ್ಲದ ಧ್ಯಾನಯೋಗಿಗಳಿಂದ ಧ್ಯಾನಿಸಲ್ಪಡುವುದರಿಂದ ಅವರಿಗೂ ಶುಭಾಶ್ರಯವಾಗಿದ್ದುಕೊಂಡು ಉಪಕರಿಸಿದ ಸಂದರ್ಭವು ಹೇಳಲ್ಪಡುವುದು. ಹಿತವಾಗಿಯೂ ರಮಣೀಯವಾಗಿಯೂ ಇರುವ ಧ್ಯಾನಯೋಗಿಗಳ ಹೃದಯದಲ್ಲಿದ್ದುಕೊಂಡು ಪ್ರಕಾಶಿಸುವಂತವನು; (ಅಥವಾ) ಹಿರಣ್ಯವೆಂದರೆ ಸ್ವರ್ಣವು, ಅದರ ನಿಧಿಯಂತೆ ಇರುವಂತವನೆಂತಲಾದರೂ ಆಗಬಹುದು. (ಮ) ಹಿರಣ್ಯ ಶಬ್ದದಿಂದ ಹೇಳಲ್ಪಡುವ

ಅಂಡವನ್ನು ಗರ್ಭದಲ್ಲಿವುಳ್ಳವನು. ಇದರಿಂದ "ಹಿರಣ್ಯಗರ್ಭೋ ಭೂಗರ್ಭಃ" ಎಂಬ ನಾಮಕ್ಕಿಂತಲೂ ಅರ್ಥಭೇದವೇರ್ಪಡುವುದು. ||೪೧೨||

(೪೧೩ನೇ ನಾಮವು) ಶತ್ರುಘ್ನಃ,

ಓಮ್|| ಶತ್ರುಘ್ನಾಯನಮಃ.

(ಶಂ|| ಭಾ) ದೇವ ಶತ್ರುಗಳನ್ನು ನಿವಾರಣ ಮಾಡುವಂತವನು. (ವಿ||ಭಾ) ಆ ರೀತಿಯಿಂದ ಧ್ಯಾನಿಸುವಂತವರಿಗೆ ವಿರೋಧಿಯಾದ ಶಬ್ದಾದಿ ವಿಷಯುಗಳನ್ನು; ರಾವಣನನ್ನು ಸಂಹರಿಸಿದಂತೆ ನಾಶಪಡಿಸಿದವನು.||೪೧೩||

(೪೧೪ನೇ ನಾಮವು) ವ್ಯಾಪ್ತಃ,

ಓಮ್|| ವ್ಯಾಪ್ತಾಯನಮಃ.

(ಶಂ|| ಭಾ) ಸರ್ವ ಕಾರ್ಯಗಳಿಗೂ ಕಾರಣನಾಗುತಾ ವಾಸಮಾಡು ವಿಕೆಯಿಂದ "ವ್ಯಾಪ್ತಃ" ಎನ್ನಲ್ಪಡುವನು. ಬಾಲರು, ವೃದ್ಧರು; ಸ್ವಾಮಿ, ಸೇವಕನು; ಶತ್ರುವು, ಮಿತ್ರನು; ಮೊದಲಾದ ಸರ್ವರಲ್ಲಿ ಯೂ ಇವನ ವಾತ್ಸಲ್ಯವು ಸಮವಾಗಿರುವುದರಿಂದ ಎಲ್ಲೆಲ್ಲಿಯೂ ವ್ಯಾಪಿ ಸಿದವನು. ಇದಕ್ಕೆ "ಪೌರಾನ್ ಸ್ವಜನವನ್ನಿತ್ಯಂ ಕುಶಲಂ ಪರಿಪೃಚ್ಛತಿ| ಪುತ್ರೇಷ್ವಗ್ನಿಷು ದಾರೇಷು ಪ್ರೇಷ್ಯ ಶಿಷ್ಯ ಗಣೇಷುಚ ||" (ಶ್ರೀ ರಾ|| ಅಯೊ) ಎಂಬೀ ಪ್ರಮಾಣವು ಆಧಾರವಾಗಿರುವುದು. ||೪೧೪||

(೪೧೫ನೇ ನಾಮವು) ವಾಯುಃ,

ಓಮ್|| ವಾಯುವೇನಮಃ.

(ಶಂ|| ಭಾ) "ಪುಣ್ಯೋ ಗಂಧಃ ಪೃಥಿವ್ಯಾಂಚ" (ಭಗವದ್ಗೀ|| ೭|| ೯) ಎಂಬೀ ಪ್ರಮಾಣಾನುಸಾರವಾಗಿ ಗಂಧವನ್ನುಂಟುಮಾಡತಕ್ಕವನು. (ವಿ|| ಭಾ) "ಸೋಽಭ್ಯಗಚ್ಛನ್ಮಹಾತೇಜಾ ಶ್ಶಬರೀಂ ಶತ್ರುಸೂದನಃ" (ಶ್ರೀರಾ|| ಬಾ|| ೧|| ೫೭) ಎಂಬಂತೆ ತಾನೇಅಲ್ಲಲ್ಲಿ ಅವರಿರುವ ಸ್ಥಲವನ್ನು ಹುಡುಕಿ ಹೋಗುವಂತವನು. (ವ) ಸಂಚರಿಸುವಂತವನು, ||೪೧೫||

(೪೧೬ನೇ ನಾಮವು) ಅಧೋಕ್ಷಜಃ,

ಓಮ್|| ಅಧೋಕ್ಷಜಾಯನಮಃ.

(ಶಂ॥ ಮ) " ಅಧೋನಕ್ಷೀಯತೆ ಜಾತು ಯಸ್ಮಾತ್ತಸ್ಮಾದಧೋಕ್ಷಜಃ " (ಭಾರ॥ ಉದ್ಯೋ) ಎಂಬೀ ವಚನಾನುಸಾರವಾಗಿ ಯಾವಾಗಲೂ ನಾಶವಿಲ್ಲದವನು (ಶಂ) ಅಥವಾ—ಭೂಮಿ ಅಂತರಿಕ್ಷ ಅಧಃ ಪ್ರದೇಶಗಳು ಯಾವಪರಮಾತ್ಮನ ದಶೆಯಿಂದುಂಟಾಗಿರುವುವೊ; ಅವುಗಳ ಮಧ್ಯಪ್ರದೇಶದಲ್ಲಿ ವೈರಾಜ ರೂಪದಿಂದ ಇರುವನೊ ಅವನು " ಅಧೋಕ್ಷಜಃ " ಎನ್ನಲ್ಪಡುವನು (ವಿ॥ ಭಾ) ಈ ರೀತಿಯಾಗಿ ಅಮೃತ ಸಮುದ್ರದಂತೆ ಸರ್ವರಿಂದಲೂ ಸದಾ ಅನುಭವ ಯೋಗ್ಯನಾಗಿದ್ದರೂ ನ್ಯೂನನಾಗದವನು. ॥೪೦೬॥

ಈ (೪೪)ನೇ ಶ್ಲೋಕದಲ್ಲಿ ಪ್ರಕೃತಗಳಾದ (೧೧) ನಾಮಗಳಿಗೂ " ಸಂಶ್ಲೇಷ ಪ್ರತಿಘಾತಕ್ಚ ಕುಣ್ಠಿಧಾತ್ವರ್ಥ ಉಚ್ಯತೆ ॥ ವಿಗತಸ್ಸಚ ಯೇಷಾಂತೇ ವಿಕುಂಠಾಸ್ಸ್ಯುರು ದೀರಿತಾಃ । ತೇಷಾಮೇವೈಷ ಇತಿಹಿ " ವೈಕುಣ್ಠಃ " (೪೦೬) ಪರಿಕೀರ್ತಿತಃ ॥ ಸ ಯತ್ಪೂರ್ವ ಇತಿ ಶ್ರುತ್ಯಾ " ಪುರುಷಃ " (೪೦೭) ಪಾವನತ್ವತಃ । ಪೃಧಾತೋಃ ಪಾಲನತ್ವಾದ್ವಿ ಆರ್ಷ ಪ್ರತ್ಯಯ ಯೋಗತಃ ॥ ಸರ್ವಪಾಲಕತಾ ಲಬ್ಧಾ ' ಪುರುಷಃ ' ಪ್ರೋಚ್ಯತೇ ಬುಧೈಃ । " ಪ್ರಾಣಃ " (೪೦೮) ಸರ್ವಪ್ರಾಣನಾದ್ಧಿ ತದ್ದಾನಾತ್ "ಪ್ರಾಣದಃ" (೪೦೯) ಸ್ಮೃತಃ॥ ಗುಣೈಶ್ಚರಾಚರಂ ನಿತ್ಯಂ ನಾಮನಾತ್ " ಪ್ರಣಮಃ " (೪೧೦) ಸ್ಮೃತಃ । ಯಶೋವಿಶಾಲವತ್ತ್ವಾಚ್ಚ " ಪೃಥು " (೪೧೧) ರಿತ್ಯುಚ್ಯತೇ ಬುಧೈಃ ॥ ಹಿತಸ್ಯ ರಕ್ಷಣೀಯಸ್ಯ ಧ್ಯಾತೄಣಾಂ ಹೃದಯಸ್ಯಹಿ । " ಹಿರಣ್ಯಗರ್ಭಃ " (೪೧೨) ತತ್ರಸ್ಥ ಸ್ಸುಶುಭಾಶ್ರಯಣ ಸ್ಸ್ಮೃತಃ ॥ ಯದ್ವಾ ಹಿರಣ್ಯಗರ್ಭೋಽಸಾ ಹಿರಣ್ಯನಿಧಿ ಸಾಮ್ಯತಃ । ಶತ್ರೂನಿಂದ್ರಿಯ ವರ್ಗಾನ್ಯೋಹನ್ತಿ " ಶತ್ರುಘ್ನ " (೪೧೩) ಉಚ್ಯತೇ ॥ ನೀಚವ್ರಜ್ಯೋ ವಿಶೇಷೇಣ ವ್ಯಾಪನಾತ್ "ವ್ಯಾಪ್ತ" (೪೧೪) ಉಚ್ಯತೆ । ತತ್ರತತ್ರಸ್ಥಿತಾನ್ಸರ್ವಾ ನ್ಬರದ್ವಾಜ ಗುಹಾದಿಕಾನ್ ॥ ಗಚ್ಛತಿ ಸ್ವಯಮೇವೈತಾನ್ ಸ " ವಾಯುಃ " (೪೧೫) ಇತಿ ಶಬ್ದ್ಯತೆ । ಸದೋಪ ಭುಜ್ಯಮಾನೋಪಿ ಸರ್ವೈ ವ ರಮೃತ ಸಿಂಧುವತ್ । ಅಧೋನಕ್ಷೀಯತೇ ಜಾತು ಯಸ್ಮಾತ್ತಸ್ಮಾತ್ " ಅಧೋಕ್ಷಜಃ " (೪೧೬) ಎಂಬಂತೆ ವಿವೃತಿಯನ್ನು ಕಾಣಬಹುದು.

ಮೂ॥ ಋತು ಸುದರ್ಶನಃ ಕಾಲಃ ಪರಮೇ
ಷ್ಠೀ ಪರಿಗ್ರಹಃ। ಉಗ್ರ ಸ್ಸಂವತ್ಸರೊ ದಕ್ಷೋ
ವಿಶ್ರಾಮೊ ವಿಶ್ವದಕ್ಷಿಣಃ ॥೪೫॥

(೪೧೭ನೇ ನಾಮವು) ಋತುಃ,

ಓಮ್॥ ಋತವೇನಮಃ

(ಶಂ॥ ಭಾ) ಕಾಲ ರೂಪವಾದ ಋತು ಶಬ್ದದಿಂದ ಕಾಣಲ್ಪಡುವಂತವನು. (ವಿ॥ ಭಾ) ಸದಾ ನೂತನವಾಗಿರುವಂತೆ ಸರ್ವರಿಗೂ ಉಲ್ಲಾಸಕರಗಳಾದ ಗುಣಗಣಂದ ಕೂಡಿದವನು. ಇದಕ್ಕೆ " ಘರ್ಮಾಭಿತಪ್ತಾಃ ಪರ್ಜನ್ಯಂಹ್ಲಾದ ಯಂತಮಿವ ಪ್ರಜಾಃ " (ಶ್ರೀರಾ॥ ಅ॥ ೩॥ ೨೯) ಎಂಬ ವಚನವು ಆಧಾರವಾಗಿರುವುದು. (ಮ) "ಋತೂನಾಂ ಕುಸುಮಾಕರಃ" (ಭಗವದ್ಗೀ॥ ೧೦ನೆ ಅ) ಎಂಬಂತೆ ವಸಂತ ಋತು ಸ್ವರೂಪನು. ॥೪೧೭॥

(೪೧೮ನೇ ನಾಮವು) ಸುದರ್ಶನಃ,

ಓಮ್॥ ಸುದರ್ಶನಾಯನಮಃ.

(ಶಂ॥ ಭಾ) ಶುಭವರ್ಧಕವಾದ ಮೋಕ್ಷವೇ ಫಲವಾಗಿಯುಳ್ಳ ಜ್ಞಾನವುಳ್ಳವನೆಂತಲಾದರೂ, ಪದ್ಮಪತ್ರದಂತೆ ವಿಶಾಲವೂ ಶುಭಕರವೂ ಆದ ನೇತ್ರಗಳುಳ್ಳವನೆಂತಲಾದರೂ, ಭಕ್ತರಿಂದ ಸುಖವಾಗಿ ನೋಡಲ್ಪಡುವಂತವನಾದುದರಿಂದಲಾದರೂ " ಸುದರ್ಶನಃ " ಎನ್ನಲ್ಪಡುವನು. (ವಿ॥ ಭಾ) ತನ್ನ ಗುಣ ಪ್ರಭಾವಾದಿಗಳನ್ನರಿಯದವರಿಗೂ ಕೂಡ ತನ್ನ ದರ್ಶನವೇ ಶುಭಕರವಾಗಿರುವಂತೇ ಪ್ರಕಾಶಿಸುವಂತವನು. ॥೪೧೮॥

(೪೧೯ನೇ ನಾಮವು) ಕಾಲಃ,

ಓಮ್॥ ಕಾಲಾಯನಮಃ.

(ಶಂ॥ ಭಾ) " ಕಾಲಃ ಕಲಯತಾಮಹಂ " (ಭ॥ ಗೀ॥ ೭॥ ೯) ಎಂಬಂತೆ ಸಮಸ್ತವನ್ನೂ ಗಣನೆ ಮಾಡುವಂತವನು. (ವಿ ಭಾ) ಇಂತಹ

ತನ್ನ ಆತ್ಮ ಗುಣಗಳಿಂದ ಸಮಸ್ತ ಚರಾಚರಗಳನ್ನೂ ತನ್ನಲ್ಲಿ ಸೇರಿಸಿ ಕೊಳ್ಳುವಂತವನು (ಮ) ಲೋಕನಾಶಕನು. ‖೪೧೯‖

## (೪೨೦ನೇ ನಾಮವು) ಪರಮೇಷ್ಠೀ,

## ಓಮ್‖ ಪರಮೇಷ್ಠಿನೇನಮಃ.

(ಶಂ‖ ಭಾ) " ಪರಮೇಷ್ಠೀ ವಿಭಾಜಃ " ಎಂಬಂತೆ ಶ್ರೇಷ್ಠವೂ ತನ್ನದೂ ಆದ ಮಹಿಮೆಯಲ್ಲಿಯಾದರೂ ಹೃದಯಾಕಾಶದಲ್ಲಿಯಾದರೂ ಇರುವಂತಹ ಸ್ವಭಾವ ವುಳ್ಳವನು. (ವಿ‖ ಭಾ) ಈ ರೀತಿಯಾಗಿ ರಾವಣನ ಬೇಟೆಯಿಂದಲೂ, ಅದರಿಂದುಂಟಾಗುವ ಲೋಕರಕ್ಷಣದಿಂದಲೂ ಕ್ರೀಡಿಸಿಕೊಂಡು ಪುನಶ್ಚ ಪರಮಪದದಲ್ಲಿ ತಾನೆ " ವಿವೇಶ ವೈಷ್ಣವಂ ತೇಜಸ್ಸಶರೀರ ಸ್ಸಹಾನುಗಃ " (ಶ್ರೀರಾ‖ ಉ‖ ೧೧೦‖ ೧೨) ಎಂಬಂತೆ ಪ್ರಕಾಶಿಸುವಂತವನು. (ಮ) ಶ್ರೇಷ್ಠವಾದ ಸ್ಥಾನದಲ್ಲಿರುವಂತವನು. ‖೪೨೦‖

## (೪೨೧ನೇ ನಾಮವು) ಪರಿಗ್ರಹಃ,

## ಓಮ್‖ ಪರಿಗ್ರಹಾಯನಮಃ.

(ಶಂ‖ ಭಾ) ಸರ್ವಗತನಾದ ಕಾರಣ ಶರಣಾರ್ಥಿಗಳಿಂದ ಸುತ್ತುಮುತ್ತಲೂ ಸ್ವೀಕರಿಸಲ್ಪಡುವಂತವನಾದುದರಿಂದಲಾದರೂ, ಯೆಲ್ಲೆಲ್ಲಿಯೂ ತಿಳಿಯಲ್ಪಡುತ್ತಾನಾದುದರಿಂದಲಾದರೂ, ಭಕ್ತರಿಂದ ಸಮರ್ಪಿಸಲ್ಪಡುವ ಪತ್ರ ಪುಷ್ಪಾದಿಗಳನ್ನು ಸ್ವೀಕರಿಸುವುದರಿಂದಲಾದರೂ " ಪರಿಗ್ರಹಃ " ಎನ್ನಲ್ಪಡುವನು. (ವಿ‖ ಭಾ) ತನಿಗೆ ಸಂಬಂಧಪಟ್ಟ ಅಯೋಧ್ಯಾವಾಸಿಗಳನ್ನೂ ಮತ್ತೂ ಈ ರಾಜ್ಯಕ್ಕೆ ಸೇರಿದ ಗ್ರಾಮವಾಸಿಗಳಾದ ಪ್ರಾಣಿಗಳನ್ನೂ; ಮತ್ತು ಇವರಿಗೆ ಸಂಬಂಧಪಟ್ಟ ಗಿಡ ಬಳ್ಳಿ ಮೊದಲಾದವುಗಳನ್ನೂ ಕೂಡ ಪರಮಪದವಾಸಿಗಳನ್ನಾಗಿ ಪರಿಗ್ರಹಿಸುವಂತವನು. (ಮ) ಸಮಸ್ತವನ್ನೂ ಪರಿಗ್ರಹಿಸುವಂತವನು. ‖೪೨೧‖

## (೪೨೨ನೇ ನಾಮವು) ಉಗ್ರಃ,

## ಓಮ್‖ ಉಗ್ರಾಯನಮಃ.

(ಶಂ॥ ಭಾ) ಸೂರ್ಯಾದಿಗಳಿಗೂ ಕೂಡ ಭಯಂಕರನು. (ವಿ॥ ಭಾ) ಇನ್ನು ಮುಂದೆ ಅಸಾಧುಗಳನ್ನು ಶಿಕ್ಷಿಸುವ ಪಾತಾಲವಾಸಿಯಾದ ಕಲ್ಕಿ ವೃತ್ತಾಂತವು ಹೇಳಲ್ಪಡುವುದು ಯುಗದಕೊನೆಯಲ್ಲಿ ವರ್ಣಾಶ್ರಮಾದಿ ವ್ಯವಸ್ಥೆಗಳೆಲ್ಲವನ್ನೂ ನಾಶಪಡಿಸಿಕೊಂಡು ಪಾಪದಲ್ಲಿ ಅತಿ ಪ್ರಸಕ್ತರಾದವರಲ್ಲಿ ಉಗ್ರವಾಗಿರುವಂತವನು. ಉಗ್ರನೆಂದರೆ ಪ್ರಚಂಡನು. ॥೪೨೦॥

## (೪೨೩ನೇ ನಾಮವು) ಸಂವತ್ಸರಃ,

## ಓಮ್॥ ಸಂವತ್ಸರಾಯನಮಃ.

(ಶಂ॥ಮು) ಸಮಸ್ತ ಭೂತಗಳೂ ಇವನಲ್ಲಿ ವಾಸಮಾಡುವುದರಿಂದ "ಸಂವತ್ಸರಃ" ಎನ್ನಲ್ಪಡುವನು. (ವಿ॥ ಭಾ) ಪಾತಾಲ ಲೋಕದಲ್ಲಿ ಸಂಹಾರಕ್ಕೆ ಬೇಕಾದ ಪರಿಕರಗಳಿಂದ ಕಾಲ ನಿರೀಕ್ಷಣೆಯನ್ನು ಮಾಡಿಕೊಂಡು ವಾಸಮಾಡುವಂತವನು. ॥೪೨೩॥

## (೪೨೪ನೇ ನಾಮವು) ದಕ್ಷಃ,

## ಓಮ್॥ ದಕ್ಷಾಯನಮಃ.

(ಶಂ॥ ಭಾ) ಜಗದ್ರೂಪದಿಂದ ವೃದ್ಧಿಹೊಂದುವುದರಿಂದಲಾದರೂ; ಸಮಸ್ತಕರ್ಮಗಳನ್ನು ಶೀಘ್ರವಾಗಿ ಮಾಡುವುದರಿಂದಲಾದರೂ; "ದಕ್ಷಃ" ಎನ್ನಲ್ಪಡುವನು. (ವಿ॥ ಭಾ) "ಕ್ಷಿಪ್ರಕಾರೀ ಜನಾರ್ದನಃ" ಎಂಬಂತೆ ಕಳ್ಳರನ್ನು ಸಂಹರಿಸುವುದರಲ್ಲಿ ಶೀಘ್ರಕಾರಿಯಾಗಿರುವಂತವನು. ॥೪೨೪॥

## (೪೨೫ನೇ ನಾಮವು) ವಿಶ್ರಾಮಃ,

## ಓಮ್॥ ವಿಶ್ರಾಮಾಯನಮಃ.

(ಶಂ॥ ಭಾ) ಸಂಸಾರದಲ್ಲಿ ಕ್ಷುತ್ಪಿಪಾಸಾದಿಗಳೆಂಬ ಷಡೂರ್ಮಿಗಳಿಂದಲೂ ಅವಿದ್ಯೆಯೇ ಮೊದಲಾದ ಮಹಾ ದುಃಖಗಳಿಂದಲೂ ಮದವೇ ಮೊದಲಾದ ಉಪಕ್ಲೇಶಗಳಿಂದಲೂ ವಶೀಕೃತರಾಗಿ ಸಂಸಾರ ವಿಶ್ರಾಂತಿ ರೂಪವಾದ ಮೋಕ್ಷವನ್ನಪೇಕ್ಷಿಸುವಂತವರಿಗೆ ಮೋಕ್ಷವೆಂಬ ವಿಶ್ರಮಸ್ಥಾನವಾಗಿರುವಂತವನು. (ವಿ॥ಭಾ) ಪಾಪವನ್ನೂ ಅದರ ಫಲವನ್ನೂ ಅನುಭವಿಸಿ ಅದರಿಂದ ಆಯಾಸಪಡುತಲಿರುವವರಿಗೆ ವಿಶ್ರಮಸ್ಥಾನನು. ॥೪೨೫॥

## (೪೨೬ನೇ ನಾಮವು) ವಿಶ್ವದಕ್ಷಿಣಃ,

### ಓಮ್॥ ವಿಶ್ವದಕ್ಷಿಣಾಯನಮಃ.

(ಶಂ॥ ಮ) ಸರ್ವರಿಗಿಂತಲೂ ಸಮರ್ಥನು. (ಶಂ) ಸರ್ವಕರ್ಮಗಳಲ್ಲಿಯೂ ದಾಕ್ಷಿಣ್ಯವುಳ್ಳವನು. (ವಿ॥ ಭಾ) ಅ॥ ಅಪರಾಧಪಟ್ಟವರ ವಿಷಯದಲ್ಲಿ ಹಿತಕಾರಿಯಾಗುವುದು ಹೇಗೆ? ಎಂದರೆ:—ಅದನ್ನು ಹೇಳುತ್ತಾರೆ. ಇಷ್ಟವನ್ನುಂಟುಮಾಡಿದರೂ ಅಥವಾ ಅನಿಷ್ಟವನ್ನುಂಟು ಮಾಡಿದರೂ ಸರಿಯೇ; ಸರ್ವರಲ್ಲಿಯೂ " ಸ ಇಮಂ ಸಕಲಂಲೋಕಂ ಪ್ರಸಾದ ಮುಪನೇಷ್ಯತಿ " (ಭಾ॥ ಅರ॥ ೧೯೦॥ ೯೬) ಎಂಬಂತೆ ದಾಕ್ಷಿಣ್ಯದಿಂದ ಇರುವಂತವನು. (ಅಥವಾ) ಅಶ್ವಮೇಧವೆಂಬ ಮಹಾಯಜ್ಞದಲ್ಲಿ ಸಮಸ್ತವಾದ ಭೂಮಿಯನ್ನೇ ದಕ್ಷಿಣೆಯಾಗಿವುಳ್ಳವನೆಂತಲಾದರೂ " ತತಶ್ಚೋರ ಕ್ಷಯಂ ಕೃತ್ವಾ ದ್ವಿಜೇಭ್ಯಃ ಪೃಥಿವೀಮಿಮಾಂ | ವಾಜಿಮೇಧೇ ಮಹಾಯಜ್ಞೇ ವಿಧಿವತ್ಕಲ್ಪ ಯಿಷ್ಯತಿ " (ಭಾರ॥ ಅರ॥ ೧೯೧॥ ೧॥ ೧೦) ಎಂಬ ವಚನಾನುಸಾರವಾಗಿ ಹೇಳಬಹುದು ॥೪೨೬॥

ಈ (೪೫)ನೇ ಶ್ಲೋಕದಲ್ಲಿ ಪ್ರಸ್ತುತಿಸಲ್ಪಡುವ (೧೦) ನಾಮಗಳಿಗೂ " ಋಚ್ಛತೀತಿ " ಋತುಃ " (೪೨೭) ಪ್ರೋಕ್ತಸ್ಸರ್ವಲಾಸಕರ್ಬುರ್ಗುಣೈಃ | ಶುಭಂಚ ದರ್ಶನಂ ಯಸ್ಯ ಮಂದಾನಾಂಚ " ಸುದರ್ಶನಃ " (೪೨೮) ॥ ಚಿದಚಿತ್ಕಾಲನಾತ್ " ಕಾಲೊ " (೪೨೯) ಗುಣೈರಾತ್ಮನಿಜೇ ದೃಶ್ಯೈಃ | ಪರೇಪದೇಸ್ಥಿತತ್ವಾಚ್ಚ " ಪರಮೇಷ್ಠೀ " (೪೩೦) ಪ್ರಕೀರ್ತಿತಃ ॥ ಇಹಾಮುತ್ರಸಮಂ ಸರ್ವಗ್ರಹಣಾತ್ಸ್ಯಾತ್ " ಪರಿಗ್ರಹಃ " (೪೩೧) | ನಷ್ಟೇ ಧರ್ಮೇ ಕಲ್ಕಿರೂಪೋಹ್ಯವತೀರ್ಯಮಹೀಭೃತಃ ॥ ಮ್ಲೇಚ್ಛಾದೀನ್ಹತವಾನ್ಯೋಸಾ " ಉಗ್ರ " (೪೩೨) ಇತ್ಯುಚ್ಯತೇ ಬುಧೈಃ| ಸಂಹಾರಸ್ಯೋಪಕರಣೈ ಸ್ಸಾಕಂ ಕಾಲಂ ಪ್ರತೀಕ್ಷಯನ್॥ "ಸಂವತ್ಸರಃ" (೪೩೩) ಸ್ಯಾತ್ಪ್ರಾಲೇಹ್ಯನಂತೇ ವಸತೀತಿಯಃ | ಶೀಘ್ರಾರ್ಥತ್ವಾದ್ದಕ್ಷಧಾತೊ ರ್ನಿಮೇಷಾದ್ದಸ್ಯಪೊಹತಾಃ ॥ ಯೇನಸಕಾಸ್ಯ ಚ್ಛೀಘ್ರಕಾರೀ " ದಕ್ಷ " (೪೩೪) ಇತ್ಯುಚ್ಯತೇ ಬುಧೈಃ | ಪಾಪಾನಿ ಶತ್ರವಲಾನ್ಯೇವ ಶಾನ್ತ್ವಾ ಭೋಕ್ತುಂಚಯೇಜನಾಃ ॥ ತೇಷಾಂ ವಿಶ್ರಾಮ ಭೂಮಿತ್ವಾತ್ " ವಿಶ್ರಾಮಃ " (೪೩೫) ಪರಿಕೀರ್ತಿತಃ | ಅಪಕಾರಿಷ್ವಪಿ

ಕ್ಷಾಂತೋ “ವಿಶ್ವದಕ್ಷಿಣ” (೪೨೬) ಉಚ್ಯತೇ ॥ ಯದ್ವಾಽಶ್ವಮೇಧೇ ಪೃಥಿವೀಂ ದಕ್ಷಿಣಾತ್ವೇನ ದತ್ತವಾನ್ | ಮಹೀಸುರೇಭ್ಯಃ ಕೃತ್ಸ್ನಾಂ ಯಸ್ಸಸ್ಮೃತೋ “ವಿಶ್ವದಕ್ಷಿಣಃ” ಎಂಬ ರೀತಿಯಾಗಿ ವಿವೃತಿಯನ್ನು ಕಾಣಬಹುದು

ಮೂ॥ ವಿಸ್ತಾರ ಸ್ಸ್ಥಾವರಸ್ಥಾಣುಃ ಪ್ರಮಾಣಂ
ಬೀಜಮವ್ಯಯಂ । ಅರ್ಥೋ ಽನರ್ಥೋ ಮಹಾಕೋ
ಶೋ ಮಹಾಭೋಗೋ ಮಹಾಧನಃ ॥೪೬॥

(೪೨೭ನೇ ನಾಮವು) ವಿಸ್ತಾರಃ,
ಓಮ್॥ ವಿಸ್ತಾರಾಯನಮಃ.

(ಶಂ॥ ಭಾ) ವಿಶಾಲಗಳಾದ ಲೋಕಗಳುಳ್ಳವನು. (ಮ) ವಿಶಾಲನಾದವನು, ಎಂದರೆ ಸರ್ವವ್ಯಾಪನಶೀಲನಾದ ವಿಭುವಾದವನು. (ವಿ॥ ಭಾ) ಕಲಿಯನ್ನು ನಿಗ್ರಹಿಸುವುದರಿಂದ ಕೃತಯುಗ ಧರ್ಮಪ್ರವರ್ತನವನ್ನಪೇಕ್ಷಿಸಿ ವೇದ ಮರ್ಯಾದೆಯನ್ನು “ತತೋಽಧರ್ಮ ವಿನಾಶೋವೈ ಧರ್ಮವೃದ್ಧಿಶ್ಚ ಭಾರತ| ಭವಿಷ್ಯತಿ ಕೃತೇಪ್ರಾಪ್ತೇ ಕ್ರಿಯಾವಾಂಶ್ಚ ಜನಸ್ತಥಾ” (ಭಾರ॥ ಅರ॥ ೧೯೧॥ ೭) ಎಂಬೀ ರೀತಿಯಾಗಿ ವಿಸ್ತಾರಪಡಿಸುವಂತವನು. ॥೪೨೭॥

(೪೨೮ನೇ ನಾಮವು) ಸ್ಥಾವರಸ್ಥಾಣುಃ,
ಓಮ್॥ ಸ್ಥಾವರಸ್ಥಾಣವೇನಮಃ

(ಶಂ॥ ಮ) ಸ್ಥಿತಿಶೀಲನಾದವನು ಸ್ಥಾವರನು; ಸ್ಥಿತಿಶೀಲಗಳಾದ ಪೃಥಿವ್ಯಾದಿ ಭೂತಗಳುಳ್ಳವನು ಸ್ಥಾಣುವೆನ್ನಲ್ಪಡುವನು ಸ್ಥಾವರಶ್ಚಾಸೌ ಸ್ಥಾಣುಶ್ಚ—ಸ್ಥಾವರನೂ ಸ್ಥಾಣುವೂ ಆದವನು ‘ಸ್ಥಾವರಸ್ಥಾಣುಃ’ ಎನ್ನಲ್ಪಡುವನು. (ವಿ॥ ಭಾ) ಈ ಪ್ರಕಾರವಾಗಿ ಧರ್ಮ ಸಂಸ್ಥಾಪನವನ್ನು ಮಾಡಿದಮೇಲೆ “ಸ್ಥಾಪಯಿತ್ವಾ ಸಮರ್ಯಾದಾಂ ಸ್ವಯಂಭೋ ವಿಹಿತಾಂ ಶುಭಾಂ” (ಭಾರ॥ ಆರ॥ ೧೯೧॥ ೭) ಎಂಬಂತೆ ಶಾಂತನಾಗಿರುವಂತವನು. ॥೪೨೮॥

## (೪೨೯ನೇ ನಾಮವು) ಪ್ರಮಾಣಮ್,

### ಓಮ್॥ ಪ್ರಮಾಣಾಯನಮಃ.

(ಶಂ॥ ಭಾ) ಜ್ಞಾನರೂಪದಿಂದ ಪ್ರಮಾಣನಾದವನು. (ಮ) ಜ್ಞಾನರೂಪನು. (ವಿ॥ ಭಾ) ಅನಂತರದಲ್ಲಿ ಕೃತಯುಗವರ್ತಿಗಳಾದ ಪ್ರಾಣಿಗಳಿಗೆ ಇದು ಹಿತವು, ಇದು ಅಹಿತವು, ಎಂಬ ವ್ಯವಸ್ಥೆಯನ್ನು ಮಾಡಿಕೊಡುವಂತವನು. ಇವನ ಶಕ್ತಿಲೇಶದಿಂದಲೇ ತಾನೇ ಪ್ರತ್ಯಕ್ಷಾದಿಗಳೂ ಪ್ರಮಾಣಗಳಾಗುವುವು. "ತಚ್ಛೀಲ ಮನುವರ್ತಂತೇ ಮನುಷ್ಯಾ ಲೋಕವಾಸಿನಃ" (ಭಾ॥ ಆರ॥ ೧೯೧॥ ೩) ಎಂಬೀ ವಚನವೂ ಈ ಅರ್ಥವನ್ನು ಬೋಧಿಸುವುದು. ॥೪೨೯॥

## (೪೩೦ನೇ ನಾಮವು) ಬೀಜಮವ್ಯಯಮ್,

### ಓಮ್॥ ಬೀಜಾವ್ಯಯಾಯನಮಃ.

(ಶಂ॥ ಭಾ) ಅನ್ಯಥಾ ಭಾವವ್ಯತಿರೇಕದಿಂದ ಕಾರಣನಾದವನು. ಇದು ಸವಿಶೇಷಣವಾದ ನಾಮವು. (ಮ) ಇಲ್ಲಿನ ಮಂತ್ರ ಸ್ವರೂಪವು. "ಬೀಜಾವ್ಯಯಾಯನಮಃ" ಎಂದು ಹೇಳಲ್ಪಡುವುದು. "ಅವ್ಯಯಾಯ ಬೀಜಾಯನಮಃ" ಎಂತಲೂ ಕೆಲವರು ಹೇಳುವರು. (ವಿ॥ ಭಾ) ಈ ರೀತಿಯಾಗಿ ಕಲಿಯೇ ಮೊದಲಾದ ದುಷ್ಕಾಲ ಬಲದಿಂದ ಧರ್ಮಮಾರ್ಗಕ್ಕೆ ಲೋಪ ಬಂದಾಗ ಪುನಃ ಅದನ್ನು ಅಂಕುರಿಸುವಂತೆ ಮಾಡುವುದರಿಂದ ನಾಶರಹಿತನಾದ ಮೂಲಕಾರಣನು. ॥೪೩೦॥

## (೪೩೧ನೇ ನಾಮವು) ಅರ್ಥಃ,

### ಓಮ್॥ ಅರ್ಥಾಯನಮಃ

(ಶಂ॥ ಭಾ) ಸುಖರೂಪನಾದಕಾರಣ ಸರ್ವರಿಂದಲೂ ಪ್ರಾರ್ಥಿಸಲ್ಪಡುವಂತವನು. (ವಿ॥ ಭಾ) ಪ್ರಯೋಜನಾಂತರ ಗಂಧ ಶೂನ್ಯನಾಗಿ ಭಕ್ತಿಮಾತ್ರವನ್ನೇ ಅವಲಂಬಿಸಿರುವ ಅಧಿಕಾರಿಗೆ ತಾನೇ ಪುರುಷಾರ್ಥವಾಗಿರುವಂತವನು. ॥೪೩೧॥

## (೪೩೨ನೇ ನಾಮವು) ಅನರ್ಥಃ,

ಓಮ್॥ ಅನರ್ಥಾಯನಮಃ.

(ಶಂ॥ ಭಾ) ಅವಾಪ್ತಸಮಸ್ತಕಾಮನಾದ ಕಾರಣ ಪ್ರಯೋಜನವಿಲ್ಲದವನು. (ವಿ॥ ಭಾ) ಸ್ವಲ್ಪವಾದ ಸುಕೃತವನ್ನು ಮಾಡಿದ ಅರ್ಥಕಾಮನು ಧನ (ಅರ್ಥ) ವನ್ನು ಅಪೇಕ್ಷಿಸುವುದರಿಂದ; ತಾನೇ ಪುರುಷಾರ್ಥವೆಂದು ಅವನಿಂದ ಅಪೇಕ್ಷಿಸಲ್ಪಡದವನು ॥೪೩೨॥

## (೪೩೩ನೇ ನಾಮವು) ಮಹಾಕೋಶಃ,

ಓಮ್॥ ಮಹಾಕೋಶಾಯನಮಃ.

(ಶಂ॥ ಭಾ) ಮಹತ್ತಾದ ಅನ್ನಮಯಾದಿ ಕೋಶಗಳೇ ಆಚ್ಛಾದಕವಾಗಿವುಳ್ಳವನು. (ಅನ್ನಮಯಾದಿ ಕೋಶಗಳ್ಯಾವದಂದರೆ ;—ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯಗಳೆಂಬ ೫ ಕೋಶಗಳ ) (ವಿ॥ ಭಾ) ಯಾವಾಗಲೂ ಸರ್ವರಿಗೂ ಸರ್ವವಿಧದಿಂದಲೂ ದಾನಮಾಡಿದರೂ ನ್ಯೂನವಾಗದ ಮಹತ್ತಾದ ಶಂಖಪದ್ಮಾದಿ ನಿಧಿಗಳನ್ನು ಮೇರುವೇ ಮೊದಲಾದ ಸ್ವರ್ಣ ಪರ್ವತವನ್ನೂ (ಕೋಶಾಗಾರ) ಧನಶಾಲೆಯಾಗಿವುಳ್ಳವನು ॥೪೩೩॥

## (೪೩೪ನೇ ನಾಮವು) ಮಹಾಭೋಗಃ,

ಓಮ್॥ ಮಹಾಭೋಗಾಯನಮಃ.

(ಶಂ॥ ಭಾ) ಅಧಿಕವಾದ ಸುಖಸ್ವರೂಪನು. (ವಿ॥ ಭಾ) ಅರ್ಥದಿಂದ ಸಾಧಿಸಲ್ಪಡುವ ಭೋಗವೂ "ಲಭತೇಚ ತತಃ ಕಾಮಾನ್ಮಯೈವ ವಿಹಿತಾನ್ ಹಿತಾನ್" (ಭಗವದ್ಗೀ॥ ೭॥ ೨೨) ಎಂಬಂತೆ ತನ್ನಿಂದಲೇ ಅಧಿಕವಾಗಿ ಪ್ರಾಪ್ತವಾಗುವುದರಿಂದ "ಮಹಾ ಭೋಗಃ" ಎನ್ನಲ್ಪಡುವನು. ॥೪೩೪॥

## (೪೩೫ನೇ ನಾಮವು) ಮಹಾಧನಃ,

ಓಮ್॥ ಮಹಾಧನಾಯನಮಃ.

(ಶಂ॥ ಭಾ) ಅಧಿಕವಾದ ಭೋಗಕ್ಕೆ ಸಾಧಕವಾದ ಧನವುಳ್ಳವನು. (ವಿ॥ ಭಾ) ಅತಿಕೃಪಣರಾದವರಿಗೆ ವಿಶೇಷವಾಗಿ ಕೊಡತಕ್ಕ ಮಹತ್ತಾದ ಧನವುಳ್ಳವನು. ಈ ಸರ್ವಾರ್ಥಗಳನ್ನೂ "ಮರೀಚಿ ಮಿಶ್ರೈ ರ್ದಕ್ಷೇಣ ತಥೈವಾನ್ಯೈ ರನಂತತಃ । ಧರ್ಮಃ ಪ್ರಾಪ್ತಸ್ತಥಾಚಾನ್ಯೈ ರರ್ಥಃ ಕಾಮಸ್ತಥಾಪರೈಃ" (ವಿಷ್ಣುಪು॥ ೧॥ ೧೮॥ ೨೩) ಎಂಬಂತೆ ಪ್ರಾಜ್ಞರು ವರ್ಣಿಸಿರುವರು. ॥೪೪೫॥

ಈ (೪೬)ನೇ ಶ್ಲೋಕದಲ್ಲಿರುವ (೯) ನಾಮಗಳಿಗೂ "ಪ್ರಬಲಂ ಯಃ ಕಲಿಂಹತ್ವಾ ಪ್ರವರ್ತ್ಯಚ ಕೃತಂಯುಗಂ । ವಿಸ್ತಾರ್ಯವೇದ ಮಾರ್ಗಾದಾಂ ಸ್ಥಿತೋ "ವಿಸ್ತಾರಃ" (೪೩೭) ಉಚ್ಯತೇ ॥ ಸ್ಥಾವರೀ ಕೃತ್ಯ ಧರ್ಮಾನ್ಯಶ್ಚಮೋಸ್ಥಾಸ್ಯತಿ ನಿತ್ಯಶಃ । ಯೇನಕೇನಾಪ್ಯಚಾಲ್ಯಸ್ಸ "ಸ್ಥಾವರಸ್ಥಾಣು" (೪೩೮)ರುಚ್ಯತೇ ॥ ಹಿತಾಹಿತಸಾಧಕತ್ವಾತ್ "ಪ್ರಮಾಣಂ" (೪೩೯) ಸ್ಮೃತಿಶ್ರುತಾದಿಷು । ಯೋಪ್ಯೈ ಕಲಿಯುಗಸ್ಯಾಂತೇ ಮುಹುದ್ಧರ್ಮ ಪ್ರರೋಹಣಾ ॥ ಕರೋತಿ ಭಕ್ತರಕ್ಷಾರ್ಥಂ ಸೋಚ್ಯತೇ "ಬೀಜಮವ್ಯಯಂ" (೪೪೦) ॥ ಪರಮೈಕಾಂತಿಭಿ ರ್ನಿತ್ಯಮಾಷಣಾತ್ರಯ ವರ್ಜಿತಃ । ಸ್ವಯಂ ಪ್ರಯೋಜನತಯಾ ಯಾಚ್ಯಮಾನೋ "ಽರ್ಥ" (೪೪೧) ಉಚ್ಯತೇ ॥ ಅರ್ಥಾರ್ಥಿನಾಽಲ್ಪಭಾಗ್ಯೇನ ನಿರ್ವ್ಯಾಜಾ ನಾರ್ಥ್ಯತೇ ಯತಃ । ತಸ್ಮಾ "ದನರ್ಥ" (೪೪೨) ನಾಮಾಸಾ ವೇದವಿದ್ಭಿಃ ಪ್ರಕೀರ್ತಿತಃ ॥ ಶಂಖ ಪದ್ಮಾದಿ ನಿಧಯೋ ಮಹಾಂತೋ ರೋಹಣೋ ಗಿರಿಃ । ಕೋಶ ಭಾಂಡ ಗೃಹಾ ಯಸ್ಯ "ಮಹಾಕೋಶ" (೪೪೩) ಸ್ಸ ಉಚ್ಯತೇ ॥ ಅರ್ಥಸಾಧ್ಯಃ ಕಾಮಭೋಗೋ ಯಸ್ಮಾದೇಷಾಂ ಮಹಾನಿತಿ । "ಮಹಾಭೋಗ" (೪೪೪) ಸ್ಸವಿಜ್ಞೇಯೋ ಹ್ಯಪ್ರಾರ್ಥ್ಯ ಶ್ಚಿಂತಿತಾರ್ಥದಃ ॥ ಅನಿರೂಪ್ಯಾತಿ ಕೃಪಣ ಪ್ರದೇಯಂ ಧನಮಕ್ಷಯಂ । ಯಸ್ಯೈವಾಸ್ತೀತಿ ಸತತಂ ಸ "ಮಹಾಧನ" (೪೪೫) ಈರಿತಃ ॥" ಎಂಬಂತೆ ವಿವೃತಿಯನ್ನು ಕಾಣಬಹುದು.

ಮೂ ॥ ಅನಿರ್ವಿಣ್ಣ ಸ್ಥವಿಷ್ಠೋ ಭೂ ರ್ಧರ್ಮಯೂ
ಪೋ ಮಹಾಮಖಃ। ನಕ್ಷತ್ರನೇಮಿ ರ್ನಕ್ಷತ್ರೀ ಕ್ಷ
ಮಃ ಕ್ಷಾಮ ಸ್ಸಮೀಹನಃ ॥೪೭॥

## (೪೩೬ನೇ ನಾಮವು) ಅನಿರ್ವಿಣ್ಣಃ,

### ಓಮ್॥ ಅನಿರ್ವಿಣ್ಣಾಯನಮಃ

(ಶಂ॥ ಭಾ) ಅವಾಪ್ತ ಸಮಸ್ತ ಕಾಮನಾಪಕಾರಣ (ತನಿಗೆ ತಾನೇ ಹೊಂದಲ್ಪಟ್ಟ ಸರ್ವೇಷ್ಟಾರ್ಥವುಳ್ಳವನಾದ ಕಾರಣ) ವ್ಯಸನವಿಲ್ಲದವನು. (ವಿ॥ ಭಾ) ಈ ರೀತಿಯಾಗಿ ಸೃಷ್ಟ್ಯಾದಿಗಳನ್ನೂ ಅವರುಗಳಿಗೆ ಅಪೇಕ್ಷಿತಗಳಾದ ಇಷ್ಟಾರ್ಥಪ್ರಧಾನಗಳನ್ನೂ ಪುನಃಪುನಃ ಮಾಡುತಲಿದ್ದರೂ ಸಂಸಾರಿಗಳು ಶಬ್ದಾದಿ ವಿಷಯಗಳಲ್ಲಿರುವ ಪ್ರೀತಿಯಿಂದ ತನ್ನನ್ನು ಲಕ್ಷ್ಯವಿಡದೇ ಇರುವಾಗ ತಾನು ಇದುವರೆಗೂ ಮಾಡಿಪ ಕೃಷಿಗಳೆಲ್ಲವೂ ನಿಷ್ಫಲವಾದವೆಂದು ಯೋಚಿಸದೆ ಅವರುಗಳ ರಕ್ಷಣಕ್ಕಾಗಿ ಪುನಶ್ಚ ಅವರನ್ನು ಸ್ವಾಧೀನಪಡಿಸಿಕೊಳ್ಳೋಣವೆಂಬ ದುರಾಶೆಯಿಂದ ಸ್ವಲ್ಪವೂ ವಿರಾಮವನ್ನು ಹೊಂದದೆ ಪುನಃಪುನಃ ಪ್ರಯತ್ನಿಸುವಂತವನು. ಇದರಿಂದತಾನೆ ಇವನಿಗೆ ಜಗದ್ವ್ಯಾಪಾರವು "ಅವ್ಯುಚ್ಛಿನ್ನಾಸ್ತತಸ್ತ್ವೇತೇ ಸರ್ಗಸ್ಥಿತ್ಯಂತ ಸಂಯಮಾಃ" (ವಿ॥ ಪು॥ ೧॥ ೯॥ ೧) ಎಂಬಂತೆ ವಿರಾಮವಿಲ್ಲದೆ ಇರುವುದು. ॥೪೩೬॥

## (೪೩೭ನೇ ನಾಮವು) ಸ್ಥವಿಷ್ಠಃ,

### ಓಮ್॥ ಸ್ಥವಿಷ್ಠಾಯನಮಃ

(ಶಂ॥ ಭಾ) "ಅಗ್ನಿರ್ಮೂರ್ಧಾ ಚಕ್ಷುಷೀ ಚಂದ್ರಸೂರ್ಯೌ" (ಮು॥ ೩॥ ೪) ಎಂಬಂತೆ ವಿರಾಡ್ರೂಪಿಯಾದವನು (ವಿ॥ ಭಾ) ಶಿಂಶುಮಾರವೆಂಬ ಮೊಸಳೆಯ ಆಕಾರದಿಂದ ನಕ್ಷತ್ರಮಯವಾಗಿ "ತಾರಾಮಯಂ ಭಗವತಃ ಶಿಂಶುಮಾರಾಕೃತಿ ಪ್ರಭೋಃ" (ವಿ॥ ಪು॥ ೨॥ ೯॥ ೧) ಎಂಬಂತೆ ಸ್ಥೂಲವಾಗಿರುವಂತವನು. ॥೪೩೭॥

## (೪೩೮ನೇ ನಾಮವು) ಭೂಃ,

### ಓಮ್॥ ಭುವೇನಮಃ.

(ಶಂ॥ ಮ) ಅಭೂಃ ಇತಿ ಪದಚ್ಛೇದವು. ಜನ್ಮವಿಲ್ಲದವನು. (ವಿ॥ ಭಾ) ಭೂಃ—ಧ್ರುವನಿಗೂಕೂಡ ಧಾರಕನಾದಕಾರಣ ಸರ್ವಾಧಾರನು.

" ತಸ್ಯಪೃಚ್ಛೇ ಧ್ರುವಸ್ಥಿತಃ " (ವಿ|| ಪು|| ೨) ಎಂದು ತಾನೇ ಹೇಳಿರುವರು. ||೪೩೮||

## (೪೩೯ನೇ ನಾಮವು) ಧರ್ಮಯೂಪಃ,

### ಓಮ್|| ಧರ್ಮಯೂಪಾಯನಮಃ.

(ಶಂ|| ಮ) ಯೂಪಸ್ತಂಭದಲ್ಲಿ ಪಶುವಿನಂತೆ ಭಗವದಾರಾಧನ ರೂಪಗಳಾದ ಧರ್ಮಗಳು ಅವನಲ್ಲಿ ಕಟ್ಟಲ್ಪಡುವುದರಿಂದ " ಧರ್ಮಯೂಪಃ ' (ವಿ||ಭಾ) ಧರ್ಮವೆಂಬ ತತ್ವವನ್ನು ಶಿರಸ್ಸೆಂಬ ಅವಯವವನ್ನಾಗಿ ವಹಿಸಿರುವಂತವನು. ಈ ಅರ್ಥವು " ಧರ್ಮೋಮೂರ್ಧಾನಮಾಶ್ರಿತಃ | ತಚ್ಛಿರೋ ಧರ್ಮಃ " ಎಂಬೀ ಪ್ರಮಾಣಗಳಲ್ಲಿ ಪ್ರಸಿದ್ಧವು ||೪೩೯||

## (೪೪೦ನೇ ನಾಮವು) ಮಹಾಮಖಃ,

### ಓಮ್| ಮಹಾಮಖಾಯನಮಃ.

(ಶಂ|| ಭಾ) ಯಾವ ಪರಮಾತ್ಮನಲ್ಲಿ ಸಮರ್ಪಿಸಲ್ಪಟ್ಟ ಮಾತ್ರದಲ್ಲಿಯೇ ಸಮಸ್ತ ಯಜ್ಞಗಳೂ ಮೋಕ್ಷರೂಪವಾದ ಮಹಾ ಫಲವನ್ನು ಕೊಡುವುದರಲ್ಲಿ ಸಮರ್ಥಗಳಾಗುವುವೊ ; ಅಂತವನು " ಮಹಾಮಖಃ ', ಎನ್ನಲ್ಪಡುವನು (ವಿ|| ಭಾ) ಧರ್ಮಶರೀರನಾದಕಾರಣ ಪೂಜ್ಯವಾದ ಯಜ್ಞವನ್ನು ಅವಯವವಾಗಿ ವುಳ್ಳವನು (ಮ) ಸಮಸ್ತ ಯಜ್ಞಗಳೂ ಯಾವ ಪರಮಾತ್ಮಾಧೀನಗಳಾಗಿರುವುವೊ ಅವನು ' ಮಹಾಮಖಃ ' ಎನ್ನಲ್ಪಡುವನು. ||೪೪೦||

## (೪೪೧ನೇ ನಾಮವು) ನಕ್ಷತ್ರನೇಮಿಃ,

### ಓಮ್|| ನಕ್ಷತ್ರನೇಮಯೇನಮಃ.

(ಶಂ|| ಭಾ) ಧ್ರುವ ಸಂಜ್ಞಿತವಾದ ಜ್ಯೋತಿಶ್ಚಕ್ರದಲ್ಲಿ ಚಂದ್ರ ಸೂರ್ಯಾದಿಗಳಾದ ಸಮಸ್ತ ಗ್ರಹಗಳೂ ಅಶ್ವಿನಿ ಮೊದಲಾದ ನಕ್ಷತ್ರಗಳೊಡನೆ ಕೂಡಿ ವಾಯುವೆಂಬ ಪಾಶದಿಂದ ಬಂಧಿಸಲ್ಪಟ್ಟಿರುವುವೆಂಬದಾಗಿ ಶ್ರೀವಿಷ್ಣುಪುರಾಣದಲ್ಲಿ ಹೇಳಿರುವಂತೆ ಧ್ರುವನು ಯಾವ ತಾರಾಮ

ಯವಾದ ಶಿಂಶುಮಾರ ಚಕ್ರದ ಪುಚ್ಛಪ್ರದೇಶದಲ್ಲಿ ಜ್ಯೋತಿಶ್ಚಕ್ರವನ್ನು ತಿರಿಗಿಸುತ್ತಾ ಇರುವನೋ, ಅಂತಹ ಶಿಂಶುಮಾರಚಕ್ರದ ಮಧ್ಯದಲ್ಲಿದ್ದು ಕೊಂಡು ಚಕ್ರದ ಮಧ್ಯಾವಯವವು ಹೇಗಾದರೆ ಚಕ್ರದ ಗತಿಪ್ರವರ್ತಕ ವಾಗಿರುವುದೊ ಅದರಂತೆ ಜ್ಯೋತಿಶ್ಚಕ್ರಕ್ಕೆ ಪ್ರವರ್ತಕನಾದ ವಿಷ್ಣುವು " ನಕ್ಷತ್ರನೇಮಿಃ " ಎನ್ನಲ್ಪಡುವನು. (ವಿ|| ಮ) ಜ್ಯೋತಿಶ್ಚಕ್ರಪ್ರವರ್ತಕನು. ||೪೪೧||

## (೪೪೨ನೇ ನಾಮವು) ನಕ್ಷತ್ರೀ,
### ಓಮ್|| ನಕ್ಷತ್ರಿಣೇನಮಃ.

(ಶಂ|| ಭಾ) " ನಕ್ಷತ್ರಾಣಾಮಹಂಶಶೀ " (ಭ|| ಗೀ|| ೧೦|| ೨೧) ಎಂಬಂತೆ ಚಂದ್ರರೂಪನಾದವನು. (ವಿ|| ಭಾ) ಶಿಂಶುಮಾರಾಕಾರವಾದ ನಕ್ಷತ್ರ ರೂಪನನ್ನು ಧರಿಸಿದವನು. (ಮ) ನಕ್ಷತ್ರಗಳಿಗೆ ಆಧಾರನು. ||೪೪೨||

## (೪೪೩ನೇ ನಾಮವು) ಕ್ಷಮಃ,
### ಓಮ್|| ಕ್ಷಮಾಯನಮಃ.

(ಶಂ|| ಭಾ) ಸಮಸ್ತ ಕಾರ್ಯಗಳಲ್ಲಿಯೂ ಸಮರ್ಥನಾದುದರಿಂದಲಾದರೂ " ಕ್ಷಮಯಾ ಪೃಥಿವೀಸಮಃ" (ಶ್ರೀರಾ|| ಬಾ|| ೧|| ೧೮) ಎಂಬಂತೆ (ಮ|| ಶಂ) ಸಹನವುಳ್ಳವನಾದುದರಿಂದಲಾದರೂ; (ವಿ|| ಭಾ) ಈರೀತಿಯಾಗಿ ಸಕಲಲೋಕ ಭಾರವನ್ನು ಲಕ್ಷ್ಯವಿಲ್ಲದೆ ವಹಿಸುವುದರಿಂದಲಾದರೂ " ಕ್ಷಮಃ " ಎನ್ನಲ್ಪಡುವನು. ||೪೪೩||

## (೪೪೪ನೇ ನಾಮವು) ಕ್ಷಾಮಃ,
### ಓಮ್|| ಕ್ಷಾಮಾಯನಮಃ.

(..|| ಭಾ) ವಿನಾಶಸ್ವಭಾವವುಳ್ಳ ಸರ್ವ ವಿಕಾರಗಳಲ್ಲಿಯೂ ಸ್ವಾತ್ಮರೂಪದೊಡನೆ ಇರುವಂತವನು (ವಿ|| ಭಾ) ಅವಾಂತರಪ್ರಳಯದಿಂದುಂಟಾದ ಕ್ಷಯದಿಂದ ಕೆಲವು ನಕ್ಷತ್ರಗಳಿಂದ ನ್ಯೂನವಾಗಿರುವಂತವನು,

ಈ ಅರ್ಥವು " ಯಾವನ್ಮಾತ್ರೇ ಪ್ರದೇಶೇತು ಮೈತ್ರೇಯಯಾವಸ್ಥಿತೋ ಧ್ರುವಃ | ಕ್ಷಯಮಾಯಾಂತಿತಾವತ್ತು ಭೂಮೇರಾಭೂತಸಂಪ್ಲವೇ " (ವಿ|| ಪು|| ೨|| ೮|| ೯೭) ಎಂಬೀ ವಚನದಲ್ಲಿ ಪ್ರಸಿದ್ಧವಾಗಿರುವುದು. (ಮ) ಅಣುವಾದ ವಸ್ತುಗಳಲ್ಲಿಯೂಕೂಡ ಅನ್ತಃಪ್ರವಿಷ್ಟನಾದಕಾರಣ ಕೃಶನಾದವನು. ||೪೪೪||

## (೪೪೫ನೇ ನಾಮವು) ಸಮೀಹನಃ,

### ಓಮ್|| ಸಮೀಹನಾಯನಮಃ

(ಶಂ|| ಮ) ಸೃಷ್ಟ್ಯಾದಿ ವ್ಯಾಪಾರಗಳಿಗೋಸ್ಕರ ಚನ್ನಾಗಿ ಪ್ರಾರ್ಥಿಸಲ್ಪಡುವಂತವನು. (ವಿ|| ಭಾ) ಅನಂತರದಲ್ಲಿ ಸೃಷ್ಟಿಕಾಲವು ಪ್ರಾಪ್ತವಾದಾಗ ಸರ್ವರನ್ನೂ ಯಾವಾಗ್ಯೂ ತಮ್ಮತಮ್ಮ ಅಧಿಕಾರದಲ್ಲಿ ಆಜ್ಞಾಪಿಸುವಂತವನು. ||೪೪೫||

ಈ ರೀತಿಯಾಗಿ (೪೭)ನೇ ಶ್ಲೋಕದಲ್ಲಿ ಪ್ರತಿಪಾದಿಸಲ್ಪಡುವ (೧೦) ನಾಮಗಳಿಗೂ " ಅನಿರ್ವಿಣ್ಣೋ " (೪೩೬) ಜಾಗರೂಕೋ ಜಗದ್ವ್ಯಾಪಾರ ಸಂತತೌ | ಶಿಂಶುಮಾರಾಕೃತಿತಯಾ ತಾರಾ ರೂಪೇಣ ಸರ್ವದಾ || ಸ್ಥೌಲ್ಯಾತ್ " ಸ್ಥವಿಷ್ಠ " (೪೩೭) ಸ್ಸಂಪ್ರೋಕ್ತ ಸ್ಸಪಾಪಘ್ನಃ ಪಾಪನಾಶನಃ | ಔತ್ತಾನಪಾದಿ ಸಂಬಂಧಾ ತ್ಸರ್ವಾ ಧಾರತಯಾ ತಥಾ || ಭವತೀಚ " ಭೂಃ " (೪೩೮) ಪ್ರೋಕ್ತೋ ಭಕ್ತಾನಾಂ ಭೂತಿದೋ ಮನುಃ | ಉತ್ತಮಾಂಗ ತಯಾ ಧರ್ಮತತ್ವಂ ಯಾತೀತಿ ಸರ್ವದಾ|| " ಧರ್ಮಯೂಪ " (೪೩೯) ಸ್ಸಮಾಖ್ಯಾತೋ ಹ್ಯಪ್ಯಷ್ಟರ್ಣೋ ಧರ್ಮದಾಯಕಃ | ಧರ್ಮದೇಹ ತಯಾ ಪ್ರೋಕ್ತೋ ಯಜ್ಞೋಸ್ಯಾವಯವೋಯತಃ|| ಅತೋ " ಮಹಾಮುಖಃ " (೪೪೦) ಪ್ರೋಕ್ತೋ ಹ್ಯಷ್ಟರ್ಣಃ ಕರ್ಮಕಾರಕಃ | ಯನ್ನಕ್ಷತ್ರಾತ್ಮಕಂ ಚಕ್ರಂ ಜ್ಯೋತೀ ರೂಪಮನಾಮಯಂ || ಯಸ್ತಂ ನಿತ್ಯಂ ಭ್ರಾಮಯತಿ ಭ್ರಮನ್ತ ಮನುಯಾತಿಚ | " ನಕ್ಷತ್ರನೇಮಿ " (೪೪೧) ರ್ವಿಜ್ಞೇಯೋ ನವಾರ್ಣೋ ಭ್ರಮನಾಯಕಃ|| ಶಿಂಶುವಾರಾಕೃತಿ ಪ್ರೋಕ್ತಂ ಯದ್ರೂಪಂ ಜ್ಯೋತಿಷಾಂ ದಿವಿ | ತದ್ವ್ಯಸ್ಯಾತ್ಸ " ನಕ್ಷತ್ರೀ " (೪೪೨) ಸಪ್ತಾರ್ಣೋ ಲೋಕಪಾವನಃ || ಅನಾ

ಯೋಗೇನ ನಿಖಿಲ ಭಾರಂಚ ಭುವನಸ್ಯಯಃ | ಸಹತೇ ಸ " ಕ್ಷಮಃ " (೪೪೩) ಪ್ರೋಕ್ತ ಷ್ಷಡರ್ಣಃ ಕ್ಷಾಂತಿ ದಾಯಕಃ ॥ ಅವಾಂತರಲಯೇಕ್ಷೈಶ್ಚ ತ್ರ್ಯೈಕ್ಷೀಣಶ್ಚಾತುರಾಗಣೈ ಸ್ಸ್ಮೃತಃ | " ಕ್ಷಾಮೋ " (೪೪೪) ಧ್ರುವ ಸಮಾಪಸ್ಸ ಕ್ಷ್ಚತುರ್ನಕ್ಷತ್ರ ಸಂಯುತಃ ॥ ಸ್ವಸ್ವಾಧಿಕಾರೇ ಸರ್ವಾನ್ಹಿ ಯಸ್ಸಮಾಹತಿ ಸೃಷ್ಟಿಷು | " ಸಮಾಹನ " (೪೪೫) ಸ್ಸವಿಜ್ಞೇಯ ಸ್ತ್ವಷ್ಟಾರ್ಣಃ ಕಾರ್ಯದಾಯಕಃ " ಎಂಬಂತೆ ವಿವೃತಿಯನ್ನು ಕಾಣಬಹುದು.

ಮೂ॥ ಯಜ್ಞ ಇಜ್ಯೋ ಮಹೇಜ್ಯಶ್ಚ ಕ್ರತು
ಸ್ಸತ್ರಂ ಸತಾಂಗತಿಃ | ಸರ್ವದರ್ಶೀ ನಿವೃತ್ತಾ
ತ್ಮಾ ಸರ್ವಜ್ಞೋ ಜ್ಞಾನಮುತ್ತಮಂ ||೪೮||

(೪೪೬ನೇ ನಾಮವು) ಯಜ್ಞಃ,

ಓಮ್॥ ಯಜ್ಞಾಯನಮಃ.

(ಶಂ॥ ಭಾ) " ಯಜ್ಞೋವೈ ವಿಷ್ಣುಃ " (ತೈ॥ ಸಂ॥ ೧॥ ೫॥ ೫) ಎಂಬಂತೆ ಸರ್ವಯಜ್ಞ ಸ್ವರೂಪನು ; ಅಥವಾ ಸರ್ವದೇವತೆಗಳ ಸೃಷ್ಟಿಯನ್ನು ಮಾಡುವುದಕ್ಕಾಗಿ ಯಜ್ಞಾಕಾರದಿಂದ ಪ್ರವರ್ತಿಸುವಂತವನು. (ವಿ॥ ಭಾ) " ಇಜ್ಯಾ ಫಲಸ್ಯ ಭೋರೇಷಾ ಇಜ್ಯಾಚಾತ್ರ ಪ್ರತಿಷ್ಠಿತಾ ॥ ತತಶ್ಚಾಜ್ಯಾಹುತಿ ದ್ವಾರಾ ಪೋಷಿತಾಸ್ತೇ ಹವಿರ್ಭುಜಃ " (ಶ್ರೀವಿಷ್ಣು ಪು॥ ೧॥ ೮॥ ೧೦೯) ಎಂಬಂತೆ ಯಜ್ಞವಾಗಿಯೂ ಅದರ ಸಾಧನವಾಗಿಯೂ ಅದರ ಫಲವಾಗಿಯೂ ಹೇಳಲ್ಪಡುವುದರಿಂದ ಯಜ್ಞಸ್ವರೂಪನು. ||೪೪೬||

(೪೪೭ನೇ ನಾಮವು) ಇಜ್ಯಃ,

ಓಮ್॥ ಇಜ್ಯಾಯನಮಃ.

(ಶಂ॥ ಭಾ) ಫಲಪ್ರದನಾದಕಾರಣ ಯಜ್ಞಕರ್ಮದಿಂದ ಆರಾಧಿಸಲ್ಪಡತಕ್ಕವನು ಇವನೇ ಆದುದರಿಂದ " ಯೇಯಜಂತಿ ಮಖೈಃ ಪುಣ್ಯೈರ್ದೇವತಾದೀನ್ ಪಿತೄನಪಿ | ಆತ್ಮಾನ ಮಾತ್ಮನಾ ನಿತ್ಯಂ ವಿಷ್ಣುಮೇವ

ಯಜಂತಿತೇ " ಎಂಬ ಹರಿವಂಶ ಪ್ರಮಾಣವು ಇವನನ್ನು ಇಜ್ಯನೆನ್ನು ವುದು. (ವಿ॥ ಭಾ) " ಯೇ ಯಜಂತಿ ಪಿತೄನ್ ದೇವಾ ನ್ಬ್ರಾಹ್ಮಣಾ ನ್ಸಹುತಾಶನಾನ್ । ಸರ್ವ ಭೂತಾಂತರಾತ್ಮಾನಂ ವಿಷ್ಣುಮೇವ ಯಜಂ ತಿತೆ " (ಭಾ॥ ಶಾಂ॥ ೩೪೬॥ ೨೯) " ಯೇಪ್ಯನ್ಯದೇವತಾ ಭಕ್ತಾಃ " (ಗೀ॥ ೯॥ ೨೩) " ವರ್ಣಾಶ್ರಮಾಚಾರವತಾ " (ಮನುಸ್ಮೃ) ಇತ್ಯಾ ದಿ ಪ್ರಮಾಣೋಪಪತ್ತಿಗಳಿಂದ ಕಾಮಾಧಿಕಾರಿಗಳಿಂದ ಇಂದ್ರಾದಿದೇವತಾ ಮೂಲಕವಾಗಿ ಆರಾಧಿಸಲ್ಪಡುವಂತವನು. (ಮ) ಹೊಂದಲ್ಪಡುವಂತ ವನು. " ಈ ಜಗತಿ ಕುತ್ಸನಯೋಃ." ॥೪೪೭॥

## (೪೪೮ನೇ ನಾಮವು) ಮಹೇಜ್ಯಃ,

### ಓಮ್॥ ಮಹೇಜ್ಯಾಯನಮಃ.

(ಶಂ॥ ಭಾ) ಪೂಜ್ಯರಾದ ಸರ್ವದೇವತೆಗಳಿಗಿಂತಲೂ ಅಧಿಕ ಪೂಜ್ಯ ನಾದ ಪರಮಾತ್ಮನು. (ವಿ॥ ಭಾ) ಫಲಸಂಗ ಕರ್ತೃತ್ವತ್ಯಾಗಿಗಳಾದ ವಿಲಕ್ಷಣಾಧಿಕಾರಿಗಳಿಂದ ಸಾಕ್ಷಾತ್ಪರಮಾತ್ಮನಾದ ತನ್ನನ್ನೇ ಉದ್ದೇ ಶಿಸಿ ಮಾಡಲ್ಪಡುವ ಮಹಾ ಯಜ್ಞಸ್ವರೂಪನು. ॥೪೪೮॥

## (೪೪೯ನೇ ನಾಮವು) ಕ್ರತುಃ,

### ಓಮ್॥ ಕ್ರತವೇನಮಃ.

(ಶಂ॥ ಭಾ) ಯೂಪ ಸಹಿತವಾದ ಯಜ್ಞಸ್ವರೂಪನು. (ವಿ॥ ಭಾ) ಪಂಚಮಹಾಯಜ್ಞಗಳು, ಔಪಾಸನಾದಿಗಳು, ಏಳು ಪಾಕಯಜ್ಞಗಳು, ಶ್ರುತ್ಯುಕ್ತಗಳಾದ ಅಗ್ನಿಹೋತ್ರಾದಿಗಳು, ಏಳು ಹವಿರ್ಯಜ್ಞಗಳು, ಯಜ್ಞ ಶಬ್ದಗಳಿಂದ ಹೇಳಲ್ಪಡುವ ಅಗ್ನಿಷ್ಟೋಮಾದಿಗಳು, ಏಳು ಸೋ ಮಸವನಗಳು ; ಎಂಬೀ ಯಜ್ಞಾದಿ ಕರ್ಮಗಳಿಂದ ಆರಾಧಿಸಲ್ಪಡುವಂತ ವನು. (ಮ) ಸಂಕಲ್ಪರೂಪನು. ॥೪೪೯॥

## (೪೫೦ನೇ ನಾಮವು) ಸತ್ರಮ್,

### ಓಮ್॥ ಸತ್ರಾಯನಮಃ.

(ಶಂ॥ ಭಾ) "ಆಸೀತ್ರ॥ ಉಪೈತಿ" ಎಂಬೀ ಧಾತುರೂಪವಾದ ಚೋದನೆಯನ್ನು ಲಕ್ಷಣವಾಗಿಯುಳ್ಳ ಸತ್ರವೆಂಬ ಯಾಗಸ್ವರೂಪನು * ಅದವಾ ಸತ್ಪುರುಷರನ್ನು (ಮ) ರಕ್ಷಿಸುವಂತವನು. (ವಿ॥ ಭಾ) ಬಹು ದಿನ ಪರ್ಯಂತವಾಗಿ ಅನೇಕ ಯಜಮಾನರು ಕೂಡಿ ಮಾಸೋಪವಾಸಾದಿ ನಿಯಮಗಳೊಡನೆ ಮಾಡಲ್ಪಡುವ ಸತ್ರಯಾಗದಿಂದ ಸದಾ ಆರಾಧಿಸಲ್ಪಡುವಂತವನು. ॥೪೫೦॥

## (೪೫೧ನೇ ನಾಮವು) ಸತಾಂಗತಿಃ,

## ಓಮ್॥ ಸತಾಂಗತಯೇನಮಃ.

(ಶಂ॥ ಭಾ) ಮೋಕ್ಷಾಸಕ್ತರಿಗೆ ಇವನಿಗಿಂತಲೂ ಅಧಿಕವಾದ ಗತಿಯು ಇಲ್ಲವಾದುದರಿಂದ "ಸತಾಂಗತಿಃ" ಎನ್ನಲ್ಪಡುವನು. (ವಿ॥ ಭಾ) ಈ ರೀತಿಯಾಗಿ ಇದುವರಿಗೂ ಪ್ರವೃತ್ತಿ ಧರ್ಮನಿಷ್ಠರಿಗೆ ಗತಿಯಾಗಿ

---

* (ಮುಖ್ಯವಾಗಿ ಇಲ್ಲಿ "ಯೂಪಸ್ತಂಭಸಹಿತವಾದದ್ದು ಕ್ರತುವೆಂತಲೂ, ಅದಿಲ್ಲದ್ದು ಯಾಗವೆಂತಲೂ ಪೂರ್ವ ಮೀಮಾಂಸಾ ಪರಿಭಾಷಾ ಸಿದ್ಧವಾದದ್ದನ್ನು ಈ ಯರಡು ನಾಮಗಳೂ ಬೋಧಿಸುವುವೆಂದರಿಯಬೇಕು. ಕೆಲವು ಯಜ್ಞಗಳು ಒಂದು ದಿನ, ಎರಡು ದಿನ, ಮೂರು ದಿನ ಎಂಬೀಕ್ರಮದಿಂದ ಅನುಷ್ಠಿಸಲ್ಪಡತಕ್ಕದ್ದಾಗಿರುವುವು ಈ ರೀತಿಯಿಂದ ಅನುಷ್ಠಿಸಲ್ಪಡುವ ಯಾಗಗಳು ೧೧ ದಿನ ಪರ್ಯಂತವಾಗಿ ಅಹೀನಗಳೆಂತಲೂ, ತ್ರಯೋದಶಾಹ ಚತುರ್ದಶಾಹಾದಿಗಳು ಸತ್ರಗಳೆಂತಲೂ, ದ್ವಾದಶಾಹಮಾತ್ರವು ಅಹೀನ ಸತ್ರವೆಂಬೀಯರಡು ನಾಮ ಉಳ್ಳದ್ದೆಂತಲೂ ತಿಳಿಯಬೇಕು ಯಜತಿ ಎಂಬ ಚೋದನೆಯುಳ್ಳದ್ದೂ ಅನೇಕ ಯಜಮಾನಕವಾಗಿರಬೇಕೆಂಬ ನಿರ್ಬಂಧವಿಲ್ಲದ್ದೂ ಅಹೀನಲಕ್ಷಣವು. ಅದು ಹೇಗೆಂದರೆ ? ಯಜಧಾತುವಿನಿಂದ ಶ್ರುತಿಯಲ್ಲಿ ಚೋದಿತವಾದರೆ ಅಹೀನವಾಗುವುದು : ಯಜತಿ ಎಂಬ ಯಜಧಾತುವನ್ನೇ ಚೋದನೆಯಾಗಿ ವುಳ್ಳದ್ದು "ಯಜತಿ ಚೋದನಾ" ಎಂದರ್ಥವು. ಸತ್ರವೆಂಬುದಕ್ಕೆ "ಆಸೀರನ್ ಉಪೇಯುಃ" ಎಂಬ ಚೋದನಾದ್ವಯವಿರುವುದು. ಇಲ್ಲಿನ ಬಹುವಚನದಿಂದಲೇ ಯಜಮಾನಬಹುತ್ವವೂ ಇದಕ್ಕೆ ತೋರಲ್ಪಡುವುದು. ಸತ್ರಮಾಸೀರನ್, ಋದ್ಧಿಕಾಮಾ ಉಪೇಯುಃ" ಇತ್ಯಾದಿ ವಾಕ್ಯಗಳು ಯಜಮಾನ ಬಹುತ್ವವನ್ನು ಹೇಳುವುವಷ್ಟೆ. "ಆಸಧಾತು ಉಪೇತ್ಯುಪಸರ್ಗ ಪೂರ್ವಕವಾದ ಇಣ್‌ಧಾತು" ಎಂಬೀಯರಡು ಧಾತುಗಳಿಂದ ಚೋದಿತಗಳಾಗುವ ಯಾಗಗಳೂ ಅನೇಕ ಯಜಮಾನಕವಾದವುಗಳೂ ಸತ್ರವೆನ್ನಲ್ಪಡುವುವೆಂದರಿಯಬೇಕು.

ರುವಿಕೆಯನ್ನು ಹೇಳಿ ಇನ್ನು ಮುಂದೆ ನಿವೃತ್ತಿ ಧರ್ಮ ನಿಷ್ಠರಿಗೆ ಗತಿಯಾಗಿರುವಿಕೆಯನ್ನು ಹೇಳುವುವು. (ಶಂ) ಪ್ರಕಾರವೇ ಅರ್ಥವು. ||೪೫೦||

(೪೫೧ನೇ ನಾಮವು) ಸರ್ವದರ್ಶೀ,

ಓಮ್|| ಸರ್ವದರ್ಶಿನೇನಮಃ.

(ಶಂ || ಭಾ )ಪ್ರಾಣಿಗಳ ಪುಣ್ಯಾಪಾಪಾತ್ಮಕಗಳಾದ ಸಕಲ ಕರ್ಮಗಳನ್ನೂ ನೋಡುವಂತವನು. (ಮ) ಸಮಸ್ತನನ್ನೂ ನೋಡುವಂತವನು. (ವಿ|| ಭಾ) ಪ್ರವೃತ್ತಿನಿವೃತ್ತಿಗಳೆಂಬ ದ್ವಿವಿಧಗಳಾದ ಧರ್ಮಗಳನ್ನೂ ಅಧ್ಯಕ್ಷನಾಗಿ ಕಾಣುವಂತವನು. |೪೫೧||

(೪೫೨ನೇ ನಾಮವು) ನಿವೃತ್ತಾತ್ಮಾ,

ಓಮ್|| ನಿವೃತ್ತಾತ್ಮನೇನಮಃ.

(ಶಂ|| ಭಾ) ಸ್ವಭಾವದಿಂದಲೇ ವಿಮುಕ್ತವಾದ ಆತ್ಮಸ್ವರೂಪವುಳ್ಳವನು. (ಮ) ಸದಾ ಮುಕ್ತನು. (ಶಂ|| ಮ) "ವಿಮುಕ್ತಾತ್ಮಾ" ಎಂದು ಪಾಠವು (ವಿ|| ಬಾ) ಅದರಲ್ಲಿ ನಿವೃತ್ತಿ ಧರ್ಮಾಧಿಕಾರಿಯಾದ ನರನಾರಾಯಣಾವತಾರವು ಹೇಳಲ್ಪಡುವುದು. ಪರಮ ವೈರಾಗ್ಯ ಪ್ರಕಾಶನಕ್ಕಾಗಿ ವಿಷಯಗಳಿಂದ ಮನಸ್ಸನ್ನು ತಿರುಗಿಸಿರುವಂತವನು. ||೪೫೨||

(೪೫೩ನೇ ನಾಮವು) ಸರ್ವಜ್ಞಃ,

ಓಮ್|| ಸರ್ವಜ್ಞಾಯನಮಃ.

(ಶಂ|| ಭಾ) ಸರ್ವಾತ್ಮಕನಾದ ಜ್ಞಾನರೂಪನು ಅಥವಾ (ಮ) ಸರ್ವಜ್ಞನು (ವಿ|| ಭಾ) ಆಪ್ರಕಾರವೇ ಸರ್ವವಿಧದಿಂದಲೂ ತನ್ನನ್ನರಿಯುವಂತವನು. ||೪೫೩||

(೪೫೪ನೇ ನಾಮವು) ಜ್ಞಾನಮುತ್ತಮಂ,

ಓಮ್|| ಜ್ಞಾನಾಯೋತ್ತಮಾಯನಮಃ.

(ಶಂ॥ ಭಾ) ವಿಶೇಷಣಯುಕ್ತವಾದ ಈ ನಾಮದಿಂದ ಪರಮಾತ್ಮನು "ಸತ್ಯಂ ಜ್ಞಾನಮನಂತಂ ಬ್ರಹ್ಮ" (ತೈ॥ ೨॥ ೧) ಎಂಬಂತೆ ಜನ್ಯವಲ್ಲದೆಯೂ ಅನವಧಿಕವೂ ಸಮಸ್ತಕ್ಕೂ ಅತ್ಯಂತ ಸಾಧನವೂ ಆದ ಜ್ಞಾನರೂಪನೆಂದು ಹೇಳಲ್ಪಡುವನು. (ವಿ॥ ಭಾ) ಉತ್ತಮವಾದ ಸಮಸ್ತ ವೈಷ್ಣವ ಧರ್ಮಗಳನ್ನರಿತ ಜ್ಞಾನಸ್ವರೂಪನು. ॥೪೫೫॥

ಈರೀತಿಯಾಗಿ (೪೮)ನೇ ಶ್ಲೋಕದಲ್ಲಿ ಪ್ರತಿಪಾದಿಸಲ್ಪಡುವ (೧೦) ನಾಮಗಳಿಗೂ "ಯಜ್ಞಾರಾಧ್ಯತಯಾ "ಯಜ್ಞಃ" (೪೪೬) "ಇಜ್ಯಃ" (೪೪೭) ಕರ್ಮಭಿರರ್ಚ್ಚಿತಃ। ಇಜ್ಯಾಹಿಮಹತೀಯಸ್ಯಸ "ಮಹೇಜ್ಯ" (೪೪೮) ಉದಾಹೃತಃ॥ ಅಗ್ನಿಷ್ಟೋಮಾದಯಸ್ಸಪ್ತ ಸಂಸ್ಥಾಃಕ್ರತವಈರಿತಾಃ। ಆರಾಧ್ಯಃ ಕ್ರಿಯತೇತ್ಯೈಸ್ತೈರಿತಿ "ಕ್ರತು" (೪೪೯) ರುದೀರಿತಃ॥ ಬಹುಕಾಲಾನೇಕ ಯಜಮಾನಕೇ ವಿಧಿ ಚೋದಿತೆ॥ ಸತ್ರೇಸದಾऽऽರಾಧ್ಯತಯಾ "ಸತ್ರಂ" (೪೫೦) ಸ್ಯಾತ್ಸ್ರೀತೀತಿಚ॥ ಪ್ರವೃತ್ತಿಧರ್ಮನಿಷ್ಠಾನಾಂಗತಿರ್ಯಸ್ಸ "ಸತಾಂಗತಿಃ॥" (೪೫೧) ನಿವೃತ್ತಿಧರ್ಮನಿಷ್ಠಾನಾಂಗತಿರ್ಯಸ್ಸ "ಸತಾಂಗತಿಃ"॥ ಧರ್ಮಾರ್ಧರ್ಮೌಚತೇಷರ್ಾ ವರ್ಧ್ಯಕ್ಷ ಯಿತುಮಾದರಾತ್॥ ಸರ್ವದಾಶೀಲಮಸ್ಯೇತಿ "ಸರ್ವದರ್ಶೀ" (೪೫೨) ತತಸ್ಸ್ಮೃತಃ॥ ನಿವೃತ್ತಿ ಧರ್ಮಾಚಾರ್ಯ ತಯಾವಿಷಯೇಭ್ಯೋ ನಿವೃತ್ತಿಮತ್॥ ಮನೋಯಸ್ಯ "ನಿವೃತಾತ್ಮಾ" (೪೫೩) ನರನಾರಾಯಣಾತ್ಮಕಃ॥ ಸರ್ವಾತ್ಮನಾ ಸ್ವಮಾತ್ಮಾನಂ ಯಶ್ಚಜಾನಾತಿಕೇವಲಂ॥ "ಸರ್ವಜ್ಞಃ" (೪೫೪) ಸ್ಮೃತುವಿಜ್ಞೇಯಸ್ಸಪ್ರಾಣೋರ್ಜ್ಞಾನದೋಮನುಃ। ಪರಶ್ಚವೈಷ್ಣವೋಧರ್ಮಸ್ಸರ್ವೋಪ್ಯಸ್ಮಾಜ್ಞಾಯತೇಯತಃ॥ ಸರ್ವೇಷಾಂ ಶ್ರೇಯಸಾಂಮೂಲಂ ತದ್ವಜ್ಞೇಯಂ "ಜ್ಞಾನಮುತ್ತಮಂ" (೪೫೫) ಎಂಬೀರೀತಿಯಿಂದ ವಿವೃತಿಯನ್ನು ಕಾಣಬಹುದು.

ಮೂ॥ ಸುವ್ರತಸ್ಸುಮುಖಸ್ಸೂಕ್ಷ್ಮಸ್ಸುಘೋಷ
ಸ್ಸುಖದಸ್ಸುಹೃತ್। ಮನೋಹರೋ ಜಿತಕ್ರೋ
ಧೋ ವೀರಬಾಹುರ್ವಿದಾರಣಃ ॥೪೯॥

## (೪೫೭ನೇ ನಾಮವು) ಸುವ್ರತಃ,

### ಓಮ್॥ ಸುವ್ರತಾಯನಮಃ.

(ಶಂ॥ ಮ) ಸ್ವಲ್ಪ ಕಾಲಾನುಷ್ಠೇಯವಾದ ಭಗವಚ್ಚರಣಾರವಿಂದ ಶರಣಾಗತಿಯನ್ನು ಮಾಡಿ ಭಗವದ್ದಾಸ್ಯವುಳ್ಳ ಸರ್ವ ಭೂತಗಳಿಗೂ ಅಭಯಪ್ರದಾನವನ್ನು ಮಾಡುವುದೆಂಬ ಮಂಗಳಕರವಾದ ವ್ರತವುಳ್ಳವನು. ಇದಕ್ಕೆ " ಸಕೃದೇವ ಪ್ರಪನ್ನಾಯ ತವಾಸ್ಮೀತಿ ಚಯಾಚತೇ | ಅಭಯಂ ಸರ್ವಭೂತೇಭ್ಯೋ ದದಾಮ್ಯೇ ತದ್ವ್ರತಂ ಮಮ " (ಶ್ರೀ ರಾ॥ ಯು॥ ೧೮॥ ೩೩) ಎಂಬ ಪ್ರಮಾಣವು ಆಧಾರವಾಗಿರುವುದು. (ವಿ॥ ಭಾ) " ನಮೇ ಪಾರ್ಥಾಸ್ತಿ ಕರ್ತವ್ಯಂ " (ಭಾ॥ ಗೀ॥ ೩॥ ೨೨) ಎಂಬಂತೆ ತನಿಗಾಗಿ ಯಾವದೊಂದು ಕರ್ತವ್ಯರಹಿತನಾಗಿದ್ದರೂ ಪರಾರ್ಥವಾದ (ಎಂದರೆ ಭಕ್ತಸಂರಕ್ಷಣಾರ್ಥವಾದ) ಕರ್ತವ್ಯವುಳ್ಳವನಾದ ಕಾರಣ ಶೋಭನವಾದ ವ್ರತವನ್ನನುಷ್ಠಿಸುವಂತವನು. ಇವನ ಅನುಷ್ಠಾನಪ್ರಕಾರವು " ಏಕಪಾದೇನ ತಿಷ್ಠಂತ ಮಾಹರಂತಂಚ ಮಾರುತಂ | ಪಕ್ಷಮಾಸೋಪವಾಸಾಂಶ್ಚ ದಿಶಂತ ಮನುಚಿಂತಯೇತ್ " ಎಂಬೀವಚನದಲ್ಲಿ ಕಾಣಲ್ಪಡುವುದು. ॥೪೫೭॥

## (೪೫೮ನೇ ನಾಮವು) ಸುಮುಖಃ,

### ಓಮ್॥ ಸುಮುಖಾಯನಮಃ.

(ಶಂ॥ ಭಾ) ಶೋಭನವಾದ ಮುಖವುಳ್ಳವನು. ವನವಾಸಕ್ಕೆ ಹೊರಡುವಂತೆ ಆಜ್ಞಾಪಿಸಿದ ತಂದೆಯ ಮಾತನ್ನು ಕೇಳಿ ರಾಜ್ಯಾಭಿಷೇಕವು ತಪ್ಪಿಹೋದಕಾಲದಲ್ಲಿಯೂಕೂಡ ಮುಖವಿಕಾರಶೂನ್ಯನಾದ ಶ್ರೀ ದಾಶರಥಿರಾಮನು ಸುಮುಖನೆನ್ನಲ್ಪಡುವನು. ಅಥವಾ ತನ್ನಿಂದ ಸೃಷ್ಟಿಸಲ್ಪಟ್ಟ ಚತುರ್ಮುಖನಿಗೆ ವೇದೋಪದೇಶಕ್ಕೆ ಯೋಗ್ಯವಾದ ಮುಖವುಳ್ಳವನೆಂತಲೂ ಹೇಳಬಹುದು. (ವಿ॥ ಭಾ) ಜಪವೇ ಮೊದಲಾದ ಅನುಷ್ಠಾನವನ್ನು ಮಾಡುವಾಗಲೂ ವಿಕಾರಶೂನ್ಯನಾದುದರಿಂದ ಸುಪ್ರಸನ್ನವಾದ ಮುಖವುಳ್ಳವನು. " ಓಙ್ಕಾರಲಕ್ಷಣಂ ಮಂತ್ರಂ ಜಪನ್ನಾಂತರಲಕ್ಷಿತಂ | ಕೃಷ್ಣಾಯ ಕಮಲದಲಾಮಲನೇತ್ರಾಯ " ಎಂಬೀತನ್ಮಂತ್ರವರ್ಣಪ್ರಮಾಣವು ಈ ಅರ್ಥವನ್ನು ಬೋಧಿಸುವುದು. ॥೪೫೮॥

## (೪೫೮ನೇ ನಾಮವು) ಸೂಕ್ಷ್ಮಃ,

### ಓಮ್॥ ಸೂಕ್ಷ್ಮಾಯನಮಃ.

( ಶಂ ॥ ಭಾ ) " ಸರ್ವಗತಂ ಸುಸೂಕ್ಷ್ಮಂ " (ಮೂ ೧ ೧। ೬) ಎಂಬೀಶ್ರುತ್ಯನುಸಾರವಾಗಿ ಶಬ್ದಾದಿ ಸ್ಥೂಲಕಾರಣರಹಿತನು. ಶಬ್ದಾದಿಗಳೋ ಆಕಾಶಾದಿಗಳಿಗೆ ಉತ್ತರೋತ್ತರವಾಗಿ ಸ್ಥೂಲಕಾರಣಗಳಾಗಿರುವುವು. ಅಂತಹ ಸ್ಥೂಲಕಾರಣರಹಿತನು. ( ವಿ ॥ ಭಾ ) ನಿರುಪಾಧಿಕವಾಗಿ ಸಮಾಧಿ ದಶೆಯಲ್ಲಿ ಸಾಕ್ಷಾತ್ಕರಿಸಲರ್ಹವಾದ ಅತ್ಯಂತ ಸೂಕ್ಷ್ಮವಾಗಿರುವ ರೂಪವುಳ್ಳವಿಕೆಯಿಂದಲಾದರೂ ಅಸುರಪ್ರಕೃತಿಗಳಿಗೂ ಗೋಚರವಾಗದ ನಿಗೂಢವಾದ ಅಭಿಪ್ರಾಯವುಳ್ಳವಿಕೆಯಿಂದಲಾದರೂ " ಸೂಕ್ಷ್ಮಃ " ಎನ್ನಲ್ಪಡುವನು. ॥೪೫೮॥

## (೪೫೯ನೇ ನಾಮವು) ಸುಘೋಷಃ,

### ಓಮ್॥ ಸುಘೋಷಾಯನಮಃ,

( ಶಂ ॥ ವಿ ॥ ಮ ) ಉಪನಿಷತ್ಸಂಬಂಧವಾದ ಒಳ್ಳೇಘೋಷವುಳ್ಳವನು. ( ಶಂ ) ಅಥವಾ ಮೇಘದಂತೆ ಗಂಭೀರವಾದ ಧ್ವನಿಯುಳ್ಳವನು. ॥೪೫೯॥

## (೪೬೦ನೇ ನಾಮವು) ಸುಖದಃ,

### ಓಮ್॥ ಸುಖದಾಯನಮಃ.

( ಶಂ ॥ ಭಾ ) ಒಳ್ಳೇನಡತೆಯುಳ್ಳವರಿಗೆ ಸುಖಪ್ರದನೂ ಕೆಟ್ಟನಡತೆಯುಳ್ಳವರಿಗೆ ಸುಖವನ್ನು ಖಂಡಿಸುವಂತವನೂ ಆದವನು " ಸುಖದಃ " ಎನ್ನಲ್ಪಡುವನು. ( ವಿ ॥ ಭಾ ) ಈ ರೀತಿಯಿಂದ ಸದಾಚಾರವಾದ ಸಮಾಧಿಯನ್ನು ಉಂಟುಮಾಡುವುದರಿಂದ ಅಂತಹ ನಿಷ್ಠೆಯುಳ್ಳವರಿಗೆ ಫಲವನ್ನಾಗಿ ಪರಮಸುಖವನ್ನು ಕೊಡುವಂತವನು. ॥೪೬೦॥

## (೪೬೧ನೇ ನಾಮವು) ಸುಹೃತ್,

### ಓಮ್॥ ಸುಹೃದೇನಮಃ.

( ವಿ || ಶಂ ) ಈ ರೀತಿಯಿಂದ ಇವನು ಪರೋಪಕಾರಿಯಾಗಿರುವುದಕ್ಕೆ ಕಾರಣವೇನು ? ಎಂದರೆ :— ಅದಕ್ಕಾಗಿ ಸುಹೃತ್—ಪ್ರತ್ಯುಪಕಾರವನ್ನು ಎದುರುನೋಡದೆ ಉಪಕಾರವನ್ನು ಮಾಡುವಂತಹ ಒಳ್ಳೇ ಹೃದಯವುಳ್ಳವನು. ||೪೬೦||

## (೪೬೧ನೇ ನಾಮವು) ಮನೋಹರಃ,

ಓಮ್|| ಮನೋಹರಾಯನಮಃ.

( ಶಂ|| ಭಾ ) ನಿರತಿಶಯಾನಂದ ರೂಪನಾದ ಕಾರಣ ಮನಸ್ಸನ್ನು ಅಪಹರಿಸುವಂತವನು. (ವಿ|| ಭಾ) ಈಪ್ರಕಾರವಾಗಿ ಸಹಜಸುಹೃತ್ವಾದಕಾರಣದಿಂದಲೆ ಅವರುಗಳಮನಸ್ಸನ್ನು ಅಪಹರಿಸುವಂತವನು ||೪೬೧||

## (೪೬೨ನೇ ನಾಮವು) ಜಿತಕ್ರೋಧಃ,

ಓಮ್|| ಜಿತಕ್ರೋಧಾಯನಮಃ

( ಶಂ || ಭಾ ) ಕೋಪವನ್ನು ಜಯಿಸಿದವನು. ( ವಿ || ಭಾ ) ಅವರುಗಳ ಕೋಪಾದಿಗಳನ್ನು ಜಯಿಸಿದವನು. ಅಧವಾ ಸೂಕ್ಷ್ಮಃ—೪೫೫ನೇ ನಾಮದಲ್ಲಿ ನೋಡಿ. ಸುಘೋಷಃ-ದೇವಾಸುರರು ಗಳೊಡನೆ ಸೇರಿ ಘೋಷದಿಂದ ಅಮೃತವನ್ನು ಕಡೆಯುವಾಗ ಅದರ ಘೋಷದಿಂದ ಕೂಡಿದವನಾದಕಾರಣ ಅದ್ಭುತವಾದ ಘೋಷವುಳ್ಳವನು. ಸುಖದಃ-ಅಮೃತವನ್ನು ಕೊಡುವುದೇಮೊದಲಾದುಸುಖವನ್ನು ಕೊಡುವಂತವನು. ಸುಹೃತ್-ಅದಕ್ಕೆ ಕಾರಣವಾದ ಒಳ್ಳೇ ಹೃದಯವುಳ್ಳವನು. ಮನೋಹರಃ-ಅಸುರಮೋಹಕವಾದ ಸ್ತ್ರೀರೂಪವುಳ್ಳವನು. ಜಿತಕ್ರೋಧಃ-ತನ್ನಲ್ಲಿ ಆಶ್ರಯವನ್ನು ತೋರಿಸಿ ಅದರಿಂದ ದೇವತೆಗಳಲ್ಲಿ ಅಸುರರಿಗುಂಟಾದ ಕೋಪವನ್ನು ಜಯಿಸಿದವನು. ||೪೬೨||

## (೪೬೩ನೇ ನಾಮವು) ವೀರಬಾಹುಃ,

ಓಮ್|| ವೀರಬಾಹವೇನಮಃ.

( ಶಂ|| ಭಾ ) ವೇದ ಮರ್ಯಾದಾಸ್ಥಾಪನಾರ್ಥವಾಗಿ ಅಸುರಾದಿಗಳನ್ನು ಸಂಹರಿಸಿದನಲ್ಲದೆ ಕೋಪವಶದಿಂದಲ್ಲವು, ವೇದಮರ್ಯಾದಾಸ್ಥಾಪ

ನವೆನ್ನುದ್ದೇಶಿಸಿ ತ್ರಿದಶರಾದ ದೇವತೆಗಳಿಗೆ ಶತ್ರುಗಳಾದ ಅಸುರರನ್ನು ಕೊಲ್ಲುವುದಕ್ಕಾಗಿ ವಿಕ್ರಮಶಾಲಿಯಾದ ಬಾಹುಗಳುಳ್ಳವನು. (ವಿ॥ ಭಾ) ರತ್ನಮಯವಾದ ಕಂಕಣಗಳಿಂದಲೂ ಬಾಜೀಬಂದುಮೊದಲಾದವುಗಳಿಂದಲೂ ಪ್ರಕಾಶಿಸುತಲಿರುವ ಕ್ಷೀರಸಮುದ್ರ ಮಥನದಲ್ಲಿ ನಾನು ಮೊದಲು ನಾನು ಮೊದಲೆಂದು ತ್ವರಿಸುತಲೂ ಇರುವ ಅಧಿಕ ಪರಾಕ್ರಮವುಳ್ಳ ದೃಢವಾದ ತೋಳುಗಳುಳ್ಳವನು. ॥೪೬೪॥

(೪೬೫ನೇ ನಾಮವು) ವಿದಾರಣಃ,

ಓಮ್॥ ವಿದಾರಣಾಯನಮಃ.

(ಶಂ॥ ಭಾ) ಅಧಾರ್ಮಿಕರನ್ನು ಶೀಳುವಂತವನು. (ವಿ॥ ಭಾ) ದಿವ್ಯಾಸ್ತ್ರಗಳಿಂದ ರಾಹು ಮೊದಲಾದವರನ್ನು ಶೀಳಿದವನು ॥೪೬೫॥

ಈ ೪೯ನೇ ಶ್ಲೋಕದಲ್ಲಿರುವ ೧೦ ನಾಮಗಳಿಗೂ "ಭಕ್ತಾರ್ಥಂ ವ್ರತವಾನ್ಯೋಸೌ "ಸುವ್ರತಃ" (೪೫೬) ಸಪ್ರಕೀರ್ತಿತಃ। ಧ್ಯಾತೄಣಾಂ ವಿಷಯೋಯಸ್ಯ ಸುಪ್ರಸನ್ನಂ ಮನೋಹರಂ॥ ಮುಖಮಸ್ಯೇತಿ "ಸುಮುಖಃ" (೪೫೭) "ಸೂಕ್ಷ್ಮಃ" (೪೫೮) "ಸೂಕ್ಷ್ಮಸ್ವರೂಪತಃ॥ ಅಸುರೇಷುನಿಗೂಢಾಭಿ ಪ್ರಾಯತ್ವಾತ್ಸೂಕ್ಷ್ಮಉಚ್ಯತೇ ॥ ಸ್ವಾಧ್ಯಾಯಘೋಷೊಯಸ್ಯಾಸ್ತಿ "ಸುಘೋಷಃ" (೪೫೯) ಸತುಕೀರ್ತಿತಃ। ಸಮಾಧ್ಯನುಷ್ಠಾನೇನ ತದನುಷ್ಠಾನಶೀಲಿನಾಂ। ಸುಖಂ ಬಹುದದಾತೀತಿ "ಸುಖದಃ" (೪೬೦) ಪರಿಕೀರ್ತಿತಃ। ಕಿಮಸ್ಮಿನ್ನಕರವಾಣೀತಿ ಹ್ಯುಪಕಾರಿಣಿಶೋಭನಂ। ಯಸ್ಯಾಸ್ತಿ ಹೃದಯಂಚಾಸೌ "ಸುಹೃತ್" (೪೬೧) ಇತ್ಯಭಿಧೀಯತೇ। ಏವಂನಿಸರ್ಗ ಸೌಹಾರ್ದಾತ್ತೇಷಾಂ ಹೃದಯಕಾರಕಃ। "ಮನೋಹರ" (೪೬೨) ಸ್ಸಮಾಖ್ಯಾತೋ ಹ್ಯಷ್ಟಾರ್ಣಶ್ಯಾಂತಿದಾಯಕಃ। ರಕ್ಷಸಾಂದೇವವಿಷಯೋ ಯೇನಕ್ರೋಧೋ ವಿನಿರ್ಜಿತಃ ॥ "ಜಿತಕ್ರೋಧ" (೪೬೩) ಆಖ್ಯಾತೋಹ್ಯಷ್ಟಾರ್ಣಃ ಕ್ರೋಧನಾಶಕಃ। ವಿಕ್ರಾಂತಾಬಾಹವೋಯಸ್ಯ "ವೀರಬಾಹು" (೪೬೪) ಸ್ಸುಸಸ್ಮೃತಃ॥ ಹೇತ್ವಾದ್ಯೈರಾಯುಧೈರ್ದೈತ್ಯ ವಿದಾರಣಾಚ್ಚ "ವಿದಾರಣಃ" (೪೬೫) ಇತ್ಯಾದಿಯಾದ ವಿವೃತಿಯನ್ನು ಕಾಣಬಹುದು.

ಮೂ॥ ಸ್ವಾಪನ ಸ್ಸ್ವವಶೋ ವ್ಯಾಪೀ ನೈಕಾತ್ಮಾ ನೈಕಕರ್ಮಕೃತ್ । ವತ್ಸರೋ ವತ್ಸಲೋ ವತ್ಸೀ ರತ್ನಗರ್ಭೋ ಧನೇಶ್ವರಃ ॥೫೦॥

(೪೭೭ನೇ ನಾಮವು) ಸ್ವಾಪನಃ,

ಓಮ್॥ ಸ್ವಾಪನಾಯನಮಃ.

(ಶಂ॥ ಭಾ) ಪ್ರಾಣಿಗಳನ್ನು ಆತ್ಮಜ್ಞಾನರಹಿತಗಳನ್ನಾಗಿ ಮಾಡುತ ತನ್ನ ಮಾಯೆಯಿಂದ ಮಲಗಿಸುವಂತವನು (ವಿ॥ ಭಾ) ಈರೀತಿಯಾಗಿ ನಾಶವನ್ನು ಹೊಂದಿ ಉಳಿದವರನ್ನು ಕೂಡ ಅತಿ ರಮಣೀಯವಾದ ತನ್ನ ಮುಗುಳುನಗೆಯಿಂದಲೂ ಮಧುರವಾದ ಕಟಾಕ್ಷದಿಂದಲೂ ಭ್ರೂವಿಲಾಸಗಳಿಂದಲೂ ಪರವಶರನ್ನಾಗಿ ಮಾಡುವಂತವನು. (ಮ) ಚತುರ್ಮುಖದೈನಂದಿನ ಪ್ರಳಯದಲ್ಲಿ ಪ್ರಾಣಿಗಳನ್ನು ಮಲಗಿಸುವಂತವನು. ॥೪೭೭॥

(೪೭೭ನೇ ನಾಮವು) ಸ್ವವಶಃ,

ಓಮ್॥ ಸ್ವವಶಾಯನಮಃ.

(ಶಂ॥ ಭಾ) ಪ್ರಪಂಚದ ಸೃಷ್ಟಿಸ್ಥಿತಿಲಯ ಕಾರಣನಾದಕಾರಣ (ಮ) ಸ್ವತಂತ್ರನು. (ವಿ॥ ಭಾ) ಈ ರೀತಿಯಾಗಿ ಅಸುರರು ಮಲಗಿರಲಾಗಿ ತನ್ನ ಭಕ್ತರಾದ ದೇವತೆಗಳೊಡನೆ ಸ್ವೇಚ್ಛೆಯಾಗಿ ವಿಹಾರವನ್ನು ಹೊಂದುವಂತವನು. ॥೪೭೭॥

(೪೭೮ನೇ ನಾಮವು) ವ್ಯಾಪೀ,

ಓಮ್॥ ವ್ಯಾಪಿನೇನಮಃ.

(ಶಂ॥ ಭಾ) ಆಕಾಶದಂತೆ ಸರ್ವವ್ಯಾಪ್ತನು. (ವಿ॥ ಭಾ) ಅಮೃತಮಥನಕಾಲದಲ್ಲಿ ಸುರಾಸುರ ಮಂದರಪರ್ವತ ವಾಸುಕಿಯೇ ಮೊದಲಾದವರುಗಳ ಶಕ್ತಿಯು ನ್ಯೂನವಾದಾಗ ತನ್ನ ಶಕ್ತಿಯ ಆವೇಶದಿಂದ ಅವರನ್ನು ವ್ಯಾಪಿಸಿ ಸಮಾಧಾನಪಡಿಸುವಂತವನು. ॥೪೭೮॥

## (೪೬೯ನೇ ನಾಮವು) ನೈಕಾತ್ಮಾ,

### ಓಮ್‖ ನೈಕಾತ್ಮನೇನಮಃ.

(ಶಂ‖ ಭಾ) ಜಗತ್ಸೃಷ್ಟ್ಯಾದಿಗಳಿಗೆ ಕಾರಣಗಳಾದ ವಿಭೂತಿಗಳಿಂದ ಅನೇಕ ಪ್ರಕಾರವಾಗಿರುವಂತವನು. (ಮ) ಅನೇಕರೂಪನು. (ವಿ‖ ಭಾ) ಆಕಾಲದಲ್ಲಿ ಬ್ರಹ್ಮರೂಪದಿಂದಲೂ ಕೂರ್ಮರೂಪದಿಂದಲೂ ಮೋಹಿನೀರೂಪದಿಂದಲೂ ಕೂಡ ಅನೇಕ ರೂಪವುಳ್ಳವನು. ‖೪೬೯‖

## (೪೭೦ನೇ ನಾಮವು) ನೈಕಕರ್ಮಕೃತ್,

### ಓಮ್‖ ನೈಕಕರ್ಮಕೃತೇನಮಃ.

(ಶಂ‖ ಮ) ಜಗತ್ಸೃಷ್ಟ್ಯಾದ್ಯನೇಕ ಕರ್ಮಗಳನ್ನು ಮಾಡುವಂತವನು. (ವಿ‖ ಭಾ) ಅಮೃತಮಥನ ಮಂದರಧಾರಣ ಶತ್ರುವಿದಾರಣ ಅಮೃತಪ್ರದಾನಾದ್ಯನೇಕ ಕರ್ಮಗಳನ್ನು ಮಾಡುವಂತವನು. ‖೪೭೦‖

## (೪೭೧ನೇ ನಾಮವು) ವತ್ಸರಃ,

### ಓಮ್‖ ವತ್ಸರಾಯನಮಃ

(ಶಂ‖ ಮ) ಇವನಲ್ಲಿ ಸಮಸ್ತವೂ ವಾಸಮಾಡುವುದರಿಂದ "ವತ್ಸರಃ" ಎನ್ನಲ್ಪಡುವನು. (ವಿ‖ ಭಾ) ಇನ್ನು ಮುಂದೆ ಧರ್ಮಸ್ವರೂಪಿಯಾಗಿರುವಿಕೆಯು ಹೇಳಲ್ಪಡುವುದು ಪುರುಷಾರ್ಥವ್ಯವಸ್ಥಾಪನಾರ್ಥವಾಗಿ ಸರ್ವರ ಹೃದಯದಲ್ಲಿಯೂ ವಾಸಮಾಡುವಂತವನು. ‖೪೭೧‖

## (೪೭೨ನೇ ನಾಮವು) ವತ್ಸಲಃ,

### ಓಮ್‖ ವತ್ಸಲಾಯನಮಃ

(ಶಂ‖ ಮ) ಭಕ್ತವತ್ಸಲನು. ಎಂದರೆ ಭಕ್ತರಲ್ಲಿ ಸ್ನೇಹವುಳ್ಳವನೆಂದರ್ಥವು. (ವಿ‖ ಭಾ) ತನ್ನಲ್ಲಿ ಪ್ರೀತಿಯುಳ್ಳ ಶರಣಾಗತರಲ್ಲಿ ವತ್ಸಲನಾಗಿರುವಂತವನು. ‖೪೭೨‖

(೪೭೩ನೇ ನಾಮವು) ವತ್ಸೀ,

ಓಮ್|| ವತ್ಸಿನೇನಮಃ.

(ಶಂ|| ಭಾ) ಕರುಗಳನ್ನು ಪಾಲಿಸುವುದರಿಂದಲಾದರೂ ಜಗತ್ಪಿತಾ ಆದ ಅವನಿಗೆ ಸಮಸ್ತ ಪ್ರಜೆಗಳೂ ವತ್ಸಭೂತರಾಗಿರುವುದರಿಂದಲಾದರೂ "ವತ್ಸೀ" ಎನ್ನಲ್ಪಡುವನು. (ವಿ|| ಭಾ) ಈರೀತಿಯಿಂದ ನಿತ್ಯವಾಗಿ ತನ್ನಿಂದ ರಕ್ಷಿಸಲ್ಪಡುವ ಆತ್ಮವರ್ಗಗಳೆಂಬ ಕರುಗಳನ್ನು ಅಧಿಕವಾಗಿ ಉಳ್ಳವನು. (ಮ) ಪ್ರಕೃತಿಯನ್ನು ಕರುವಿನಂತೆ ಸ್ವಾಧೀನಪಡಿಸಿಕೊಂಡವನು. ||೪೭೩||

(೪೭೪ನೇ ನಾಮವು) ರತ್ನಗರ್ಭಃ,

ಓಮ್|| ರತ್ನಗರ್ಭಾಯನಮಃ.

(ಶಂ|| ಭಾ) ರತ್ನಗಳನ್ನು ತನ್ನ ಗರ್ಭದಲ್ಲಿಟ್ಟುಕೊಂಡಿರುವ ಸಮುದ್ರರೂಪನು. (ವಿ|| ಭಾ) ಅವರುಗಳಲ್ಲಿ ಧನಗಳನ್ನಪೇಕ್ಷಿಸಿದವರಿಗೆ ಕೊಡುವುದಕ್ಕೆ ಯೋಗ್ಯವಾದ ವಿಶೇಷವಾದ ಧನವುಳ್ಳವನು. (ಮ) ರತ್ನಗಳಂತೆ ಇರುವ ಗರ್ಭಪ್ರದೇಶವುಳ್ಳವನು. ||೪೭೪||

(೪೭೫ನೇ ನಾಮವು) ಧನೇಶ್ವರಃ,

ಓಮ್|| ಧನೇಶ್ವರಾಯನಮಃ.

(ಶಂ|| ಭಾ) ಧನಾಧಿಪತಿಯು. (ವಿ|| ಭಾ) ಅವರವರುಗಳಿಗೆ ಅಪೇಕ್ಷಿತಗಳಾದ ದ್ರವ್ಯದಾನದಲ್ಲಿ ಶೀಘ್ರಕಾರಿಯಾದವನು. ||೪೭೫||

ಈ (೫೦)ನೇ ಶ್ಲೋಕದಲ್ಲಿ ಪ್ರತಿಪಾದಿಸಲ್ಪಡುವ (೧೦) ನಾಮಗಳಿಗೂ "ಕಟಾಕ್ಷ ಭ್ರೂವಿಲಾಸೈರ್ದ್ಯೈರ್ಶಿಷ್ಟಶಿಷ್ಟಾನ್ ಜನಾನಪಿ | ಯೋಸೌ ಸಮ್ಯಗ್ಜ್ಯೋಮೋಹಯತಿ "ಸ್ವಾಪನಃ" (೪೬೬) ಪರಿಕೀರ್ತಿತಃ|| ಸ್ವಕೀಯೈಸ್ಸಹಸುಪ್ತೇಷುತೇಷು ಸ್ವೈರವಿಹಾರವಾನ್ | ಭವತಿ "ಸ್ವವಶ" (೪೬೭) ಸ್ಸೋಪಿನಾನ್ಯಾಧೀನತ್ವದೋಮನುಃ|| ದೇವರಕ್ಷೋಮಂದರೇಷು ವಾಸುಕಿ ಪ್ರಭೃತಿಷ್ವಪಿ| ಆಪ್ಯಾಯನಾಯ ಶಕ್ತ್ಯಾಚ "ವ್ಯಾಪೀ" (೪೬೮) ಸ್ಯಾದ್ವ್ಯಾಪನಾದಸೌ|| ತದಾತನ್ವೈರ್ಬ್ರಹ್ಮಕೌರ್ಮಮೋಹಿನ್ಯಾದ್ಯವತಾರಕೈಃ|

"ನೈಕಾತ್ಮೇ" ತಿ (೪೬೯) ಶ್ರುತಸ್ಸಮ್ಯೃಜ್ಯಾತ್ಮನ್ಯೇಕೋರ್ಥ ಬಹುರೂಪದಃ॥ ಸಮುದ್ರಮಥನೇನೈಕ ಕರ್ಮಕೃ "ನ್ನೈಕಕರ್ಮಕೃತ್" (೪೭೦)। ಪುರುಷಾರ್ಥಸ್ಥಾಪನಾಯ ಸರ್ವಾಂತ ರ್ವ್ಯಸನಾಚ್ಛಯಃ॥ ಧರ್ಮಾತ್ಮಾ "ವತ್ಸರ" (೪೭೧) ಸ್ಸಸ್ಯಾನ್ಯಾತ್ಮನ್ಯರೋಽಭೀಷ್ಟದೋಮನುಃ । ಸರ್ವಸ್ಯಾಂತರ್ನಿವಸನೇ ಹೇತು ಸ್ಸಾನ್ಯತ್ "ವತ್ಸಲಃ" (೪೭೨) ಸ್ಮೃತಃ। ವತ್ಸೇಧೇನೋರಿವಯತೋವತ್ಸಲಶ್ಶರಣಾಗತೇ ॥ ನಿತ್ಯಕ್ರೋಷ್ಯಾತ್ಮ ಗುಣವದ್ವಾತ್ಸ ಭೂಯಸ್ತ್ವತಸ್ಸದಾ। "ವತ್ಸೀ" (೪೭೩) ಸ್ಯಾದ್ವಿವಿಶೇಷೇಣ ಷಡರ್ಣೋ ಗೋಪದೋಮನುಃ ॥ ಧನಾಯದ್ಭ್ಯೋಯಥಾಕಾಮಂ ಪ್ರದೇಯ ಧನವತ್ತ್ವತಃ। "ರತ್ನಗರ್ಭ" (೪೭೪) ಸ್ಸಮಾಖ್ಯಾತೋಽಷ್ಟಾರ್ಣೋಧನದೋಮನುಃ ॥ ತತ್ತದಿಷ್ಟ ದ್ರವ್ಯದಾನೇ ಶೀಘ್ರಕಾರೀ "ಧನೇಶ್ವರಃ" (೪೭೫) ಎಂಬಂತೆ ವಿವೃತಿಯನ್ನು ಕಾಣಬಹುದು.

ಮೂ॥ ಧರ್ಮಗು ಬ್ಧರ್ಮಕೃ ದ್ಧರ್ಮೀ ಸದಸ ತ್ಕ್ಷರ
ಮಕ್ಷರಂ । ಅವಿಜ್ಞಾತಾ ಸಹಸ್ರಾಂಶು ರ್ವಿಧಾತಾ
ಕೃತಲಕ್ಷಣಃ ॥೫೧॥

(೪೭೬ನೇ ನಾಮವು) ಧರ್ಮಗುಪ್,

ಓಮ್॥ ಧರ್ಮಗುಪೇನಮಃ.

(ಶಂ॥ ಮ) ಧರ್ಮರಕ್ಷಕನು. "ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇಯುಗೆ" (ಭ॥ ಗೀ॥ ೪॥ ೮) ಎಂಬ ವಚನದಿಂದ. (ವಿ॥ ಭಾ) ಅವರುಗಳಿಗೆ ಅರ್ಥಕಾಮಗಳೆಂಬ ಪುರುಷಾರ್ಥಗಳನ್ನು ಕೊಟ್ಟರೂ ಅವುಗಳನ್ನು ದುರ್ವಿಷಯಗಳಲ್ಲಿ ವಿನಿಯೋಗಿಸದಂತೆ ತಡೆಮಾಡಿ ಹಿತವಾದ ಧರ್ಮವನ್ನು ಕಾಪಾಡಿಕೊಡುವಂತವನು. ॥೪೭೬॥

(೪೭೭ನೇ ನಾಮವು) ಧರ್ಮಕೃತ್,

ಓಮ್॥ ಧರ್ಮಕೃತೇನಮಃ.

(ಶಂ॥ ಭಾ)ಸ್ವಯಂ ಧರ್ಮಾಧರ್ಮರಹಿತನಾದರೂ ಧರ್ಮಮರ್ಯಾದಾಸ್ಥಾಪನಕ್ಕಾಗಿ ಧರ್ಮಾನುಷ್ಠಾನಶೀಲನು. (ವಿ॥ ಭಾ) ಈ ರೀತಿಯಿಂದ

ಸರ್ವರನ್ನು ಧಾರ್ಮಿಕರನ್ನಾಗಿ ಮಾಡಲೆತ್ನಿಸಿ ತನ್ನ ಅನುಗ್ರಹಕ್ಕೆ ಕಾರಣವಾದ ಧರ್ಮವನ್ನು ಯಾವದೊಂದು ಕಾರಣವೂ ಇಲ್ಲದೆ ಉಂಟುಮಾಡುವಂತವನು. ಇದಕ್ಕೆ "ಧರ್ಮಸಾಮಾನ್ಯ ಮಮಲ ಮನಾದಿ ನಿಧನಂವಿಭುಂ| ದುರ್ಲಭಂಯತ್ಪ್ರಬುದ್ಧಾನಾಂ ತತ್ಪ್ರಸಾದ ಧಿಯಾವಿನಾ" ಎಂಬೀ ವಚನವನ್ನೂ ತಿಳಿಯಬೇಕು. ||೪೭೭||

## (೪೭೮ನೇ ನಾಮವು) ಧರ್ಮೀ,
## ಓಮ್|| ಧರ್ಮಿಣೇನಮಃ.

(ಶಂ|| ಭಾ) ಧರ್ಮಗಳನ್ನು ಧರಿಸುವಂತವನು. (ವಿ|| ಭಾ) ಲೋಕದಲ್ಲಿ ಪ್ರಸಿದ್ಧವಾಗಿರುವ ಧರ್ಮವೂ ಇವನಿಗೆ ಸರ್ವಸಾಧಾರಣವಾದ ಉಪಕರಣವಾಗಿರುವುದರಿಂದ ಧರ್ಮವುಳ್ಳವನು. ||೪೭೮||

## (೪೭೯ನೇ ನಾಮವು) ಸತ್, ಓಮ್|| ಸತೇನಮಃ.

(ಶಂ|| ಭಾ) "ಸದೇವಸೋಮ್ಯೇದ ಮಗ್ರ ಆಸೀತ್" (ಛಾಂ|| ೬|| ೨) ಎಂಬಂತೆ ಸತ್ಯವಾದ ಬ್ರಹ್ಮರೂಪನು. (ವಿ|| ಭಾ) ಈರೀತಿಯಾಗಿ ಹೇಳಲ್ಪಟ್ಟ ಧರ್ಮಗಳಲ್ಲಿ ಅತ್ಯಂತ ಪ್ರಶಸ್ತವಾದ ಧರ್ಮವು. ಇದರಿಂದ ಸಾಧಿಸಲ್ಪಡುವ ಪರಮಪುರುಷನು ಸತ್ತಾಗಿರುವುದರಿಂದ ಈಧರ್ಮವು ಸತ್ ಎಂದು ಕೊಂಡಾಡಲ್ಪಡುವುದು. ಅವನು ಸದಾ ಸತ್ತಾಗಿರುವುದು ಕೂಡ ನಿರುಪಾಧಿಕ ಸದ್ಭಾವದಿಂದಲೂ ಸಾದ್ಗುಣ್ಯದಿಂದಲೂ ಎಂದರಿಯಬೇಕು. (ಮ) ಸತ್ತೆಂಬ ಬ್ರಹ್ಮನಾಮವುಳ್ಳವನು. "ಓಂ ತತ್ಸದಿತಿ ನಿರ್ದೇಶೋಬ್ರಹ್ಮಣಸ್ತ್ರಿವಿಧಸ್ಸ್ಮೃತಃ" ಎಂಬ ಗೀತಾವಚನವು ಇದಕ್ಕೆ ಆಧಾರವಾಗಿರುವುದು. ||೪೭೯||

## (೪೮೦ನೇ ನಾಮವು) (ಸತ್) ಅಕ್ಷರಂ,
## ಓಮ್|| ಅಕ್ಷರಸತೇನಮಃ.

(ವಿ|| ಭಾ) ಈ ಪ್ರಕಾರವಾಗಿ ನಿತ್ಯನಾಗಿಯೂ ನಿರುಪಾಧಿಕವಾದ ಸದ್ಭಾವದೊಡನೆ ಕೂಡಿ ಸಾಧುವಾಗಿಯೂ ಇರುವುದರಿಂದ ಕ್ಷಯ ವಿನಾ

ಶಾದಿ ವಿಕಾರಗಳ್ಯಾವವೂ ಇಲ್ಲದೇ ಇರುವಂತವನೆಂದು "ಅಪಕ್ಷಯವಿನಾಶಾಭ್ಯಾಂ ಪರಿಣಾಮರ್ಧಿಜನ್ಮಭಿಃ| ವರ್ಜಿತಶ್ಶಕ್ಯತೇವಕ್ತುಂ ಯಸ್ಸದಾಸ್ತೀತಿ ಕೇವಲಂ" (ವಿ|| ಪು|| ೪|| ೧೦) ಎಂಬೀ ಪ್ರಮಾಣದಲ್ಲಿ ಪ್ರಸಿದ್ಧವಾಗಿರುವುದು. ಕ್ಷರವಾಗಿದ್ದರೆ ಕೆಲವು ಕಡೆ ಕೆಲವು ವೇಳೆ ನಾಶವುಂಟಾಗಿರುವುದು. ಇವನಿಗೆ ಅದಿಲ್ಲವಾದ್ದರಿಂದ ಅಕ್ಷರನಾಗಿರುವನು. ||೪೮೦||

(೪೮೧ನೇ ನಾಮವು) ಅಸತ್,

ಓಮ್|| ಅಸತೇನಮಃ.

(ಶಂ|| ಭಾ) ವಾಚಾರಂಭಣಂವಿಕಾರೊ ನಾಮಧೇಯಂ ಮೃತ್ತಿಕೇತ್ಯೇವಸತ್ಯಂ" ಎಂಬಂತೆ ಪರಬ್ರಹ್ಮವಲ್ಲದ್ದೆಲ್ಲವೂ 'ಅಸತ್' ಎನ್ನಲ್ಪಡುವುದು. (ಮ) ಕ್ಷರಣಎಂದರೆ ಚಲನ ಸ್ವಭಾವವಿಲ್ಲದ್ದು. (ವಿ|| ಭಾ) ಅಪ್ರಶಸ್ತರಾದ ಪಾಪ ಪ್ರಸಕ್ತರಾದವರಲ್ಲಿ ಅಸತ್ತಾಗಿ ಇರುವಂತವನು. ||೪೮೧||

(೪೮೨ನೇ ನಾಮವು) ಅಸತ್ಕ್ಷರಮ್,

ಓಮ್|| ಅಸತ್ಕ್ಷರಾಯನಮಃ.

(ವಿ|| ಭಾ) ಅಸತ್ತುಗಳಿಗೆ ನಿತ್ಯವೂ ನಿರವಧಿಕವೂ ಆದ ಸಂಸಾರ ಭಯವನ್ನು ಕೊಡುವುದರಿಂದ ಯಾರಿಗಾದರೆ ಅಸತ್ತಾಗಿರುವನೊ ಆ ಕಾರಣದಿಂದಲೇ ಅವರ ವಿಷಯದಲ್ಲಿ ಚಲನ ಸ್ವಭಾವದಿಂದ ಕೂಡಿರುವನು. ಈ ಅರ್ಥವು "ಏಷಏವ ಸಾಧು ಕರ್ಮಕಾರ ಯತಿತಂ ಯಮೇಭ್ಯೋಲೋಕೇಭ್ಯ ಉನ್ನಿನೀಷತಿ ಏಷಏವಾ ಸಾಧುಕರ್ಮಕಾರ ಯತಿತಂ ಯಮಧೋನಿನೀಷತಿ" (ಕೌ|| ೩|| ೯|| ೧೦) ಎಂಬ ಶ್ರುತಿಯಲ್ಲಿಯೂ 'ಯಾವವನಿಗಾದರೆ ಸದ್ಗತಿಯನ್ನು ಕೊಡ ಲಿಚ್ಛೈಸುವನೊ ಅಂತವನಿಗೆ ಸತ್ಕಾರ್ಯಗಳನ್ನು ಮಾಡಿಸುವನೆಂತಲೂ ಯಾರಿಗಾದರೆ ಅಧೋಗತಿಯನ್ನು ಕೊಡುವುದಕ್ಕೆ ಇಚ್ಛೈಸುವನೊ ಅವನಿಂದ ಅಸತ್ಕಾರ್ಯವನನ್ನು ಮಾಡಿಸುವನೆಂತಲೂ ಹೇಳಲ್ಪಟ್ಟಿರುವುದು. ||೪೮೨||

(ಶಂ|| ಮ) ಕ್ಷರಮ್—ಓಮ್, ಕ್ಷರಾಯನಮಃ. (ಶಂ) ಸರ್ವಭೂತ ಸ್ವರೂಪನು. (ಮ) ಗಂಗಾಜಲ ರೂಪದಿಂದ ಚಲಿಸುವಂತಹ ಸ್ವರೂಪ

ವುಳ್ಳವನು. (ಶಂ॥ ಮ) ಅಕ್ಷರಂ–ಓಮ್, ಅಕ್ಷರಾಯ ನಮಃ. (ಶಂ) "ಕ್ಷರಸ್ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ" (ಗೀ॥ ೧೫॥ ೧೬) ಎಂಬಂತೆ ಕೂಟಸ್ಥನಾದಕಾರಣ ಅಕ್ಷರ ಶಬ್ದವಾಚ್ಯನು. (ಮ) ಅಕ್ಷರಂ–ಅನಶ್ವರಂ, ಸ್ಥಿರನಾದವನು. (ಅದವಾ) ಸಮಸ್ತ ಭೂತಗಳೂ ಇವನಲ್ಲಿ ಚಿಲಿಸುತಲಿರುವುದೆಂತಲಾದರೂ ಹೇಳಬಹುದು.

## (೪೮೩ನೇ ನಾಮವು) ಅವಿಜ್ಞಾತಾ,

## ಓಮ್॥ ಅವಿಜ್ಞಾತ್ರೇನಮಃ

(ಶಂ॥ ಭಾ) ಆತ್ಮನಲ್ಲಿ ಕರ್ತೃತ್ವಾದಿ ವಿಕಲ್ಪ ವಿಜ್ಞಾನವು ಕಲ್ಪಿತ ವಾಗಿರುವುದೆಂಬ ಕಾರಣದಿಂದ ಅದರ ವಾಸನಾವಶದಿಂದ ಮುಚ್ಚಲ್ಪಟ್ಟ ಜೀವನು ವಿಜ್ಞಾತಾ; ಅವನಿಗಿಂತಲೂ ವಿಲಕ್ಷಣನಾದ ವಿಷ್ಣುವು 'ಅವಿಜ್ಞಾತಾ' ಎನಲ್ಪಡುವನು. (ವಿ॥ ಭಾ) ಸಾಧುಗಳ ಅನಂತಾಪರಾಧಗಳನ್ನು ಕಂಡರೂ ಕೂಡ ದಂಡಿಸದೇ ಕ್ಷಮಿಸುವನೆಂಬುವುದು. ಮಾತ್ರವಲ್ಲಳು; ಮತ್ತೇನೆಂದರೆ:–ಅಂತಹ ಅಪರಾಧಗಳ ಪರಿಜ್ಞಾನವೇ ಇಲ್ಲದವನು ಪ್ರಪನ್ನಾಪರಾಧಗಳನ್ನು ಎಣಿಸದೇ ಇರುವುದು ಕೂಡ ಗುಣವೇ ತಾನೆ; ಆದುದರಿಂದಲೇ ಅಸ್ಮತ್ಪಾತ ಪಾದರಾದ ಕೂರನಾಥರೂ "ಸರ್ವಜ್ಞತಾಮೇವ ಮುಪಾಲಭಾಮಹೇ ತ್ವಂ ಹ್ಯಜ್ಞಏವಾಶ್ರಿತ ದೋಷಜೋಷಣಃ" ಎಂಬದಾಗಿ ಆಶ್ರಿತಾ ಪರಾಧ ರಾಶಿಗಳ ಪರಿಜ್ಞಾನರಹಿತವಾದ ಇವನ ಸರ್ವಜ್ಞತೆಯನ್ನು ನಿಂದಿಸಿರುವರು. ಯಾರಾದರೆ ಜ್ಞಾನಮಾತ್ರನೆಂದು ಸರ್ವಜ್ಞನಾದ ಪರಮಪುರುಷನಿಗೆ ಸರ್ವ ಪ್ರಕಾರದಿಂದಲೂ ಅಜ್ಞತ್ವವನ್ನು ಹೇಳುವರೊ ಅಂತವರು ಶ್ರುತಿ ಆಚಾರ್ಯಸೇವೇ ಇವುಗಳಿಗೆ ತಕ್ಕ ಔಚಿತ್ಯಾನುರೂಪವಾದ ನ್ಯಾಯಶೂನ್ಯರಾಗಿರುವುದರಿಂದ ಶೋಚನೀಯರಾಗಿರುವರಲ್ಲದೆ ನಿರಸನೀಯರಲ್ಲವು (ಮ) ರಜ್ಜುವನ್ನು ನೋಡಿ ಸರ್ಪವೆಂಬದಾಗಿ ನೆನೆಯುವ ಭ್ರಾಂತಿ ಜ್ಞಾನವಿಲ್ಲದವನು. ॥೪೮೩॥

## (೪೮೪ನೇ ನಾಮವು) ಸಹಸ್ರಾಂಶುಃ,

## ಓಮ್॥ ಸಹಸ್ರಾಂಶವೇನಮಃ.

(ಶಂ॥ ಭಾ) ಸೂರ್ಯಾದಿಗಳಲ್ಲಿ ಪ್ರವೇಶಿಸಿರುವ ಕಿರಣಗಳು ಇವನದೇ ಆಗಿರುವುದರಿಂದ "ಸಹಸ್ರಾಂಶುಃ" ಎನ್ನಲ್ಪಡುವನು. (ವಿ॥ ಭಾ) ಅಪರಿಮಿತ ಜ್ಞಾನವುಳ್ಳವನು. ಒಳ್ಳೇದು :— ಆಶ್ರಿತಾಪರಾಧವ್ಯತಿರಕ್ತವಿಷಯದಲ್ಲಿ ಸರ್ವಜ್ಞನೆನ್ನುವುದು ಹೇಗೆ ಸಂಗತವಾಗಹುದೆಂದರೆ? ಆಶ್ರಿತಾಪರಾಧ ಪರಿಜ್ಞಾನವಿಲ್ಲದವನೆಂಬುವುದು ಅಪರಾಧಗಳನ್ನು ಗಮನಿಸದೆ ಉಪೇಕ್ಷಿಸುವುದುತಾನೇ; ಇಂತಹ ಉಪೇಕ್ಷೆಯು "ದೋಷೋಯದ್ಯಪಿ ತಸ್ಯಸ್ಯಾತ್" ॥ (ಶ್ರೀರಾ॥ ಯು) ಅಪಿಚೇತ್ಸು ದುರಾಚಾರೋ ಭಜತೇ ಮಾಮನನ್ಯಭಾಕ್" ॥ (ಗೀತಾ॥ ೯॥ ೩೦) ಇತ್ಯಾದಿಗಳಲ್ಲಿ ಪ್ರಸಿದ್ಧವಾಗಿರುವುದು. ॥೪೮೪॥

(೪೮೫ನೇ ನಾಮವು) ವಿಧಾತಾ,

ಓಮ್॥ ವಿಧಾತ್ರೇನಮಃ.

(ಶಂ॥ ಭಾ) ಸರ್ವಭೂತಗಳಿಗೂ ಆಧಾರಭೂತಗಳಾದ ಶೇಷದಿಗ್ಗಜಪರ್ವತಗಳಿಗೆ ವಿಶೇಷವಾಗಿ ಆಧಾರಭೂತನಾಗಿರುವಂತವನು. (ಮ) ಹಿರಣ್ಯಗರ್ಭನಾದ ಚತುರ್ಮುಖನಿಗೆಜನಕನು. ಇದರಿಂದ "ವಿಧಾತಾ ಧಾತುರುತ್ತಮಃ" ಎಂಬ ಸ್ಥಳದಲ್ಲಿರುವ ನಾಮಕ್ಕಿಂತಲೂ ಅರ್ಥಭೇದವು ಸಿದ್ಧವಾಯಿತು. (ವಿ॥ ಭಾ) ಒಂದುವೇಳೆ ಪರಮಾತ್ಮನು ಆಶ್ರಿತಾಪರಾಧಗಳನ್ನು ಪರಿಗಣಿಸದೇ ಇದ್ದರೂ ಪಾಪಫಲಕ್ಕೆ ಪ್ರತಿನಿಯತಗಳಾದ ಯಮಯಾತನಾದಿಗಳು ಇವನನ್ನು ಬಾಧಿಸಲಾರವೋ? ಎಂದರೆ ಅವುಗಳೂ ಪರಮ ಪುರುಷನಿಗೆ ಅಧೀನವಾಗಿರುವುದರಿಂದ ಬಾಧಿಸಲಾರವೆಂಬ ಅಭಿಪ್ರಾಯವನ್ನು ಮುಂದಿನ ನಾಮವು ಹೇಳುವುದು. ಅಪರಾಧಾನುಗುಣವಾದ ದಂಡನವನ್ನು ವಿಧಿಸುವಂತವನೂ ಅವನೇತಾನೆ;—ಈ ಅರ್ಥವು "ಅಹಮಮರವರಾರ್ಚಿತೇನ ಧಾತ್ರಾ ಯಮ ಇತಿಲೋಕಹಿತಾಹಿತೇನಿಯುಕ್ತಃ" (ವಿ॥ ಪು॥ ೩॥ ೭॥೧೫) ಎಂಬೀವಚನಮುಖವಾಗಿ ಯಮನಿಂದ ಹೇಳಲ್ಪಟ್ಟಿರುವದಷ್ಟೆ. ಇಲ್ಲಿ ಬ್ರಹ್ಮ ವೈಷ್ಣವ ನಾರಸಿಂಹ ಲೈಂಗ ವೈಷ್ಣವಧರ್ಮ ಶ್ರೀವಿಷ್ಣುತತ್ವ ಭಾಗವತಾದಿ ಮಹಾಪುರಾಣಗಳಲ್ಲಿರುವ ಸಮಸ್ತವಾದ ಯಮಕಿಂಕರಸಂವಾದಗಳನ್ನು ನೋಡಿಕೊಳ್ಳಬಹುದು. ॥೪೮೫॥

## (೭೮೬ನೇ ನಾಮವು) ಕೃತಲಕ್ಷಣಃ,

### ಓಮ್|| ಕೃತಲಕ್ಷಣಾಯ ನಮಃ.

(ಶಂ|| ಭಾ) ನಿತ್ಯವಾಗಿ ನಿಷ್ಪನ್ನವಾದ ಚೈತನ್ಯಸ್ವರೂಪನಾದಕಾರಣದಿಂದ "ಕೃತಲಕ್ಷಣಃ." ಮತ್ತು "ವೇದಾಶ್ಶಾಸ್ತ್ರಾಣಿ ವಿಜ್ಞಾನಮೇತತ್ಸರ್ವಂ ಜನಾರ್ದನಾತ್" ಎಂಬಂತೆ ಶಾಸ್ತ್ರವಚನರೂಪವಾದ ಲಕ್ಷಣವನ್ನು ಮಾಡುವಂತವನು. ಅಥವಾ ಸಜಾತೀಯ ವಿಜಾತೀಯ ವ್ಯವಚ್ಛೇದಕವಾಗಿರುವ ಲಕ್ಷಣವು ಸರ್ವವಸ್ತುಗಳಿಗೂ ಇವನಿಂದ ಮಾಡಲ್ಪಡುವುದರಿಂದ ಯದ್ವಾ (ಶಂ|| ಮ) ಶ್ರೀವತ್ಸವೆಂಬ ಗುರ್ತನ್ನು ತನ್ನ ವಕ್ಷಸ್ಥಲದಲ್ಲಿವುಳ್ಳವನಾದುದರಿಂದ "ಕೃತಲಕ್ಷಣಃ."

(ವಿ|| ಭಾ) ಲಕ್ಷಣವನ್ನು ಏರ್ಪಡಿಸಿದವನು. ಶ್ರೀಮದ್ರಾಮಾಯಣ ಭಾರತಾದಿಗಳಲ್ಲಿ ಗ್ರಾಹ್ಯಗಳಾದ ಪ್ರಾಣಿಗಳಿವು ಎಂಬದಾಗಿ ಅವನೇ ತನ್ನಲ್ಲಾಭಿಮುಖ್ಯಮಾತ್ರರೂಪವಾದ ಲಕ್ಷಣವನ್ನು "ಮಿತ್ರಭಾವೇನ ಸಂಪ್ರಾಪ್ತಂ" (ಶ್ರೀರಾ|| ಯು|| ೧೮|| ೩) "ಸಮ್ಯಗ್ವ್ಯವಸಿತೋಹಿಸಃ" (ಗೀ|| ೯|| ೩೦) ಎಂದು ಹೇಳಿರುವುದರಿಂದ ವಿಷ್ಣುಸಂಬಂಧವುಳ್ಳವನು ಉಪಾದೇಯನೆಂಬ ಲಕ್ಷಣವು ಸಿದ್ಧವಾದಮೇಲೆ ಇದಕ್ಕಿಂತಲೂ ಬೇರೆಯಾದದ್ದು ತ್ಯಾಜ್ಯಕೋಟಿಯಲ್ಲಿಸೇರಿದಂತೆ ಆಯಿತು. "ಚಕ್ರಾಂಕಿತಾಃಪ್ರವೇಷ್ಟವ್ಯಾ ಯಾವದಾಗಮನಂಮಮ | ನಾಮುದ್ರಿತಾಃಪ್ರವೇಷ್ಟವ್ಯಾ ಯಾವ ದಾಗಮನಂಮಮ|| ಭವತಾಂ ಭ್ರಮತಾಮತ್ರ ವಿಷ್ಣುಸಂಶ್ರಯಮುದ್ರಯಾ| ವಿನಾಜ್ಞಾಭಂಗಕೃನ್ನೈವ ಭವಿಷ್ಯತಿನಕಃಶ್ಚಿತ್|| ಚಕ್ರಾದಿ ಧಾರಣಂ ಪುಂಸಾಂ ಪರಸಂಬಂಧವೇದನಂ| ಪತಿವ್ರತಾನಿಮಿತ್ತಂಹಿ ವಲಯಾದಿವಿಭೂಷಣಂ||" ಇತ್ಯಾದಿ ಹರಿವಂಶ ವಿಷ್ಣುಧರ್ಮತತ್ವಾದಿಗಳಲ್ಲಿ ಭಗವದ್ದಾಸ್ಯಸೂಚಕವಾದ ಚಕ್ರಾದಿಧಾರಣ ರೂಪಲಕ್ಷಣವು ಪ್ರತಿಪಾದಿಸಲ್ಪಟ್ಟಿರುವುದರಿಂದ ಪಕ್ಷಪಾತಾದಿ ದೋಷಪ್ರಸಕ್ತಿಗೆ ಅವಕಾಶವೇ ಇಲ್ಲವು. (ಮ) ತನ್ನಿಂದ ರಚಿಸಲ್ಪಟ್ಟ ವೇದಶಾಸ್ತ್ರವನ್ನಾದರೂ ಪ್ರಪಂಚವನ್ನಾದರೂ ನೋಡುವಂತವನು. ||೭೮೬||

ಈ ೫೧ನೇ ಶ್ಲೋಕದಲ್ಲಿ ಪ್ರಕೃತಗಳಾದ (೧೧) ನಾಮಗಳಿಗೂ "ಕಾಮಂದತ್ವಾಪ್ಯರ್ಥಕಾಮೌ ನಿವರ್ತ್ಯ ವಿಷಯಾಂತರಾತ್ | ತಾ

ಭ್ಯಾಂ ಹಿತಸ್ಯಧರ್ಮಸ್ಯ ರಕ್ಷಣಾತ್ "ಧರ್ಮಗುಪ್" (೪೭೬) ಸ್ಮೃತಃ॥ ಸರ್ವಂಜನಂ ಧಾರ್ಮಿಕಯಸ್ತು ಲೀಲಾನುಗ್ರಹಲಕ್ಷಣಂ। ಧರ್ಮಂಕರೋತಿಯಸ್ಮಾದ್ಧಿ ತಸ್ಮಾ "ದ್ಧರ್ಮಕೃ" (೪೭೭ ದುಚ್ಯತೇ॥ ಸಾಧಾರಣೋಪಕರಣಂ ಧರ್ಮೋಯಸ್ಯಾಸ್ತಿಕೇವಲಂ। ಸವೈ "ಧರ್ಮೀ" (೪೭೮) ತಿವಿಜ್ಞೇಯಃಷ್ಷಡರ್ಣೋ ಧರ್ಮದೋಮನುಃ॥ ನಿರುಪಾಧಿಕಸದ್ಭಾವಾನ್ನಿತ್ಯಪಾಡ್ಗುಣ್ಯಯೋಗತಃ। "ಸತ್" (೪೭೯) ಶಬ್ದೇನೋಚ್ಯತೇವಿಷ್ಣುರ್ವೇದವೇದಾನ್ತಪಾರಗೈಃ॥ ಅಪಕ್ಷಯವಿನಾಶಾದಿ ವರ್ಜಿತೋ "ಽಕ್ಷರಃ" ಉಚ್ಯತೇ। ತಸ್ಮಾತ್ "ಅಕ್ಷರಸತ್" ಇತಿಹ್ಯೇಕನಾಮಚಶಬ್ದ್ಯತೇ॥ ಅಸತಾಂಯಸ್ಸದಾನಂತ ಭಾವಾಖ್ಯಾಭಿಪ್ರದಾನತಃ। "ಅಸತ್" (೪೮೦) ಇತ್ಯುಚ್ಯತೇಸದ್ಭಿ ಸ್ತಸ್ಮಾದೇವ "ಕ್ಷರಂ" (೪೮೧) ಚಸಃ॥ ಪ್ರಪನ್ನಕೃತಪಾಪಾನಾಂ ಕಿಂಚಿದ ಪ್ಯವಿಚಾರಣಾತ್। "ಅವಿಜ್ಞಾತಾ" (೪೮೨) ಇತಿಕಥಿತೋ ಬುಧೈಸ್ತದ್ಗುಣಪಾರಗೈಃ ॥ ಅಂಶವೋಬುದ್ಧಯಃಪ್ರೋಕ್ತಾಸ್ಸಹಸ್ರಂ ಸಂತಿಯಸ್ಯತೇ। "ಸಹಸ್ರಾಂಶು" (೪೮೩) ರಿತಿಖ್ಯಾತೋ ಹ್ಯಷ್ಟಾರ್ಣೋಧೀಪ್ರದೋಮನುಃ ॥ ತಾದಧೀನ್ಯಾದ್ವ್ಯಮಾದೀನಾಂ "ವಿಧಾತಾ" (೪೮೪) ಇತ್ಯುಚ್ಯತೇಬುಧೈಃ॥ ಕೃತಂಹಿಲಾಂಛನಂಯೇನ ಉಪಾದೇಯೋಷುಜಂತುಷು ॥ ಪರಮಾತ್ಮಾಹೃಷೀಕೇಶ ಸ್ಸತುಸ್ಯಾತ್ "ಕೃತಲಕ್ಷಣಃ" (೪೮೬) ಇತ್ಯಾದಿ ವಿವೃತಿಯನ್ನರಿಯಬೇಕು.

ಮೂ॥ ಗಭಸ್ತಿನೇಮಿ ಸ್ಸತ್ವಸ್ಥ ಸ್ಸಿಂಹೋ ಭೂತ
ಮಹೇಶ್ವರಃ । ಅದಿದೇವೋ ಮಹಾದೇವೋ ದೇವೇ
ಶೋ ದೇವಭೃ ದ್ಗುರುಃ ॥೫೨॥

(೪೮೭ನೇ ನಾಮವು) ಗಭಸ್ತಿನೇಮಿಃ,

ಓಮ್॥ ಗಭಸ್ತಿನೇಮಯೇನಮಃ.

(ಶಂ॥ ಭಾ) ಸೂರ್ಯಮಂಡಲಮಧ್ಯದಲ್ಲಿ ಸೂರ್ಯರೂಪದಿಂದ ಇರುವಂತವನು. (ವಿ॥ ಭಾ) ಯಾವಕಾರಣದಿಂದ ಇವನು ಪ್ರಕಾಶರೂಪವಾದ ಸಹಸ್ರಾರ ಚಕ್ರವುಳ್ಳವನಾಗಿ ಭಕ್ತರಿಗೆ ರಕ್ಷಕನಾಗಿರುವನೋ ಆ ಕಾರ

ಣದಿಂದ ಇವರು ಯಮನಿಂದಲಾದರೂ ಅವನ ಕಿಂಕರರಿಂದಲಾದರೂ ಭಯಪಡಲಾರರು. ಇವರುಗಳ ರಕ್ಷಣಕ್ಕಾಗಿ ಅತಿಪ್ರಕಾಶವಾದ ಸಹಸ್ರನೇಮಿಯುಳ್ಳ ಚಕ್ರವುಳ್ಳವನೆಂದರ್ಥವು. ಈಅರ್ಥವನ್ನು "ವಸತಿಮನಸಿಯಸ್ಯ" (ಶ್ರೀವಿ॥ ಪು॥ ೩॥ ೭॥ ೩೫) ಎಂಬಸ್ಥಲದಲ್ಲಿ ಕಾಣಬಹುದು. (ಮ) ಕಿರಣಸಮೂಹಗಳುಳ್ಳವನು. ॥೪೮೭॥

## (೪೮೮ನೇ ನಾಮವು) ಸತ್ವಸ್ಥಃ,

## ಓಮ್॥ ಸತ್ವಸ್ಥಾಯನಮಃ.

(ಶಂ॥ ಮ) ಪ್ರಕಾಶಕವಾದ ಸತ್ವಗುಣದ ಅಧಿಷ್ಠಾನದಿಂದಲಾದರೂ (ಶಂ॥ ಮ) ಸರ್ವಸತ್ವ (ಪ್ರಾಣಿ) ಗಳಲ್ಲಿರುವುದರಿಂದಲಾದರೂ "ಸತ್ವಸ್ಥಃ." (ವಿ॥ ಭಾ) ಮತ್ತು ಇವರುಗಳನ್ನು ಕ್ಲೇಶಪಡಿಸುವ ಕರ್ಮಾದಿಗಳೂ ಇಲ್ಲವಾದ್ದರಿಂದ ಯಮನೇಮೊದಲಾದವರು ಇವರನ್ನು ಸಮೀಪಿಸುವದಕ್ಕೆ ಆಗುವುದಿಲ್ಲವು. ಕರ್ಮವಿಲ್ಲದ್ದಕ್ಕೆಕಾರಣವು ಯಾವದೆಂದರೆ– ಅದಕ್ಕಾಗಿ ಈನಾಮವು. ಸತ್ವದಲ್ಲಿ (ಮನಸ್ಸಿನಲ್ಲಿ)ರುವಂತವನು. ಎಂದರೆ—ಇವರ ಮನಸ್ಸಿನಲ್ಲಿ ಪರಮಪುರುಷನು ಇರುವುದರಿಂದ ಕರ್ಮಗಳು ಅತ್ಯಂತವಾಗಿ ನಿರ್ಮೂಲವಾಗುವುವು. ಈ ಅರ್ಥವು "ಹೃದಿಯದಿ ಭಗವಾನನಾದಿರಾಸ್ತೆ" ಎಂಬೀ (ವಿ॥ ಪು॥ ೨॥ ೨॥ ೨೫) ಮೊದಲಾದ ಅನೇಕ ಪ್ರಮಾಣಗಳಲ್ಲಿ ಪ್ರತಿಪಾದಿಸಲ್ಪಟ್ಟಿರುವುವು. ॥೪೮೮॥

## (೪೮೯ನೇ ನಾಮವು) ಸಿಂಹಃ,

## ಓಮ್॥ ಸಿಂಹಾಯನಮಃ.

(ಶಂ॥ ಭಾ) ಪರಾಕ್ರಮಶಾಲಿಯಾಗಿರುವುದರಿಂದ ಸಿಂಹದಂತೆ ಇರುವಂತವನು. ಇಲ್ಲಿ ನೃಶಬ್ದಲೋಪವುಳ್ಳ ಸಿಂಹಶಬ್ದವಿದ್ದರೂ "ಸತ್ಯಭಾಮಾ" ಶಬ್ದದಂತೆ ನೃಸಿಂಹಾವತಾರವುಳ್ಳವನೆಂದರಿಯಬೇಕು. (ವಿ॥ ಭಾ) ಇದನ್ನರಿಯದೆ ಒಂದುಕಾಲದಲ್ಲಿ ಯಮಾದಿಗಳು ಈ ಭಕ್ತರನ್ನು ಗ್ರಹಿಸುವಪಕ್ಷದಲ್ಲಿ ಅವರಮೇಲೆ ಸಿಂಹದಂತೆ ಮಹಾಭಯಂಕರನಾಗಿ ಬೀಳುವಂತವನು. ಈ ಅರ್ಥವನ್ನು ಲೈಂಗದಲ್ಲಿ ಮಾರ್ಕಂಡೇಯರು "ವಾ

ಸ್ಸುದೇವ ಪರಂದೃಷ್ಟ್ವಾ ವೈಷ್ಣವಂ ದಗ್ಧಕಿಲ್ಬಿಷಂ| ದೇವಾವಿಭೀತಾ ಸ್ಸಂಯಾನ್ತಿ ಪ್ರಣಿಪತ್ಯಯಥಾಗತಂ|| ದೃಷ್ಟ್ವಾ ಯಮೋಪಿವೈಭಕ್ತಂ ವೈಷ್ಣವಂದಗ್ಧಕಿಲ್ಬಿಷಂ| ಉತ್ಥಾಯಪ್ರಾಂಜಲಿರ್ಭೂತ್ವಾ ನನಾಮರವಿನಂದನಃ|| ತಸ್ಮಾತ್ಸಂಪೂಜಯೇದ್ಭಕ್ತ್ಯಾ ವೈಷ್ಣವಾನ್ವಿಷ್ಣುವನ್ನರಃ || ಸಯಾತಿವಿಷ್ಣುಸಾಯುಜ್ಯಂ ನಾತ್ರಕಾರ್ಯಾ ವಿಚಾರಣಾ "|| ಎಂದುಹೇಳಿರುವರಲ್ಲದೆ ಅಲ್ಲಿಯೇ ಕೌಶಿಕೋಪಾಖ್ಯಾನದಲ್ಲಿ ಭಗವದ್ಗಾಯಕರನ್ನು ಕುರಿತು "ಕೌಶಿಕಾದೀಂಸ್ತಥಾದೃಷ್ಟ್ವಾ ಬ್ರಹ್ಮಾಲೋಕಪಿತಾಮಹಃ| ಪ್ರತ್ಯುದ್ಗಮ್ಯಯಥಾನ್ಯಾಯ್ಯಂ ಸ್ವಾಗತೇನಾಭ್ಯ ಪೂಜಯತ್" ಇತ್ಯಾದಿಗಳನ್ನು ಕಾಣಬೇಕು. ಮತ್ತು ಶ್ರೀವಿಷ್ಣುಸ್ತವದ ನರಕಪ್ರಸ್ತಾಪದಲ್ಲಿಯೂ "ಹರಿಪಾದ ಪ್ರಸನ್ನಾನಾಂ + ಪ್ರಭಾವಾತ್ಪರಮೇಷ್ಠಿನಃ" ಇತ್ಯಾದಿಗಳನ್ನೂ ನೋಡಬಹುದು. (ಮ) ಸಂಹಾರಶೀಲನು. "ಸರ್ವದೃಕ್ಸಿಂಹಃ" ಎಂಬಸ್ಥಳದಲ್ಲಿ ವಿಕಪದವು. ||೪೪೯||

## (೪೫೦ನೇ ನಾಮವು) ಭೂತಮಹೇಶ್ವರಃ,

## ಓಮ್|| ಭೂತಮಹೇಶ್ವರಾಯನಮಃ.

(ಶಂ|| ಭಾ) ಭೂತಗಳಿಗೆ ಮಹೇಶ್ವರನು. ಅಥವಾ ಸತ್ಯವಾಗಿ ಅವನೇ ಮಹೇಶ್ವರನೆಂತಲೂ ಹೇಳಬಹುದು. (ವಿ|| ಭಾ) ಹಿಂದೆ ಹೇಳಿರುವಂತೆ ಅಂತಹ ಸಾಮರ್ಥ್ಯವುಳ್ಳವನಾಗಿರುವಿಕೆಗೆ ಕಾರಣವೇನಂದರೆ— ಭೂತಮಹೇಶ್ವರಃ—ಭೂತಗಳಿಗೆ ಈಶ್ವರರಾದ ಬ್ರಹ್ಮರುದ್ರಯಮಾದಿಗಳಿಗೆಲ್ಲರಿಗೂ ನಿಯಾಮಕನಾಗಿಯೂ ಅವರುಗಳಿಗೆ ಕಾರಣನಾಗಿಯೂ ಅವರನ್ನು ಅಡಗಿಸಿಕೊಂಡು ಆಳುವಂತಹ ದೃಢವಾದ ಮಹಾಪ್ರಭಾವವುಳ್ಳವನು. ||೪೫೦||

## (೪೫೧ನೇ ನಾಮವು) ಆದಿದೇವಃ,

## ಓಮ್|| ಆದಿದೇವಾಯನಮಃ.

(ಶಂ|| ಭಾ) ಇವನಿಂದ ಸರ್ವಭೂತಗಳೂ ತೆಗೆದುಕೊಳ್ಳಲ್ಪಡುವುದು. (ಶಂ|| ವಿ) ಸರ್ವರಿಗೂ ಆದಿಯಾದ ದೇವನು. (ಮ) ಜಗತ್ಕಾರ

ಣಭೂತರಿಗೆ ರಕ್ಷಕನೆಂತಲಾದರೂ ಬ್ರಹ್ಮಾದಿಗಳಿಂದ ಸ್ತುತಿಸಲ್ಪಡುವ ನೆಂತಲಾದರೂ ಪ್ರಲಯದಲ್ಲಿ ಕ್ರೀಡಿಸುವುದರಿಂದಲಾದರೂ ಆದಿಕೈಟಭ ರನ್ನು ಯುದ್ಧದಲ್ಲಿ ಜಯಿಸುವುದರಿಂದಲಾದರೂ "ಆದಿದೇವಃ." ಇದ ರಿಂದ "ಆದಿದೇವಃಪುರಂದರಃ" ಎಂಬೀನಾಮಕ್ಕಿಂತಲೂ ಅರ್ಥಭೇದವು ಸಿದ್ಧವಾಯಿತು. ॥೪೯೧॥

## (೪೯೨ನೇ ನಾಮವು) ಮಹಾದೇವಃ,

### ಓಮ್॥ ಮಹಾದೇವಾಯನಮಃ.

(ಶಂ॥ ಭಾ) ಸರ್ವಭಾವಗಳನ್ನೂ ಬಿಟ್ಟು ಆತ್ಮಜ್ಞಾನದಿಂದ ಯೋ ಗೈಶ್ವರ್ಯದಲ್ಲಿ ಪೂಜ್ಯನಾಗಿರುವಂತವನು. (ವಿ॥ ಭಾ) ಅಂತಹ ಬ್ರಹ್ಮಾ ದಿಗಳೆಲ್ಲರನ್ನೂ ಬಂಧುಜನರನ್ನಂತೆ ಇಟ್ಟುಕೊಂಡು ಕ್ರೀಡಿಸುವಂತ ವನು. ॥೪೯೨॥

## (೪೯೩ನೇ ನಾಮವು) ದೇವೇಶಃ,

### ಓಮ್॥ ದೇವೇಶಾಯನಮಃ.

( ಶಂ॥ ವಿ॥ ಭಾ ) ಅಂತಹ ದೇವತೆಗಳೆಲ್ಲರಿಗೂ ಸ್ವಾಮಿಯಾದ ವನು. ॥೪೯೩॥

## (೪೯೪ನೇ ನಾಮವು) ದೇವಭೃತ್,

### ಓಮ್॥ ದೇವಭೃತೇನಮಃ.

(ವಿ॥ ಭಾ) ಅವರುಗಳನ್ನು ತಕ್ಕಮಟ್ಟಿಗೆ ವಿನಿಯೋಗಿಸಿಕೊ ಳ್ಳುವಂತವನು. ॥೪೯೪॥

## (೪೯೫ನೇ ನಾಮವು) ಗುರುಃ,

### ಓಮ್॥ ಗುರವೇನಮಃ.

(ವಿ॥ಭಾ) ವೇದಗಳಿಂದ ಅವರವರ ಅಧಿಕಾರವಿದೆಂದು ಅವರಿಗೆ ಉ ಪದೇಶಿಸುವುದರಿಂದ ಗುರುವಾಗಿರುವಂತವನು. ಇಂತಹ ಗುರುತ್ವವು ಶ್ರೀಹಯಗ್ರೀವೋಪಾಖ್ಯಾನಪ್ರಸಿದ್ಧವಾಗಿರುವುದು. (ಶಂ॥ ಮ) ದೇವ ಭೃದ್ಗುರುಃ—ದೇವತೆಗಳನ್ನು ಆಳುವಂತವನು ದೇವಭೃತ್—ದೇವೇಂ

ಪ್ರನು. ಅವನಿಗೂ ಆಜ್ಞಾಪ್ರದಾಯಕನು "ದೇವಭೃದ್ಗುರುಃ" ಎನ್ನು ಪ್ಪಡುವನು. ‖೪೯೫‖

ಈರೀತಿಯಾಗಿ ಇಲ್ಲಿ ಪ್ರಕೃತಗಳಾದ (೯) ನಾಮಗಳಿಗೂ "ಜ್ಯೋತಿರ್ವಿಶಿಷ್ಟನೇಮ್ಯಾಯಲ್ಲಕ್ಷಿತಂ ಚಕ್ರಮುತ್ತಮಂ| "ಗಭಸ್ತಿನೇಮಿ" (೪೮೭)ರ್ಯಸ್ಮಾತ್ತಸ್ತ ನವಾರ್ಣಃ ಪಾಪನಾಶಕಃ‖ ಸತ್ವೇಹೃದಿಸ್ಥಿತತ್ವಾದ್ಧಿ "ಸತ್ವಸ್ಥ" (೪೮೮) ಸ್ಸಮುದೀರಿತಃ| ಹರಿಭಕ್ತ್ಯಾದನವಿಜ್ಞಾಯ ದಣ್ಡೋ ಪ್ರಯತಮಾನಸಾನ್ ‖ ಹಿನಸ್ತಿಚಯಮಾದೀನ್ಯಸ್ಸ "ಸಿಂಹಃ" (೪೮೯) ಪರಿಕೀರ್ತಿತಃ| ಭೂತೇಶ್ವರಾಣಾಂಸಬ್ರಹ್ಮ ಯಮಾದೀನಾಂ ನಿಯಂತ್ರಣಾತ್‖ ಕಾರಣಂ ಜಗತಾಂಯಸ್ಯ ಸಸ್ಮಾತ್ "ದ್ಭೂತಮಹೇಶ್ವರಃ" (೪೯೦) "ಆದಿದೇವೋ" (೪೯೧) ಹಿಭವತಿಬ್ರಹ್ಮಾದೀನ್ಯೋ ವಿಶೇಷತಃ| ಬ್ರಹ್ಮಾದಿಭಿಃಕ್ರೀಡತಿಯೋ "ಮಹಾದೇವ" (೪೯೨) ಸ್ಸಉಚ್ಯತೆ‖ ಬ್ರಹ್ಮಾದೀನಾಂಚ "ದೇವೇಶೊ" (೪೯೩) ಯಥಾರ್ಹವಿನಿಯೋಜಕಃ‖ ಬ್ರಹ್ಮಶಕ್ರಯಮಾದೀನಾಂ ಭರಣಾ "ದ್ದೇವಭೃ" (೪೯೪) ತ್ಸಸ್ಮೃತಃ| ಬ್ರಹ್ಮೇಂದ್ರವರುಣಾದಿಭ್ಯೋ "ಗುರು" (೪೯೫) ರ್ವೇದೋಪದೇಶನಾತ್‖ ಎಂಬೀರೀತಿಯಿಂದ ವಿವರಣವನ್ನು ಕಾಣಬಹುದು.

ಮೂ‖ ಉತ್ತರೊ ಗೋಪತಿ ರ್ಗೋಪ್ತಾ ಜ್ಞಾನ
ಗಮ್ಯಃ ಪುರಾತನಃ| ಶರೀರ ಭೂತಭೃ ದ್ಭೋಕ್ತಾ
ಕಪೀಂದ್ರೋ ಭೂರಿದಕ್ಷಿಣಃ ‖೫೩‖

(೪೯೬ನೇ ನಾಮವು) ಉತ್ತರಃ,

ಓಮ್‖ ಉತ್ತರಾಯನಮಃ.

(ಶಂ‖ ಭಾ) ಜನ್ಮಸಂಸಾರದದೆಸೆಯಿಂದ ಪ್ರಾಣಿಗಳನ್ನು ಉತ್ತಾರಣಮಾಡುವಂತವನು. ಅಥವಾ (ಶಂ‖ ಮ) ಸರ್ವೋತ್ತಮನು. (ವಿ‖ ಭಾ) ಈ ಬ್ರಹ್ಮಾದಿ ದೇವತೆಗಳಿಗೆ ಅಸುರರಿಂದುಂಟಾಗುವ ಆಪತ್ತುಗಳನ್ನುಬಿಡಿಸಿ ಕಾಪಾಡುವಂತವನು ‖೪೯೬‖

(೪೯೭ನೇ ನಾಮವು) ಗೋಪತಿಃ,

ಓಮ್‖ ಗೋಪತಯೇನಮಃ.

(ಶಂ॥ ಮ) ಗೋವುಗಳ ರಕ್ಷಣಾರ್ಥವಾಗಿ ಗೋಪವೇಷವನ್ನು ಧರಿಸಿದವನು. ಅಥವಾ ಭೂದೇವಿಗೆ (ಮ) ಇಂದ್ರಿಯಗಳಿಗಾಪರೂ ಅಧಿಪತಿಯಾದವನು. (ವಿ॥ ಭಾ) ಛಂದಸ್ಸೆಂತಲೂ ಭಾಷಾಎಂತಲೂ ಹೇಳಲ್ಪಡುವ ವಾಕ್ಯಗಳಿಗೆಲ್ಲವೂ ಪ್ರಭುವು. ॥೪೯೭॥

(೪೯೮ನೇ ನಾಮವು) ಗೋಪ್ತಾ,

ಓಮ್॥ ಗೋಪ್ತ್ರೇನಮಃ.

(ಶಂ॥ ಭಾ) ಸಕಲಜಗದ್ರಕ್ಷಕನು. (ವಿ॥ ಭಾ) ಸಕಲ ವಿದ್ಯಾರಕ್ಷಣದಿಂದ ಕಾಪಾಡುವಂತವನು. ॥೪೯೮॥

(೪೯೯ನೇ ನಾಮವು) ಜ್ಞಾನಗಮ್ಯಃ,

ಓಮ್॥ ಜ್ಞಾನಗಮ್ಯಾಯನಮಃ.

(ಶಂ॥ ಭಾ) ಕರ್ಮದಿಂದಲಾದರೂ ಜ್ಞಾನಕರ್ಮಗಳಿಂದಲಾದರೂತಿಳಿಯಲ್ಪಡದೆ ಜ್ಞಾನಮಾತ್ರದಿಂದ ತಿಳಿಯಲ್ಪಡುವಂತವನು. (ವಿ॥ಭಾ)ಪರವಿದ್ಯೆಯಿಂದ ತಿಳಿಯಲ್ಪಡುವ ಸಮಾಧಿಯಿಂದ ಹೊಂದಲ್ಪಡುವಂತವನು. (ಮ) ವೇದಾಂತಜನ್ಯವಾದ ಜ್ಞಾನಕ್ಕೆ ಗೋಚರನಾಗುವಂತವನು. ॥೪೯೯॥

(೫೦೦ನೇ ನಾಮವು) ಪುರಾತನಃ,

ಓಮ್॥ ಪುರಾತನಾಯನಮಃ.

(ಶಂ॥ ಭಾ) ಕಾಲಪರಿಚ್ಛಿನ್ನನಲ್ಲವಾದಕಾರಣ ಮೊದಲಿನಿಂದಲೂ ಇರುವಂತವನು (ವಿ॥ ಭಾ) ಈರೀತಿಯಿಂದ ವಿದ್ಯಾಪ್ರವರ್ತನವು ಈಗ ಮಾತ್ರವಲ್ಲವು; ಕಿಂತು ಪ್ರತಿಕಲ್ಪದಲ್ಲಿಯೂ ಇಂತಹ ವಿದ್ಯಾಪ್ರವರ್ತಕತ್ವವಿರುವುದರಿಂದ ಪುರಾತನನು. ಎಂದರೆ ಅನಾದಿಕಾಲದಿಂದ ವಿದ್ಯಾಪ್ರವರ್ತಕನಾಗಿರುವನೆಂದರ್ಥವು. ॥೫೦೦॥

ಈ ರೀತಿಯಾಗಿ ಶ್ರೀಪರಾಶರ ಭಟ್ಟಾರ್ಯ ಭಾಷಿತವಾದ
ಶ್ರೀಭಗವದ್ಗುಣ ದರ್ಪಣವೆಂಬ ಶ್ರೀವಿಷ್ಣು ಸಹಸ್ರನಾಮ ಭಾಷ್ಯದಲ್ಲಿ
ಪಂಚಮ ಶತಕವು ಸಮಾಪ್ತವು.

## (೫೦೧ನೇ ನಾಮವು) ಶರೀರಭೂತಭೃತ್,

ಓಮ್|| ಶರೀರಭೂತಭೃತೇನಮಃ.

(ಶಂ|| ಭಾ) ಶರೀರಾರಂಭಕಗಳಾದ ಭೂತಗಳನ್ನೂ (ಮ) ಶರೀರಗಳನ್ನೂ ಪೃಥಿವ್ಯಾದಿ ಭೂತಗಳನ್ನೂ (ವಿ|| ಭಾ) ತನಿಗೆ ಶರೀರಗಳಾದ ತತ್ವಗಳೆಲ್ಲವನ್ನೂ ಧರಿಸುವಂತವನು. ||೫೦೧||

## (೫೦೨ನೇ ನಾಮವು) ಭೋಕ್ತಾ,

ಓಮ್|| ಭೋಕ್ತ್ರೇನಮಃ.

(ಶಂ|| ಭಾ) ಪಾಲಕನಾದ ಕಾರಣದಿಂದಲಾದರೂ ಅಥವಾ (ಶಂ|| ಮ) ಪರಮಾನಂದ ಸಮೂಹಸಂಭೋಗದಿಂದಲಾದರೂ (ವಿ|| ಭಾ) ಹವ್ಯಕವ್ಯಭೋಕ್ತಾ ಆಗಿರುವುದರಿಂದಲಾದರೂ "ಭೋಕ್ತಾ" ಎನ್ನಲ್ಪಡುವನು. ||೫೦೨||

## (೫೦೩ನೇ ನಾಮವು) ಕಪೀಂದ್ರಃ,

ಓಮ್|| ಕಪೀಂದ್ರಾಯನಮಃ.

(ಶಂ|| ಭಾ) ವರಾಹಾವತಾರವನ್ನು ಮಾಡಿದ ಶ್ರೀವರಾಹಮೂರ್ತಿಯು. ಅಥವಾ (ಶಂ|| ವಿ|| ಮ) ವಾನರಾಧಿಪತಿಯಾದ ಶ್ರೀರಾಮಚಂದ್ರನು. (ವಿ|| ಭಾ) ಎಂದರೆ ತನಿಗೆ ಯೋಗ್ಯವಲ್ಲದ ಮನುಷ್ಯಾವತಾರವನ್ನು ಮಾಡಿ ಅದರಲ್ಲಿ ವೇದೋಕ್ತಕರ್ಮಗಳನ್ನು ಪ್ರವರ್ತಿಸಿ ತನ್ನಂತೆಯೇ ವಾನರರೂಪವುಳ್ಳ ದೇವತೆಗಳೆಲ್ಲರಿಗೂ ಪ್ರಭುವಾದವನು. ಇದು "ಸರ್ವಲೋಕೇಶ್ವರಸ್ಸಾಕ್ಷಾಲ್ಲೋಕಾನಾಂ ಹಿತಕಾಮ್ಯಯಾ | ಸರ್ವೈಃಪರಿವೃತೋ ದೇವೈರ್ವಾನರತ್ವಮುಪಾಗತೈಃ" (ಶ್ರೀರಾ|| ಯು|| ೧೪೪|| ೧೬) ಎಂಬೀಪ್ರಮಾಣದಲ್ಲಿ ಪ್ರಸಿದ್ಧವಾಗಿರುವುದು. ||೫೦೩||

## (೫೦೪ನೇ ನಾಮವು) ಭೂರಿದಕ್ಷಿಣಃ,

ಓಮ್|| ಭೂರಿದಕ್ಷಿಣಾಯನಮಃ.

(ಶಂ|| ವಿ|| ಮ) ಲೋಕಮರ್ಯಾದಾಸ್ಥಾಪನಕ್ಕಾಗಿ ಅಶ್ವಮೇಧಾದಿಯಾಗಗಳನ್ನು ತಾನನುಷ್ಠಿಸಿ ಅವುಗಳಲ್ಲಿ ವಿಶೇಷ ದಕ್ಷಿಣೆಗಳನ್ನು ಕೊಟ್ಟವನು. ||೫೦೪||

ಈ (೫೩)ನೇ ಶ್ಲೋಕದಲ್ಲಿ ಪ್ರತಿಪಾದ್ಯಗಳಾದ (೯) ನಾಮಗಳಿಗೂ "ಅಪದುತ್ತರಣಾದ್ಯೋಸೌ ಬ್ರಹ್ಮಾದೇ "ರುತ್ತರಃ" (೪೯೬) ಸ್ಮೃತಃ | ಛಂದೋಭಾಷಾ ವೇಷವಾಚಾಂ ನಿರ್ವಾಹಾ "ದ್ಗೋಪತಿಃ" (೪೯೭) ಸ್ಮೃತಃ|| ಪಾಲನಾತ್ಸರ್ವವಿದ್ಯಾನಾಂ "ಗೋಪ್ತೇ" (೪೯೮) ತಿ ಪರಿಕೀರ್ತಿತಃ|| ಪರಯಾವಿದ್ಯಯಾವೇದ್ಯೋ "ಜ್ಞಾನಗಮ್ಯ" (೪೯೯) ಇತಿಸ್ಮೃತಃ|| ವಿದ್ಯಾಪ್ರದ್ಯೋತನಾದ್ಯೋಸೌ ಪ್ರತಿಕಲ್ಪಂ "ಪುರಾತನಃ" (೫೦೦) | ದೇಹಭೂತಂ ಜಗತ್ತತ್ವಂ ಪ್ರಕೃತ್ಯಾದಿ ಧರಾಂತಕಂ|| "ಶರೀರಭೂತಭೃತ್" (೫೦೧) ಪ್ರೋಕ್ತೋಬಿಭರ್ತೀತಿದಶಾಕ್ಷರಃ | ಹವ್ಯಂಕವ್ಯಂಚ ಯೋಭುಙ್ಕ್ತೇಸ "ಭೋಕ್ತಾ" (೫೦೨) ಪರಿಕೀರ್ತಿತಃ|| ಕಪಿರೂಪಸಂಪ್ರಪನ್ನಾನಾಂ ದೇವಾನಾಮೀಶ್ವರತ್ವತಃ| "ಕಪೀಂದ್ರ" (೫೦೩) ಇತಿವಿಖ್ಯಾತಸ್ಸಪ್ತಾರ್ಣೋಮನುನಾಯಕಃ|| ಹಯಮೇಧಾದಿಭಿರ್ಯಜ್ಞೈರ್ಜಗದಾಚಾರ್ಯಕಾಯವೈ| ಯಜಮಾನಸ್ಸವಿಜ್ಞೇಯಸ್ಸರ್ವದಾ "ಭೂರಿದಕ್ಷಿಣಃ" (೫೦೪) ಎಂಬೀರೀತಿಯಿಂದ ವಿವೃತಿಯನ್ನು ಕಾಣಬಹುದು.

ಮೂ|| ಸೋಮಪೋಽಮೃತಪ ಸ್ಸೋಮಃ ಪುರುಜಿ
ತ್ಪುರುಸತ್ತಮಃ | ವಿನಯೋ ಜಯ ಸ್ಸತ್ಯಸಂಧೋ
ದಾಶಾರ್ಹ ಸ್ಸಾತ್ವತಾಂಪತಿಃ ||೫೪||

(೫೦೫ನೇ ನಾಮವು) ಸೋಮಪಃ,

ಓಮ್|| ಸೋಮಪಾಯನಮಃ.

(ಶಂ|| ಮ) ಸರ್ವಯಜ್ಞಗಳಿಂದ ಆರಾಧಿಸಲ್ಪಡುವ ದೇವತಾರೂಪಿಯಾದಕಾರಣದಿಂದಲೂ ಧರ್ಮಮರ್ಯಾದಾ ಪ್ರದರ್ಶಕನಾದ ಯಜಮಾನರೂಪದಿಂದ ಇರುವುದರಿಂದಲಾದರೂ ಸೋಮ ಪಾನಮಾಡುವ ಕಾರಣದಿಂದಲಾದರೂ "ಸೋಮಪಃ" ಎನ್ನಲ್ಪಡುವನು. (ವಿ|| ಭಾ)

ಅಶ್ವಮೇಧವೆಂಬ ಮಹಾಯಜ್ಞದಲ್ಲಿ ಸೋಮಪಾನವನ್ನು ಮಾಡುವಂತವನು. ‖೫೦೫‖

## (೫೦೬ನೇ ನಾಮವು) ಅಮೃತಪಃ,
## ಓಮ್‖ ಅಮೃತಪಾಯನಮಃ.

(ಶಂ‖ ಭಾ) ತನ್ನ ಆತ್ಮರೂಪವಾದ ಅಮೃತರಸವನ್ನು ಪಾನ ಮಾಡುವುದರಿಂದಲಾದರೂ ಅಸುರರಿಂದ ಅಪಹರಿಸಲ್ಪಡುತಲಿರುವ ಅಮೃತವನ್ನು ರಕ್ಷಿಸಿ ಅದನ್ನು ದೇವತೆಗಳಿಗೆ ಪಾನಾರ್ಹವನ್ನಾಗಿಮಾಡಿ ತಾನೂ ಪಾನಮಾಡುವುದರಿಂದಲಾದರೂ "ಅಮೃತಪಃ" ಎನ್ನಲ್ಪಡುವನು. (ಪ‖ ಭಾ) "ಯತ್ಕಿಂಚಿದ್ಧೂಯತೇ ವಹ್ನೌ ಹವಿರ್ಮಂತ್ರೈರ್ವಿಧಾನತಃ| ತತ್ಸರ್ವಮಮೃತಂ ಕೃತ್ವಾ ವಿಷ್ಣವೇ ಸಂಪ್ರಯಚ್ಛತಿ‖ ಅಹಂಹಿ ಸರ್ವಯಜ್ಞಾನಾಂ ಭೋಕ್ತಾಚಪ್ರಭುರೇವಚ‖" ಇತ್ಯಾದಿ ಪ್ರಮಾಣಗಳಲ್ಲಿ ಪ್ರತಿಪಾದಿಸಿರುವಂತೆ ಹವಿಃಪರಿಣಾಮರೂಪವಾದ ಅಮೃತವನ್ನು ತಾನಾಗಿಯೇ ಪಾನಮಾಡುವಂತವನು. (ಮ) ಇವನಿಗೆ ಅಮೃತಪಾನವು ಸ್ವೇಚ್ಛೆಯಿಂದಲೇ ಅಲ್ಲದೆ ಅಮರತ್ವಾದಿ ಪ್ರಾಪ್ತಿಗೋಸ್ಕರವಲ್ಲವು. ‖೫೦೬‖

## (೫೦೭ನೇ ನಾಮವು) ಸೋಮಃ,
## ಓಮ್‖ ಸೋಮಾಯನಮಃ.

(ಶಂ‖ ಮ) ಚಂದ್ರರೂಪದೊಡನೆ ಓಷಧಿಗಳನ್ನು ಪೋಷಿಸುವಂತವನು. ಅಥವಾ ಪಾರ್ವತೀಸಮೇತನಾದ ಶಿವನು. (ವಿ‖ ಭಾ) ತನಿಗೂ ತನ್ನನ್ನು ಅನುಭವಿಸುವಂತವರಿಗೂ ಅಮೃತರಸದಂತೆ ಭೋಗ್ಯಭೂತನಾದವನು. ಈ ಅಂಶವು "ಯತ್ರದೇವಾ ಅಮೃತಮಾನಶಾನಾಃ" (ತೈ‖ ನಾ‖ ೬‖ ೧೫) "ಅಮೃತಸ್ಯೈಷ ಸೇತುಃ" (ಮುಂ‖ ೨ ೨‖೫) ಸಖಲ್ವಮೃತೋಪಮಃ‖ ಮಹತಾತಪಸಾರಾಮ ಮಹತಾಚಾಪಿಕರ್ಮಣಾ‖ ರಾಜ್ಞಾದಶರದೇನಾಸಿ ಲಬ್ಧೋಽಮೃತ ಮಿವಾಮರೈಃ‖" (ಶ್ರೀರಾ‖ ಅಯೋ‖ ೬೬‖ ೩) "ಅಮೃತಸ್ಯೇವನಾತೃಪ್ಯನ್ಪ್ರೇಕ್ಷಮಾಣಾ ಜನಾರ್ದನಂ" ಇತ್ಯಾದಿಗಳಿಂದ ವ್ಯಕ್ತವಾಗಿರುವುದು. ‖೫೦೭‖

## (೫೦೮ನೇ ನಾಮವು) ಪುರುಜಿತ್,

### ಓಮ್॥ ಪುರಜಿತೇನಮಃ.

(ಶಂ॥ ವಿ) ಅನೇಕರನ್ನು (ಎಂದರೆ (ಮ) ದೈತ್ಯರನ್ನು ಜಯಿಸಿದವನು. (ವಿ॥ ಭಾ) "ಸತ್ಯೇನಲೋಕಾನ್ ಜಯತಿ ದೀನಾನ್ದಾನೇನ ರಾಘವಃ। ಗುರೂನ್ಶುಶ್ರೂಷಯಾವೀರೊ ಧನುಷಾಯುಧಿ ಶಾತ್ರವಾನ್" (ಶ್ರೀರಾ॥ ಅ॥ ೧೨॥ ೨೯) ಎಂಬಂತೆ ಸತ್ಯದಿಂದ ಲೋಕಗಳನ್ನೂ ದಾನದಿಂದ ದೀನಜನರನ್ನೂ ಶುಶ್ರೂಷೆಯಿಂದ ಗುರುಗಳನ್ನೂ ಧನುಸ್ಸಿನಿಂದ ಯುದ್ಧದಲ್ಲಿ ಶತ್ರುಗಳನ್ನೂ ಜಯಿಸುವನೆಂದರ್ಥವು. ॥೫೦೮॥

## (೫೦೯ನೇ ನಾಮವು) ಪುರುಸತ್ತಮಃ,

### ಓಮ್॥ ಪುರುಸತ್ತಮಾಯನಮಃ.

(ಶಂ॥ ಮ) ವಿಶ್ವರೂಪನಾದಕಾರಣ ಪುರುಃ,-ಉತ್ಕೃಷ್ಟನಾದಕಾರಣ-ಸತ್ತಮಃ, ವಿಶ್ವರೂಪನೂ ಸರ್ವೋತ್ಕೃಷ್ಟನೂ ಆದವನು. (ವಿ॥ ಭಾ) ತನ್ನ ಗುಣಾಮೃತಸಾಗರವನ್ನು ಪಾನಮಾಡುವುದಕ್ಕೆ ಅಪೇಕ್ಷೆಯುಳ್ಳ ಆಂಜನೇಯಾದಿಗಳಲ್ಲಿ ನಿತ್ಯವಾಗಿ ವಾಸಮಾಡುವಂತವನು. ॥೫೦೯॥

## (೫೧೦ನೇ ನಾಮವು) ವಿನಯಃ,

### ಓಮ್॥ ವಿನಯಾಯನಮಃ.

ಮ) ದುಷ್ಟರನ್ನು ಶಿಕ್ಷಿಸುವಂತವನು. (ವಿ॥ ಭಾ) ಮಾರೀಚಾದಿ ದುರ್ಜನರಿಗೆ ತನ್ನ ವೀರ್ಯವೇ ಮೊದಲಾದ ಗುಣಗಳನ್ನು ತೋರಿಸಿ ಶಿಕ್ಷಕನಾಗಿರುವಂತವನು. ॥೫೧೦॥

## (೫೧೧ನೇ ನಾಮವು) ಜಯಃ,

### ಓಮ್॥ ಜಯಾಯನಮಃ.

(ಶಂ॥ ಮ) ಸಮಸ್ತವನ್ನೂ ಜಯಿಸುವಂತವನು. (ವಿ॥ ಭಾ) "ಆಜ್ಞಾಪ್ಯೋಹಂ ತಪಸ್ವಿನಾಂ" (ಶ್ರೀರಾ॥ ಬಾ॥ ೩॥ ೩೭) ಎಂಬಂತೆ ಆಶ್ರಿತ ಜನರಿಂದ ಜಯಿಸಲ್ಪಡುವಂತವನು. ॥೫೧೧॥

## (೫೧೨ನೇ ನಾಮವು) ಸತ್ಯಸಂಧಃ,

### ಓಮ್॥ ಸತ್ಯಸಂಧಾಯನಮಃ.

(ಶಂ॥ ಮ) ಸತ್ಯಸಂಕಲ್ಪನು. (ವಿ॥ ಭಾ) ಅಂತಹ ಮಹನೀಯ ರಲ್ಲಿ ಮಾಡಿದ ಪ್ರತಿಜ್ಞೆಯನ್ನು ಎಂದಿಗೂ ವ್ಯರ್ಥಮಾಡದೆ ಸತ್ಯವಾಗಿ ನೆರವೇರಿಸುವಂತವನು. "ಅಪ್ಯಹಂ ಜೀವಿತಂ ಜಹ್ಯಾಂತ್ವಾಂವಾ ಸಿತೇ ಸಲಕ್ಷ್ಮಣಾಂ। ನಹಿಪ್ರತಿಜ್ಞಾಂ ಸಂಶ್ರುತ್ಯ ಬ್ರಾಹ್ಮಣೇಭ್ಯೋ ವಿಶೇಷತಃ" (ಶ್ರೀರಾ॥ ಅರ॥ ೧೦॥ ೧೯) ಎಂಬೀವಚನವನ್ನು ಈವಿಷಯ ದಲ್ಲಿ ಕಾಣಬಹುದು. ॥೫೧೨॥

## (೫೧೩ನೇ ನಾಮವು) ದಾಶಾರ್ಹಃ,

### ಓಮ್॥ ದಾಶಾರ್ಹಾಯನಮಃ.

(ಶಂ॥ ವಿ॥ ಮ) ದಾನಕ್ಕೆ ಅರ್ಹನು. ಅಥವಾ ದಾಶಾರ್ಹಎಂಬ ಯಾದವಕುಲದಲ್ಲಿ ಹುಟ್ಟಿದ ಶ್ರೀಕೃಷ್ಣನು. ॥೫೧೩॥

## (೫೧೪ನೇ ನಾಮವು) ಸಾತ್ವತಾಂಪತಿಃ,

### ಓಮ್॥ ಸಾತ್ವತಾಂಪತಯೇನಮಃ.

(ಶಂ॥ ಮ) ಪರಮ ಸತ್ವನಿಷ್ಠರಾಗಿ ತನ್ನ ಪಾದಾರವಿಂದಗಳ ಲ್ಲದೆ ಬೇರೊಂದು ಆಧಾರವಿಲ್ಲದ ಭಾಗವತರೆಲ್ಲರಿಗೂ ಪತಿಯಾದವನು. ಅಥವಾ (ವಿ) ಸಾತ್ವತಕುಲವಾದ ಯದುಕುಲದಲ್ಲವತರಿಸಿ ಅದಕ್ಕೆ ನಿರ್ವಾಹಕನಾಗಿರುವಂತವನು. (ಮ॥ ಭಾ) ಸಾತ್ವತವೆಂದರೆ:—ಶ್ರೀನಾರದೀಯ ಪಾಂಚರಾತ್ರವು. ಅದನ್ನು ಅವಲಂಬಿಸಿರುವ ವೈಷ್ಣವರಿಗೆ ಯಜಮಾನನು. ಆದರೆ ಶ್ರೀಪಾಂಚರಾತ್ರಕ್ಕೆ ನಿಂದಾವಚನಗಳಿರುವಲ್ಲಿ ಇದನ್ನು ವಲಂಬಿಸಿರುವಂತವರ ಯೋಗೆ ನಿರ್ವಾಹಕನಾಗಿರುವದು ಉಚಿತವೋ ಎಂದು ಸಂದೇಹಿಸದೆ ಇಂತಹ ನಿಂದಾವಚನವು ಶ್ರೀನಾರದೀಯ ಪಾಂಚರಾತ್ರವ್ಯತಿರಿಕ್ತವಾದ ಲೋಕ ಮೋಹಕವಾಗಿರುವ ಶೈವಪಾಂಚರಾತ್ರವಿಷಯವಾಗಿರುವವು. ಶ್ರೀನಾರದೀಯ ಪಾಂಚರಾತ್ರವು ಶ್ರೀ

ಮೋಕ್ಷಧರ್ಮದಲ್ಲಿ ಪ್ರಮಾಣ ಶಿರೋಮಣಿಯಾಗಿರುವುದೆಂದು ಕೊಂಡಾಡಲ್ಪಟ್ಟಿರುವದು. ಅಥವಾ ಶ್ರೀಪಾಂಚರಾತ್ರ ದೂಷಕಗಳಾದ ಸೂತ ಸಂಹಿತಾ ಕೂರ್ಮ ಪುರಾಣಾದಿ ವಚನಗಳೆಲ್ಲವೂ ತಾಮಸಗಳೆಂದು ಪಾದ್ಮೋತ್ತರಖಂಡದಲ್ಲಿ ಸಾತ್ವಿಕ ರಾಜಸ ತಾಮಸ ವಿಭಾಗಪ್ರಕರಣದಲ್ಲಿ ಹೇಳಿರುವುದರಿಂದ ಅನಾದರಣ ಯೋಗ್ಯಗಳಾಗಿರುವವು. ಆದರೆ;— ತಾಮಸ ಪ್ರಮಾಣಗಳಿಂದ ತತ್ತ್ವಾರ್ಥ ದೂಷಣವು ಯುಕ್ತವೊ? ಎಂದರೆ ತಾಮಸಕರ್ಮಗಳಲ್ಲಿ ತಮೋನಿಷ್ಠರಿಗೆ ಪ್ರವೃತ್ತಿಯನ್ನುಂಟುಮಾಡುವದಕ್ಕಾಗಿ ಸಾತ್ವಿಕ ಶಾಸ್ತ್ರನಿಂದೆಯು ಯುಕ್ತವಾಗಿಯೇ ಇರುವುದು. ಅಥವಾ ಸಾತ್ವತವೆಂದರೆ ಶ್ರೀಭಾಗವತಶಾಸ್ತ್ರವು, ಅದನ್ನವಲಂಬಿಸಿರುವಂತವರಿಗೆ ನಿರ್ವಾಹಕನೆಂತಲೂ ತಿಳಿಯಬಹುದು. ಅಥವಾ ಪೂರ್ಣ ಸುಖಸ್ವರೂಪನಾದ ಪರಮಾತ್ಮನು ಸಾತ್ ಎನ್ನಲ್ಪಡುವನು. ಅವನನ್ನೇ ಆಶ್ರಯವಾಗಿ ವುಳ್ಳವರು ಸಾತ್ವತರು. ಅವರಿಗೆ ಪತಿಯಾದವನು 'ಸಾತ್ವತಾಂಪತಿಃ' ಎನ್ನಲ್ಪಡುವನು. ‖೫೧೪‖

ಈ (೫೪)ನೇ ಶ್ಲೋಕದಲ್ಲಿ ಪ್ರತಿಪಾದಿಸಲ್ಪಡುವ (೧೦) ನಾಮಗಳಿಗೂ "ಹಯಮೇಧೇ ಸೋಮಪ್ರೋಽಯ "ಸ್ಸೋಮಪಃ" ಪರಿಕೀರ್ತಿತಃ। ಪರಿಣಾಮೋಸ್ಯ ಹವಿಷಾಂ ಪೀಯೂಷಮಿತಿ ಜೋಚ್ಯತೆ ‖ ತತ್ಪಾನಾತ್ಸ್ವ "ದಮೃತಪಃ" (೫೧೬) ಪರಮೇವ್ಯೋಮ್ನಿ ವಾಸ್ಥಿತಃ। ಮುಕ್ತೇಭ್ಯೋ ಯಸ್ಸ್ವಾನುಭವಂ ಪಾತೀತ್ಯಮೃತಪಃ ಸ್ಮೃತಃ ‖ "ಸೋಮ" (೫೧೭) ಸ್ಸುಧಾಯಮಾನತ್ವಾ ನ್ಮುಕ್ತಾನಾಂ ಪರಿಕೀರ್ತಿತಃ। ಲೋಕಾರ್ಕಾದೀನಾನ್ನುರೂನ್ಕತೂನ್ ಸ್ವಕೃದಾನಾನುವರ್ತನೈಃ‖ ಧನುಷಾ ಜಿತವಾನ್ಯಶ್ಚ "ಪುರುಜಿತ್" (೫೧೮) ಸಸ್ಮೃತೋ ಬುಧೈಃ। ಮಹತ್ಸ್ವಸ್ತಿತಮತ್ವಾದ್ಯೋಹ್ಯಾಂಜನೇಯಾದಿಷು ಸ್ವಯಂ ‖ "ಪುರುಸತ್ತಮ" (೫೧೯) ಆಖ್ಯಾತೋ ನವಾರ್ಣ ಸ್ಸ್ವಸ್ತಿದೋಮನುಃ। ಕುಂಭಕರ್ಣ ಮಹಾಕಾಯ ಖರ ಮಾರೀಚರಾವಣಾಃ‖ ದಮ್ಯಂತೇ ವಿಕ್ರಮೈರ್ಯೇನ "ವಿನಯ" (೫೨೦) ಸ್ಸಉದಾಹೃತಃ। ಆಶ್ರಿತೈರ್ಜೀಯತೇಯಸ್ಮಾ ದ್ವಿಧೇಯಾ ಕ್ರೀಯತೇ "ಜಯಃ" (೫೨೧) ‖ ಸತ್ಯಾಪ್ರತಿಜ್ಞಾಯಸ್ಯೇ ತಿ "ಸತ್ಯಸನ್ಧ" (೫೨೨) ಸ್ಸಉಚ್ಯತೆ। ಆತ್ಮನೋವಾರ್ಪಣಂ ಭಕ್ತೇತ್ರಿಸ್ಯೇಭ್ಯೋವಾ ಸ್ವಾತ್ಮನೋರ್ಪಣಂ‖ ದಾಶಾಸ್ತಮರ್ಹತಿಚಯೋ "ದಾಶಾ

ರ್ಹ" (೩೧೩) ಸ್ಸಮ್ಪ್ರಕೀರ್ತಿತಃ | ಏಸಾತ್ವತಾ ಭಾಗವತಾಸ್ತೇಷಾಂ ಯಃ ಪತಿರೀಶ್ವರಃ|| "ಸಾತ್ವತಾಂಪತಿ" (೩೧೪) ರಿತ್ಯುಕ್ತೋನವಾರ್ಣಸ್ಸಾಧು ರಕ್ಷಕಃ||" ಎಂಬಂತೆ ನಿರುಕ್ತವನ್ನು ಕಾಣಬಹುದು.

ಮೂ|| ಜೀವೋ ವಿನಯಿತಾ ಸಾಕ್ಷೀ ಮುಕುನ್ದೋ ಽಮಿತವಿಕ್ರಮಃ | ಅಮ್ಭೋನಿಧಿ ರನಂತಾತ್ಮಾ ಮಹೋದಧಿಶಯೋ ಽಂತಕಃ ||೫೫||

(೩೧೫ನೇ ನಾಮವು) ಜೀವಃ,

ಓಮ್|| ಜೀವಾಯನಮಃ.

(ಶಂ|| ಭಾ) ಕ್ಷೇತ್ರಜ್ಞರೂಪದಿಂದ ಪ್ರಾಣಿಗಳನ್ನು ಧರಿಸುವಂತವನು. (ವಿ|| ಭಾ) ಅಂತಹ ಭಾಗವತರಿಗೆ ಆತ್ಮನಾಶವು ಬಾರದಂತೆ ತನ್ನ ಪರಿಚರಣವನ್ನು ಕೊಟ್ಟು ಕಾಪಾಡುವಂತವನು. ಇದು "ಆನಂದ ಮೂರ್ತಿರ್ಭಗವಾನ್ ಹರಿಸ್ತ್ರೈಲೋಕ್ಯ ಪೂಜಿತಃ| ದೃಷ್ಟ್ವಾಂನ ಸಹ ತೇದೇವಿ ಕ್ಲಿಷ್ಟಾನ್ ಸ್ವಪರಿಚಾರಕಾನ್" ಎಂಬ ಪ್ರಮಾಣಪ್ರಸಿದ್ಧವಾಗಿರುವುದು. (ಮ) ಪ್ರಾಣಧಾರಕನಾದ ಅನಿರುದ್ಧಮೂರ್ತಿಯು. ||೩೧೫||

(೩೧೬ನೇ ನಾಮವು) ವಿನಯಿತಾ,

ಓಮ್|| ವಿನಯಿತ್ರೇನಮಃ.

(ವಿ|| ಭಾ) ರಾಜಕುಮಾರನನ್ನು ಉಪಲಾಲನೆಮಾಡುವಂತೆ ಅವರನ್ನುಲಾಲಿಸಿ ಕಾಪಾಡುವಂತವನು. (ಮ) ವ್ಯಾಪಕನು. ||೩೧೬||

(೩೧೭ನೇ ನಾಮವು) ಸಾಕ್ಷೀ,

ಓಮ್|| ಸಾಕ್ಷಿಣೇನಮಃ.

(ವಿ|| ಭಾ) ಅವರಿಗೆ ಹಿತಪ್ರವರ್ತನವನ್ನುಂಟುಮಾಡುವುದಕ್ಕಾಗಿ ಅವರು ಮಾಡುವ ನಡವಳಿಕೆಗಳಿಗೆ ಸಾಕ್ಷಿಯಾಗಿರುವಂತವನು. (ಶಂ||

ಭಾ) ವಿನಯಿತಾಸಾಕ್ಷೀ—ವಿನಯವುಳ್ಳವರನ್ನು ಸಾಕ್ಷಾತ್ತಾಗಿ ನೋಡು ವಂತವನು. ಅಥವಾ ವಿನಯಿತಾಽಸಾಕ್ಷೀ—ಆತ್ಮಕ್ಕಿಂತಲೂ ಅನ್ಯವಾದ ವಸ್ತುಗಳನ್ನು ನೋಡದವನು. ‖೫೧೭‖

## (೫೧೮ನೇ ನಾಮವು) ಮುಕುಂದಃ,
## ಓಮ್‖ ಮುಕುಂದಾಯನಮಃ.

(ವಿ‖ ಭಾ) ಮೋಕ್ಷವನ್ನು ಕೊಡದೇಹೋದರೆ ಆತ್ಮವನ್ನು ತಾಳ ಲಾರವೆಂದು ಪ್ರಾರ್ಥಿಸಿಕೊಂಡ ತನ್ನ ಭಕ್ತರಿಗೆ (ಶಂ‖ ಮ) ಮೋಕ್ಷ ವನ್ನು ಕೊಡುವಂತವನು. ‖೫೧೮‖

## (೫೧೯ನೇ ನಾಮವು) ಅಮಿತವಿಕ್ರಮಃ,
## ಓಮ್‖ ಅಮಿತವಿಕ್ರಮಾಯನಮಃ.

(ಶಂ‖ ಭಾ) ಅಪರಿಚ್ಛಿನ್ನಗಳಾದ ಮೂರು ಪಾದ ವಿಕ್ಷೇಪವುಳ್ಳ ವನು. (ಅಥವಾ ಶಂ‖ ಮ) ಅಮಿತ ಪರಾಕ್ರಮವುಳ್ಳವನು. (ವಿ‖ ಭಾ) ಅವರು ತನ್ನನ್ನು ಧ್ಯಾನಿಸುವಾಗಲೂ ಆರಾಧಿಸುವಾಗಲೂ ಅನುಸಂಧಿ ಸಲ್ಪಡುವ ತತ್ವಸಮುದಾಯಗಳೆಲ್ಲವನ್ನೂ ಧರಿಸುವಂತಹ ಆಧಾರ ಶಕ್ತಿ ಎಂಬ ಅಪರಿಮಿತವಾದ ಬಲವುಳ್ಳವನು. ‖೫೧೯‖

## (೫೨೦ನೇ ನಾಮವು) ಅಂಭೋನಿಧಿಃ,
## ಓಮ್‖ ಅಂಭೋನಿಧಯೇನಮಃ.

(ಶಂ‖ಮ) ದೇವತೆಗಳೂ ಮನುಷ್ಯರೂ ಪಿತೃಗಳೂ ಅಸುರರೂ ಅಂಭಶ್ಶಬ್ದದಿಂದ ಹೇಳಲ್ಪಡುವರು. ಅವರಿಗೆ ಆಶ್ರಯನು. (ಶಂ) "ಸರಸಾಮಸ್ಮಿಸಾಗರಃ" (ಗೀ‖ ೧೦‖ ೨೪) ಎಂಬಂತೆ ಸಮುದ್ರನೆಂತ ಲಾದರೂ ಆಗಬಹುದು. (ಮ) ಜಲವನ್ನೇ ಆಶ್ರಯವಾಗಿ ವುಳ್ಳವನು. ಜಲವು ಇವನಿಂದ ಸ್ಥಾಪಿಸಲ್ಪಡುವದೆಂತಲೂ ಆಗಬಹುದು. (ವಿ‖ ಭಾ) ಪಾತಾಳದಲ್ಲಿರುವ ಗರ್ಭೋದಕದಲ್ಲಿ ಸರ್ವ ಪ್ರಪಂಚವನ್ನು ಧರಿಸುವಂತಹ ಆದಿಕೂರ್ಮವಾಗಿರುವಂತವನು. ‖೫೨೦‖

## (೫೨೧ನೇ ನಾಮವು) ಅನಂತಾತ್ಮಾ,

ಓಮ್॥ ಅನಂತಾತ್ಮನೇನಮಃ.

(ಶಂ॥ ಮ) ದೇಶಕಾಲ ವಸ್ತುವೆಂಬ ತ್ರಿವಿಧ ಪರಿಚ್ಛೇದರಹಿತನು; ಎಂದರೆ ಸರ್ವದೇಶ ಸರ್ವಕಾಲ ಸರ್ವವಸ್ತು ಪರಿಪೂರ್ಣನೆಂದರ್ಥವು. (ವಿ॥ ಭಾ) ಆದಿ ಕೂರ್ಮದಮೇಲೆ ಪ್ರಪಂಚಕ್ಕೆಲ್ಲವೂ ಆಧಾರ ಸ್ತಂಭವಾಗಿರುವ ಆದಿಶೇಷನಿಗೆ ಅಂತರಾತ್ಮನಾಗಿರುವಂತವನು. ॥೫೨೧॥

## (೫೨೨ನೇ ನಾಮವು) ಮಹೋದಧಿಶಯಃ,

ಓಮ್॥ ಮಹೋದಧಿಶಯಾಯನಮಃ.

(ಶಂ॥ ವಿ॥ ಮ) ಸಕಲ ಭೂತಗಳನ್ನೂ ಸಂಹರಿಸಿ ಪ್ರಪಂಚವನ್ನು ಏಕಾರ್ಣವವನ್ನಾಗಿ ಮಾಡುವ ಪ್ರಳಯಕಾಲದ ಮಹಾಸಮುದ್ರದಲ್ಲಿ ಆದಿಶೇಷನಲ್ಲಿ ಶಯನಿಸುವಂತವನು. ॥೫೨೨॥

## (೫೨೩ನೇ ನಾಮವು) ಅಂತಕಃ,

ಓಮ್॥ ಅಂತಕಾಯನಮಃ.

(ವಿ॥ ಭಾ) ಆಗ ಸಕಲವನ್ನೂ ನಾಶಮಾಡುವಂತವನು. ॥೫೨೩॥

ಈ ೫೫ನೇ ಶ್ಲೋಕದಲ್ಲಿ ಪ್ರಕೃತಗಳಾದ ೯ ನಾಮಗಳಿಗೂ "ತಾನಾತ್ಮನಾಶಾದ್ವ್ಯಾವರ್ತ್ಯ ಸತ್ವಾನ್ಯಕ್ಷ್ಯ ಸ್ವಸೇವಯಾ। ಉಜ್ಜೀವಯತಿ "ಜೀವ" (೫೧೫) ಸ್ವಭಕ್ತಕ್ಲೇಶಾಸಹೋ ಮನುಃ॥ ಭಕ್ತಾನ್ನಿತ್ಯಂ ರಾಜಪುತ್ರಲಾಲನ ನ್ಯಾಯತಸ್ಸುಖಂ। ರಕ್ಷತ್ಯತೋ "ವಿನಯಿತಾ" (೫೧೬) ನಯತೇ ರಕ್ಷಣಾರ್ಥತಃ॥ ಸಾಕ್ಷಾತ್ಕರೋತಿ ಯ "ಸಾಕ್ಷೀ" (೫೧೭) ತದ್ವೃತ್ತಂ ರಕ್ಷಣಾಯಸಃ। ತ್ರೈಃಪಾರ್ಥಿತಸ್ಸ್ವಯಂ ಮುಕ್ತಂ "ಮುಕುಂದ" (೫೧೮) ಸ್ಸ್ಯಾದ್ದದಾತಿಸಃ॥ ತೇಷಾಂಧ್ಯಾನಾನುಸಂಧೇಯ ತತ್ವಾಸಂದೋಹಧಾರಿಣೀಂ। ತಾಂಶಕ್ತಿಂ ಧೃತವಾನ್ಯೋಸೌ ಸ್ಮೃತೋ "ಹ್ಯಮಿತವಿಕ್ರಮಃ" (೫೧೯)॥ ಆಧಾರಶಕ್ತಿ ಕಮಠಸ್ವರೂಪೇಣಾರ್ಣವಾಮ್ಬುಸಿ। ನಿಧೀಯತೇ ಸ್ವಯಂತೇನ ಸಹಿ "ಅಂಭೋನಿಧಿ"

(೫೦೦) ರುಚ್ಯತೇ ॥ ಕಮಠಸ್ಯೋಪರಿ ಜಗದಾಧಾರ ಸ್ತಂಭಭೋಗಿನಃ | ಸ್ವರೂಪೇಣ ಸ್ಥಿತೋಯೋಸಾ "ವನಂತಾತ್ಮಾ" (೫೦೧) ಪ್ರಕೀರ್ತಿತಃ॥ ತಸ್ಮಿನ್ನನನ್ತಪರ್ಯಙ್ಕೇ ಸಮುದ್ರೇ ಶಯನಾಚ್ಚಯಃ | "ಮಹೋದಧಿಶಯಃ" (೫೦೨) ಖ್ಯಾತೋದಶಾರ್ಣ್ಣೋ ಮನುರುತ್ತಮಃ ॥ ಅನ್ತಂಕರೋತಿ ಜಗತೋ ಯೋಸಾ "ವನ್ತಕ" (೫೦೩) ಈರಿತಃ" ಎಂಬೀ ರೀತಿಯಿಂದ ವಿವೃತಿಯನ್ನು ಕಾಣಬಹುದು.

ಮೂ॥ ಅಜೋಮಹಾರ್ಹ ಸ್ಸ್ವಾಭಾವ್ಯೋ ಜಿತಾಮಿತ್ರಃ ಪ್ರಮೋದನಃ | ಆನಂದೋ ನಂದನೋ ನಂದ ಸ್ಸತ್ಯಧರ್ಮಾ ತ್ರಿವಿಕ್ರಮಃ ॥೫೬॥

(೫೦೪ನೇ ನಾಮವು) ಅಜಃ,

ಓಮ್॥ ಅಜಾಯನಮಃ.

(ಶಂ॥ ಭಾ) ಅಕಾರ ವಾಚ್ಯನಾದ ವಿಷ್ಣುವಿನಿಂದ ಹುಟ್ಟಿದ ಕಾಮನು 'ಅಜ'ನೆನ್ನಲ್ಪಡುವನು. (ವಿ॥ ಭಾ) ಅಕಾರವಾಚ್ಯನು. ಎಂದರೆ:—ಆಕಾಲದಲ್ಲಿ ಸಕಲ ತತ್ವಗಳೂ ಲಯವನ್ನು ಹೊಂದಲಾಗಿ ಇವನ ಸ್ವರೂಪವು ಕೇವಲ ಪ್ರಣವಾಕ್ಷರಕ್ಕೆ ಪ್ರಕೃತಿಯೂ ಸಕಲ ಶಬ್ದಗಳಿಗೆ ಮೂಲವೂ ಆದ ಅಕಾರಕ್ಕೆ ಅರ್ಥಭೂತವೆಂದು ಸ್ಮರಿಸಲ್ಪಡುವುದೆಂದರ್ಥವು. ॥೫೦೪॥

(೫೦೫ನೇ ನಾಮವು) ಮಹಾರ್ಹಃ,

ಓಮ್॥ ಮಹಾರ್ಹಾಯನಮಃ.

(ವಿ॥ ಭಾ) ಆಗ ಪ್ರಣವಾಕ್ಷರದಿಂದ ಪೂಜಿಸಲ್ಪಡುವಂತವನು. (ಶಂ) ಪೂಜಾರ್ಹನು. (ಮ) ಅಜೋಮಹಾರ್ಹಃ—ಒಂದೇ ನಾಮವು. ॥೫೦೫॥

(೫೦೬ನೇ ನಾಮವು) ಸ್ವಾಭಾವ್ಯಃ,

ಓಮ್॥ ಸ್ವಾಭಾವ್ಯಾಯನಮಃ.

(ಶಂ॥ ಭಾ) ನಿತ್ಯ ನಿಷ್ಪನ್ನ ರೂಪನಾದ ಕಾರಣ (ವಿ॥ ಕಂ) ತನ್ನನ್ನು ಧ್ಯಾನಮಾಡತಕ್ಕವರಿಂದ ನಿತ್ಯವಾಗಿ ಭಾವಿಸಲ್ಪಡುವಂತವನು. ಎಂದರೆ:—(ವಿ) ಈ ಪ್ರಕಾರವಾಗಿ ಪ್ರಣವ ವೆನ್ನಲ್ಪಡುವ ಮಂತ್ರದಿಂದ ತಮ್ಮಗಳ ಸ್ವತ್ವನ್ನಾಗಿ ಆತ್ಮಕೋಟಿಗಳಿಂದ ಭಾವಿಸಲ್ಪಟ್ಟು ಅವರಿಗೆ ಸ್ವಾಮಿಯಾಗಿರುವನೆಂದರ್ಥವು. ॥೫೦೬॥

## (೫೦೭ನೇ ನಾಮವು) ಜಿತಾಮಿತ್ರಃ,

## ಓಮ್॥ ಜಿತಾಮಿತ್ರಾಯನಮಃ.

(ಶಂ॥ ಮ) ಆಂತರ ಶತ್ರುಗಳಾದ ರಾಗದ್ವೇಷಾದಿಗಳನ್ನೂ ಬಾಹ್ಯ ಶತ್ರುಗಳಾದ ರಾವಣಾದಿಗಳನ್ನೂ ಕೂಡ ಜಯಿಸುವಂತವನು. (ವಿ॥ ಭಾ) ಇಂತಹ ರಹಸ್ಯಾರ್ಥವನ್ನು ತಿಳಿಯಪಡಿಸದಂತೇ ವಿರೋಧಿಸುವಂತವರ ಅಹಂಕಾರ ಮಮಕಾರಾದಿಗಳೆಲ್ಲವನ್ನೂ ನಾಶಪಡಿಸುವಂತವನು. ॥೫೦೭॥

## (೫೦೮ನೇ ನಾಮವು) ಪ್ರಮೋದನಃ,

## ಓಮ್॥ ಪ್ರಮೋದನಾಯನಮಃ.

(ಶಂ॥ ಭಾ) ತನ್ನ ಆತ್ಮಾಮೃತರಸಾನುಭವದಿಂದ ನಿತ್ಯವಾಗಿ ಸಂತೋಷಿಸುವನೆಂತಲಾದರೂ, ಧ್ಯಾನಮಾಡತಕ್ಕವರಿಗೆ ಧ್ಯಾನಮಾತ್ರದಿಂದ ಸಂತೋಷವನ್ನುಂಟುಮಾಡುವನೆಂತಲಾದರೂ ತಿಳಿಯಬಹುದು. (ವಿ॥ ಭಾ) ಈ ಪ್ರಕಾರವಾಗಿ ತನ್ನ ಸಂಬಂಧವನ್ನು ಹೊಂದಿಪವರಿಗೆ ಅವರು ಮೊದಲು ತನ್ನನ್ನು ಅನುಸಂಧಾನ ಮಾಡುವಾಗಲೇ ಸಂತೋಷ ಜನಕನಾಗಿರುವಂತವನು. ॥೫೦೮॥

## (೫೦೯ನೇ ನಾಮವು), ಆನಂದಃ,

## ಓಮ್॥ ಆನಂದಾಯನಮಃ.

(ಶಂ॥ ಭಾ) ಆನಂದಸ್ವರೂಪನು. (ವಿ॥ ಭಾ) ಇನ್ನು ಮುಂದೆ ಕಪಿಲಮೂರ್ತಿಯು ವರ್ಣಿಸಲ್ಪಡುವುದು. ಆನಂದವಲ್ಲಿ ಯೆಂಬ ತೈತ್ತಿ

ರೀಯೋಪನಿಷದ್ಭಾಗದಲ್ಲಿ ಅಳವಿಡುವುದಕ್ಕಾಗಿ ವಿಚಾರಿಸಲ್ಪಟ್ಟ ವಾಚಾಮಗೋಚರವಾದ ಆನಂದಕ್ಕೆ ಸ್ಥಾನಭೂತನು. ||೫೨೯||

## (೫೩೦ನೇ ನಾಮವು) ನಂದನಃ,
## ಓಮ್|| ನಂದನಾಯನಮಃ.

(ವಿ|| ಭಾ) ಅಂತಹ ಆನಂದವನ್ನು ಮೋಕ್ಷದಶೆಯಲ್ಲಿ ಚೇತನರಿಗೆ ಕೊಟ್ಟು ಸಂತೋಷಪಡಿಸುವಂತವನು ||೫೩೦||

## (೫೩೧ನೇ ನಾಮವು) ನಂದಃ,
## ಓಮ್|| ನಂದಾಯನಮಃ.

(ಶಂ|| ಭಾ) ಸಮಸ್ತಗಳಾದ ಉಪಪತ್ತಿಗಳಿಂದ ಸಮೃದ್ಧನಾದವನು. (ಅಥವಾ) ಆನಂದಃ–ವಿಷಯ ಸುಖವಿಲ್ಲದವನು. (ವಿ|| ಭಾ) ಈ ರೀತಿಯಾಗಿ ಅಪರಿಮಿತಗಳಾದ ಭೋಗಗಳಿಂದಲೂ ಭೋಗಾರ್ಹಗಳಾದ ವಸ್ತುಗಳಿಂದಲೂ ಭೋಗೋಪ ಕರಣಗಳಿಂದಲೂ ಸಮೃದ್ಧನು. ||೫೩೧||

## (೫೩೨ನೇ ನಾಮವು) ಸತ್ಯಧರ್ಮಾ,
## ಓಮ್|| ಸತ್ಯಧರ್ಮಣೇನಮಃ.

(ಶಂ|| ಭಾ) ಸತ್ಯಗಳಾದ ಜ್ಞಾನಾದಿ ಧರ್ಮಗಳುಳ್ಳವನು. (ವಿ|| ಭಾ) ಈಪ್ರಕಾರವಾಗಿ ತನ್ನನ್ನಾಶ್ರಯಿಸಿದವರನ್ನು ಆದಿ ಮೊದಲು ಕಡೆವರಿಗೂ ಏಕರೂಪವಾಗಿ ಕಾಯುವಂತವನು. ಸತ್ಯವ್ರತನೆಂದರ್ಥವು. ||೫೩೨||

## (೫೩೩ನೇ ನಾಮವು) ತ್ರಿವಿಕ್ರಮಃ,
## ಓಮ್|| ತ್ರಿವಿಕ್ರಮಾಯನಮಃ.

(ಶಂ|| ಭಾ) ಮೂರು ಲೋಕಗಳಲ್ಲಿಯೂ ಸರ್ವೋತ್ಕರ್ಷ ಸ್ಥಿತಿಯಲ್ಲಿರುವ ಮೂರು ಪಾದಗಳುಳ್ಳವನು. (ಅಥವಾ) ಮೂರು ಲೋಕಗಳನ್ನು

ಆಕ್ರಮಿಸುವಂತಹ ತ್ರಿವಿಕ್ರಮ ಮೂರ್ತಿಯು. (ವಿ॥ ಭಾ) ಈ ರೀತಿಯಾದ ಮಹಾ ಪ್ರಭಾವಶಾಲಿಯಾಗಿರುವುದರಿಂದ ವೇದಗಳಿಗೆಲ್ಲವೂ ತಾತ್ಪರ್ಯ ಭೂಮಿಯಾಗಿರುವಂತವನು. ಸರ್ವವೇದ ಪ್ರತಿಪಾದ್ಯನೆಂದರ್ಥವು. ॥೫೩೩॥

ಈ ೫೭ನೇ ಶ್ಲೋಕದಲ್ಲಿರುವ (೧೦) ನಾಮಗಳಿಗೂ "ತತ್ವಾವಸಾನಕಾಲೇಚ ಪ್ರಣವ ಪ್ರಕೃತಿತ್ವತಃ । ಸ್ಮರ್ತೃವ್ಯತ್ವಾತ್ "ದಕ್ಷಃ" (೫೨೪) ಪ್ರೋಕ್ತಃಷಡ್ವರ್ಗೋ ಹ್ಯೂರ್ಮಿನಾಶಕಃ ॥ ಸ್ವರೂಪಾದಿ ಕೃತಾರ್ಥೇನ ತಾರೇಣಾತ್ಮ ನಿವೇದನಂ । ಮಹಂಪೂಜಾ ಮರ್ಹತೀತಿ "ಮಹಾರ್ಹ" (೬೨೫) ಇತಿ ಕಥ್ಯತೆ ॥ ಮಂತ್ರೇಣಾನೇ ನಾತ್ಮಭಿಸ್ತು ಸ್ವಭೋತ್ಯೈ ರಾಭಿಮುಖ್ಯತಃ । ಅವಶ್ಯಂಭಾವ ನೀಯತ್ವಾ "ತ್ಸ್ವಾಭಾವ್ಯಃ" (೫೨೬) ಪರಿಕೀರ್ತಿತಃ ॥ ಏತದ್ರಹಸ್ಯ ವಿಜ್ಞಾನ ವಿರೋಧಿ ಮಮತಾದಯಃ । ಜಿತಾಸ್ತೇಷಾ ಮನೇನೇತಿ "ಜಿತಾಮಿತ್ರೋ" (೫೨೭) ಒಷ್ಟವರ್ಣಕಃ॥ ಧ್ಯಾನಾಸಕ್ತೇಷು ಭಕ್ತೇಷು ಮೋದಮಾನಃ "ಪ್ರಮೋದನಃ" (೫೨೮) । ವಲ್ಲ್ಯಾಮಾನಂದ ಸಂಜ್ಞಾಯಾ ಮವಾಙ್ಮನಸ ಗೋಚರಃ । ಆನಂದೋಯಸ್ಯೆಯಸ್ಮಾತ್ಸ "ತ್ಯಾನಂದಃ" (೫೨೯) ಪರಿಕೀರ್ತಿತಃ ॥ ತಮಾನಂದ ಮಧೋಕ್ಷಾ ಯಾ ಮ್ಮುಕ್ತೌಪ್ರಾಪಯ್ಯ ಯಸ್ಸದಾ । ಮುಕ್ತಾನ್ನಿತ್ಯಾನ್ನಂ ದಯತೇ "ನಂದನ" (೫೩೦) ಸ್ತುತು ಕೀರ್ತಿತಃ ॥ ಭೋಗ್ಯೈರ್ಭೋಗೋಪ ಕರಣೈ ರ್ಭೋಗ್ಯೈ ರ್ಭೋಕ್ತೃಭಿರೇವಚ। ತಸ್ಮಿನ್ಸಮೃದ್ಧ್ಯತೇನಿತ್ಯ ಮಿತಿ "ನಂದಃ" (೫೩೧) ಪ್ರಕೀರ್ತಿತಃ ॥ ಆಪ್ರಕ್ರಮಾ ದಾಸ್ವಪಾ ಪ್ತೇರಾರ್ಜವಾತ್ಸತ್ಯ ವರ್ತನಃ । ಯಸ್ಮಾತ್ಸ "ಸತ್ಯಧರ್ಮಾ" ಚ (೫೩೨) ವಸ್ವರ್ಣ್ಣಸ್ಸತ್ಯಧರ್ಮದಃ ॥ ತ್ರೀನ್ವೇದಾನ್ಕ್ರಮತೇಯೋಹಿ ಮಹಿಮ್ನಾ ಸ "ತ್ರಿವಿಕ್ರಮಃ" (೫೩೩) ಎಂಬಂತೇ ವಿವೃತಿಯನ್ನು ಕಾಣಬಹುದು.

ಮೂ॥ ಮಹರ್ಷಿಃ ಕಪಿಲಾಚಾರ್ಯಃ ಕೃತಜ್ಞೋ

ಮೇದಿನೀಪತಿಃ । ತ್ರಿಪದ ಸ್ತ್ರಿದಶಾಧ್ಯಕ್ಷೋ

ಮಹಾಶೃಂಗಃ ಕೃತಾನ್ತಕೃತ್ ॥೫೮॥

## (೫೩೪ನೇ ನಾಮವು) ಮಹರ್ಷಿಃ,
## ಓಮ್॥ ಮಹರ್ಷಯೇನಮಃ.

(ವಿ॥ ಭಾ) ಈ ವೇದವನ್ನು ತಾನೇ ಪ್ರತ್ಯಕ್ಷವಾಗಿ ಕಾಣುವಂತಹ ಕಪಿಲ ಮಹರ್ಷಿಯಾದವನು. ಹೀಗೆಯೇ ಅವರ ಧ್ಯಾನದಲ್ಲಿ "ಶ್ರುತೀಯುಗಾದ್ಯ ವಕ್ತ್ರೇಭ್ಯಃ ಪ್ರೋದ್ಗಿರಂತ ಮತಸ್ಸ್ಮರೇತ್" ಇತ್ಯಾದಿಗಳನ್ನು ಕಾಣಬಹುದು. ॥೫೩೪॥

## (೫೩೫ನೇ ನಾಮವು) ಕಪಿಲಾಚಾರ್ಯಃ,
## ಓಮ್॥ ಕಪಿಲಾಚಾರ್ಯಾಯನಮಃ.

(ವಿ॥ ಭಾ) ಕಪಿಲರೆಂಬ ಹೆಸರಿನಿಂದ ವೇದೋಪದೇಶಾದ್ಯಾಚಾರ್ಯ ಕೃತ್ಯವನ್ನು ಮಾಡಿದವನು. (ಮ) ನಿರೀಶ್ವರಸಾಂಖ್ಯ ಶಾಸ್ತ್ರವನ್ನು ಕಲ್ಪಿಸಿದ ಅಗ್ನಿಯ ಅವತಾರ ಭೂತರಾಗಿರುವ ಕಪಿಲರಿಗಿಂತಲೂ ಇವರಿಗೆ ಭೇದವನ್ನು ತಿಳಿಸುವುದಕ್ಕಾಗಿ ಆಚಾರ್ಯ ಶಬ್ದವು. "ಋಷಿಂಪ್ರಸೂತ ಕಪಿಲಂ ಮಹಾಂತಂ ॥ ಸಿದ್ಧಾನಾಂ ಕಪಿಲೋಮುನಿಃ" (ಗೀ॥ ೧೦) ಇತ್ಯಾದಿಗಳನ್ನು ಕಾಣಬಹುದು. (ಶಂ॥ ಭಾ) "ಮಹರ್ಷಿ ಕಪಿಲಾಚಾರ್ಯಃ" ಒಂದೇ ನಾಮವು. ಈ ಕಪಿಲಾಚಾರ್ಯರಿಗಿಂತಲೂ ಇತರರಾದ ಋಷಿಗಳು ವೇದದಲ್ಲಿ ಕೆಲವು ಭಾಗಗಳನ್ನೇ ತಿಳಿದಿರುವ ಪ್ರಯುಕ್ತ ಅವರು ಮಹರ್ಷಿಗಳಾಗಲಾರರೆಂತಲೂ ಇವರೊಬ್ಬರೆ ಮಹರ್ಷಿಗಳೆಂತಲೂ ತಿಳಿಯಬೇಕು. ॥೫೩೫॥

## (೫೩೬ನೇ ನಾಮವು) ಕೃತಜ್ಞಃ,
## ಓಮ್॥ ಕೃತಜ್ಞಾಯನಮಃ.

(ಶಂ॥ ಭಾ) ಸೃಷ್ಟಿಸಲ್ಪಟ್ಟ ಜಗತ್ತನ್ನು ಅರಿಯುವಂತವನು. ಎಂದರೆ ಜಗದಾತ್ಮರೂಪನಾಗಿರುವಂತವನು. (ವಿ॥ ಭಾ) ತನ್ನಲ್ಲಿ ಅಪರಾಧಿಗಳಾದ ಸಗರ ಚಕ್ರವರ್ತಿಯ ಅರವತ್ತುಸಾವಿರ ಮಕ್ಕಳಿಗಾಗಿ, ಅವರ ಮಗನಾದ ಅಂಶುಮಂತನು ನಮಸ್ಕರಿಸಿ ಪ್ರಾರ್ಥಿಸಲಾಗಿ ಅದನ್ನೇ ಮಹೋಪಕಾರವನ್ನಾಗಿ ತಿಳಿಯುವಂತವನು. (ಮ) ಅದಿತಿದೇವಿಯಿಂದ ಅನುಷ್ಠಿಸಲ್ಪಟ್ಟ ವ್ರತ ವಿಶೇಷದಿಂದ ಅವತರಿಸಿದವನು. ॥೫೩೬॥

(೫೩೭ನೇ ನಾಮವು) ಮೇದಿನೀಪತಿಃ,

ಓಮ್॥ ಮೇದಿನೀಪತಯೇನಮಃ.

(ವಿ॥ ಭಾ) "ಯಸ್ಯೇಯಂವಸುಧಾ ಸರ್ವಾ ವಾಸುದೇವೇನ ಧೀಮತಾ । ಕಾಪಿಲಂರೂಪಮಾಸ್ಥಾಯ ಧಾರಯ ತ್ಯನಿಶಂಧರಾಂ ॥" ಎಂಬ ಶ್ರೀಮದ್ರಾಮಾಯಣ ಬಾಲಕಾಂಡ ಪ್ರಮಾಣದಂತೆ ಭೂಮಿಯನ್ನು ಧರಿಸಿದವನು. ॥೫೩೭॥

(೫೩೮ನೇ ನಾಮವು) ತ್ರಿಪದಃ,

ಓಮ್॥ ತ್ರಿಪದಾಯನಮಃ.

(ಶಂ॥ ಮ) ಮೂರಾದ ಪಾದಗಳುಳ್ಳವನು. (ಮ) ಅಥವಾ ಅಗ್ನಿತ್ರಯವನ್ನೇ ಸ್ಥಾನವಾಗಿ ವುಳ್ಳವನು. (ವಿ॥ ಭಾ) ವರಾಹರೂಪವನ್ನು ಧರಿಸಿದಾಗ ಮೂರು ಬಗೆಯಾದ ಗೂಳಿಗಳು (ತ್ರಿಕಕುತ್) ವುಳ್ಳವನು. ಅಥವಾ ಭೋಗ್ಯ ಭೋಕ್ತೃ ನಿಯಂತೃಗಳೆಂಬ ಮೂರು ತತ್ವಗಳನ್ನು ಜ್ಞಾಪಿಸುವಂತಹ ಪ್ರಣವ ಗತವಾದ ಮೂರು ಪದಗಳುಳ್ಳವನು. ॥೫೩೮॥

(೫೩೯ನೇ ನಾಮವು) ತ್ರಿದಶಾಧ್ಯಕ್ಷಃ,

ಓಮ್॥ ತ್ರಿದಶಾಧ್ಯಕ್ಷಾಯನಮಃ.

(ಶಂ॥ ಭಾ) ಸತ್ವಾದಿ ಗುಣಾವೇಶದಿಂದುಂಟಾಗಿರುವ ಜಾಗ್ರದಾದಿ ಮೂರು ಅವಸ್ಥೆಗಳುಳ್ಳವರಾದ ಕಾರಣದಿಂದ ತ್ರಿದಶರಾದ (ಶಂ॥ ಮ) ದೇವತೆಗಳಿಗೆ ಅಧ್ಯಕ್ಷನು. (ವಿ॥ ಭಾ) ಈ ವರಾಹರೂಪಿಯಾದ ಪರಮಾತ್ಮನೆ ಪ್ರಳಯಾಪತ್ತಿನಲ್ಲಿ ಬ್ರಹ್ಮಾದಿ ಸರ್ವ ದೇವತೆಗಳಿಗೂ ಸಖ (ಸಹಾಯ) ನಾಗಿರುವಂತವನು. ॥೫೩೯॥

(೫೪೦ನೇ ನಾಮವು) ಮಹಾಶೃಂಗಃ,

ಓಮ್॥ ಮಹಾಶೃಂಗಾಯನಮಃ.

(ಶಂ॥ ಮ) ಅವಾಂತರ ಪ್ರಲಯದಲ್ಲಿ ಹಡಗನ್ನು ಕಟ್ಟುವುದಕ್ಕಾಗಿ ಮಹತ್ತಾದ ಶೃಂಗವುಳ್ಳ ಮತ್ಸ್ಯರೂಪಿಯು. (ವಿ॥ ಭಾ) ಭೂಮಂಡಲವನ್ನು ಕೊನೆಯಲ್ಲಿವುಳ್ಳ ದೊಡ್ಡದಾದ ಕೋರೆಹಲ್ಲುಗಳುಳ್ಳವನು. ॥೫೪೦॥

# (೫೪೧ನೇ ನಾಮವು) ಕೃತಾಂತಕೃತ್,
## ಓಮ್॥ ಕೃತಾನ್ತಕೃತೇನಮಃ.

(ಶಂ॥ ಮ) "ಮೃತ್ಯುಮೃತ್ಯುಂ ನಮಾಮ್ಯಹಂ" ಎಂಬಂತೆ ಯಮನೇ ಮೊದಲಾದವರಿಗೂ ಕೂಡ ನಾಶವನ್ನು ಮಾಡತಕ್ಕವನು. (ವಿ॥ ಭಾ) ಯಮನಂತೆ ಲೋಕಕ್ಕೆಲ್ಲಾ ಮೃತ್ಯುಪ್ರಾಯರಾದ ಹಿರಣ್ಯಾಕ್ಷನನ್ನು ಕೊಂದವನು ಅಥವಾ ವರಾಹಸ್ಮೃತಿ ವರಾಹ ಪುರಾಣಗಳಲ್ಲಿ ತನ್ನ ಸಿದ್ಧಾಂತವನ್ನು ಪ್ರಕಟಿಸಿದವನೆಂತಲೂ ಹೇಳಬಹುದು. ॥೫೪೧॥

ಈ (೫೭)ನೇ ಶ್ಲೋಕದಲ್ಲಿ ಹೇಳಿರುವ (೮) ನಾಮಗಳಿಗೂ "ಸಾಕ್ಷಾದ್ದ್ರಷ್ಟಾ ಮಂತ್ರವೇದಾನ್ಯೋ" "ಮಹರ್ಷಿ" ಸ್ಸಚ (೫೩೪) ಸ್ಮೃತಃ। ತತ್ಪ್ರವಚನಾದೇವ "ಕಪಿಲಾಚಾರ್ಯ" (೫೩೫) ಉಚ್ಯತೇ॥ ಸ್ವಾಮಿ ನಮ್ರತ್ವ ಸುಕೃತಂ ಕಿಂಚಿದಂಶುಮತಾ ಕೃತಂ। ವಿದಿತಂಯೇನ ಕಾರುಣ್ಯಾ "ತ್ಕೃತಜ್ಞೋ" (೫೩೬) ಸ್ಸೋಽಭಿಧೀಯತೇ॥ ಕಾಪಿಲಂ ರೂಪಮಾಸ್ಥಾಯ ಯೋಧಾರಯತಿ ಮೇದಿನೀಂ। ಸ "ಮೇದಿನೀಪತಿಃ" (೫೩೭) ಖ್ಯಾತೋನವಾರ್ಣೋ ಭೂಪ್ರದೋಮನುಃ॥ ಭೋಗ್ಯ ಭೋಕ್ತೃ ನಿಯಂತೄಣಿ ಜ್ಞಾಪ್ಯಾನ್ಯಸ್ಯ ಪದಾನಿವಾ। ಪ್ರಣವೇತ್ರೀಣಿ ವಾಚ್ಯಾನಿ ವಾಚಕಾನಿ ಪದಾನಿವಾ॥ ಯಸ್ಯಸಂತಿಹ್ಯ ಸೌನಿತ್ಯಂ "ತ್ರಿಪದಃ" (೫೩೮) ಪರಿಕೀರ್ತಿತಃ॥ ಸಖಾಸ್ಯಾತ್ "ತ್ರಿದಶಾದ್ಧ್ಯಕ್ಷೋ" (೫೩೯) ಬ್ರಹ್ಮಾದೇಃ ಪ್ರಲಯಾಪದಿ। ಮಹೀಯಸ್ಯಚ ಶೃಂಗಾಗ್ರೇ "ಮಹಾಶೃಂಗ" (೫೪೦) ಸ್ಸಕಥ್ಯತೇ॥ ಅಂತಕಾಭಂ ಹಿರಣ್ಯಾಕ್ಷಂ ಹತವಾನ್ಯಃ "ಕೃತಾಂತಕೃತ್" (೫೪೧) ಸ್ವಸಿದ್ಧಾಂತ ಕರತಾದ್ವಾಸ್ವಾಖ್ಯಸ್ಮೃತಿ ಪುರಾಣಯೋಃ। ಕೃತಾಂತ ಕೃದಿತಿಖ್ಯಾತೋ ವಸ್ವರ್ಣೋ ಭೀಷ್ಟದಾಯಕಃ" ಎಂಬೀ ರೀತಿಯಾಗಿ ವಿವೃತಿಯನ್ನು ಕಾಣಬಹುದು.

ಮೂ॥ ಮಹಾ ವರಾಹೋ ಗೋವಿಂದ ಸ್ಸುಷೇಣಃ ಕನಕಾಙ್ಗದೀ। ಗುಹ್ಯೋ ಗಭೀರೋ ಗಹನೋ ಗುಪ್ತ ಶ್ಚಕ್ರಗದಾಧರಃ ॥೫೮॥

(೫೩೭ನೇ ನಾಮವು) ಮಹಾವರಾಹಃ,
ಓಮ್|| ಮಹಾವರಾಹಾಯನಮಃ.

(ವಿ|| ಶಂ) ದೊಡ್ಡದಾದ ಮಹಾ ವರಾಹ ರೂಪವನ್ನು ತಾಳಿದವನು. ||೫೩೭||

(೫೩೮ನೇ ನಾಮವು) ಗೋವಿಂದಃ,
ಓಮ್|| ಗೋವಿಂದಾಯನಮಃ.

(ಶಂ|| ಮ) ವೇದಾಂತ ವಾಕ್ಯಗಳಿಂದ ತಿಳಿಯಲ್ಪಡುವಂತವನು. (ವಿ|| ಭಾ) "ನಷ್ಟಾಂಪ್ಯೈಧರಣೀಂಪೂರ್ವ ಮವಿಂದಂಚ ಗುಹಾಂಗತಾಂ | ಗೋವಿಂದ ಇತಿತೇನಾಹಂ" (೩೪೨|| ೪೧) ಎಂಬದಾಗಿ ಭಾರತ ಶಾಂತಿ ಪರ್ವದಲ್ಲಿ ಹೇಳಿರುವಂತೆ ನಷ್ಟವಾದ ಭೂಮಿಯನ್ನು ಪುನಶ್ಚ ಉದ್ಧರಿಸಿದವನು. ||೫೩೮||

(೫೩೯ನೇ ನಾಮವು) ಸುಷೇಣಃ,
ಓಮ್|| ಸುಷೇಣಾಯನಮಃ.

(ಶಂ|| ಮ) ಮಂಗಳಕರವಾದ ಗುಣಾತ್ಮಕಗಳಾದ ಸೇನೆಗಳುಳ್ಳವನು. (ವಿ|| ಭಾ) ಇನ್ನು ಮುಂದೇ ರಹಸ್ಯಶಾಸ್ತ್ರ ವಿಷಯವು ಹೇಳಲ್ಪಡುವುದು. ಬದ್ಧಮುಕ್ತ ನಿತ್ಯರೆಂಬ ತ್ರಿವಿಧರಾದ ಚೇತನ ಕೋಟಿಗಳನ್ನು ಜಯಿಸುವುದಕ್ಕೆ ಉಪಕರಣವಾಗಿರುವುದರಿಂದ ಸೇನೆಯಂತೆ ಇರುವ ಶುದ್ಧ ಸತ್ವಮಯವಾದ ಪಂಚೋಪ ನಿಷತ್ತುಗಳನ್ನು ಶರೀರವಾಗಿ ವುಳ್ಳವನು. ||೫೩೯||

(೫೪೦ನೇ ನಾಮವು) ಕನಕಾಂಗದೀ,
ಓಮ್|| ಕನಕಾಂಗದಿನೇನಮಃ.

(ವಿ|| ಭಾ) ಹಿಂದೇ ಪ್ರಕೃತವಾದ ದಿವ್ಯ ದೇಹಕ್ಕೆ ಅನುಗುಣವಾಗಿರುವ (ವಿ|| ಶಂ|| ಮ) ಸ್ವರ್ಣಮಯವಾದ ಬಾಜಿಬಂದು ಮೊದಲಾದ ಆಭರಣಗ

ಳ್ಳವನು. (ವಿ) ಇಲ್ಲಿ ಸ್ವರ್ಣವೆಂದರೆ ಅಪ್ರಾಕೃತ ದ್ರವ್ಯವಾದ ಪಂಚೋಪನಿಷತ್ತೆನ್ನುವ ತತ್ವಗಳನ್ನು ಹೇಳಿದಂತೆ ತಿಳಿಯಬೇಕು. ||೫೪೫||

## (೫೪೬ನೇ ನಾಮವು) ಗುಹ್ಯಃ,

## ಓಮ್|| ಗುಹ್ಯಾಯನಮಃ.

(ಶಂ|| ಭಾ) ರಹಸ್ಯೋಪನಿಷದ್ವೇದ್ಯನು. (ಶಂ|| ಮ) ಅಥವಾ ಹೃದಯಾಕಾಶದಲ್ಲಿರುವಂತವನು. (ವಿ|| ಭಾ) ಈ ರೀತಿಯಾಗಿ ಪಂಚೋಪನಿನ್ಮಯವಾದ ದಿವ್ಯ ದೇಹದಿಂದ ಮುಚ್ಚಲ್ಪಟ್ಟವನು. ||೫೪೬||

## (೫೪೭ನೇ ನಾಮವು) ಗುಹ್ಯಃ,

## ಓಮ್|| ಗುಹ್ಯಾಯನಮಃ.

(ಶಂ|| ಭಾ) ಜ್ಞಾನೈಶ್ವರ್ಯ ಬಲಾದಿಗಳಿಂದ ಗಂಭೀರನಾದವನು. (ವಿ|| ಭಾ) ಅತಿ ನಿರ್ಮಲವಾದ ತನ್ನ ದಿವ್ಯ ಶರೀರದಲ್ಲಿ ತನ್ನ ಸರ್ವೇಶ್ವರತ್ವಕ್ಕೆ ಅನುಗುಣವಾದ ಗಾಂಭೀರ್ಯವುಳ್ಳವನು. ಇವನೊಡನೆ ಸೇರಿದ ಮಾತ್ರದಲ್ಲಿಯೇ ಅನಾದಿಯಾದ ಅವಿದ್ಯೆಯಿಂದ ಕಲುಷಿತನಾದ ಸಂಸಾರಿ ಚೇತನನೂ ಕೂಡ ಚಿಳ್ಳದ ಬೀಜವನ್ನು ತೇದಿರುವ ನೀರಿನಂತೆ ನಿರ್ಮಲನಾಗಿ ಪ್ರಕಾಶಿಸುವಾಗ ಸ್ವಭಾವದಿಂದಲೇ ಪ್ರಕಾಶಮಾನನಾಗಿರುವ ಪರಮಪುರುಷನು ಅತಿ ನಿರ್ಮಲನಾಗಿ ಪ್ರಕಾಶಿಸುತಲಿರುವುದನ್ನು ಕುರಿತು ಹೇಳಬೇಕಾದದ್ದೇನಿರುವುದು. ||೫೪೭||

## (೫೪೮ನೇ ನಾಮವು) ಗಹನಃ,

## ಓಮ್|| ಗಹನಾಯನಮಃ.

(ಶಂ|| ಭಾ) ಪ್ರವೇಶಿಸುವುದಕ್ಕೆ ಅರ್ಹನಾಗದವನು. ಅಥವಾ ಅವಸ್ಥಾತ್ರಯ ಭಾವಾಭಾವ ಸಾಕ್ಷಿಯಾದಕಾರಣ ಗಹನನಾದವನು. (ಮ) ವಾಕ್ಕಿಗೂ ಮನಸ್ಸಿಗೂ ಗೋಚರನಾಗದವನು. (ವಿ|| ಭಾ) ತಿಳಿಯಲಶಕ್ಯನು. ಎಂದರೆ:— ರತ್ನಾಕರವೆಂಬ ಸಮುದ್ರವು ಒಳಗಿರುವ ಸರ್ವ ವಸ್ತುಗಳನ್ನು ಸುಲಭವಾಗಿ ಕಾಣಿಸುವಂತಹ ನೈರ್ಮಲ್ಯವುಳ್ಳದ್ದಾ

ದರೂ ಕಾಲಿಟ್ಟು ಇಳಿಯುವುದಾದರೆ ಮೊಣಗಾಲು ವರಿಗಿನ ನೀರಿಲ್ಲದ ಅಗಾಧ ಸ್ವಭಾವವುಳ್ಳದ್ದಾಗಿರುವಂತೆ ಪರಮಪುರುಷನ ದಿವ್ಯಮಂಗಳ ವಿಗ್ರಹವು ದಿವ್ಯಾತ್ಮ ಸ್ವರೂಪಕ್ಕೆ ಪ್ರಕಾಶಕವಾಗಿದ್ದರೂ ತಿಳಿಯುವು ದಕ್ಕೆ ಅಶಕ್ಯವಾಗಿರುವದು. ‖೫೪೯‖

## (೫೫೦ನೇ ನಾಮವು) ಗುಪ್ತಃ,

## ಓಮ್‖ ಗುಪ್ತಾಯನಮಃ.

(ಶಂ‖ ಭಾ) ವಾಕ್ಕಿಗೂ ಮನಸ್ಸಿಗೂ ಅಗೋಚರನು. (ಮ) ವೇದಾನ್ತ ವಾಕ್ಯಗಳಿಂದ ನಾಸ್ತಿಕ ಖಂಡನ ಪೂರ್ವಕವಾಗಿ ರಕ್ಷಿತನಾದವನು. ರಹಸ್ಯಭೂತನೆಂತಲೂ ಹೇಳಬಹುದು. (ವಿ‖ ಭಾ) ಅವನ ಗೌರವವನ್ನು ತಿಳಿದ ಪೂರ್ವಾಚಾರ್ಯರಿಂದ ರಕ್ಷಿತನು. ‖೫೫೦‖

## (೫೫೧ನೇ ನಾಮವು) ಚಕ್ರಗದಾಧರಃ,

## ಓಮ್‖ ಚಕ್ರಗದಾಧರಾಯನಮಃ.

(ಶಂ‖ ಭಾ) ಮನಸ್ತತ್ವವನ್ನು ಚಕ್ರವಾಗಿಯೂ ಬುದ್ಧಿ ತತ್ವವನ್ನು ಗದೆಯಾಗಿಯೂ ಧರಿಸಿದವನು. (ವಿ‖ ಭಾ) ಯೆಲ್ಲಿ ಯಾವಲಕ್ಷಣದೊಡನೆ ರಕ್ಷಿಸಲ್ಪಡುವನೆಂದರೆ :—“ ತಮಸಃ ಪರಮೋಧಾತಾ ಶಂಖಚಕ್ರ ಗದಾಧರಃ ” (ಯುದ್ಧ‖ ೧೧೪‖ ೧೫) ಎಂಬದಾಗಿ ಶ್ರೀರಾಮಾಯಣದಲ್ಲಿ ಹೇಳಿರುವಂತೆ ಹಿಂದೆ ಹೇಳಲ್ಪಟ್ಟ ನಿತ್ಯವಾದ ದಿವ್ಯಮಂಗಳ ವಿಗ್ರಹವೂ ದಿವ್ಯಭೂಷಣಗಳಂತೆ ಪಂಚಶಕ್ತಿಮಯವಾದ ಚಕ್ರಗದಾದಿ ದಿವ್ಯಾಯುಧಗಳೊಡನೆ ಕೂಡಿ ಪರಮಪದದಲ್ಲಿ ರಕ್ಷಿಸಲ್ಪಡುವಂತವನು. ‖೫೫೧‖

ಈ ೫೯ನೇ ಶ್ಲೋಕದದಲ್ಲಿರುವ ೯ ನಾಮಗಳಿಗೂ “ ರಸಾತಲ ಗತಾಮುರ್ವೀಂ ಯಶ್ಚೋದ್ಧೃತವ್ಯೋ ತ್ರಿಕಃಕ್ಷಣಾತ್ । “ ಮಹಾವರಾಹ ” (೫೪೨) ಇತಿಸಸ್ಸಂಕೀರ್ತಿತೋಹ್ಯುರ್ವೀ ಪ್ರದೋಮನುಃ ‖ ನಷ್ಟಾಂಚ ಧರಣೀಂಪೂರ್ವಂ “ ಗೋವಿಂದೋ ” (೫೪೩) ಯಸ್ಸುಲಬ್ಧವಾನ್ । ಪಂಚೋಪನಿಷದಂಗತ್ವಾ “ ಸುಷೇಣಃ ” (೫೪೪) ಪರಿಕೀರ್ತಿತಃ ‖ ಅಪ್ರಾಕೃತಾನಿ ದಿವ್ಯಾನಿ ಭೂಷಣಾನಿಚ ನಿತ್ಯಶಃ । ರತ್ನಾನಿ ಸನ್ತಿ ಯಸ್ಯಾ

ಸಾ ಸೋಽಚ್ಯತೇ "ಕನಕಾಂಗದೀ" (೫೪೫) ॥ ಪಂಚೋಪನಿಷದಂಗೇನ ಗೂಢತ್ವಾ "ದ್ಗುಹ್ಯ" (೫೪೬) ಉಚ್ಯತೇ । ಮಹಾಗಾಂಭೀರ್ಯಯು ಕ್ತತ್ವಾ "ದ್ಗಭೀರ" (೫೬೭) ಇತಿ ಕಥ್ಯತೇ ॥ ಬಾಲೈರ್ದುರವಗಾಹ ತ್ವಾ "ದ್ಗಹನಃ" (೫೪೮) ಪರಿಕೀರ್ತಿತಃ । ಅನ್ಯೈರ್ದುರವಬೋ ಧೋಯೋ "ಗುಪ್ತ" (೫೪೯) ಇತ್ಯಭಿಧೀಯತೇ ॥ ಯಶ್ಶಕ್ತಿಮುದ್ದಿ ವ್ಯಹೇತಿ ಸ್ಸುಸ್ಯಾ "ಚಕ್ರಗದಾಧರಃ" (೫೫೦) ಎಂಬಂತೆ ವಿವೃತಿಯು ನ್ನು ಕಾಣಬಹುದು.

ಮೂ॥ ವೇಧಾಃ ಸ್ವಾಂಗೋಽಜಿತಃ ಕೃಷ್ಣೋ
ದೃಢಸ್ಸಂಕರ್ಷಣೋಽಚ್ಯುತಃ । ವರುಣೋ ವಾರು
ಣೋ ವೃಕ್ಷಃ ಪುಷ್ಕರಾಕ್ಷೋ ಮಹಾಮನಾಃ ॥೫೯॥

(೫೫೧ನೇ ನಾಮವು) ವೇಧಾಃ,

ಓಮ್॥ ವೇಧಸೇನಮಃ.

(ಶಂ॥ ಮ) ಸೃಷ್ಟಿಸುವಂತಹವನು. (ವಿ॥ ಭಾ) ಈ ರೀತಿಯಾಗಿ ವಿವಿಧವೂ ಅಪರಿಮಿತವೂ ಆದ ಮಹಾ ವಿಭವವು ಸದಾ ಸ್ಥಿರವಾಗಿರು ವಂತೆ ಮಾಡುವಂತಹವನು. ॥೫೫೧॥

(೫೫೨ನೇ ನಾಮವು) ಸ್ವಾಂಗಃ,

ಓಮ್॥ ಸ್ವಾಂಗಾಯನಮಃ.

(ಶಂ॥ ಮ) ಸೃಷ್ಟಿರೂಪವಾದ ಕಾರ್ಯದಲ್ಲಿ ತಾನೇ ಸಹಕಾರಿಯಾಗಿ ರುವಂತಹವನು. (ವಿ॥ ಭಾ) ಪರಮಪದದಲ್ಲಿ ಆಧಿರಾಜ್ಯ ಸೂಚಕವಾದ ಛತ್ರಚಾಮರಾದಿ ಸಕಲ ಪರಿವಾರಗಳೊಡನೆ ಕೂಡಿರುವಂತಹವನು. ॥೫೫೨॥

(೫೫೩ನೇ ನಾಮವು) ಅಜಿತಃ,

ಓಮ್॥ ಅಜಿತಾಯನಮಃ.

(ಶಂ) ಅವತಾರಗಳಲ್ಲಿ (ಶಂ॥ ಮ) ಯಾರಿಂದಲೂ ಜಯಿಸಲ್ಪಡದ ವನು (ವಿ॥ ಭಾ) ಹಿಂದೆ ಹೇಳಲ್ಪಟ್ಟ ಪಂಚೋಪ ನಿಷನ್ಮಯವಾಗಿ ನಿತ್ಯವಾಗಿರುವುದರಿಂದ ಲೀಲಾ ವಿಭೂತಿಯಲ್ಲಿರುವ ಉತ್ಪತ್ತಿ ವಿನಾಶಾ ದಿಗಳಿಂದ ಜಯಿಸಲ್ಪಡದ ಅಜಿತಾ ಎಂಬ ದಿವ್ಯ ನಗರವುಳ್ಳವನು. ‖೫೫೩‖

(೫೫೪ನೇ ನಾಮವು) ಕೃಷ್ಣಃ,
ಓಮ್॥ ಕೃಷ್ಣಾಯನಮಃ.

(ಶಂ॥ ಮ) ಕೃಷ್ಣದ್ವೈಪಾಯನನು. ಎಂದರೆ ವ್ಯಾಸರೂಪಿಯು. (ವಿ॥ ಭಾ) ನೀಲಮೇಘದಂತೆ ಆಶ್ರಿತ ಶ್ರಮಹರವಾದ ಅತ್ಯಂತ ಶ್ಯಾಮಳ ಮೂರ್ತಿಯು. ವರಾಹಾದ್ಯವತಾರವೂ ಕೂಡ ಪಂಚೋಪ ನಿಷನ್ಮಯ ವೆಂತಲೇ " ಏಕೈವ ಪಂಚಧಾಭೂತ್ವಾ " ಎಂಬೀ ಪ್ರಕಾರವಾಗಿ ಹೇಳಲ್ಪ ಡುವುದು. ಈ ಸಕಲಾರ್ಥಗಳೂ ಶ್ರೀವಿಷ್ಣುತತ್ವ ಸಂಹಿತೆಯಲ್ಲಿ ವಿಸ್ತಾ ರವಾಗಿ ಪ್ರಪಂಚಿತವಾಗಿರುವುವು ‖೫೫೪‖

(೫೫೫ನೇ ನಾಮವು) ದೃಢಃ,
ಓಮ್॥ ದೃಢಾಯನಮಃ.

(ಶಂ॥ ಭಾ) ಸ್ವರೂಪ ಸಾಮರ್ಥ್ಯದಿಂದ ಬಿಡಲ್ಪಡದವನು. (ವಿ॥ ಭಾ) ಈ ನಿತ್ಯ ಶರೀರದಲ್ಲಿ ತಾನೇ ಉಪಾಸಕರನ್ನು ಅನುಗ್ರಹಿಸುವುದ ಕ್ಕಾಗಿ ವಾಸುದೇವಾದಿ ವ್ಯೂಹವಾಗಿ ವಿಭಾಗಿಸಲ್ಪಟ್ಟರೂ ಅದರಲ್ಲಿಯೂ (ವಿಭು) ಸರ್ವವ್ಯಾಪ್ತನಾದವನು. ‖೫೫೫‖

(೫೫೬ನೇ ನಾಮವು), ಸಂಕರ್ಷಣಃ,
ಓಮ್॥ ಸಂಕರ್ಷಣಾಯನಮಃ

(ವಿ॥ ಭಾ) ಈ ರೀತಿಯಾಗಿ ಸ್ಥೂಲ (ವಿಭು ವಾದವನು) ನಾದವ ನು ಯಾರೆಂದರೆ :— ಸಂಕರ್ಷಣಃ-ಸಂಕರ್ಷಣಮೂರ್ತಿಯು. ಇವನ ವ್ಯಾಪಾರವು ಪ್ರಳಯ ಕರ್ತೃತ್ವವು ‖೫೫೬‖

(೫೫೭ನೇ ನಾಮವು) ಅಚ್ಯುತಃ,
ಓಮ್॥ ಅಚ್ಯುತಾಯನಮಃ.

(ವಿ|| ಭಾ) ಬ್ರಹ್ಮಾದಿಗಳು ಯಾವ ಪರಮಾತ್ಮ ಸ್ಥಾನವನ್ನು ಸೇರಿದಮೇಲೆ ಜಾರಿ ಪುನಶ್ಚ ಕಳಗೆ ಬೀಳಲಾರರೊ ಅಂತಹ ಅಚ್ಯುತವಾದ ಸ್ಥಾನವುಳ್ಳವನು. (ಶಂ) ಸಂಕರ್ಷಣೋಽಚ್ಯುತಃ—ಇದು ಸಂಯುಕ್ತವಾದ ಒಂದೇ ನಾಮವು ಸಂಹಾರ ಸಮಯದಲ್ಲಿ ಒಂದೇಸಲ ಪ್ರಜೆಗಳನ್ನು ಲಯಮಾಡುವಂತವನು. ಅಥವಾ ಸ್ವಸ್ವರೂಪದಿಂದ ಭ್ರಷ್ಟನಾಗದವನು ||೫೫೭||

## (೫೫೮ನೇ ನಾಮವು) ವರುಣಃ,

## ಓಮ್|| ವರುಣಾಯನಮಃ.

ಭಾ) ತನ್ನ ಕಿರಣಗಳನ್ನು ಮರೆಮಾಡಿಕೊಂಡು ಸಾಯಂಗತನಾಗುವ ಸೂರ್ಯರೂಪನು. (ವಿ|| ಭಾ) ಸಮಸ್ತವನ್ನು ಆಕ್ರಮಿಸಿಕೊಂಡಿರುವಂತವನು. ||೫೫೮||

## (೫೫೯ನೇ ನಾಮವು) ವಾರುಣಃ,

## ಓಮ್|| ವಾರುಣಾಯನಮಃ.

(ಶಂ|| ಮ) ವರುಣ ಪುತ್ರರಾದ ವಸಿಷ್ಠರೂಪನು ಅಥವಾ ಅಗಸ್ತ್ಯರೂಪನು. (ಮ) ವರುಣನಿಂದ ತಿಳಿಯಲ್ಪಟ್ಟವನು ಅಥವಾ ಪೂಜಿಸಲ್ಪಟ್ಟವನೆಂತಲೂ ಆಗಬಹುದು. (ವಿ|| ಭಾ) "ತೇಷುಚಾಪ್ಯಹಂ" (ಗೀ|| ೯|| ೨೯) ಎಂಬಂತೆ ತನ್ನನ್ನು ರಕ್ಷಕನನ್ನಾಗಿ ವರಿಸುವಂತಹ ಭಕ್ತರಲ್ಲಿರುವಂತವನು.

## (೫೬೦ನೇ ನಾಮವು) ವೃಕ್ಷಃ,

## ಓಮ್|| ವೃಕ್ಷಾಯನಮಃ.

(ಶಂ|| ಭಾ) ವೃಕ್ಷದಂತೆ ಅಚಂಚಲನಾದವನು. (ವಿ|| ಭಾ) "ನಿವಾಸವೃಕ್ಷ ಸ್ಸಾಧೂನಾ ಮಾಪನ್ನಾನಾಂ ಪರಾಗತಿಃ" (ಶ್ರೀರಾ|| ಕಿ) "ಸಮಾಶ್ರಿತಾ ದ್ಬ್ರಹ್ಮತರೋ ರನಂತಾ ನ್ನಿಸ್ಸಂಶಯಃಪಕ್ವಫಲಪ್ರಪಾತಃ" ಎಂಬಂತೆ ಈ ರೀತಿಯಾಗಿ ಯಾವ ಭಕ್ತರಾದರೆ ತನ್ನನ್ನು ವರಿಸಿ ಛಾಯಾ ವೃಕ್ಷದಂತೆ ಅನುಸರಿಸಿ ಬರುವರೋ ಅವರಿಗೆ ತನ್ನ ಸರ್ವ

ಸ್ವನೆನ್ನು ಕೊಟ್ಟು ಅವರ ಅನಂತಾಪರಾಧಗಳನ್ನೂ ಕ್ಷಮಿಸಿಕೊಂಡು ಅವರನ್ನು ಕಾಯುವಂತವನು. (ಮ) ಅಸುರರನ್ನು ಕೊಲ್ಲುವಂತವ ನು. ||೫೬೦||

## (೫೬೧ನೇ ನಾಮವು) ಪುಷ್ಕರಾಕ್ಷಃ,

## ಓಮ್|| ಪುಷ್ಕರಾಕ್ಷಾಯನಮಃ.

(ಶಂ|| ಭಾ) ಹೃದಯ ಕಮಲದಲ್ಲಿ ಚಿಂತಿಸಲ್ಪಡುವಂತವನು. ಅ ಥವಾ ಸ್ವರೂಪದಿಂದಲೇ ಪ್ರಕಾಶಿಸುವಂತವನು. (ವಿ|| ಭಾ) ಅವರನ್ನು ಕೃಪಾವರ್ಷದಿಂದ ರಕ್ಷಿಸುವಂತಹ ದಿವ್ಯ ಕಣ್ಣುಳ್ಳವನು. (ಮ) ಪುಷ್ಕ ರವೆನ್ನಲ್ಪಡುವ ತೀರ್ಥದಲ್ಲಿಯಾದರೂ ಹೃದಯ ಪುಂಡರೀಕದಲ್ಲಿ ಯಾದ ರೂ ವ್ಯಾಪಿಸಿರುವಂತವನು. ||೫೬೧||

## (೫೬೨ನೇ ನಾಮವು) ಮಹಾಮನಾಃ,

## ಓಮ್|| ಮಹಾಮನಸೇನಮಃ.

(ಶಂ|| ಭಾ) ಮನಸ್ಸಿನಿಂದಲೇ ಸೃಷ್ಟ್ಯಾದಿಗಳನ್ನು ಮಾಡುವಂತ ವನು. (ವಿ|| ಭಾ) ಅಂತಹ ಭಕ್ತರಲ್ಲಿ ಅತ್ಯುದಾರವಾದ ಮನಸ್ಸುಳ್ಳ ವನು. ||೫೬೨||

ಈ ೫೯ನೇ ಶ್ಲೋಕದಲ್ಲಿ ಪ್ರತಿಪಾದಿಸಲ್ಪಟ್ಟ ೧೦ ನಾಮಗಳಿಗೂ "ಮಹಾವಿಭವ ಕಲ್ಯಾಣಂ ಸತತಂ ವಿದಧಾತಿಯಃ | ಭಕ್ತೇಭ್ಯಃ ಪರ ಮಂವೇಧಾಃ" ಷಡರ್ಥೋ ಮಂಗಲಪ್ರದಃ || ಸ್ವಾಸಾಧಾರಣ ಮಂಗಂಹಿ ಛತ್ರಾದಿ ಪರಿಬರ್ಹಣಂ | ಯಸ್ಯಾಸ್ತಿ ನಿತ್ಯಂಸ "ಸ್ವಾಂಗಃ" (೫೫೦) ಷಡರ್ಣಃ ಪರಿವಾರದಃ || ಪ್ರಾಕೃತ್ಯೈ ರ್ನಜಿತಾಯಾಸಾ ಯಸ್ಯಾಸ್ತೀತ್ಯ ಜಿತಾಪುರೀ | "ಅಜಿತ" (೫೫೩) ಸ್ತೇನವಿಜ್ಞೇಯ ಸ್ಸಪ್ತಾರ್ಣೋ ಮುಕ್ತಿದೋಮನುಃ || ಅಪ್ರಾಕೃತಾತಿರುಚಿರ ಮೇಚಕಃ "ಕೃಷ್ಣ" (೫೫೮) ಈರಿತಃ | ಸ್ಥೂಲತ್ವಾದ್ಬಲವತ್ವಾಚ್ಚ "ದೃಢ" (೫೫೫) ಇ ತ್ಯಭಿಧೀಯತೇ || ಯಃಕರ್ಷಣೋ ಚಿದಚಿತೋಸ "ಸಂಕರ್ಷಣ" (೫೫೬) ಉಚ್ಯತೇ | ಯಸ್ಮಾನ್ನ ಚ್ಯವತೇಸ್ಥಾನಾ ದ್ಬ್ರಹ್ಮಾದಿರಿವಸೊ "ಽಚ್ಯು

ತಃ " (೫೫೭) | ಯುಸ್ಸಿ ಛತಸ್ಸರ್ವಮಾವೃತ್ಯ " ವರುಣ " (೫೫೮) ಸ್ಸತುಕದ್ಯತೇ || ಆಪಸ್ಥಾ ವರುಣಾಸ್ತೇಷು ಸ್ಥಿತೋ " ವಾರುಣ " (೫೫೯) ಈರಿತಃ | ಸಾಧೂನಾಮಾಶ್ರಯತ್ವಾಚ್ಚ ಸರ್ವೇನಸ್ಸಹನಾದಪಿ | ಸರ್ವಸತ್ತ್ವೋಪ ಜೀವ್ಯತ್ವಾ " ದ್ವೃಕ್ಷ " (೫೬೦) ಇತ್ಯಭಿಧೀಯತೇ || ಸತಾಂಪ್ರಸಾದವರ್ಷೇಣ ಪೋಷಕೋಯಸ್ಯ ಚಾಕ್ಷಿಣೀ | " ಪುಷ್ಕರಾಕ್ಷ " (೫೬೧) ಸ್ಸವಿಜ್ಞೇಯೋಹ್ಯಷ್ಟಾರ್ಣಃ ಪ್ರೀತಿವರ್ಧಕಃ || ಅಗಾಧೋದಾರ ವಿಸ್ತಾರಂಮನೋಯಸ್ಯ " ಮಹಾಮನಾಃ " (೫೬೨) ಎಂಬ ವಿವೃತಿಯನ್ನು ಕಾಣಬಹುದು.

ಮೂ|| ಭಗವಾನ್ ಭಗಹಾ ನಂದೀ ವನಮಾಲೀ
ಹಲಾಯುಧಃ | ಆದಿತ್ಯೋ ಜ್ಯೋತಿ ರಾದಿತ್ಯ
ಸ್ಸಹಿಷ್ಣು ರ್ಗತಿಸತ್ತಮಃ ||೬೦||

(೫೬೩ನೇ ನಾಮವು) ಭಗವಾನ್,

ಓಮ್|| ಭಗವತೇನಮಃ.

(ಶಂ|| ಮ) ಸಂಪೂರ್ಣವಾದ; ಐಶ್ವರ್ಯವೂ ಧರ್ಮವೂ ಕೀರ್ತಿ ಸಂಪದ್ವೈರಾಗ್ಯಗಳೂ ಮೋಕ್ಷವೂ ವುಳ್ಳವನು. ಅಥವಾ ಭೂತಗಳ ಉತ್ಪತ್ತಿ ಲಯಗಳನ್ನೂ ಗತಿ ಆಗತಿಗಳನ್ನು ವಿದ್ಯಾ ಅವಿದ್ಯೆಗಳನ್ನೂ ತಿಳಿದವನು. (ವಿ|| ಭಾ) ಈ ರೀತಿಯಾಗಿ ಹೇಯ ಪ್ರತಿಭಟವಾಗಿಯೂ ಕಲ್ಯಾಣೈಕ ಸ್ವರೂಪವಾಗಿಯೂ ಇರುವುದರಿಂದ ಅತ್ಯಂತ ಪೂಜ್ಯನಾಗಿರುವಂತವನು. ||೫೬೩||

(೫೬೪ನೇ ನಾಮವು) ಭಗಹಾ,

ಓಮ್|| ಭಗಘ್ನೇನಮಃ.

(ಶಂ|| ಮ) ಸಂಹಾರ ಸಮಯದಲ್ಲಿ (ಮ|| ಪಾಪಿಗಳ) ಐಶ್ವರ್ಯಾದಿಕವನ್ನು ನಾಶಪಡಿಸುವಂತವನು. (ವಿ|| ಭಾ) ಜ್ಞಾನೈಶ್ವರ್ಯಾದಿ ಗುಣಗಳಿಂದಲೂ ಹಾಗೆಯೇ ಸರ್ವತ್ರ ಸಂಚರಿಸುತ ಪ್ರಕಾಶಿಸುವಂತವನು. ||೫೬೪||

## (೫೬೫ನೇ ನಾಮವು) ನಂದೀ,

### ಓಮ್॥ ನಂದಿನೇನಮಃ.

(ಶಂ॥ ಭಾ) ಆನಂದೀ–ಎಂಬದಾಗಿ ಪದಚ್ಛೇದವು; ಸುಖರೂಪನು. ಅಥವಾ ಸರ್ವ ಸಮೃತ್ಸಮೃದ್ಧನು. (ವಿ॥ ಭಾ) ನಂದೀ–ಈ ರೀತಿಯಾಗಿ ವ್ಯೂಹದಲ್ಲಿ ಸಂಕರ್ಷಣ ಮೂರ್ತಿಯಾಗಿರುವ ತನ್ನ ಬಲಭದ್ರಾವತಾರ ದಲ್ಲಿ ನಂದಗೋಪರನ್ನು ತಂದೆಯಾಗಿ ಹೊಂದಿದವನು. (ಅದವಾ) ಗೋ ಪಿಯರನ್ನೂ ಮಧುವನ್ನೂ ಅನುಭವಿಸುವುದರಿಂದುಂಟಾದ ಆನಂದವು ಳ್ಳವನು. (ಮ)ಆನಂದಕ್ಕೂ ಅದು ವುಳ್ಳವನಿಗೂ ಅಭೇದವಿದ್ದರೂ ಶ್ರು ತಿಪ್ರಾಮಾಣ್ಯವನ್ನಂಗೀಕರಿಸಿ ಆಧಾರಾಧೇಯ ಭಾವವನ್ನಂಗೀಕರಿಸ ಬೇಕು. ॥೫೬೫॥

## (೫೬೬ನೇ ನಾಮವು) ವನಮಾಲೀ,

### ಓಮ್॥ ವನಮಾಲಿನೇನಮಃ.

(ಶಂ॥ ವಿ॥ ಭಾ) ತನ್ನಿಂದ ಸೃಷ್ಟಿಸಲ್ಪಟ್ಟ ಭೂತಸೂಕ್ಷ್ಮಗಳ ಸಾರ ವಾದ ಗಂಧಾಭಿಮಾನಿಯಾದ ವೈಜಯಂತಿ ಎಂಬ ವನಮಾಲೆಯಿಂದ ನಿತ್ಯ ವಾಗಿ ಸೇರಿವನು. ॥೫೬೬॥

## (೫೬೭ನೇ ನಾಮವು) ಹಲಾಯುಧಃ,

### ಓಮ್॥ ಹಲಾಯುಧಾಯನಮಃ.

(ಶಂ॥ ವಿ॥ ಮ) ಹಿಂದೇ ಹೇಳಿರುವ ಭೂತಗಳಿಗೆ ಸಮೃದ್ಧಿಯ ನ್ನುಂಟುಮಾಡುವ ಹಲ (ನೇಗಲೆಂಬ) ವೆಂಬ ಆಯುಧವುಳ್ಳ ಬಲಭದ್ರ ಮೂರ್ತಿಯು. ॥೫೬೭॥

## (೫೬೮ನೇ ನಾಮವು) ಆದಿತ್ಯಃ,

### ಓಮ್॥ ಆದಿತ್ಯಾಯನಮಃ.

(ಶಂ॥ ಮ) ಅದಿತಿದೇವಿಯಲ್ಲಿ ಕಶ್ಯಪರಿಂದ ಜನಿಸಿದ ವಾಮನ ಮೂ ರ್ತಿಯು. (ವಿ॥ ಭಾ) ತನಿಗೆ ವಾಚಕವಾದ ಆಕಾರದಿಂದ ಹೊಂದಲ್ಪಡತ

ಕ್ಕವನು. ಸಂಕರ್ಷಣ ಬೀಜ ಮಂತ್ರವು ಆಕಾರವಾಗಿರುವುದರಿಂದ ಇಲ್ಲಿ ಈ ರೀತಿಯಾಗಿ ಹೇಳಲ್ಪಟ್ಟಿತು ಅಥವಾ ಪೂರ್ವಜನ್ಮದಲ್ಲಿ ಅದಿತಿಯಾಗಿದ್ದ ದೇವಕೀದೇವಿಯ ಕುಮಾರನಾಗಿ ಹುಟ್ಟಿದವನೆಂತಲೂ ಹೇಳಬಹುದು. ಈ ಅರ್ಥವು ವಿಷ್ಣುಧರ್ಮದಲ್ಲಿ ಸಿದ್ಧವಾಗಿರುವುದು. ||೩೯೮||

## (೩೯೯ನೇ ನಾಮವು) ಜ್ಯೋತಿರಾದಿತ್ಯಃ,

## ಓಮ್|| ಜ್ಯೋತಿರಾದಿತ್ಯಾಯನಮಃ.

(ಶಂ|| ಮ) ಜ್ಯೋತಿಶ್ಶಬ್ದವಾಚ್ಯವಾದ ಸೂರ್ಯಮಂಡಲದಲ್ಲಿರುವ ಜ್ಯೋತಿಸ್ಸ್ವರೂಪನು. ಅಥವಾ ಜ್ಯೋತಿಸ್ಸ್ವರೂಪನಾದ ಆದಿತ್ಯನಲ್ಲಿರುವಂತವನು. (ವಿ|| ಭಾ) ಇನ್ನು ಮುಂದೆ ನಾರಾಯಣನ ವಿಷಯವು ಪ್ರಸ್ತುತಿಸಲ್ಪಡುವದು. ಜ್ಯೋತಿಸ್ಸ್ವರೂಪನಾದ ಆದಿತ್ಯನು. ಇದರಿಂದ ಜ್ಯೋತಿಸ್ಸ್ವರೂಪನಲ್ಲದ ಆದಿತ್ಯನೊಬ್ಬನುಂಟೊ ? ಎಂದು ಕೇಳಿದರೆ ಸತ್ಯವು; ಪರಮ ಪುರುಷನ ತೇಜಸ್ಸಿನ ಮುಂದೆ ಸೂರ್ಯನ ತೇಜಸ್ಸೆಂಬುವದು ಅಂಧಕಾರ ತುಲ್ಯವಾಗಿರುವುದರಿಂದ ಪರಮ ಪುರುಷನೇ ಜ್ಯೋತಿರಾದಿತ್ಯನಲ್ಲದೆ ಬೇರೊಬ್ಬನಲ್ಲವು. ಈ ಅರ್ಥವು ನಾರಾಯಣೀಯದಲ್ಲಿ " ತಯೋರ್ಭವೇನ ಯೊದ್ಯತೋಃ|| ನಿಷ್ಪ್ರಭಾಣಿಚ ತೇಜಾಂಸಿ ಬ್ರಹ್ಮಾಚೈವಾಸನಾಚ್ಚ್ಯುತಃ'' ಎಂಬದಾಗಿ ಹೇಳಲ್ಪಟ್ಟಿರುವದು ||೩೯೯||

## (೪೦೦ನೇ ನಾಮವು) ಸಹಿಷ್ಣುಃ,

## ಓಮ್|| ಸಹಿಷ್ಣವೇನಮಃ.

(ಶಂ|| ಭಾ) ಶೀತೋಷ್ಣಾದಿ ದ್ವಂದ್ವಗಳನ್ನು (ವಿ|| ಭಾ) ಬ್ರಹ್ಮರುದ್ರಾದಿಗಳು ಮಾಡಿದ ಅಪರಾಧಗಳನ್ನು ಸಹಿಸಿದವನು. ||೪೦೦||

## (೪೦೧ನೇ ನಾಮವು) ಗತಿಸತ್ತಮಃ,

## ಓಮ್|| ಗತಿಸತ್ತಮಾಯನಮಃ.

(ಶಂ|| ಮ) ಶ್ರೇಷ್ಠವಾದ ಗತಿಯು. (ವಿ|| ಭಾ) ಅವನೇ ಪರಮ ಧರ್ಮೋಪದೇಶವನ್ನು ಮಾಡುವ ಆಚಾರ್ಯೋತ್ತಮನಾದ ಕಾರಣ "ಗತಿಸತ್ತಮಃ" ಎನ್ನಲ್ಪಡುವನು. ||೪೦೧||

ಈ ೬೦ ನೇ ಶ್ಲೋಕದಲ್ಲಿ ಪ್ರಕೃತಗಳಾದ ೯ ನಾಮಗಳಿಗೂ "ಸರ್ವಹೇಯ ಪ್ರತ್ಯನೀಕ ಕಲ್ಯಾಣ ಗುಣವತ್ತಯಾ | ಪೂಜ್ಯಾತ್ಪೂಜ್ಯತಮೋ ಯೋಸೌ "ಭಗವಾನ್" (೫೬೩) ಇತಿಶಬ್ದ್ಯತೇ ‖ ಭಗೈಸ್ಸು ಕಲ್ಯಾಣಗುಣೈ ಸ್ಸರ್ವ ಸ್ಸರ್ವತ್ರಗಚ್ಛತಿ ‖ ಯಶ್ಚಾಸೌ "ಭಗಹಾ" (೫೬೪) ಪ್ರೋಕ್ತ ಷಡ್ವರ್ಣಸ್ಸುಖದಾಯಕಃ ‖ ನಂದಗೋಪೇನ ಪಿತೃ ವಾನ್ "ನನ್ದೀ" (೫೬೫) ತಿಪರಿಗೀಯತೇ | ಸ್ವಸೃಜ್ಯ ಭೂತಸೂಕ್ಷ್ಮಾಣಾಂ ಮಾಲಯಾನಿತ್ಯಯೋಗತಃ ‖ "ವನಮಾಲೀ" (೫೫೬) ಸಮಾಖ್ಯಾತೋ ಹ್ಯಷ್ಟಾರ್ಣೋ ಭೂಷಣಪ್ರದಃ | ಹಲಂಚ ಸತತಂ ಸೀರಂ ಧತ್ತೇಯೋಸೌ "ಹಲಾಯುಧಃ" (೫೬೭) ‖ ಸೀರಕಾರ್ಯ ಸಮೃದ್ಧ್ಯರ್ಥೋ ಷಸ್ವರ್ಣೋ ಮಂತ್ರದಾಯಕಃ | ಆವರ್ಣಾ ದೇವಪಾತ್ರೋಯ ಸ್ಸ "ಆದಿತ್ಯಃ" (೫೬೮) ಪ್ರಕೀರ್ತಿತಃ ‖ ಅದಿತಿರ್ದ್ದೇವಕೀ ತಸ್ಯಾ ಆದಿತ್ಯೋವಾಹ್ಯಪತ್ಯತಃ | ಸಮಸ್ತ ತೇಜೋಹರಣ ಜ್ಯೋತಿಷಾ ದೀಪ್ಯತೇಚಯಃ ‖ ಸವೈಸ್ಯಾ "ಜ್ಯೋತಿರಾದಿತ್ಯಃ" (೫೬೯) ನವಾರ್ಣೋ ಜ್ಞಾನದಾಯಕಃ | ಬ್ರಹ್ಮಾದಿ ಮಂತುಸಹನಾ "ತ್ಸಹಿಷ್ಣು" (೫೭೦) ರಿತಿ ಕಥ್ಯತೇ | ಧರ್ಮೇ ಪ್ರತ್ಯಯಿತತವೋ "ಗತಿಸತ್ತಮ" (೫೭೧) ಉಚ್ಯತೇ" ಎಂಬಂತೆ ವಿವೃತಿಯನ್ನು ಕಾಣಬಹುದು.

ಮೂ‖ ಸುಧನ್ವಾ ಖಂಡಪರಶು ರ್ದ್ದಾರುಣೋ ದ್ರವಿಣಪ್ರದಃ | ದಿವಿಸ್ಪೃ ಕ್ಸರ್ವದೃ ಗ್ವ್ಯಾಸೋ ವಾಚಸ್ಪತಿ ರಯೋನಿಜಃ ‖೬೧‖

(೫೭೨ನೇ ನಾಮವು) ಸುಧನ್ವಾ,

ಓಮ್‖ ಸುಧನ್ವನೇನಮಃ.

(ಶಂ‖ ಭಾ) ಮಂಗಳಕರವೂ ಇಂದ್ರಿಯಾತ್ಮಕವೂ ಆದ ಶಾರ್ಙ್ಗವೆಂಬ ಧನುಸ್ಸುಳ್ಳವನು. (ವಿ‖ ಭಾ) ಅಮೃತಾರ್ಥವಾಗಿ ದೇವಾಸುರರುಗಳಿಗೆ ಯುದ್ಧವು ಪ್ರಾಪ್ತವಾದಾಗ ಅಸುರನಿರಾಕರಣಕ್ಕಾಗಿ ಶ್ರೇಷ್ಠವಾದ ಧನುಸ್ಸುಳ್ಳವನು. ‖೫೭೨‖

## (೫೭೩ನೇ ನಾಮವು) ಖಂಡಪರಶುಃ,
## ಓಮ್॥ ಖಂಡಪರಶವೇನಮಃ.

(ಶಂ॥ ಮ) ಶತ್ರುಗಳನ್ನು ಖಂಡಿಸುವುದರಿಂದ ಖಂಡಸಂಜ್ಞಿತವಾದ ಪರಶುವೆಂಬ ಆಯುಧವುಳ್ಳ ಶ್ರೀ ಪರಶುರಾಮನು. ಅಥವಾ ಅಖಂಡ ಪರಶುಃ—ಅಖಂಡವಾದ ಪರಶುವೆಂಬ ಆಯುಧವುಳ್ಳವನು. (ವಿ॥ ಭಾ) ರುದ್ರಾನುಬಂಧಿಯಾದ ಯುದ್ಧದಲ್ಲಿ ಪರಶು ಎಂಬವನನ್ನು ಖಂಡಿಸಿದವನು. ಈ ಅರ್ಥವು ಶ್ರೀಮಹಾಭಾರತ ಶಾಂತಿಪರ್ವದ (೩೪೪॥೯೮-೬) ನೇ ಅಧ್ಯಾಯದಲ್ಲಿ ನಿರ್ವಚನಮಾಡಲ್ಪಟ್ಟಿರುವದು. ॥೫೭೩॥

## (೫೭೪ನೇ ನಾಮವು) ದಾರುಣಃ,
## ಓಮ್॥ ದಾರುಣಾಯನಮಃ.

(ಶಂ॥ ಭಾ) ಸನ್ಮಾರ್ಗವಿರೋಧಿಗಳಿಗೆ ಭಯಂಕರನು. (ಮ) ಕ್ರೂರನಾದವನು. (ವಿ॥ ಭಾ) ಈ ರೀತಿಯಾಗಿ ಬಾಹ್ಯಶತ್ರುಗಳನ್ನೂ ಅಂತರ ಶತ್ರುಗಳನ್ನೂ ಖಂಡಿಸುವುದರಿಂದ ಭಯಂಕರನು. ॥೫೭೪॥

## (೫೭೫ನೇ ನಾಮವು) ದ್ರವಿಣಪ್ರದಃ,
## ಓಮ್॥ ದ್ರವಿಣಪ್ರದಾಯನಮಃ.

(ಶಂ॥ ಭಾ) ಭಕ್ತರಿಗೆ ಅಪೇಕ್ಷಿತವಾದ ಧನವನ್ನು ಕೊಡುವಂತವನು. (ವಿ॥ ಭಾ) ಧನದಂತೆ ಅತಿ ಶ್ಲಾಘ್ಯವಾದ ಸಕಲ ಶಾಸ್ತ್ರಗಳನ್ನೂ ಅದರ ಅರ್ಥಗಳನ್ನೂ ಕೊಡುವಂತವನು. ॥೫೭೫॥

## (೫೭೬ನೇ ನಾಮವು) ದಿವಿಸ್ಪೃಕ್,
## ಓಮ್॥ ದಿವಿಸ್ಪೃಶೇನಮಃ.

(ಶಂ॥ ಮ) ಆಕಾಶಪರ್ಯಂತವಾಗಿ ವ್ಯಾಪಿಸಿದವನು. (ವಿ॥ ಭಾ) ಪರವಿದ್ಯೆಯಿಂದ ಪರಮಪದದಲ್ಲಿರುವ ತತ್ವ ರಹಸ್ಯಗಳನ್ನು ಸ್ಪರ್ಶಿಸಿದವನು. ಪರಮಾರ್ಥದರ್ಶೀ ಎಂದರ್ಥವು. "ವಿದಿತ ಪರಮಾರ್ಥಃ"

ಎಂದು ಅವರ ಮಂತ್ರದಲ್ಲಿಯೂ ಪ್ರತಿಪಾದಿಸಲ್ಪಟ್ಟಿರುವದು. (ಶಂ॥ಮ) ದಿಸ್ಪೃಕ್ ಎಂತಲೂ ಪಾಠಾಂತರವು. ॥೩೭೬॥

(೩೭೭ನೇ ನಾಮವು), ಸರ್ವದೃಕ್,

ಓಮ್॥ ಸರ್ವದೃಶೇನಮಃ

(ವಿ॥ ಭಾ) ಉಳಿದ ಸಮಸ್ತ ವೈಭವವನ್ನೂ ತಿಳಿದವನು. (ಮ) ಸಮಸ್ತವನ್ನೂ ತಿಳಿದವನು. ॥೩೭೭॥

(೩೭೮ನೇ ನಾಮವು) ವ್ಯಾಸಃ,

ಓಮ್॥ ವ್ಯಾಸಾಯನಮಃ.

(ವಿ॥ ಭಾ) ಯುಗಾನುಸಾರವಾಗಿ ಮಂದ ಬುದ್ಧಿಯುಳ್ಳ ಮನುಷ್ಯರ ಕ್ಷೇಮಾರ್ಥವಾಗಿ ವೇದವಿಭಾಗವನ್ನು ಮಾಡಿದವನು. (ಶಂ) ಸರ್ವದೃಗ್ವ್ಯಾಸಃ—ಸಮಸ್ತವಾದ ಜ್ಞಾನಭಾಗವನ್ನೂ ವಿಸ್ತಾರಪಡಿಸಿದವನು. ಅಥವಾ ಸರ್ವದರ್ಶಿಯಾದಕಾರಣ ಸರ್ವಾಕಾರವಾದ ಜ್ಞಾನವುಳ್ಳವನು ಸರ್ವದೃಕ್; ವೇದಪುರಾಣಾದಿಗಳನ್ನು ವಿಭಾಗಿಸಿದವನು "ವ್ಯಾಸಃ" ಎನ್ನಲ್ಪಡುದನು. ॥೩೭೮॥

(೩೭೯ನೇ ನಾಮವು) ವಾಚಸ್ಪತಿಃ,

ಓಮ್॥ ವಾಚಸ್ಪತಯೇನಮಃ.

(ವಿ॥ ಭಾ) ಪಂಚಮವೇದವಾದ ಶ್ರೀ ಭಾರತವಾಕ್ಯಗಳಿಗೆ ಪತಿಯಾದವನು. ॥೩೭೯॥

(೩೮೦ನೇ ನಾಮವು) ಅಯೋನಿಜಃ,

ಓಮ್॥ ಅಯೋನಿಜಾಯನಮಃ.

(ವಿ॥ಭಾ) ಸಾರಸ್ವತಾವತಾರದಲ್ಲಿ ಪರಮ ಪುರುಷನ ವಾಕ್ಕಿನಿಂದ ಆವಿರ್ಭವಿಸಿದವನಾದಕಾರಣ "ಅಯೋನಿಜಃ" ಎನ್ನಲ್ಪಡುವನು. ಈ ಅರ್ಥವು "ಅಥಭೂಯೋ ಜಗತ್ಸ್ರಷ್ಟಾ ಏವ ಭೋಃಶಬ್ದೇ ನಾನುನಾದಯನ್ । ಸರಸ್ವತೀಮುಚ್ಚಚಾರ ತತ್ರ ಸಾರಸ್ವತೋಽಭವತ್" ಎಂಬ (ಮಹಾಭಾರ॥ ಶಾಂ॥ ೩೪೦॥ ೩೭) ವಚನ ಪ್ರತಿಪಾದ್ಯವಾಗಿರುವದು. (ಶಂ॥ಮ)

ವಾಚಸ್ಪತಿರಯೋನಿಜಃ—ಮಾತೃಗರ್ಭದಲ್ಲಿ ಹುಟ್ಟದ ವಿದ್ಯಾಧಿದೇವತೆಯು. 'ವಾಚಸ್ಪತಯೇ ಅಯೋನಿಜಾಯನಮಃ' ಎಂಬದಾಗಿ ತುಲಸೀ ಸಮರ್ಪಣಮಂತ್ರವು. "ರುದ್ರಾಯ ಪಶುಪತಯೇ ಸ್ವಾಹಾ" ಎಂಬ ಪ್ರಯೋಗದಂತೆ ಇಲ್ಲಿಯೂ ತಿಳಿಯಬೇಕು. ‖೫೪೦‖

ಇಲ್ಲಿ ಪ್ರಕೃತಗಳಾದ ೯ ನಾಮಗಳಿಗೂ "ಸುಶೋಭನಂ ಧನುರ್ಯಸ್ಯ "ಸುಧನ್ವಾ" (೫೩೨) ಪರಿಕೀರ್ತಿತಃ | ತೀವ್ರಕೋಪಾ ತ್ವರಶುನಾ ರೌದ್ರ ಸಂಗ್ರಾಮ ಖಂಡನಾತ್ ‖ ಇತ್ಯುಕ್ತಃ "ಖಂಡಪರಶು" (೫೩೩) ರ್ನವಾರ್ಣಶ್ಲೋಕನಾಶಕಃ ‖ ಬಾಹ್ಯಾಭ್ಯಂತರ ಶತ್ರೂಣಾಂ ದಾರಹಾದಪಿ "ದಾರುಣಃ" (೫೩೪) ‖ ಶಾಸ್ತ್ರಾಂತದರ್ಥಂ ದ್ರವಿಣಂ ಪ್ರದದಾತಿ ಜನಾಯಯಃ | ವ್ಯಾಸೋಭೂತ್ವಾ ಹರಿಸ್ಸಾಕ್ಷಾ "ದ್ದ್ರವಿಣಪ್ರದ" (೫೩೫) ಉಚ್ಯತೆ ‖ ಪರಯಾ ವಿದ್ಯಯಾಯಸ್ಸ್ವಂ ಸ್ಪೃಶತೀತಿ ಪದೇ ಪದೆ | "ದಿವಿಸ್ಪೃಕ್" (೫೩೬) ಸೋಚ್ಯತೇನಿತ್ಯಂ "ಸರ್ವದೃಕ್" (೫೩೭) ಸರ್ವ ದರ್ಶನಾತ್ ‖ ತ್ರಯ್ಯಾಶ್ಚತುರ್ಧಾರಕರಣಾತ್ "ವ್ಯಾಸ" (೫೩೮) ಇತ್ಯುಚ್ಯತೇ ಬುಧೈಃ | ವಾಚಃ ಪಂಚಮವೇದಸ್ಯ ಸ್ವಾಮಿ "ವಾಚಸ್ಪತಿಃ" (೫೩೯) ಸ್ಮೃತಃ ‖ ಸಾರಸ್ವತಾವತಾರೇಹಿ ಭಗವನ್ಮುಖಸಂಭವಾತ್ | ಸ್ಮೃತೋ "ಹ್ಯಯೋನಿಜ" (೫೪೦) ಇತಿವಸ್ವರ್ಣಃ ಕರ್ಮನಾಶಕಃ" ಎಂಬೀರೀತಿಯಿಂದ ವಿವೃತಿಯನ್ನು ಕಾಣಬಹುದು.

ಮೂ‖ ತ್ರಿಸಾಮಾ ಸಾಮಗಸ್ಸಾಮ ನಿರ್ವಾಣಂ
ಭೇಷಜಂ ಭಿಷಕ್ | ಸನ್ನ್ಯಾಸಕೃ ಚ್ಛಮ ಶ್ಶಾಂ
ತೊ ನಿಷ್ಠಾ ಶಾನ್ತಿಃ ಪರಾಯಣಃ ‖೬೦‖

(೫೪೧ನೇ ನಾಮವು) ತ್ರಿಸಾಮಾ,
ಓಮ್‖ ತ್ರಿಸಾಮ್ನೇನಮಃ.

(ಶಂ‖ ಭಾ) ದೇವವ್ರತವೆನ್ನಲ್ಪಡುವ ಮೂರು ಸಾಮವೇದ ಋಕ್ಕುಗಳಿಂದ ಸಾಮಗರಿಂದ ಸ್ತುತಿಸಲ್ಪಡುವಂತವನು. (ವಿ‖ ಮ) ಬೃಹತ್, ರಥಂತರಂ, ವಾಮದೇವ್ಯಂ, ವೆಂಬ ಮೂರು ಸಾಮಗಳಿಂದ ಸ್ತುತಿ

ಸಲ್ಪಡುವಂತವನು. ಅಥವಾ (ಮ) ಉದ್ಗಾತೃ ಪ್ರತಿಹಂತೃ ಪ್ರಸ್ತೋತೃಗಳೆಂಬ ಮೂರು ಋತ್ವಿಕ್ಕುಗಳು ಮಾಡುವ ಸಾಮಗಾನದಲ್ಲಿ ಪ್ರಿಯವುಳ್ಳನು. ‖೫೮೧‖

## (೫೮೨ನೇ ನಾಮವು) ಸಾಮಗಃ,

## ಓಮ್‖ ಸಾಮಗಾಯನಮಃ.

(ವಿ‖ ಭಾ) ಸ್ವಾನುಭವದಲ್ಲಿರುವ ಪ್ರೀತಿಯಿಂದ ತಾನೂ ಅಂತಹ (ಶಂ‖ ವಿ‖ ಮ) ಸಾಮಗಾನವನ್ನು ಮಾಡತಕ್ಕವನು. ‖೫೮೨‖

## (೫೮೩ನೇ ನಾಮವು) ಸಾಮ,

## ಓಮ್‖ ಸಾಮ್ನೇನಮಃ.

(ಶಂ‖ ಮ) ಸಾಮವೇದಸ್ವರೂಪನು. “ವೇದಾನಾಂ ಸಾಮವೇದೋಽಸ್ಮಿ” (ಗೀ‖ ೧೦) ಎಂಬ ವಚನದಲ್ಲಿ ಸಾಮವೇದಕ್ಕೆ ಭಗವದ್ವಿಭೂತಿತ್ವಶ್ರವಣವಿರುವುದರಿಂದ ಈ ರೀತಿಯಾಗಿ ಹೇಳಿತು. (ವಿ‖ ಭಾ) ತನ್ನನ್ನು ಗಾನಮಾಡುವಂತವರ ಪಾಪವನ್ನು ನಾಶಪಡಿಸುವಂತವನು. “ಷೋ ಅಂತಕರ್ಮಣಿ” ಇತಿ ಧಾತುಃ. ‖೫೮೩‖

## (೫೮೪ನೇ ನಾಮವು) ನಿರ್ವಾಣಂ,

## ಓಮ್‖ ನಿರ್ವಾಣಾಯನಮಃ.

(ಶಂ‖ ಭಾ) ಸರ್ವದುಃಖ ಶಾಂತಿಲಕ್ಷಣವಾದ ಪರಮಾನಂದರೂಪನು. (ವಿ‖ ಭಾ) ಈ ಪ್ರಕಾರವಾಗಿ ಪಾಪಗಳನ್ನು ತೊಲಗಿಸಿಕೊಂಡವರುಗಳಿಗೆ ಪರಮಗತಿಯಾದ ಆನಂದಸ್ವರೂಪನು. (ಮ) ಪ್ರಾಕೃತ ಶರೀರವಿಲ್ಲದವನು. ‖೫೮೪‖

## (೫೮೫ನೇ ನಾಮವು) ಭೇಷಜಂ,

## ಓಮ್‖ ಭೇಷಜಾಯನಮಃ.

(ಶಂ॥ ವಿ॥ ಮ) ಅಸಾಧ್ಯವಾದ ಸಂಸಾರ ರೋಗಕ್ಕೆ ಔಷಧವಾಗಿ ರುವಂತವನು. (ಶಂ) "ಭಿಷಕ್ತಮಂತ್ವಾ ಭಿಷಜಾಂ ಶೃಣೋಮಿ" (ಋಕ್ಸಂ॥ ೨॥ ೩೩॥ ೪) ಎಂಬದಾಗಿ ಈ ಅರ್ಥದಲ್ಲಿ ಶ್ರುತಿಯು. ॥೫೭೫॥

## (೫೭೬ನೇ ನಾಮವು) ಭಿಷಕ್,

ಓಮ್॥ ಭಿಷಜೇನಮಃ.

(ಶಂ॥ ಭಾ) ಮೋಕ್ಷಪ್ರದವೂ ಸರ್ವೋತ್ತಮವೂ ಆದ ವಿದ್ಯೆಯನ್ನು ಗೀತೆಯಲ್ಲಿ ಉಪದೇಶಿಸಿ (ಶಂ॥ ಮ) ಸಂಸಾರರೋಗಕ್ಕೆ ವೈದ್ಯನಾಗಿರುವಂತವನು. (ವಿ॥ ಭಾ) ವ್ಯಾಧಿಮೂಲವನ್ನು ಕಂಡು ಚಿಕಿತ್ಸೆಮಾಡುವಂತವನು. ॥೫೭೬॥

## (೫೭೭ನೇ ನಾಮವು) ಸನ್ಯಾಸಕೃತ್,

ಓಮ್॥ ಸನ್ಯಾಸಕೃತೇನಮಃ.

(ಶಂ॥ ಭಾ) ಮೋಕ್ಷಕ್ಕಾಗಿ ಸನ್ಯಾಸವೆಂಬ ತುರೀಯಾಶ್ರಮವನ್ನು ಮಾಡಿದವನು. (ಮ) ಸರ್ವವಿಷಯ ಪರಿತ್ಯಾಗವನ್ನು ಮನಸ್ಸಿನಿಂದ ಮಾಡುವಂತವನು. ಅಥವಾ ಲೋಕಶಿಕ್ಷಣಾರ್ಥವಾಗಿ ಸನ್ನ್ಯಾಸಾಶ್ರಮವನ್ನು ಮಾಡುವಂತವನು. (ವಿ॥ ಭಾ) ಅವನು ಚಿಕಿತ್ಸೆಯನ್ನು ಮಾಡುವದು ತಾನೆ ಹೇಗೆ? ಎಂದರೆ:—ಸನ್ನ್ಯಾಸದಿಂದ ಚಿಕಿತ್ಸಕನಾಗಿರುವನು ವಿಷಯವೈರಾಗ್ಯವನ್ನೂ ನಾನುಎಂಬ ದುರಭಿಮಾನವನ್ನೂ ಬಿಡಿಸುವದೆಂಬ ಸಾತ್ವಿಕ ಸನ್ನ್ಯಾಸದಿಂದ ಎಂದರೆ ಸಾತ್ವಿಕತ್ಯಾಗದಿಂದ ರಜಸ್ತಮಸ್ಸುಗಳನ್ನು ನಿವರ್ತಿಸುವನೆಂದರ್ಥವು. ॥೫೭೭॥

## (೫೭೮ನೇ ನಾಮವು) ಶಮಃ,

ಓಮ್॥ ಶಮಾಯನಮಃ.

(ಶಂ॥ ಭಾ) "ಯತೀನಾಂ ಪ್ರಶಮೋಧರ್ಮೋ ನಿಯಮೋ ವನವಾಸಿನಾಂ। ದಾನಮೇವಗೃಹಸ್ಥಾನಾಂ ಶಿಶ್ರೂಷಾ ಬ್ರಹ್ಮಚಾರಿಣಾಂ" ಎಂಬೀಪ್ರಮಾಣವನ್ನನುಸರಿಸಿ ಸನ್ನ್ಯಾಸಿಗಳಿಗೆ ಪ್ರಧಾನವಾಗಿ ಜ್ಞಾನ

ಸಾಧಕವಾದ ಶಮವೆಂಬ ಇಂದ್ರಿಯನಿಗ್ರಹವನ್ನೇ ಉಪದೇಶಿಸುವಂತ ವನು. (ವಿ॥ ಭಾ) ಸನ್ಯಾಸಿಯೆಂಬ ರಕ್ಷಣಾರ್ಹ ಪರಮಪುರುಷ ನಲ್ಲಿ ತನ್ನ ಭಾರವನ್ನು ಸಮರ್ಪಿಸುವುದು ತಾನೆ; ಇದನ್ನು ತಾನೆ ಪರ ಮಾತ್ಮನು ಸಂಸಾರರೋಗಕ್ಕೆ ಚಿಕಿತ್ಸೆಯನ್ನಾಗಿ "ವೇದಾನ್ತವಿಜ್ಞಾನ ಸು ನಿಶ್ಚಿತಾರ್ಥಾಃ" (ತೈ॥ ಉ॥ ೧೧॥ ೧೨) ಇತ್ಯಾದಿಗಳಿಂದ ಪ್ರಕಟಿಸಿರು ವನು. ಇದಕ್ಕಾಗಿಯೇ ಇಚ್ಛಾ ಭಯ ಕ್ರೋಧವೇ ಮೊದಲಾದವುಗ ಳನ್ನು ಅಡಗಿಸಿಕೊಳ್ಳಬೇಕೆಂದು ಉಪಾಯವನ್ನು ಹೇಳುತ್ತಿರುವುದರಿಂ ದ, ಶಮಃ—ಶಾಂತಿಯನ್ನು ಉಪದೇಶಿಸುವಂತವನು (ಪು) ಕಾಮಾದಿ ಹೇಯಗುಣಗಳಿಲ್ಲದಕಾರಣ ಶಾನ್ತನಾದವನು ಅಥವಾ ಶಾನ್ತಿಯುಳ್ಳ ವನು. ಯದ್ವಾ ಶಾನ್ತಿರೂಪನಾದವನು. ॥೫೮೯॥

(೫೯೦ನೇ ನಾಮವು) ಶಾನ್ತಃ,

ಓಮ್॥ ಶಾನ್ತಾಯನಮಃ.

(ಶಂ॥ ಭಾ) ವಿಷಯಸುಖದಲ್ಲಿ ಅಸಂಗನು. "ನಿಷ್ಕಲಂ ನಿಷ್ಕ್ರಿಯಂ ಶಾನ್ತಂ" (ಶ್ವೇ ೬॥ ೧೯) ಇತಿ ಶ್ರುತಿಃ (ವಿ॥ಭಾ) ಸಮುದ್ರದಂತೆ ಅಪಾರವಾದ ಮಹಿಮೆಯುಳ್ಳವನಾಗಿದ್ದರೂ ತರಂಗಗಳಿಲ್ಲದೆ ಸ್ತಬ್ಧವಾಗಿ ರುವ ಸಮುದ್ರದಂತೆ ಸ್ವಲ್ಪವೂ ಗಾಂಭೀರ್ಯವನ್ನು ಬಿಡದೆ ಶಾನ್ತನಾ ಗಿರುವಂತವನು. ॥೫೯೦॥

(೫೯೧ನೇ ನಾಮವು) ನಿಷ್ಠಾ,

ಓಮ್॥ ನಿಷ್ಠಾಯೈನಮಃ.

(ಶಂ॥ ಭಾ) ಪ್ರಲಯಕಾಲದಲ್ಲಿ ಸರ್ವಭೂತಗಳೂ ಇವನಲ್ಲಿಯೇ ಇರುವುದರಿಂದ, (ವಿ॥ ಭಾ) ವಿರಕ್ತರಾದ ಮಹಾತ್ಮರುಗಳ ಶುಭಾ ಶ್ರಯಭೂತಗಳಾದ ಮನಸ್ಸಿನ ಸ್ಥಿತಿಯುಳ್ಳವನು. ॥೫೯೧॥

(೫೯೨ನೇ ನಾಮವು) ಶಾನ್ತಿಃ,

ಓಮ್॥ ಶಾನ್ತ್ಯೈನಮಃ.

(ಶಂ॥ ಭಾ) ಸಮಸ್ತ ಅವಿದ್ಯಾನಿವೃತ್ತಿರೂಪವಾದ ಶಾನ್ತಿಯುಳ್ಳವನು. (ವಿ॥ ಭಾ) ಅಂತವರು ಪರಮ ಸಮಾಧಿಯಲ್ಲಿದ್ದು ತನ್ನನ್ನು ಅನುಭವಿಸುವಾಗ ನಾವು ಇಂತಹ ಸ್ಥಿತಿಯಲ್ಲಿರುವೆವೆಂಬ ತಮ್ಮ ಅಧಿಕಾರವನ್ನು ಮರೆತಿರುವಂತೆ ತೋರುವಂತವನು ॥೫೯೧॥

## (೫೯೨ನೇ ನಾಮವು) ಪರಾಯಣಂ,

## ಓಮ್॥ ಪರಾಯಣಾಯನಮಃ.

(ಶಂ॥ ಭಾ) ಸರ್ವೋತ್ತಮವೂ ಪುನರಾವೃತ್ತಿ ಶಂಕಾರಹಿತವೂ ಆದ ಸ್ಥಾನವು. ಈ ನಾಮವನ್ನು ಪುಲ್ಲಿಂಗಮಾಡುವ ಪಕ್ಷದಲ್ಲಿ ಬಹುವ್ರೀಹಿ ಸಮಾಸವು. (ವಿ॥ ಭಾ) ಆರೀತಿಯಲ್ಲಿ ಸಮಾಧಿಯಲ್ಲಿ ನಿಂತವರಿಗೆ ತತ್ಕ್ಷಣವೇ ಮೋಕ್ಷಪ್ರದವಾದ ಪರಮಭಕ್ತಿಯು ಇವನಿಗೆ ಉಂಟಾಗುವಕಾರಣ "ಪರಾಯಣಂ" ಎನ್ನಲ್ಪಡುವನು. (ಮ) ಪರಾಯಣಂ-ಪರಬ್ರಹ್ಮ ಎಂದು ನಪುಂಸಕಲಿಂಗದಲ್ಲಿಯೂ ವಿಶೇಷ್ಯಪದಗಳನ್ನು ತಿಳಿಯಬೇಕು. ॥೫೯೨॥

ಈ ೬೨ ನೇ ಶ್ಲೋಕದಲ್ಲಿ ಪ್ರಕೃತಗಳಾದ ೧೨ ನಾಮಗಳಿಗೂ "ಪ್ರೋಕ್ತ "ಸ್ತ್ರನಾಮಾ" (೫೮೧) ಯಶ್ಚಾಸೌ ಬೃಹದಾದಿತ್ರಸಾಮಗಃ | ಸ್ವಯಂ ಸ್ವಾನುಭವ ಪ್ರೀತ್ಯಾ ಗಾಯತೀತಿಚ "ಸಾಮಗ" (೫೮೨)॥ ಸ್ವಗಾಯಕಾನಾಂ ಕಾಲುಷ್ಯನಾಶಕ "ಸಾಮ" (೫೮೩) ಈರಿತಃ | "ನಿರ್ವಾಣಂ" (೫೮೪), ಸ್ಯಾತ್ಪರಗತೇ ನಿರ್ನಿಮಿತ್ತಂ ಸುಖಾತ್ಮನಃ ॥ ಆಸಾಧ್ಯ ಭವರೋಗಸ್ಯ "ಭೇಷಜಂ" (೫೮೫) ಯಸ್ಸದೌಷಧಂ ॥ ಭವರೋಗ ನಿದಾನಜ್ಞೋ ಯೋಸೌ "ಭಿಷ" (೫೮೬) ಗುದೀರಿತಃ ॥ ತ್ಯಾಗೇನ ಸಾತ್ವಿಕೇನಾಶು ರಜಸಸ್ತಮಸಃ ಪದಂ | ಯಃ ಕೃಂತತಿಸ "ಸನ್ಯಾಸಕೃ" (೫೮೭) ನ್ನವಾಣೋ ಮನುಸ್ಮೃತಃ ॥ ಸಮುದ್ವೃತ್ತ "ಶಮಃ" (೫೮೮) ಪ್ರೋಕ್ತ "ಶಾನ್ತೋ" (೫೮೯) ಅವಿಕೃತಮಾನಸಃ | ನಿಷೀಯತೇಹ್ಯರ್ಥಿನಾಂ ಯೋಹೃದಿ "ನಿಷ್ಠಾ" (೫೯೦) ಸಕಥ್ಯತೇ ॥ ಸರ್ವಾಧಿಕಾರಾಶ್ಯಾಮ್ಯಂತಿ ಸಮಾಧೌ ಪರಮೇಯತಃ | ಅತ "ಶಾನ್ತಿ" (೫೯೧) ರಿತಿಪ್ರೋಕ್ತೋ ಮತ್ಪರೋ ಭಕ್ತಿದೋಮನುಃ ॥ ಯಸ್ಮಾತ್ತು ಪರಮಾ ಭಕ್ತಿ ಶ್ಚರಮಪ್ರಾಪಿಕಾಮತಾ |

ತಸ್ಮಾತ್ "ತ್ಪರಾಯಣ" (೫೨೦) ಮಿತಿಸ್ಮೃತೋಽಹ್ಯೇಷ್ಟಾರ್ಥ ಉಕ್ತ ವಾಃ ||" ಎಂಬೀರೀತಿಯಿಂದ ವಿವರಣವನ್ನು ಕಾಣಬಹುದು

ಮೂ|| ಶುಭಾಂಗ ಶಾನ್ತಿದ ಸ್ಸ್ರಷ್ಟಾ ಕುಮುದಃ
ಕುವಲೇಶಯಃ | ಗೋಹಿತೋ ಗೋಪತಿ ರ್ಗೋ
ಪ್ತಾ ವೃಷಭಾಕ್ಷೋ(೬೦೦) ವೃಷಪ್ರಿಯಃ ||೬೩||

(೫೯೩ನೇ ನಾಮವು) ಶುಭಾಂಗಃ,

ಓಮ್|| ಶುಭಾಂಗಾಯನಮಃ.

(ಶಂ|| ಮ) ಸುಂದರವಾದ ಮುಖಾದ್ಯವಯವ ಉಳ್ಳವನು. (ವಿ|| ಭಾ) ಈ ರೀತಿಯಿಂದ ತನ್ನಲ್ಲಿ ಭಕ್ತಿಮಾಡುವುದಕ್ಕೆ ಅನುಕೂಲವಾದ ಯಮನಿಯಮಾದ್ಯಂಗಗಳುಳ್ಳವನು. || ೫೯೩ ||

(೫೯೪ನೇ ನಾಮವು) ಶಾನ್ತಿದಃ,

ಓಮ್|| ಶಾನ್ತಿದಾಯನಮಃ.

(ಶಂ|| ಭಾ) ರಾಗ ದ್ವೇಷಾದಿಗಳಿಲ್ಲದೇ ಇರುವುದೆಂಬ ಶಾನ್ತಿಯ ನ್ನು ಕೊಡುವಂತವನು. (ವಿ|| ಭಾ) ಇಂತಹ ಭಕ್ತಿಯೋಗನಿಷ್ಠರಿಗೆ ಪುನಶ್ಚ ಸಂಸಾರ ಸಂಬಂಧವು ಪ್ರಾಪ್ತವಾಗದಂತೆ ತನ್ನ ಸಾಯುಜ್ಯವ ನ್ನು ಕೊಡುವಂತವನು. ||೫೯೪||

(೫೯೫ನೇ ನಾಮವು) ಸ್ರಷ್ಟಾ,

ಓಮ್|| ಸ್ರಷ್ಟ್ರೇನಮಃ.

(ಮ|| ಶಂ) ಸೃಷ್ಟ್ಯಾದಿಯಲ್ಲಿ ಭೂತಗಳನ್ನು ಸೃಷ್ಟಿಸುವಂತವ ನು. (ವಿ|| ಭಾ) ಈರೀತಿಯಾಗಿ ಮೋಕ್ಷಾಪೇಕ್ಷೆಯುಳ್ಳವರನ್ನು ಪ್ರಕೃತಿಬಂ ಧವಿಂದ ಬಿಡಿಸಿ ಭೋಗಾಪೇಕ್ಷೆಯುಳ್ಳ ಚೇತನರನ್ನು ಅವರ ಕರ್ಮಾನುಸಾ ರವಾಗಿ ಸೃಷ್ಟಿಸುವಂತವನು. ||೫೯೫||

## (೫೮೮ನೇ ನಾಮವು) ಕುಮುದಃ,

### ಓಮ್‌॥ ಕುಮುದಾಯನಮಃ.

(ಶಂ॥ ಮ) ಭೂಮಿಯಲ್ಲಿ ಸಂತೋಷಿಸುವಂತವನು. (ವಿ॥ ಭಾ) ಈ ಪ್ರಕಾರವಾಗಿ ಬ್ರಹ್ಮಾದಿ ಸ್ತಂಬ ಪರ್ಯಂತರಾದ ಪ್ರಾಣಿಗಳಿಗೆ ಅವರವರ ಅಂತಸ್ತಿಗೆ ತಕ್ಕಂತೆ ವಿಸ್ತಾರವಾದ ಭೋಗವನ್ನುಂಟುಮಾಡುವ ಪ್ರದೇಶವಾದ ಪ್ರಕೃತಿಮಂಡಲದಲ್ಲಿ ಅವುಗಳನ್ನು ಸೇರಿಸಿ ಅನುಭವಿಸುವಂತೆ ಮಾಡಿ ತಾನೂ ಸಂತೋಷಿಸುವಂತವನು. ॥೫೮೮॥

## (೫೮೯ನೇ ನಾಮವು) ಕುವಲೇಶಯಃ,

### ಓಮ್‌॥ ಕುವಲೇಶಯಾಯನಮಃ.

(ಶಂ॥ ಮ) ಭೂಮಿಯನ್ನು ಮರೆಮಾಡುವುದರಿಂದ ಕುವಲವೆಂದರೆ ಜಲವು, ಅದರಲ್ಲಿ ಮಲಗಿರುವಂತವನು. (ಶಂ) ಕುವಲವಂದರೆ ಬದರೀ ಅಥವಾ(ಯಳಚೀ) ಹಣ್ಣಿಗೆ ಹೆಸರು. ಅದರಲ್ಲಿರುವ ತಕ್ಷಕರೂಪಿಯಾದವನು. (ಇಲ್ಲಿ ಋಷಿಪುತ್ರರ ಶಾಪದಿಂದ ಯಳಚೀ ಹಣ್ಣಿನಲ್ಲಿದ್ದ ತಕ್ಷಕನು ಪರೀಕ್ಷಿತ್ತನ್ನು ಕಚ್ಚಿದ ಶ್ರೀಭಾಗವತ ಕಥೆಯನ್ನು ಸ್ಮರಿಸಿಕೊಳ್ಳಿ) ಯದ್ವಾ ; ಭೂಮಿಯನ್ನಾಶ್ರಯಿಸಿರುವ ಕಾರಣದಿಂದ ಸರ್ಪಗಳು ಕುವಲವೆಂತಲೂ ಇಂತಹ ಕುವಲವೆಂಬ ಆದಿಶೇಷನಲ್ಲಿ ಶಯನಮಾಡಿರುವಂತವನು " ಕುವಲೇಶಯಃ " ಎನ್ನಲ್ಪಡುವನು. (ವಿ॥ ಭಾ) ಕುತ್ಸಿತವಾದ ಎಂದರೆ ಅಸಾರವಾದ ಸಂಸಾರದಲ್ಲಿ ಪರಿಭ್ರಮಿಸುವಂತಹ ಜೀವರು, ಕುವಲಾಃ ಎನ್ನಲ್ಪಡುವರು. ಇಂತವರು ತಮ್ಮ ದೇಹೇಂದ್ರಿಯಾದಿಗಳಿಗೆ ತನ್ನನ್ನೇ ಪ್ರಭುವನ್ನಾಗಿ ಭಾವಿಸುವರು. ಇಂತವರನ್ನು ಆ ರೀತಿಯಾಗಿಯೇ ಭಾವಿಸಿ ತಿರುಗುವಂತೆ ನಿಯಮಿಸುವಂತವನು. ॥೫೮೯॥

## (೫೯೦ನೇ ನಾಮವು) ಗೋಹಿತಃ,

### ಓಮ್‌॥ ಗೋಹಿತಾಯನಮಃ.

(ಶಂ॥ ಭಾ) ಗೋವುಗಳಿಗೆ ಹಿತಾರ್ಥವಾಗಿ ಗೋವರ್ಧನ ಪರ್ವತವ

ನ್ನು ಧರಿಸಿಡವನೆಂತಲಾದರೂ; (ಶಂ॥ ಮ) ಗೋವುಗಳಿಗೆ ಹಿತನೆಂತಲಾದರೂ ಹೇಳಬಹುದು. (ವಿ॥ ಭಾ) ಇಲ್ಲಿನ ಗೋಶಬ್ದದಿಂದ ಭೂಮಿಯು ಹೇಳಲ್ಪಟ್ಟು ಅದರಿಂದ ಸಂಸಾರ ಬೀಜವನ್ನು ಬಿತ್ತುವ ಸ್ಥಲವಾದ ಪ್ರಕೃತಿಮಂಡಲವು ಹೇಳಲ್ಪಡುವುದು; ಅದಕ್ಕೆ ವ್ಯವಸ್ಥಾಪಕನು ॥೪೯೮॥

## (೪೯೯ನೇ ನಾಮವು) ಗೋಪತಿಃ,
## ಓಮ್॥ ಗೋಪತಯೇನಮಃ.

(ಶಂ॥ ಮ) ಭೂಮಿ ಅಥವಾ ಗೋವುಗಳಿಗೆ ಪ್ರಭುವಾದವನು. (ವಿ॥ ಭಾ) ಭೋಗಭೂಮಿಯಾದ ಸ್ವರ್ಗಕ್ಕೆ ಪತಿಯಾದವನು. ॥೪೯೯॥

## (೫೦೦ನೇ ನಾಮವು) ಗೋಪ್ತಾ,
## ಓಮ್॥ ಗೋಪ್ತ್ರೇನಮಃ.

(ಶಂ॥ ಭಾ) ಭೂಮಿಗೆ ರಕ್ಷಕನು. ಅಥವಾ ತನ್ನ ಮಾಯೆಯಿಂದ ತನ್ನನ್ನು ಮರೆಮಾಡುವಂತವನು. (ಮ) ಜಗದ್ರಕ್ಷಕನು. (ವಿ॥ ಭಾ) ಕರ್ಮಫಲವಾದ ಈ ಚಕ್ರವನ್ನು ರಕ್ಷಿಸುವಂತವನು. ॥೫೦೦॥

ಈ ಪ್ರಕಾರವಾಗಿ ಶ್ರೀಪರಾಶರ ಭಟ್ಟಾರ್ಯ ಭಾಷಿತವಾದ
ಶ್ರೀಭಗವದ್ಗುಣ ದರ್ಪಣವೆಂಬ ಶ್ರೀವಿಷ್ಣು ಸಹಸ್ರನಾಮ ಭಾಷ್ಯದಲ್ಲಿ
ಷಷ್ಠ ಶತಕವು ಸಮಾಪ್ತವು.



## (೫೦೧ನೇ ನಾಮವು) ವೃಷಭಾಕ್ಷಃ,
## ಓಮ್॥ ವೃಷಭಾಕ್ಷಾಯನಮಃ.

(ಶಂ॥ಮ) ಸರ್ವೇಪ್ಸಾರ್ಥಗಳನ್ನು ವರ್ಷಿಸುವಂಥಾ ಧರ್ಮಮಯವಾದ ನೇತ್ರಗಳುಳ್ಳವನು. (ವಿ॥ಭಾ) ಧರ್ಮವನ್ನೇ ಚಕ್ರದ ಮಧ್ಯಪ್ರದೇಶವನ್ನಾಗಿ ವುಳ್ಳವನು. ಎಂದರೆ:—ಹಿಂದೆ ವಿವರಿಸಿರುವ ಕರ್ಮ ಫಲಕ್ಕೆ ಧರ್ಮವು ಸಾಧನವಾಗಿರುವುದರಿಂದ ಅದನ್ನು ಚಕ್ರವೆಂದು ಹೇಳಿದಾಗ

ಸಂಸಾರ ಚಕ್ರಕ್ಕೆ ಆಧಾರವಾದ ಇದನ್ನು ಅಕ್ಷವನ್ನಾಗಿ ಹೇಳಿರುವಂತೆ ತಿಳಿಯಬೇಕು. ||೬೦೧||

## (೬೦೨ನೇ ನಾಮವು) ವೃಷಪ್ರಿಯಃ,

## ಓಮ್|| ವೃಷಪ್ರಿಯಾಯನಮಃ,

(ಕಂ|| ಮ) ಧರ್ಮಪ್ರಿಯನು. (ವಿ|| ಭಾ) ಪ್ರವೃತ್ತಿ ನಿವೃತ್ತಿರೂಪಗಳಾದ ಯರಡು ಧರ್ಮಗಳಿಗೆ ಪ್ರಿಯನಾದವನು. ಅವನಿಗೆ ಪ್ರಿಯವಾಗಿರುವುದರಿಂದ ತಾನೆ ಕರ್ಮಗಳಿಗೆ ಧರ್ಮತ್ವ ವ್ಯವಹಾರವಿರುವುದು. ಶ್ರುತಿಯಲ್ಲಿರುವ ವಿಧಿ ವಾಕ್ಯಗಳೂ ಅವನ ಪ್ರೀತಿಯನ್ನೇ ಫಲವನ್ನಾಗಿ ಹೇಳುವುದು. ಈ ಅರ್ಥವು ದ್ರಮಿಡಾಚಾರ್ಯರಿಂದಲೂ " ಫಲಸಂಬಿಭತ್ಸಯಾಹಿ ಕರ್ಮಭಿರಾತ್ಮಾನಂ ಪಿಪ್ರೀಷಂತಿ || ಸಪ್ರೀತೋಽಲಂ ಫಲಾಯೇತಿ ಹಿಶಾಸ್ತ್ರಮರ್ಯಾದಾ " ಎಂಬದಾಗಿ ಹೇಳಲ್ಪಟ್ಟಿರುವುದು. ||೬೦೨||

ಈ ೬೩ನೇ ಶ್ಲೋಕದಲ್ಲಿ ಪ್ರಸ್ತುತಿಸಲ್ಪಡುವ (೧೦) ನಾಮಗಳಿಗೂ " ಸ್ವಶಕ್ತ್ಯುದ್ಭವಕಲ್ಯಾಣ ಯಮಾದ್ಯಷ್ಟಾಂಗ ಸಂಭವಃ | ಯಸ್ಮಾ " ಚ್ಛುಭಾಂಗ " (೫೯೩) ಸ್ಸಂಪ್ರೋಕ್ತ ಸ್ಸಪಾತ್ರಶ್ಶ್ರೋ ಧಾನ್ಯದಾಯಕಃ || ಏವಂನಿಷ್ಠನ್ನ ಭಕ್ತೇಭ್ಯಶ್ಯಾನ್ತಿ ಸಾಯುಜ್ಯ ಸಂಜ್ಞಿಕಾಂ| ಮಹಾನಂದಾಂದದಾತೀತಿ "ಶಾಂತಿದಃ" (೫೯೪) ಪರಿಕೀರ್ತಿತಃ || ಕರ್ಮವೈಚಿತ್ರ್ಯತಸ್ಸೃಷ್ಟೇರ್ "ಸ್ರಷ್ಟಾ"(೫೯೫) ಸ್ಸ್ಯಾತ್ಸೃಜತೀತಿಯಃ | ಕೌಪ್ರಾಕೃತೇ ಮಂಡಲೇಯ ಸ್ಸ್ವಭೋಕ್ತ್ರೂನಪಿ ಭೋಜಯನ್ || ಮೋದತೇಯಸ್ಸದಾಕಾಲಂ " ಕುಮುದ " (೫೯೬) ಸ್ಸತುಗೀಯತೇ || ಕುತ್ಸಿತಂ ಬಲಮೇಷಾಂತೇ ಕುವಲಾ ಜೀವಸಂಜ್ಞಿಕಾಃ | ದೇಹೇಂದ್ರಿಯಾದೇರೀಶಾಸ್ತೇ ಕುವಲೇಶಾ ಇತಿಸ್ಮೃತಾಃ || ಯಸ್ಮಾನ್ನಿಯಚ್ಛನ್ಯಾತೀತಿ " ಕುವಲೇಶಯ " (೫೯೭) ಉಚ್ಯತೇ || ಸಂಸಾರಬೀಜ ಕ್ಷೇತ್ರಸ್ಯ ಪ್ರಕೃತೇಸ್ಸಾಧಕಶ್ಚಯಃ | ಸ " ಗೋಹಿತಃ " (೫೯೮) ಸ್ವರ್ಗಭೂಮ್ಯೋಃ ಪತಿತ್ವಾ " ದ್ಗೋಪತಿಃ " (೫೯೯) ಸ್ಮೃತಃ || ಯಃಕರ್ಮಫಲಚಕ್ರಸ್ಯ " ಗೋಪ್ತಾ " (೬೦೦) ಹಿಪರಿಪಾಲನಾತ್ | ಯಸ್ಯಾಕ್ಷೋ " ವೃಷಭೋಧರ್ಮೋ "ವೃಷಭಾಕ್ಷ " (೬೦೧) ಸ್ಸಉಚ್ಯತೇ || ಧರ್ಮೌಪ್ರಿಯೌ ತವಾಸ್ಯೇತಿ ಪ್ರವರ್ತಕ ನಿವರ್ತಕೌ| " ವೃಷಪ್ರಿಯಃ "

(೬೦೨) ಸವಿಜ್ಞೇಯೊ ಹ್ಯಪಾಕೃಷ್ಣಃ ಫಲದೋಮನುಃ " ‖ ಎಂಬ ರೀತಿ ತಿಯಾಗಿ ವಿವೃತಿಯನ್ನು ಕಾಣಬಹುದು.

ಮೂ ‖ ಅನಿವರ್ತೀ ನಿವೃತ್ತಾತ್ಮಾ ಸಂಕ್ಷೇಪ್ತಾ ಕ್ಷೇಮಕೃಚ್ಛಿವಃ । ಶ್ರೀವತ್ಸವಕ್ಷಾ ಶ್ರೀವಾಸ ಶ್ರೀಪತಿ ಶ್ರೀಮತಾಂವರಃ ‖೬೪‖

(೬೦೩ನೇ ನಾಮವು) ಅನಿವರ್ತೀ,

ಓಮ್‖ ಅನಿವರ್ತಿನೇನಮಃ.

(ಶಂ‖ ಮ) ದೇವಾಸುರ ಯುದ್ಧದಲ್ಲಿ ಹಿಂದಕ್ಕೆ ತಿರಗದವನು ; ಎಂ ದರೆ ಮಹಾಶೂರನೆಂತಲೂ ಮಹಾ ಧಾರ್ಮಿಕನೆಂತಲೂ ಅರ್ಥವು. (ವಿ‖ ಭಾ) ಪ್ರವೃತ್ತಿ ಧರ್ಮ ನಿಷ್ಠೆಯುಳ್ಳವರನ್ನು ಧೂಮಾದಿ ಮಾರ್ಗದಿಂದ ಪಿತೃ ಲೋಕಾದಿಗಳನ್ನು ಹೊಂದಿಸಿ ಪುನಃ ಹುಟ್ಟುವಂತೇ ಮಾಡಿ ಸಂ ಸಾರ ಮಂಡಲದಿಂದ ಕಡತೇರದಂತೆ ಮಾಡುವಂತವನು. ಆದುದರಿಂದ ಲೇಸಂಸಾರ ನಿವೃತ್ತಿಯು ಇವರಿಗೆ ಶೂನ್ಯವಾಗಿರುವುದು. ‖೬೦೩‖

(೬೦೪ನೇ ನಾಮವು) ನಿವೃತ್ತಾತ್ಮಾ,

ಓಮ್‖ ನಿವೃತ್ತಾತ್ಮನೇನಮಃ.

(ಶಂ‖ ಮ) ಸ್ವಭಾವದಿಂದಲೇ ವಿಷಯಗಳಲ್ಲಿ ಪ್ರವರ್ತಿಸದೇ ತಿರಿಗಿ ಸಲ್ಪಟ್ಟ ಮನಸ್ಸುಳ್ಳವನು. (ವಿ‖ ಭಾ) ನಿವೃತ್ತಿ ಧರ್ಮನಿಷ್ಠರಾದವರ ನ್ನೂ ತನ್ನ ಆತ್ಮಗಳನ್ನಾಗಿ ಉಳ್ಳವನು. ‖೬೦೪‖

(೬೦೫ನೇ ನಾಮವು) ಸಂಕ್ಷೇಪ್ತಾ,

ಓಮ್‖ ಸಂಕ್ಷೇಪ್ತ್ರೇನಮಃ.

(ವಿ‖ ಭಾ) ಪ್ರವೃತ್ತಿ ಧರ್ಮನಿಷ್ಠರ ಸ್ವಾಭಾವಿಕವಾದ ಶಾಂತವನ್ನು ಸಂಕೋಚಿಸುವ ಸ್ವಭಾವವುಳ್ಳವನು. (ಶಂ‖ಮ) ವಿಸ್ತಾರವಾದ ಪ್ರಪಂ ಚವನ್ನು ಸಂಹಾರಕಾಲದಲ್ಲಿ ಸಂಕೋಚಪಡಿಸುವಂತವನು. ‖೬೦೫‖

## (೬೦೬ನೇ ನಾಮವು) ಕ್ಷೇಮಕೃತ್,
## ಓಮ್|| ಕ್ಷೇಮಕೃತೇನಮಃ.

(ಶಂ|| ಭಾ) ಸಮೀಪದಲ್ಲಿ ಬಂದವನನ್ನು ಎಂದರೆ ತನ್ನನ್ನಾಶ್ರಯಿಸಿದವನಿಗೆ ಕ್ಷೇಮರೂಪವಾದ ರಕ್ಷಣವನ್ನು ಮಾಡುವಂತವನು. (ವಿ|| ಭಾ) ನಿವೃತ್ತಿ ಧರ್ಮನಿಷ್ಠರಿಗೆ ಅಂತಹ ಜ್ಞಾನ ಸಂಕೋಚವನ್ನು ಪರಿಹರಿಸಿ ಕ್ಷೇಮವನ್ನುಂಟುಮಾಡತಕ್ಕವನು. (ಮ) "ಕ್ಷೇಮಕೃಚ್ಛಿವಃ" ಒಂದೇ ನಾಮವು. (ಶಂ) ಒಡನೆ ಅರ್ಥಭೇದವಿಲ್ಲವು. ಇದರಿಂದ "ಸರ್ವೈಶ್ವರ್ಯಶ್ರೀವಃ" ಎಂಬ ನಾಮಕ್ಕಿಂತಲೂ ಭೇದವು ಸಿದ್ಧವಾಯಿತು. ||೬೦೬||

ಈ ರೀತಿಯಾಗಿ (ಶಂ||ಭಾ) ಅನುಸಾರವಾಗಿ ೬ನೇ ಶತಕವು ಸಂಪೂರ್ಣವು.

## (೬೦೭ನೇ ನಾಮವು) ಶ್ರೀವತ್ಸವಕ್ಷಾಃ,
## ಓಮ್|| ಶ್ರೀವತ್ಸವಕ್ಷಸೇನಮಃ.

(ಶಂ|| ಮ) ಶ್ರೀವತ್ಸವೆಂಬ ಗುರ್ತನ್ನು ತನ್ನ ವಕ್ಷಸ್ಸ್ಥಲದಲ್ಲಿ ಉಳ್ಳವನು. (ವಿ|| ಭಾ) ನಿಯಾಮ್ಯ ವರ್ಗಕ್ಕೆ ಸೇರಿದ ಚೇತನ ಕೋಟಿಗಳಿಗಿಂತಲೂ ಇವನನ್ನು ಭಿನ್ನಸತ್ವವನನ್ನಾಗಿ ತೋರಿಸುವುದೂ ಲಕ್ಷ್ಮೀವಲ್ಲಭನಾಗಿರುವ ಅದೃಷ್ಟಕ್ಕೆ ಸೂಚಕವೂ ಆದ ಶ್ರೀವತ್ಸವೆಂಬ ಚಿಹ್ನವುಳ್ಳವನು. ಈ ನಾಮದ ಮೊದಲು ಇವನನ್ನು ಶಿವನೆಂದು ಮಂಗಳಕರನನ್ನಾಗಿ ಹೇಳುವುದಕ್ಕೆ ತಕ್ಕ ಉಪಪತ್ತಿಯು ತೋರಿಸಲ್ಪಡುವುದು.

ಈ ರೀತಿಯಾಗಿ ಶ್ರೀಮಧ್ವ ಸಂಪ್ರದಾಯಾನುಸಾರವಾದ
ವ್ಯಾಖ್ಯಾನದಲ್ಲಿ ೬ನೇ ಶತಕವು ಸಂಪೂರ್ಣವು.

## (೬೦೮ನೇ ನಾಮವು) ಶ್ರೀವಾಸಃ,
## ಓಮ್|| ಶ್ರೀವಾಸಾಯನಮಃ.

(ಶಂ|| ಮ|| ವಿ) ಶ್ರೀಮಹಾಲಕ್ಷ್ಮಿಯು ನಿತ್ಯವಾಗಿ ಯಥೇಚ್ಛವಿಹಾರವನ್ನು ಮಾಡುವುದಕ್ಕೆ ತಕ್ಕ ಕಲ್ಪಕ ವೃಕ್ಷವುಳ್ಳ ಉದ್ಯಾನ ವನ

ವಂತೆ ಇರುವಂತವನು. "ಶ್ರೀಯೋನಿತ್ಯಸ್ವೈರ ವಿಹಾರ ಕಲ್ಪದ್ರುಮೋದ್ಯಾನಂ" ಎಂಬ ಪ್ರಮಾಣವನ್ನಿಲ್ಲಿ ಅರಿಯಬೇಕು. ||೬೦೮||

## (೬೧೦ನೇ ನಾಮವು) ಶ್ರೀಪತಿಃ

### ಓಮ್|| ಶ್ರೀಪತಯೇನಮಃ.

(ಶಂ|| ಭಾ) ಕ್ಷೀರಾಬ್ಧಿಯ ಮಥನಕಾಲದಲ್ಲಿ ಹುಟ್ಟಿದ ಶ್ರೀದೇವಿಯು ಸರ್ವರನ್ನು ಬಿಟ್ಟು ಇವನನ್ನೇ ಪತಿಯಾಗಿ ವರಿಸಿರುವಳು. ಅಥವಾ ಶ್ರೀಶಬ್ದ ವಾಚ್ಯವಾದ ಪರಾ ಎಂಬ ಶಕ್ತಿಗೆ ಪ್ರಭುವಾದವನು. (ಮ|| ಭಾ) "ತುಲ್ಯಶೀಲವಯೋವೃತ್ತಾಂ" (ಶ್ರೀರಾ|| ಸುಂ|| ೧೬|| ೫) ಎಂಬಂತೆ ಶ್ರೀದೇವಿಗೆ ಅನುರೂಪನಾದ ಪತಿಯು. ||೬೦೯||

## (೬೧೧ನೇ ನಾಮವು) ಶ್ರೀಮತಾಂವರಃ,

### ಓಮ್|| ಶ್ರೀಮತಾಂವರಾಯನಮಃ.

(ಶಂ|| ಭಾ) ಋಗ್ಯಜುಸ್ಸಾಮವೇದ ರೂಪಗಳಾದ ಸಂಪತ್ತುಳ್ಳ ಬ್ರಹ್ಮಾದಿ ದೇವತೆಗಳಲ್ಲಿ ಪ್ರಧಾನನಾದವನು. (ವಿ|| ಭಾ) ಶ್ರೀಮಹಾಲಕ್ಷ್ಮಿಯು ಆದರ ಪೂರ್ವಕವಾದ ದಿವ್ಯ ಕಟಾಕ್ಷಕ್ಕೆ ಪೂರ್ಣಪಾತ್ರನಾದ ಪರಮಾತ್ಮನು. ಅವಶಾತ್ತಾಗಿ ಒಂದೆರಡಾದ ಅವಳ ಕಟಾಕ್ಷ ಲೇಶಮಾತ್ರಕ್ಕೆ ಪಾತ್ರರಾದವರು ಬ್ರಹ್ಮರುದ್ರಾದಿಗಳು. "ಶುಕ್ಲಮಾಲ್ಯಾಂ ಬರಧರಾ ಸ್ನಾತಾಭೂಷಣ ಭೂಷಿತಾ । ಪಶ್ಯತಾಂಸರ್ವ ದೇವಾನಾಂ ಯಯೌವಕ್ಷ ಸ್ಸ್ಥಲಂಹರೇಃ ‖ ತಯಾವಲೋಕಿತಾದೇವಾ ಹರಿವಕ್ಷಸ್ಸ ಥಲಸ್ಥಯಾ । ಲಕ್ಷ್ಮ್ಯಾಮೈತ್ರೇಯ ಸಹಸಾಪರಾಂ ನಿರ್ವೃತಿಮಾಗತಾಃ" ಶ್ರೀವಿ|| ಪು|| ೧|| ೫೯|| ೧೦೬) ಎಂಬೀ ಪ್ರಮಾಣಗಳು ಈ ಅರ್ಥ ಸೂಚನವನ್ನು ಮಾಡುವುವು. ಆದುದರಿಂದ ಶ್ರೀಮಹಾ ಲಕ್ಷ್ಮೀದೇವಿಯು ಕಟಾಕ್ಷ ಲೇಶಕ್ಕೆ ಪಾತ್ರರಾಗಿ ಅದರಿಂದ ಸಾಮ್ರಾಜ್ಯ ಲಕ್ಷ್ಮಿಯನ್ನು ಹೊಂದಿ ಶ್ರೀಮಾನ್ ಎಂಬ ಹೆಸರನ್ನು ಹೊಂದುವ ಬ್ರಹ್ಮ ರುದ್ರೇಂದ್ರಾದಿಗಳೆಲ್ಲರಿಗೂ ಶ್ರೇಷ್ಠನಾದಕಾರಣ "ಶ್ರೀಮತಾಂವರಃ" ಎನ್ನಲ್ಪಡುವನು ||೬೧೦||

ಈ ಪ್ರಕಾರವಾಗಿ ೬೪ನೇ ಶ್ಲೋಕದಲ್ಲಿ ಪ್ರಕೃತಗಳಾದ ೯ ನಾಮಗಳಿಗೂ "ಪಿತೃಯಾನ ಪ್ರವೃತ್ತಾನಾಂ ಸಂಸಾರಾನ್ನಿವರ್ತನಾತ್ |

"ಅನಿವರ್ತೀ" (೬೦೩) ಸಮಾಖ್ಯಾತೋ ವ್ಯಾಖ್ಯಾರ್ಣೋ೭ಭಯದೋ ಮನುಃ ॥ ನಿವೃತ್ತಿ ಧರ್ಮಾಣೋಯಸ್ಯ ಹ್ಯಾತ್ಮಾನಸ್ಸಂತಿ ಸಸ್ಮೃತಃ। "ನಿವೃತ್ತಾತ್ಮೇ" (೬೦೪) ತ್ಯಷ್ಟವರ್ಣೋ ದುಷ್ಕರ್ಮ ಫಲಮೋಚಕಃ॥ ಸ್ವಾಭಾವಿಕಾಸಂಕುಚಿತ ಮೇಧಾಯಶ್ಚ ಪ್ರಕಾಶನಂ। ನಿವೃತ್ತಿ ಧರ್ಮಣಾಂ ಕರ್ತುಂ ಶೀಲಂ ಯಸ್ಯಾಸ್ತಿ ಸರ್ವದಾ ॥ ಸ "ಸಂಕ್ಷೇಪ್ತಿ" (೬೦೫) ತಿಕಥಿತ ಷ್ಷಡರ್ಣೋ ಧೀವಿಕಾಸದಃ ॥ ಅಸಂಕೋಚ ಜ್ಞಾನರೂಪ ಕ್ಷೇಮಸ್ಯ ಕರಣಾತ್ಸತಾಂ। "ಕ್ಷೇಮಕೃ" (೬೦೬) ಚ್ಚಾಪಿ ಸರ್ವೇಷಾಂ ಶಿವಸ್ಯ ಕರಣಾ "ಚ್ಛಿವಃ" (೬೦೭) ॥ ಲಕ್ಷ್ಮೀವಾಲ್ಲಭ್ಯ ಸೌಭಾಗ್ಯ ಚಿಹ್ನಂ ಶ್ರೀವತ್ಸನಾಮಕಂ ॥ "ಶ್ರೀವತ್ಸವಕ್ಷಾ" (೬೦೮) ಯಸ್ಯಾಸ್ತಿವಕ್ಷಸೀತಿಸತುಸ್ಮೃತಃ॥ ಶ್ರಿಯೋವಿಹಾರಸ್ಥಾನತ್ವಾ "ಚ್ಛ್ರೀವಾಸ" (೬೦೯) ಇತಿಚೋಚ್ಯತೆ ॥ ಸ್ವಯಂ ಶ್ರಿಯಃಪತಿತ್ವೇನ ವೃತವಾ "ಶ್ರೀಪತಿಃ" (೬೧೦) ಸ್ಮೃತಃ ॥ ದೇವಾನಾಂ ಶ್ರೀಮತಾಂ ಶ್ರೇಷ್ಠಂ "ಶ್ರೀಮತಾಂವರ" (೬೧೧) ಉಚ್ಯತೆ ॥" ಎಂಬಂತೆ ವಿವೃತಿಯನ್ನು ಕಾಣಬಹುದು.

ಮೂ॥ ಶ್ರೀದ ಶ್ರೀಶ ಶ್ರೀನಿವಾಸ ಶ್ರೀನಿಧಿ
ಶ್ರೀವಿಭಾವನಃ । ಶ್ರೀಧರ ಶ್ರೀಕರ ಶ್ರೇಯ
ಶ್ರೀಮಾ ನ್ಲೋಕತ್ರಯಾಶ್ರಯಃ ॥೬೫॥

(೬೧೨ನೇ ನಾಮವು) ಶ್ರೀದಃ,

ಓಮ್॥ ಶ್ರೀದಾಯನಮಃ

(ಶಂ॥ ಭಾ) ಭಕ್ತರಿಗೆ ಸಂಪತ್ಪ್ರದನು. (ವಿ॥ ಭಾ) ನಿತ್ಯನೂತನವಾಗಿರುವ ತನ್ನ ನಿರ್ವ್ಯಾಜವಾದ ಪ್ರೇಮರಸವೆಂಬ ಶ್ರೀಯನ್ನು ಶ್ರೀ ಮಹಾಲಕ್ಷ್ಮೀದೇವಿಗೆ ಕೊಡುವಂತವನು. ಎಂದರೆ ;—ಅವಳಿಗೆ ಜೀವನಾಧಾರನೆಂದರ್ಥವು. ಅವನನ್ನಾಶ್ರಯಿಸಿರುವುದರಿಂದಲೇ ತಾನೆ ಅವಳನ್ನು ಶ್ರೀಃ ಎನ್ನುವದು. ॥೬೧೨॥

(೬೧೩ನೇ ನಾಮವು) ಶ್ರೀಶಃ,

ಓಮ್॥ ಶ್ರೀಶಾಯನಮಃ.

(ಶಂ॥ ಭಾ) ಲಕ್ಷ್ಮೀಪತಿಯು. (ವಿ॥ ಭಾ) ಅವಳಿಗೆ ಅಂತಹ ಸ್ಥಿತಿಯನ್ನುಂಟುಮಾಡುವದಕ್ಕೆ ಕಾರಣನಾದಕಾರಣ ಈಶನಾಗಿರುವನು. (ಅಥವಾ) ಸರ್ವಾವಸ್ಥೆಗಳಲ್ಲಿಯೂ ವ್ಯವಸ್ಥಾಪಿಕೆಯಾದ ಶ್ರೀದೇವಿಯೇ ಇವನಿಗೆ ಈಶಳಾಗಿಯೂ ಇರುವಳು. ಇದಕ್ಕೆ "ಅದಾವಾತ್ಮಗುಣತ್ವೇನ ಭೋಗ್ಯರೂಪೇಣ ವಿಗ್ರಹೆ । ಆಧಾರಕಸ್ವರೂಪೇಣ ದಾಸೀಭಾವೇನ ವಾ ಸದಾ" ಇತ್ಯಾದಿ ಪ್ರಮಾಣಗಳನ್ನರಿಯಬೇಕು. ॥೬೧೭॥

## (೬೧೮ನೇ ನಾಮವು) ಶ್ರೀನಿವಾಸಃ,
## ಓಮ್॥ ಶ್ರೀನಿವಾಸಾಯನಮಃ.

(ಶಂ॥ ಭಾ) ಶ್ರೀಮಂತರಲ್ಲಿ ಸದಾವಾಸಮಾಡುವಂತವನು. (ವಿ॥ ಭಾ) ಕಲ್ಪಕಲತೆಗೆ ಕಲ್ಪಕವೃಕ್ಷವು ಹೇಗಾದರೆ ಆಧಾರವಾಗಿರುವದೋ ಅದರಂತೆ ಶ್ರೀದೇವಿಗೆ ಆಧಾರವಾಗಿರುವಂತವನು. ॥೬೧೮॥

## (೬೧೯ನೇ ನಾಮವು) ಶ್ರೀನಿಧಿಃ,
## ಓಮ್॥ ಶ್ರೀನಿಧಯೇನಮಃ.

(ಶಂ॥ ಭಾ) ಸರ್ವಶಕ್ತಿಮಯನಾದ ತನ್ನಲ್ಲಿ ಸಂಪತ್ಸಂಬಂಧದಿಂದ ಹೇಳಲ್ಪಡುವ ಸರ್ವಶಕ್ತಿಗಳೂ ಉಳ್ಳವನು. (ವಿ॥ ಭಾ) ಅಭರಣಗಳ ಪೆಟ್ಟಿಗೆಯಲ್ಲಿರುವ ರತ್ನಮಾಲಿಕೆಯಂತೆ ಅವಳನ್ನಿಟ್ಟುಕೊಂಡು ಬಾಳುವಂತವನು. ॥೬೧೯॥

## (೬೨೦ನೇ ನಾಮವು) ಶ್ರೀವಿಭಾವನಃ,
## ಓಮ್॥ ಶ್ರೀವಿಭಾವನಾಯನಮಃ.

(ಶಂ॥ ಭಾ) ಸರ್ವಭೂತಗಳಿಗೂ ಕರ್ಮಾನುಸಾರವಾಗಿ ನಾನಾವಿಧ ಸಂಪತ್ತುಗಳನ್ನುಂಟುಮಾಡುವಂತವನು. (ವಿ॥ ಭಾ) "ಅಪ್ರಮೇಯಂಹಿತತ್ತೇಜೋಯಸ್ಯ ಸಾಜನಕಾತ್ಮಜಾ" (ಶ್ರೀರಾ॥ ಅ॥ ೩೭॥ ೧೮) ಎಂಬಂತೆ ಇವಳ ಸಂಬಂಧದಿಂದ ಅತಿಶಯವನ್ನು ಹೊಂದಿದವನು. (ಮ) ಶ್ರೀದೇವಿಯನ್ನು ತನ್ನ ವಕ್ಷಸ್ಥಲದಲ್ಲಿಟ್ಟುಕೊಂಡು ವಿಶೇಷವಾಗಿ ಭಾವಿಸುವಂತವನು. ॥೬೨೦॥

## (೬೧೭ನೇ ನಾಮವು) ಶ್ರೀಧರಃ,
## ಓಮ್॥ ಶ್ರೀಧರಾಯನಮಃ.

(ಶಂ॥ ಭಾ) ಸರ್ವಭೂತಗಳಿಗೂ ತಾಯಿಯಾದ ಲಕ್ಷ್ಮೀದೇವಿಯನ್ನು ವಕ್ಷಸ್ಥಲದಲ್ಲಿ ಧರಿಸುವಂತವನು, ರತ್ನವು ಕಾಂತಿಯನ್ನೂ, ಪುಷ್ಪವು ಪರಿಮಳವನ್ನೂ, ಚಂದ್ರನು ಬೆಳತಿಂಗಳನ್ನೂ, ಅಮೃತವು (ರುಚಿ) ಸ್ವಾದುತಮತ್ವವನ್ನೂ, ಬಿಟ್ಟಿರದೇ ಹೇಗಾದರೆ ಅಪೃಥಗ್ಭಾವವನ್ನು (ಒಂದನ್ನು ಬಿಟ್ಟು ಒಂದಿರುವಿಕೆಗೆ ಆಗದೇ ಇರುವಿಕೆಯನ್ನು) ಹೊಂದಿರುವುದೋ ಅದರಂತೆ ಸದಾ ಶ್ರೀದೇವಿಯೊಡನೆ ಕೂಡಿರುವಂತವನು. ॥೬೧೭॥

## (೬೧೮ನೇ ನಾಮವು) ಶ್ರೀಕರಃ,
## ಓಮ್॥ ಶ್ರೀಕರಾಯನಮಃ.

(ಶಂ॥ ಬಾ) ತನ್ನ ಸ್ಮರಣದಿಂದಲೂ ಸ್ತುತಿಯಿಂದಲೂ ಪೂಜೆಯಿಂದಲೂ ಭಕ್ತರಾದ ಚೇತನರಿಗೆ ಸಂಪತ್ತನ್ನು ಕೊಡುವಂತವನು. (ವಿ॥ ಭಾ) ತನ್ನ ಪರತ್ವದಶೆಯಲ್ಲಿ ಅವಳನ್ನು ಹೇಗೆ ಸ್ವೀಕರಿಸಿರುವನೋ ಅದರಂತೆ ವ್ಯೂಹವಿಭವಾದ್ಯವತಾರಗಳಲ್ಲಿಯೂ "ದೇವತ್ವೇ ದೇವದೇಹೇಯಂ ಮನುಷ್ಯತ್ವೇಚ ಮಾನುಷೀ" (ಶ್ರೀವಿ॥ ಪು) ಎಂಬಂತೆ ತನಿಗೆ ತಕ್ಕಂತೆ ಅವಳನ್ನು ಮಾಡಿಕೊಳ್ಳುವಂತವನು. ॥೬೧೮॥

## (೬೧೯ನೇ ನಾಮವು) ಶ್ರೇಯಶ್ಶ್ರೀಮಾನ್,
## ಓಮ್॥ ಶ್ರೇಯಶ್ಶ್ರೀಮತೇನಮಃ.

(ವಿ॥ ಭಾ) ಸಕಲ ಪುರುಷಾರ್ಥ ಸಿದ್ಧಿಗೋಸ್ಕರ ಆಶ್ರಯಿಸಲ್ಪಡುವ ಶ್ರೀಮಹಾಲಕ್ಷ್ಮೀದೇವಿಯೊಡನೆ ನಿತ್ಯವಾಗಿ ಸೇರಿರುವಂತವನು. ॥೬೧೯॥

## (೬೨೦ನೇ ನಾಮವು) ಲೋಕತ್ರಯಾಶ್ರಯಃ,
## ಓಮ್॥ ಲೋಕತ್ರಯಾಶ್ರಯಾಯನಮಃ.

(ಶಂ॥ ಭಾ) ಮೂರು ಲೋಕಗಳಿಗೂ ಆಧಾರನು. (ವಿ॥ ಭಾ) ಜಗನ್ಮಾತೆಯಾದ ಅವಳೊಡನೆ ಕೂಡಿ ಯಾವಾಗಲೂ ಸಕಲಕ್ಕೂ ಆಶ್ರಯನಾಗಿರುವಂತವನು. ॥೬೧೦॥

ಈ ೬೫ನೇ ಶ್ಲೋಕದಲ್ಲಿರುವ ೯ ನಾಮಗಳಿಗೂ "ಯೋಸೌಶ್ರಿಯ್ಯೈಸ್ವಪ್ರಣಯರಸದ "ಶ್ರೀದ" (೬೦೨) ಈರಿತಃ। "ಶ್ರೀಶ" ಸ್ವಾಸ್ಯ (೬೦೩) ಚ ಶ್ರಿಯ ಈಶತ್ವಾದೀಶಾಶ್ರೀರಸ್ಯ ವಾಮತಃ॥ ನಿತ್ಯೋಪಶ್ಲಿನಿವಾಸತ್ವಾ "ಚ ಶ್ರೀನಿವಾಸ" (೬೦೪) ಶ್ರೀಯಸ್ಮಾತ್ಕಃ। ಶ್ರೀರಸ್ಮಿನ್ನಿಹಿತಾನಿತ್ಯಂ "ಶ್ರೀನಿಧಿಃ" (೬೦೫) ಪರಿಕೀರ್ತಿತಃ॥ ಯಸ್ಯೋಪಬ್ರ್ಯೋಪಾಖ್ಯ ಹೇತುಶ್ರೀಸ್ಯಾತ್ಸ "ಶ್ರೀವಿಭಾವನಃ" (೬೦೬)॥ ರುಚ್ಯರ್ಶ್ರಿಃ ಕೌಮುದೀಗಂಧಾನ್ಸ್ವಧಾರತ್ಯೇಂದು ಪುಷ್ಪವತ್। ಶ್ರೀಯಂಧರತಿ ನಿತ್ಯಂಯ "ಶ್ರೀಧರ" (೬೦೭) ಸ್ಸತುಕೀರ್ತಿತಃ॥ ಪರವ್ಯೋಹಾವತಾರೇಷು ಸ್ವಾನುರೂಪಾಂ ಕರೋತಿತಾಂ। ಶ್ರೀಯಂಯೋಸೌ "ಶ್ರೀಕರ" (೬೦೮) ಸ್ವಾಸ್ಯನ್ಮನ್ಯೇರ್ಣ ಶ್ರೀಕರೋಮನುಃ॥ ಶ್ರೇಯಸೇಶ್ರಯಣೀಯಾಶ್ರೀಶ್ಶ್ರೀಯಶ್ರೀ ರ್ನಿತ್ಯಯೋಗಿನೀ। "ಶ್ರೇಯಶ್ರೀಮಾ" (೬೦೯) ನಸಾವಸ್ಯ ವಸ್ವೇರ್ಣಃ ಪುರುಷಾರ್ಥದಃ॥ ಶ್ರಿಯಾಸಹ ಜಗನ್ಮಾತ್ರಾ ಪಿತೃವ ತ್ಸಕಲಾಶ್ರಯಃ। "ಲೋಕತ್ರಯಾಶ್ರಯ" (೬೧೦) ಸ್ಸಸ್ಯಾದ್ವಶಾಣೋ ರಕ್ಷಕತ್ವದಃ॥" ಎಂಬೀರೀತಿಯಾಗಿ ವಿವೃತಿಯನ್ನು ಕಾಣಬಹುದು.

ಮೂ॥ ಸ್ವಕ್ಷ ಸ್ಸ್ವಂಗ ಶ್ಶತಾನಂದೋ ನಂದಿ
ಜ್ಯೋತಿರ್ಗಣೇಶ್ವರಃ। ವಿಜಿತಾತ್ಮಾ ವಿಧೇಯಾತ್ಮಾ
ಸತ್ಕೀರ್ತಿಶ್ಛಿನ್ನಸಂಶಯಃ ॥೬೬॥

(೬೧೧ನೇ ನಾಮವು) ಸ್ವಕ್ಷಃ,

ಓಮ್॥ ಸ್ವಕ್ಷಾಯನಮಃ.

(ಶಂ॥ ಭಾ) ಮಂಗಳಕರಗಳೂ ಪುಂಡರೀಕಕ್ಕೆ ಸಮಾನಗಳೂ ಆದ ಕಣ್ಣುಗಳುಳ್ಳವನು, (ವಿ॥ ಭಾ) ಅವಳ ಸೌಂದರ್ಯವೆಂಬ ಅಮೃತ ಸ

ಮುದ್ರದ ಆಳವನ್ನು ಕಾಣುವ ಕಣ್ಣುಮೊದಲಾದ ಕರಣ (ಇಂದ್ರಿಯ) ಗಳುಳ್ಳವನು. ||೬೨೧||

(೬೨೨ನೇ ನಾಮವು) ಸ್ವಂಗಃ,

ಓಮ್|| ಸ್ವಂಗಾಯನಮಃ.

(ಶಂ|| ಮ) ಶೋಭನಗಳಾದ ಅವಯವಗಳುಳ್ಳವನು. (ವಿ|| ಭಾ) ಅವಳಿಂದಲೂ ಅತ್ಯಂತವಾಗಿ ಅಪೇಕ್ಷಿಸಲ್ಪಡುವ ದಿವ್ಯವಾದ ದೇಹವುಳ್ಳವನು. ||೬೨೨||

(೬೨೩ನೇ ನಾಮವು) ಶತಾನಂದಃ,

ಓಮ್|| ಶತಾನಂದಾಯನಮಃ.

(ಶಂ||ಭಾ) ಒಬ್ಬನೇ ಆದ ಪರಾನಂದ ಸ್ವರೂಪನು ಉಪಾಧಿವಶದಿಂದ ಅನೇಕ ಪ್ರಕಾರವಾಗಿ ಭೇದಿಸಲ್ಪಡುವುದರಿಂದ 'ಶತಾನಂದಃ' (ವಿ|| ಭಾ) ಪರಸ್ಪರವಾಗಿ ಪ್ರಣಯರಸವು ಪ್ರವಹಿಸುವಂತೆ ಅಪರಿಮಿತವಾದ ಆನಂದ ಉಳ್ಳವನು. (ಮ) ಅನಂತಾನಂದವುಳ್ಳವನು. ಆನಂದವು ಒಂದಾಗಿದ್ದರೂ ಅಪರಿಮಿತವಾಗಿರುವ ಕಾರಣ ಶತತ್ವೋಪಚಾರವು. ಅಥವಾ ಮುಕ್ತರಿಗೆ ಯಾವನಿಂದ ನೂರಾದ ಆನಂದಗಳುಂಟಾಗುವವೋ ಅವನು ಶತಾನಂದಃ. ||೬೨೩||

(೬೨೪ನೇ ನಾಮವು) ನಂದಿಃ,

ಓಮ್|| ನಂದಯೇನಮಃ,

(ಶಂ|| ಭಾ) ಶ್ರೇಷ್ಠವಾಗಿರುವ ಆನಂದಮಯವಾದ ವಿಗ್ರಹವುಳ್ಳವನು. (ವಿ|| ಭಾ) ಈ ರೀತಿಯಾಗಿ ಯಾವಾಗಲೂ ಯಲ್ಲೆಲ್ಲಿಯೂ ಸರ್ವ ಪ್ರಕಾರದಿಂದಲೂ ಇವಳಿಂದ ಸಮೃದ್ಧಿಯನ್ನು ಹೊಂದಿದವನು. (ಮ) ಸಂತೋಷಪಡಿಸುವಂತವನು. ||೬೨೪||

(೬೨೫ನೇ ನಾಮವು) ಜ್ಯೋತಿರ್ಗಣೇಶ್ವರಃ,

ಓಮ್|| ಜ್ಯೋತಿರ್ಗಣೇಶ್ವರಾಯನಮಃ.

(ಶಂ॥ ಭಾ) "ತಮೇವ ಭಾಂತಂ ॥ ಯದಾದಿತ್ಯಗತಂ" ಇತ್ಯಾದಿಗಳಲ್ಲಿ ಹೇಳಲ್ಪಟ್ಟಿರುವಂತೆ ಜ್ಯೋತಿಸ್ಸಮೂಹಗಳಿಗೆ ಪ್ರಭುವಾದವನು. (ವಿ॥ ಭಾ) ಇಬ್ಬರಿಗೂ ಅನುಕೂಲರಾಗಿ ತೇಜೋರೂಪಿಗಳಾಗಿರುವ ಅನಂತ ಗರುಡ ವಿಷ್ವಕ್ಸೇನಾದಿಗಳಾದ ಪರಿಚಾರಕ ಗಣಗಳಿಂದ ಸೇವಿಸಲ್ಪಡುವುದರಿಂದ ಅವರಿಗೆ ಪ್ರಭುವಾಗಿರುವಂತವನು. ಜ್ಯೋತಿಶ್ಶಬ್ದವು ಪುರುಷಸೂಕ್ತದಲ್ಲಿ ಹೇಳಿರುವಂತೆ ನಿತ್ಯ ಸೂರಿಗಳನ್ನು ಬೋಧಿಸುವದು. (ಮ) ಜ್ಯೋತಿಃ-ಚಂದ್ರಾದಿಗಳಾದ ಜ್ಯೋತಿಸ್ಸುಗಿಂತಲೂ ಅತಿಶಯಿತವಾದ ಜ್ಯೋತಿಸ್ಸು. ಗಣೇಶ್ವರಃ—ದೇವಗಣಗಳಿಗೆ ಪ್ರಭುವಾದವನು. ॥೬೮೫॥

## (೬೮೬ನೇ ನಾಮವು) ವಿಜಿತಾತ್ಮಾ,

### ಓಮ್॥ ವಿಜಿತಾತ್ಮನೇನಮಃ

(ಶಂ॥ ಭಾ) ಯಾವನಿಂದ ಆತ್ಮವು ಜಯಿಸಲ್ಪಟ್ಟಿರುವದೋ ಅವನು ವಿಜಿತಾತ್ಮಾ. (ವಿ॥ ಭಾ) ಈಪ್ರಕಾರವಾಗಿ ಪರತ್ವಾವಸ್ಥೆಯಲ್ಲಿ ಕೊನೇವರಿಗುಂಟಾದ ರಹಸ್ಯವನ್ನು ಹೇಳಿ ಇನ್ನುಮುಂದೆ ಸೌಶೀಲ್ಯವೆಂಬ ಗುಣದ ಪರಮಾವಧಿಯಲ್ಲುಂಟಾದ ರಹಸ್ಯವನ್ನು ಹೇಳುತ್ತಾರೆ. ಶ್ರೀ ಮಹಾಲಕ್ಷ್ಮಿದೇವಿಯು ನಿತ್ಯಸಂಬಂಧವನ್ನು ಹೊಂದಿ ಅತ್ಯಂತ ಸಂಪನ್ನನಾಗಿಯೂ ಅಪೇಕ್ಷಾರಹಿತನಾಗಿಯೂ ಇದ್ದರೂ ತನ್ನ ಭಕ್ತರಿಗೆ ವಶಪಟ್ಟಿರುವ ಮನಸ್ಸುಳ್ಳವನು (ಮ) ಆತ್ಮಗಳು ನಿತ್ಯಮುಕ್ತರುಗಳಾದಕಾರಣ ಯಾವನಿಂದ ಜಯಿಸಲ್ಪಟ್ಟಿರುವುವೊ ಅವನು ವಿಜಿತಾತ್ಮಾ. ॥೬೮೬॥

## (೬೮೭ನೇ ನಾಮವು) ವಿಧೇಯಾತ್ಮಾ,

### ಓಮ್॥ ವಿಧೇಯಾತ್ಮನೇನಮಃ.

(ವಿ॥ ಭಾ) ಅವರಿಗೆ ವಿಧೇಯನಾಗಿರುವಾಗ ಅವರುಗಳು "ಇಲ್ಲಿ ಬಾ, ಇಲ್ಲಿರು, ಇದನ್ನು ಭಕ್ಷಿಸು" ಎಂದು ವಿಧಿಸಿದರೆ ಅದಕ್ಕೆ ವಶಪಟ್ಟಿರುವಂತವನು. (ಮ) ಆತ್ಮಗಳೆಲ್ಲವೂ ಯಾವ ಪರಮಾತ್ಮನಿಂದ ವಿನಯ ಗ್ರಾಹಿಗಳಾಗಿರುವವೋ ಅವನು ವಿಧೇಯಾತ್ಮಾ—ಎಂದರೆ ಸರ್ವರನ್ನೂ ವಿಧೇಯರನ್ನಾಗಿ ಮಾಡಿಕೊಳ್ಳುವನೆಂದರ್ಥವು (ಶಂ॥ ಭಾ) ಅವಿಧೇಯಾತ್ಮಾ-ಯಾರಿಗೂ ವಿಧೇಯವಾದ ಸ್ವರೂಪವಿಲ್ಲದವನು. ॥೬೮೭॥

## (೬೨೪ನೇ ನಾಮವು) ಸತ್ಕೀರ್ತಿಃ,
## ಓಮ್॥ ಸತ್ಕೀರ್ತಯೇನಮಃ.

(ಶಂ॥ಭಾ) ಅಮೋಘ (ವ್ಯರ್ಥವಲ್ಲದ) ಕೀರ್ತಿಯುಳ್ಳವನು. (ವಿ॥ ಭಾ) ಇಂತಹ ಸೌಶೀಲ್ಯಗುಣವಿದ್ದರೂ ಮಹತ್ತಾದ ಕೀರ್ತಿಯುಳ್ಳವನು. (ಮ) ಶ್ರೇಷ್ಠವಾದ ಕೀರ್ತಿಯುಳ್ಳವನು. ॥೬೨೪॥

## (೬೨೫ನೇ ನಾಮವು) ಛಿನ್ನಸಂಶಯಃ,
## ಓಮ್॥ ಛಿನ್ನಸಂಶಯಾಯನಮಃ.

(ಶಂ॥ ಭಾ) ಕರತಲದಲ್ಲಿರುವ ನೆಲ್ಲೀಕಾಯಿಯನ್ನು ಸಂಪೂರ್ಣವಾಗಿ ಪ್ರತ್ಯಕ್ಷೀಕರಿಸುವಂತೆ ಸರ್ವಸಾಕ್ಷಾತ್ಕಾರವುಳ್ಳವನಾದ ಕಾರಣ ಯಾವ ಸಂಶಯವೂ ಇಲ್ಲದವನು. (ವಿ॥ ಭಾ) ಈ ಪ್ರಕಾರವಾಗಿ ಅತ್ಯಂತ ಸೌಶೀಲ್ಯವುಳ್ಳವನಾದ ಕಾರಣ ತನ್ನನ್ನು ತಿಳಿಯುವದು ತನ್ನನ್ನು ಸಾಧಿಸುವದು ತನ್ನನ್ನು ಹೊಂದುವದು ಸುಲಭವೊ ದುರ್ಲಭವೊ ಎಂಬೀವಿಷಯವಾದ ಸಂಶಯಗಳನ್ನು ಹೋಗಲಾಡಿಸುವಂತವನು. ॥೬೨೫॥

ಈ ೬೬ನೇಶ್ಲೋಕದಲ್ಲಿರುವ ೯ ನಾಮಗಳಿಗೂ "ಶ್ರೀಸೌಂದರ್ಯಸುಧಾಸಿಂಧು ಪಾರೀಣ ಕರಣೋಹಿಸಃ | "ಸ್ವಕ್ಷಃ" (೬೧೧) ಶ್ರಿಯಸ್ಸ್ವಗ್ರಹಣೀಯ ದಿವ್ಯಾಂಗ "ಸ್ವಂಗ" (೬೨೦) ಉಚ್ಯತೇ ॥ ಅನ್ಯೋನ್ಯ ಪ್ರಣಯಾನಂದ ಸಿಂಧೋ ಸ್ಸಮುದಿತೋಹಿಯಃ | "ಶತಾನಂದ" (೬೨೧) ಸ್ಸವಿಜ್ಞೇಯೋ ದಂಪತ್ಯಾನಂದಬೋಮನುಃ ॥ "ನಂದಿ" (೬೨೨)ಸ್ಸರ್ವತ್ರ/ನಿತ್ಯಂಸ ಶ್ರಿಯೋಖದ್ಯೌತಿ ಸರ್ವದಾ | ನಿತ್ಯಸೂರಿ ಗಣಾನಾಂಯ ಈಶೊ "ಜ್ಯೋತಿರ್ಗಣೇಶ್ವರಃ" (೬೨೩)॥ ಸೌಶೀಲ್ಯಸ್ಯ ಗುಣಸ್ಯಾಥ ಪರಮಾವಧಿವರ್ಣನಂ ॥ ಮಾನಸಂಪ್ರಣತೈರ್ಯಸ್ಯ "ವಿಜಿತಾತ್ಮಾ" (೬೧೬) ಜಿತಂಜಸಃ | ಇಹಗಚ್ಛೇಹತಿಷ್ಠೇದಂ ಭುಂಕ್ಷ್ವೇತಿ ಪ್ರಣತೈಸ್ಸದಾ ॥ ಯೋಗ್ಯಂ ವಿಧಾತುಂ ಯದ್ರೂಪಂ "ವಿಧೇಯಾತ್ಮಾ" (೬೧೭) ಸಕೀರ್ತಿತಃ | ಈದೃಕ್ಸೌಶೀಲ್ಯ ಸತ್ವಾದ್ಧಿ "ಸತ್ಕೀರ್ತಿ" (೬೨೪) ರಿತಿಕಥ್ಯತೆ ॥ ಸೌಶೀಲ್ಯಪ್ರಥಯಾಚೈವಂ ದುಷ್ಕರತ್ವಾದಿ ಸಂಶಯಃ | ಛಿನ್ನೋಯೇನ ವಿಶೇಷೇಣ ಸಪ್ರೋಕ್ತ "ಛಿನ್ನಸಂಶಯಃ"॥ (೬೨೫) ಎಂಬೀರೀತಿಯಿಂದ ವಿವೃತಿಯನ್ನು ಕಾಣಬಹುದು.

ಮೂ|| ಉದೀರ್ಣ ಸರ್ವತಶ್ಚಕ್ಷು ರನೀಶ ಶ್ಯಾಶ್ವತಸ್ಥಿರಃ | ಭೂಶಯೋ ಭೂಷಣೋ ಭೂತಿ ರಶೋಕ ಶ್ಶೋಕನಾಶಕಃ ||೬೭||

(೬೩೦ನೇ ನಾಮವು) ಉದೀರ್ಣಃ,

ಓಮ್|| ಉದೀರ್ಣಾಯನಮಃ.

(ಶಂ|| ಭಾ) ಸರ್ವಭೂತಗಳಿಗಿಂತಲೂ ಶ್ರೇಷ್ಠನು (ವಿ|| ಭಾ) ಅದು ಹೇಗೆ? ಎಂದರೆ :—ಚರ್ಮಚಕ್ಷುಸ್ಸುಳ್ಳವರಿಗೂ ಪ್ರತ್ಯಕ್ಷಗೋಚರನಾಗುವಂತೆ ಅವತರಿಸಿದವನು. (ಮ) ಸರ್ವ ಕಲ್ಯಾಣಗುಣ ಯುಕ್ತನು. ||೬೩೦||

(೬೩೧ನೇ ನಾಮವು) ಸರ್ವತಶ್ಚಕ್ಷುಃ,

ಓಮ್|| ಸರ್ವತಶ್ಚಕ್ಷುಷೇನಮಃ

(ಶಂ|| ಮ) "ವಿಶ್ವತಶ್ಚಕ್ಷುಃ" (ಯಾಜ್ಞಿ೧) ಎಂಬಂತೆ ಸಮಸ್ತವನ್ನು ನೋಡುವಂತವನು. (ವಿ|| ಭಾ) ಹೀಗೆ ಅವತಾರ ಮಾಡುವುದರಿಂದ ನಮ್ಮಂತವರ ಕಣ್ಣುಗಳೆಲ್ಲವನ್ನೂ ಸಾಕ್ಷಾತ್ತಾಗಿ ನೋಡುವಂತವನು. ಇದರಿಂದ 'ಛಿನ್ನಸಂಶಯಃ' (೬೨೯) ಎಂಬ ಅರ್ಥವು ಸಿದ್ಧವಾಯಿತು. ಸ್ಪಷ್ಟವಾಗಿ ಪ್ರತ್ಯಕ್ಷೀಕರಿಸುವ ವಿಷಯದಲ್ಲಿ ಸಂಶಯವಿಲ್ಲವಷ್ಟೆ. ||೬೩೧||

(೬೩೨ನೇ ನಾಮವು) ಅನೀಶಃ,

ಓಮ್|| ಅನೀಶಾಯನಮಃ.

(ಶಂ|| ಮ) ತಾನೇ ಸರ್ವರಿಗೂ ಈಶನಾಗಿರುವನಲ್ಲದೇ ತಾನೇನೋ ಬೇರೊಂದು ಈಶ್ವರನಿಲ್ಲದವನು. (ವಿ|| ಭಾ) ತನ್ನ ಸ್ನಾನಾಲಂಕಾರವೇ ಮೊದಲಾದ ಸರ್ವವೂ ತನ್ನನ್ನು ಆರಾಧಿಸುವಂತರ ಅಧೀನವಾದ ಕಾರಣ ಪರಾಧೀನನಾದವನು. (ಅರ್ಚ್ಯಸ್ಸರ್ವ ಸಹಿಷ್ಣು ರರ್ಚಕ ಪರಾಧೀನಾಖಿಲಾತ್ಮ ಸ್ಥಿತಿಃ. ||೬೩೨||

## (೬೩೩ನೇ ನಾಮವು) ಶಾಶ್ವತಸ್ಥಿರಃ,

### ಓಮ್॥ ಶಾಶ್ವತಸ್ಥಿರಾಯನಮಃ.

(ಶಂ॥ ಭಾ) ತಾನು ಸರ್ವಕಾಲದಲ್ಲಿಯೂ ಇರುತ **ಯಾವಕಾಲದಲ್ಲಿ** ಯೂ ವಿಕಾರವನ್ನು ಹೊಂದದವನು. (ವಿ॥ ಭಾ) ಅದರಂತೆಯೇ ಯಾವಾಗಲೂ ಪ್ರತ್ಯಕ್ಷವಾಗಿ ಕಂಡು ಅನುಭವಿಸುವುದಕ್ಕೆ ಯೋಗ್ಯವಾಗಿರುವಂತೆ ಅನೇಕಗಳಾದ ಅರ್ಚಾವಿಗ್ರಹಗಳನ್ನು ಶರೀರವನ್ನಾಗಿ ಧರಿಸಿಯಾವಾಗಲೂ ಮರೆಯದೆ "ಬಿಂಬಾಕೃತ್ಯಾತ್ಮನಾಬಿಂಬೇ ಸದಾಗತ್ಯಾವತಿಷ್ಠತೆ" (ಪಾಂಚ) ಎಂಬಂತೆ ಇರುವಂತವನು. (ಮ) "ಅಗ್ರಾಹ್ಯಶ್ಶಾಶ್ವತಃ ಕೃಷ್ಣಃ" ಎಂಬಸ್ಥಲದಲ್ಲಿರುವ ಶಾಶ್ವತಶಬ್ದಕ್ಕಿಂತಲೂ ಭೇದ ಪ್ರದರ್ಶನಕ್ಕಾಗಿ ಇಲ್ಲಿ ಏಕನಾಮವಾಗಿರುವುದು. ॥೬೩೩॥

## (೬೩೪ನೇ ನಾಮವು) ಭೂಶಯಃ,

### ಓಮ್॥ ಭೂಶಯಾಯನಮಃ.

(ಶಂ॥ ಮ) ಶ್ರೀರಾಮಾವತಾರದಲ್ಲಿ ಲಂಕಾಪಟ್ಟಣಕ್ಕೆ ಹೋಗುವಾಗ ಸೇತು ಬಂಧನಕ್ಕೆ ಮೊದಲು ಸಮುದ್ರ ತೀರದಲ್ಲಿ ಮಲಗಿದವನು. (ವಿ॥ ಭಾ) ಭಕ್ತರು ತನ್ನ ನಿತ್ಯ ಸಾನ್ನಿಧ್ಯವನ್ನಪೇಕ್ಷಿಸಿ ತೋರಿಸಿರುವ ಸ್ವಯಂವ್ಯಕ್ತಸೈದ್ಧ ಮಾನುಷಾದಿ ಆಯತನ ಪ್ರದೇಶಗಳಲ್ಲಿ ಭಕ್ತಾನುಗ್ರಹಾರ್ಥವಾಗಿ ಮಲಗಿರುವಂತವನು. ॥೬೩೪॥

## (೬೩೫ನೇ ನಾಮವು) ಭೂಷಣಃ,

### ಓಮ್॥ ಭೂಷಣಾಯನಮಃ.

(ಶಂ॥ ಭಾ) **ಈ** ರೀತಿಯಾಗಿ ತನ್ನ ಅನೇಕಾವತಾರಗಳಿಂದ ಭೂಮಿಯನ್ನು ಅಲಂಕರಿಸುವಂತವನು. (ವಿ॥ ಭಾ) **ಈ** ಪ್ರಕಾರವಾಗಿ ಸರ್ವರಿಗೂ ಹಿತವಾಗಿ ನಡದುಕೊಳ್ಳುವದೆಂಬ ಗುಣಾತಿಶಯದಿಂದ ತನ್ನನ್ನು ಭೂಷಿಸಿಕೊಳ್ಳುವಂತವನು. ಲೋಕದಲ್ಲಿ ಶ್ರೀಮಂತರಾದವರು ದರಿದ್ರನ

ಗೃಹಕ್ಕೆ ಅತಿಥಿಯಾಗಿ ಬಂದು ಅವರ ಅಲ್ಪವಾದ ಭೋಜ್ಯ ವಸ್ತುಗಳ ನ್ನು ಸ್ವೀಕರಿಸಿ ಅವರೊಡನೆ ಏಕೀಭವಿಸಿರುವಿಕೆಯು ಇವನಿಗೆ ಭೂಷಣವಲ್ಲದೇ ದೂಷಣವಾಗುವುದಿಲ್ಲವಷ್ಟೆ. ( "ಮಹತೋ ಮಂದೈಸ್ಸಹ ನೀರಂಧ್ರಸಂಶ್ಲೇಷ ಸ್ಸೌಶೀಲ್ಯಂ" ಎಂಬಸೌಶೀಲ್ಯ ಗುಣವು ಈ ರೀತಿಯಾಗಿರುವುದೆಂದರಿಯಬೇಕು.) ||೬೩೫||

## (೬೩೬ನೇ ನಾಮವು) ಭೂತಿಃ,

## ಓಮ್|| ಭೂತಯೇನಮಃ.

(ಶಂ|| ಭಾ) ಸತ್ತಾರೂಪನೂ ವಿಭೂತಿ ರೂಪನೂ ಸಮಸ್ತ ವಿಭೂತಿಗಳಿಗೂ ಕಾರಣಭೂತನೂ ಆದಕಾರಣ 'ಭೂತಿಃ' ಎನ್ನಲ್ಪಡುವನು. (ವಿ|| ಭಾ) ಯಾವದೊಂದು ಸಾಧನವನ್ನೂ ತಿಳಿಯದವರಿಗೆ ಸರ್ವಸಮೃದ್ಧಿಯುಳ್ಳ ಐಶ್ವರ್ಯರೂಪನಾದವನು; ಎಂದರೆ ಅವರುಗಳಿಗೆ ಪುತ್ರ ಪಶು ಭೋಜನ ಬಂಧುವೇ ಮೊದಲಾದ ಸಮಸ್ತವೂ ತಾನೇ ಆಗಿರುವನೆಂದರ್ಥವು. ||೬೩೬||

## (೬೩೭ನೇ ನಾಮವು) ಅಶೋಕಃ,

## ಓಮ್|| ಅಶೋಕಾಯನಮಃ.

(ಶಂ|| ಭಾ) ಪರಮಾನಂದರೂಪನಾದಕಾರಣ ಶೋಕವಿಲ್ಲದವನು (ಮ|| ಶಂ) ವಿಶೋಕಃ ಎಂದು ಪಾಠವು. (ವಿ||ಭಾ) ಅಶೋಕಃ—ಈಪ್ರಕಾರವಾಗಿ ತನ್ನಿಂದ ಯಾವ ಪುರುಷನೂ ಅನಾಥನಲ್ಲದೇ ಇರುವುದರಿಂದ ಅವರ ವಿಷಯದಲ್ಲಿ ಶೋಕವಿಲ್ಲದವನು. (ವಿ) ವಿಶೋಕಃ-ಪಾಠಾನ್ತರವು.||೬೩೭||

## (೬೩೮ನೇ ನಾಮವು) ಶೋಕನಾಶನಃ,

## ಓಮ್|| ಶೋಕನಾಶನಾಯನಮಃ.

(ಶಂ|| ಭಾ) ಸ್ಮರಣಮಾತ್ರದಿಂದಲೆ ಭಕ್ತರ ದುಃಖಗಳನ್ನು ನಾಶಪಡಿಸುವಂತವನು. (ವಿ|| ಭಾ) ಅವರುಗಳಿಗೆ ತನ್ನ ವಿಯೋಗದಿಂದುಂಟಾದ ಶೋಕವನ್ನು ಪರಿಹರಿಸುವಂತವನು. "ಸೋಹಂಭಗವಶ್ಶೋಚಾ

ಮಿತವಶ್ಯಾ ಭಗವಾನ್ ಶೋಕಸ್ಯ ಪಾರಂತಾರಯತು ' ಎಂಬ ಛಾಂದೋಗ್ಯ ಶ್ರುತಿಯೂ ಈ ಅರ್ಥವನ್ನು ಬೋಧಿಸುವುದು. ‖೬೩೮‖

(ಎಲೈ ಪರಮಾತ್ಮನೆ ? ನಾನು ಸಂಸಾರದಲ್ಲಿ ಮುಳುಗಿ ದುಃಖಪಡುತಲಿರುವೆನು. ನನ್ನ ಶೋಕವನ್ನು ನೀನು ಪರಿಹರಿಸಿ ರಕ್ಷಿಸೆಂದರ್ಥವು)

ಇಲ್ಲಿ ಪ್ರಕೃತಗಳಾದ ೯ ನಾಮಗಳಿಗೂ " ಪ್ರತ್ಯಕ್ಷವಿಷಯತ್ವೇನ ಹ್ಯುತ್ಪನ್ನ ಕ್ಸರ್ಮಚಕ್ಷುಷಾಂ | " ಉದೀರ್ಣ " (೬೩೦) ಇತಿಸಪ್ರೋಕ್ತ ಸ್ಸರ್ವಾರ್ಥೋ ನಯನಪ್ರದಃ ‖ ತತಾಸ್ಸಾಕ್ಷಾತ್ಕಾರ ಕರ್ಮಾಣಿ ಸರ್ವಚಕ್ಷೂಂಷ್ಯಪಿ ಸ್ವತಃ | ಅತಸ್ತಸ್ಯ " ತ್ಸರ್ವತಶ್ಚಕ್ಷು " (೬೩೧) ರ್ನವಾರ್ಥೋ ನೇತ್ರಶಕ್ತಿದಃ ‖ ಪ್ರೋಕ್ತೋ " ಹ್ಯನೀಶೋ " (೬೩೨) ಯಶ್ಚಾಸಾತದಾಯತ್ತಾಖಿಲಕ್ರಿಯಃ | ಬಿಂಬಾಕೃತ್ಯಾತ್ಮ ನಾಬಿಂಬೇ ಸ್ಥಿತಸ್ತಸ್ಯ " ಚಾಪ್ಯಶ್ವತಸ್ಥಿರಃ " (೬೩೩) ‖ ಸ್ವಯಂವ್ಯಕ್ತಾದಿ ರೂಪೇಣ ಶಾಶೇತೇ " ಭೂಶಯ " (೬೩೪) ಶ್ಚಸಃ | ಏವಂವಿಶ್ವಜನೀನೇನ ಶೀಲೇನ ಚಶ್ರಿಯಃಪತಿಃ ‖ ಯಆತ್ಮಾನಂ ಭೂಷಯತಿ "ಭೂಷಣಃ "(೬೩೫) ಪರಿಕೀರ್ತಿತಃ | ಯೋಸಾಸಮೃದ್ಧ ಮೈಶ್ವರ್ಯಂ ಭಕ್ತಾನಾಂ " ಭೂತಿ " (೬೩೬) ರೀರಿತಃ ‖ ನಾದತ್ವಾಚ್ಚಾಪಿ ಸರ್ವೇಷಾ " ಮಶೋಕ " ಸ್ತೇನ (೬೩೭) ಈರಿತಃ | ಭಕ್ತಾನಾಂ ಸ್ವೇನ ಸಂಬಂಧ ವ್ಯತಿರೇಕ ಸ್ವರೂಪಕಂ | ಯತ್ತಚ್ಛೋಕಂ ನಾಶಯತಿ " ಶೋಕನಾಶನ " (೬೩೮) ಈರಿತಃ " ಎಂಬ ರೀತಿಯಾಗಿ ವಿವೃತಿಯನ್ನು ಕಾಣಬಹುದು.

ಮೂ‖ ಅರ್ಚಿಷ್ಮಾ ನರ್ಚಿತಃ ಕುಂಭೋ ವಿಶುದ್ಧಾತ್ಮಾ ವಿಶೋಧನಃ | ಅನಿರುದ್ಧೋ ಽಪ್ರತಿರಥಃ ಪ್ರದ್ಯುಮ್ನೋ ಽಮಿತವಿಕ್ರಮಃ ‖೬೮‖

(೬೩೯ನೇ ನಾಮವು) ಅರ್ಚಿಷ್ಮಾನ್,

ಓಮ್‖ ಅರ್ಚಿಷ್ಮತೇನಮಃ.

(ಶಂ‖ ಭಾ) ಚಂದ್ರ ಸೂರ್ಯಾದಿಗಳಿಗೆ ಯಾವ ಪರಮಾತ್ಮನಿಂದ ಪ್ರಕಾಶ ಉಂಟಾಗಿರುವುದೋ ಅವನು " ಅರ್ಚಿಷ್ಮಾನ್ " ಎನ್ನಲ್ಪಡು

ವನು. (ವಿ|| ಭಾ) ತನ್ನ ಪ್ರಭಾವಗಳೆಲ್ಲವನ್ನೂ ಮರೆಮಾಡಿಕೊಂಡಿ ಅವರ ಆಂತರ ಚಕ್ಷುಸ್ಸು ಬಾಹ್ಯ ಚಕ್ಷುಸ್ಸೆಂಬ ಯೆರಡು ಕಣ್ಣುಗಳನ್ನೂ ತೆರೆಯುವಂತಹ ದಿವ್ಯ ತೇಜಸ್ಸುಳ್ಳವನು. (ಮ) ವಿಲಕ್ಷಣವಾದ ಪ್ರಕಾಶವುಳ್ಳವನು. ||೬೭೯||

(೬೮೦ನೇ ನಾಮವು) ಅರ್ಚಿತಃ,

ಓಮ್|| ಅರ್ಚಿತಾಯನಮಃ.

(ಶಂ|| ಭಾ) ಸರ್ವ ಪೂಜ್ಯರಾದ ಬ್ರಹ್ಮಾದಿಗಳಿಂದಲೂ ಪೂಜಿಸಲ್ಪಡುವಂತವನು. (ವಿ|| ಭಾ) ಈ ರೀತಿಯಾಗಿರುವ ಅರ್ಚಾವತಾರವನ್ನು ಲೋಕಾನುಗ್ರಹಾರ್ಥವಾಗಿ ಸ್ವೀಕರಿಸುವಂತವನು. ಈ ಅವತಾರವೆತಾನೆ ಪರತ್ವದಂತೆ ಬಹುದೂರದಲ್ಲಿರದಂತೆಯೂ ದೇವ ಮನುಷ್ಯಾದ್ಯವತಾರದಂತೆ ಯಾವಾಗಲೋ ಯೆಲ್ಲಿಯೋ ಒಂದುಕಡೆ ಇರದಂತೆಯೂ ಸದಾ ಸರ್ವಕ್ಷೇತ್ರಗಳಲ್ಲಿಯೂ ಪ್ರತ್ಯಕ್ಷವಾಗಿರುವುದು. ಈ ಅರ್ಚಾವತಾರ ರಹಸ್ಯವನ್ನು ಭಗವಚ್ಛಾಸ್ತ್ರ ಬೋಧಾಯನಸ್ಮೃತಿ ವೈಷ್ಣವಸ್ಮೃತಿ ಪುರಾಣಾದಿಗಳಲ್ಲಿ ಕಾಣಬಹುದು. ವೈಷ್ಣವಧರ್ಮದಲ್ಲಿ ಇನ್ನೂ ಸುಲಭವಾಗಿ ಕಾಣಬಹುದು. (ಮ) ಸರ್ವಪೂಜ್ಯನು. ||೬೮೦||

(೬೮೧ನೇ ನಾಮವು) ಕುಂಭಃ,

ಓಮ್|| ಕುಂಭಾಯನಮಃ.

(ಶಂ|| ಭಾ) ಕುಂಭದಲ್ಲಿ ಸರ್ವವೂ ಅಡಗಿರುವಂತೆ ಇವನಲ್ಲಿ ಸಮಸ್ತವೂ ಒಳಗೊಂಡಿರುವುದು. (ವಿ|| ಭಾ) ಅಲ್ಲಲ್ಲಿ ಅವರವರು ಪರಿಚಯ ಮಾಡಿರುವ ಸಜಾತೀಯವಾದ ಸೌಂದರ್ಯಾದಿಗಳೇ ಪರಮಪುರುಷನಿಗೂ ಇವು ಇರುವಂತೆ ಅಪೇಕ್ಷಿಸಲ್ಪಡುವಂತವನು. (ಅಥವಾ) ಕು ಎಂದರೆ ಭೂಮಿಯು, ಧ್ಯಾನಾರಾಧನಾದಿಗಳಿಗೆಲ್ಲವೂ ಸೀಮಾಭೂಮಿಯಾಗಿರುವ ಕ್ಷೇತ್ರಾಯತನಗಳಲ್ಲಿ ಜನ್ಮಮರಣ ರೂಪವಾದ ಸ್ವಲ್ಪ ಸಂಬಂಧಮಾತ್ರದಿಂದಲೆ ಆಶ್ರಿತ ವರ್ಗಕ್ಕೆ ಯಮಕಿಂಕರಾದಿಗಳಿಂದುಂಟಾಗುವ ಮಹಾಭಯವನ್ನು ನಿವರ್ತಿಸುವಂತವನು. ಈ ಪ್ರಕಾರವಾಗಿ ಪರಮಪುರುಷನು

ಅರ್ಚಾರೂಪಿಯಾಗಿ ಸಾನ್ನಿಧ್ಯವನ್ನು ಹೊಂದಿರುವ ದಿವ್ಯ ಕ್ಷೇತ್ರಗಳಲ್ಲಿ ಜನ್ಮ ಮರಣವೆಂಬ ಸ್ವಲ್ಪ ಸಂಬಂಧವನ್ನು ಹೊಂದಿದವರಿಗೆ ಅವರವರ ಶುದ್ಧಿಯನ್ನನುಸರಿಸಿ ತಾನೇ ಆಗಲಿ ಅಥವಾ ತನ್ನ ಚಕ್ರದ ಮೂಲಕ ವಾಗಿಯಾಗಲೀ ಅವರನ್ನು ಶುದ್ಧಪಡಿಸಿ ಅವರಿಗೆ ಅದೇ ಜನ್ಮದಲ್ಲಿಯೋ ಅಥವಾ ಪುಣ್ಯವಾದ ಜನ್ಮಾಂತರದಲ್ಲಿಯೋ ಕ್ರಮವಾಗಿ ತನ್ನ ಪ್ರಾಪ್ತಿಯನ್ನು ಕೊಡುವ ಪ್ರಕಾರವು ಹೇಳಲ್ಪಟ್ಟಂತೆ ತಿಳಿಯಬೇಕು. (ಮ) ಕುಂಭದಂತೆ ಗಂಭೀರನಾದವನು. ‖೬೪೧‖

(೬೪೨ನೇ ನಾಮವು) ವಿಶುದ್ಧಾತ್ಮಾ,

ಓಮ್‖ ವಿಶುದ್ಧಾತ್ಮನೇನಮಃ.

(ಶಂ‖ ಭಾ) ಸತ್ವ ರಜಸ್ತಮಸ್ಸುಗಳೆಂಬ ಗುಣತ್ರಯವನ್ನತಿಕ್ರಮಿಸಿದವನಾದಕಾರಣ ಪರಿಶುದ್ಧಾತ್ಮನು. (ವಿ‖ ಭಾ) ತನ್ನ ಚರಣಾರವಿಂದಗಳನ್ನು ಆಶ್ರಯಿಸಿದ ಭಕ್ತರಲ್ಲಿ ತಾರತಮ್ಯವಿಲ್ಲದೆ ಸರ್ವರಿಗೂ ತನ್ನ ಸರ್ವಸ್ವವನ್ನು ಕೊಡುವುದರಿಂದ ಪರಿಶುದ್ಧವಾದ ಸ್ವಭಾವವುಳ್ಳವನು. ‖೬೪೨‖

(೬೪೩ನೇ ನಾಮವು) ವಿಶೋಧನಃ,

ಓಮ್‖ ವಿಶೋಧನಾಯನಮಃ,

(ಶಂ‖ಭಾ) ಸ್ಮರಣಮಾತ್ರದಿಂದ ಪಾಪ ಪರಿಹಾರಕನು. (ವಿ‖ ಭಾ) ಭಗವತ್ಕ್ಷೇತ್ರದಲ್ಲಿ ಮರಣಹೊಂದಿದವರಿಗೆ ಶುದ್ಧಿಯನ್ನುಂಟು ಮಾಡಿ ತನ್ನ ಸನ್ನಿಧಿಯನ್ನು ಹೊಂದುವುದಕ್ಕೆ ಅರ್ಹರನ್ನಾಗಿ ಮಾಡುವಂತವನು. ‖೬೪೩‖

(೬೪೪ನೇ ನಾಮವು) ಅನಿರುದ್ಧಃ,

ಓಮ್‖ ಅನಿರುದ್ಧಾಯನಮಃ.

(ಶಂ‖ ಭಾ) ವಾಸುದೇವಾದಿಯಾದ ನಾಲ್ಕು ವ್ಯೂಹಗಳಲ್ಲಿಯೂ ಶತ್ರುಗಳಿಂದ ನಿರೋಧಿಸಲ್ಪಡದವನು. (ವಿ‖ ಭಾ) ಇನ್ನು ಮುಂದೆ ಕ್ಷೇತ್ರ ವಿಶೇಷಗಳಲ್ಲಿ ಸಾನ್ನಿಧ್ಯವನ್ನು ಹೊಂದುವಾಗ ಹಿಂದೇ ಹೇಳಿರು

ವಂತೆ ವ್ಯೂಹರೂಪದಿಂದಲೂ ರಾಮ ಕೃಷ್ಣಾದಿ ವಿಭವ ರೂಪದಿಂದಲೂ ಇರುವಂತಹ ಪ್ರಕಾರವು ತಿಳಿಸಲ್ಪಡುವುದು. ಅನಿರುದ್ಧಃ-" ಜನಾರ್ದನಾಖ್ಯಯಾ ದೇವಸ್ತ್ವ ನಿರುದ್ಧೋ ಜಗತ್ಪ್ರಭುಃ | ಭೂಭಾಗೆ ವಾಸುಭಾಂಡಾಖ್ಯೇ ನಿತ್ಯ ಸನ್ನಿಹಿತಸ್ಸ್ಥಿತಃ ‖ " ಎಂಬಂತೆ ಭೂಮಿಯಲ್ಲಿ ವಾಸುಭಾಂಡವೆಂಬ ಕ್ಷೇತ್ರದಲ್ಲಿ ಜನಾರ್ದನನೆಂಬ ದಿವ್ಯ ನಾಮವುಳ್ಳ ಅನಿರುದ್ಧ ಸ್ವರೂಪಿಯು. (ಮ) ಯಾರಿಂದಲೂ ನಿರೋಧಿಸಲ್ಪಡದವನು. ‖೬೪೪‖

## (೬೪೫ನೇ ನಾಮವು) ಅಪ್ರತಿರಥಃ,
## ಓಮ್‖ ಅಪ್ರತಿರಥಾಯನಮಃ.

(ಶಂ‖ ವಿ‖ ಮ) ಇವನೆ ಜನಾರ್ದನನಾದಕಾರಣ ತನಿಗೆ ಅಭಿಮತರಲ್ಲದ ಜನರನ್ನು ನಾಶಪಡಿಸುವ ವಿಷಯದಲ್ಲಿ ಯದುರಿಲ್ಲದ ಮಹಾವೀರನು. ‖೬೪೫‖

## (೬೪೬ನೇ ನಾಮವು) ಪ್ರದ್ಯುಮ್ನಃ,
## ಓಮ್‖ ಪ್ರದ್ಯುಮ್ನಾಯನಮಃ.

(ಶಂ‖ ಮ) ಅಧಿಕವಾದ ಧನವುಳ್ಳವನು. (ಶಂ) ಅಥವಾ ವಾಸುದೇವ ಸಂಕರ್ಷಣ ಪ್ರದ್ಯುಮ್ನಾ ನಿರುದ್ಧರೆಂಬ ನಾಲ್ಕು ವ್ಯೂಹಾತ್ಮಕನು. (ವಿ‖ ಭಾ) ತನ್ನನ್ನು ಪ್ರಕಾಶಪಡಿಸುವಂತವನು. ‖೬೪೬‖

## (೬೪೭ನೇ ನಾಮವು) ಅಮಿತವಿಕ್ರಮಃ,
## ಓಮ್‖ ಅಮಿತವಿಕ್ರಮಾಯನಮಃ.

(ವಿ‖ ಭಾ) ಮೂರುಲೋಕಗಳಲ್ಲಿಯೂ ಅಡಗದ ಮಹಾ ಪರಾಕ್ರಮಶಾಲಿಯು. (ಶಂ‖ ಮ) ಮಿತಿಮಿರಿದ ಪರಾಕ್ರಮವುಳ್ಳವನು. ‖೬೪೭‖

ಈ (೬೮)ನೇ ಶ್ಲೋಕದಲ್ಲಿ ಪ್ರಕೃತಗಳಾದ (೯) ನಾಮಗಳಿಗೂ " ಭಕ್ತಾಭ್ಯಂತರಬಾಹೀಕ ಚಕ್ಷುರುನ್ನಯನಕ್ಷಮಂ | ದಿವ್ಯತೇಜಸ್ಸ ದಾಯಸ್ಯ " ಅರ್ಚಿಷ್ಮಾನ್ " (೬೫೯) ಇತಿಕಥ್ಯತೇ ‖ ಅಚಾರ್ಯ್ಯಚಾರ್

ವತಾರೋಽಸ್ಯ ಕ್ಷೇತ್ರಾಯತನ ಸದ್ಮಸು । ಸಂಜಾತೇ "ತ್ರ್ಯರ್ಚಿತಃ" (೬೪೦) ಪ್ರೋಕ್ತಸ್ಸರ್ವಾರ್ಥೋ ವಾಂಛಿತಪ್ರದಃ ॥ ಕಾಮ್ಯತೇಽಯಸ್ಸಜಾತೀಯೈರ್ಗುಣೈಃ "ಕುಂಭಃ" (೬೪೧) ಪ್ರಕೀರ್ತಿತಃ । ಭಾತೀತಿ 'ಕುಂಭೋ' ನಿತ್ಯಂಹಿ ಷಡರ್ಣೋ ಭಯನಾಶಕಃ ॥ ಸರ್ವಾಶ್ರಿತೇಷ್ವಶೇಷೇಣ ಸರ್ವಸ್ವತ್ಯಾಗತಸ್ಸದಾ । "ವಿಶುದ್ಧಾತ್ಮಾ" (೬೪೨) ಚಷ್ಣೋರ್ಣೋಕ್ತೋ ವಿಭವಸ್ಸಾಸ್ಯ "ದ್ವಿಶೋಧನಃ" (೬೪೩)॥ ವಾಸುಭಾಂಡಾಖ್ಯಭೂಭಾಗೇನಿತ್ಯಂ ಸನ್ನಿಹಿತಸ್ಸ್ಥಿತಃ । "ಅನಿರುದ್ಧ" (೬೪೪) ಇತಿಖ್ಯಾತೋಽವಸ್ವರ್ಣೋ ಮನುರುತ್ತಮಃ ॥ ಪ್ರತಿಪಕ್ಷಸ್ಯರಾಹಿತ್ಯಾ ದ್ಬಹ್ವನಿಷ್ಟ ಜನಾರ್ದನಃ । ವಿಖ್ಯಾತೋ "ಹ್ಯಪ್ರತಿರಥಃ" (೬೪೫) ಸವಾರ್ಣಶ್ಶತ್ರುನಾಶಕಃ ॥ ಆತ್ಮಪ್ರದ್ಯೋ ತನತ್ವಾಚ್ಚ "ಪ್ರದ್ಯುಮ್ನ" (೬೪೬) ಇತಿಕಥ್ಯತೇ । ಅಧಿಷ್ಠಾಯ ಸ್ಥಿತಸ್ಸಾಕ್ಷಾ ದ್ಭಕ್ತಾನಾಂ ಸುಗತಿಪ್ರದಃ ॥ ಲೋಕತ್ರಯೇಽಸ್ಯ ಪರ್ಯಾಪ್ತ ವಿಕ್ರಮೋ "ಉಮಿತವಿಕ್ರಮಃ" (೬೪೭) ಎಂಬಂತೆ ವಿವೃತಿಯನ್ನು ಕಾಣಬಹುದು.

ಮೂ॥ ಕಾಲನೇಮಿನಿಹಾ ಶೌರಿ ಶ್ಶೂರ ಶ್ಶೂರ ಜನೇಶ್ವರಃ । ತ್ರಿಲೋಕಾತ್ಮಾ ತ್ರಿಲೋಕೇಶಃ ಕೇಶವಃ ಕೇಶಿಹಾಹರಿಃ ॥೬೯॥

(೬೪೮ನೇ ನಾಮವು) ಕಾಲನೇಮಿನಿಹಾ,

ಓಮ್॥ ಕಾಲನೇಮಿನಿಘ್ನೇನಮಃ.

(ಶಂ॥ ಭಾ) ಕಾಲನೇಮಿಯೆಂಬ ರಾಕ್ಷಸನನ್ನು ಕೊಂದವನು. (ವಿ॥ ಭಾ) ಹಿಂದೆ ಹೇಳಲ್ಪಟ್ಟ ದಿವ್ಯ ಕ್ಷೇತ್ರಾದಿಗಳಲ್ಲಿ ಅರ್ಚಾರೂಪಿಯಾಗಿದ್ದುಕೊಂಡು ಕಲಿಕಾಲುಷ್ಯವನ್ನು ನಾಶಪಡಿಸುವಂತವನು. ಇದಕ್ಕೆ "ಅವಿದ್ಯಾಖ್ಯಾಚಯಾನೇಮಿಃ ಕಾಲಚಕ್ರಸ್ಯ ದರ್ಧರಾ। ಸಾಮಯಿಕಾಯಂ ಸಮಾಶ್ರಿತ್ಯ ವಿಗ್ರಹಂ ವಿಧುನೋತಿಚ ॥ ಧ್ಯಾಯೇತ್ತತ್ಪ್ರಸರಘ್ನಂಚದೇವಂ" ಎಂಬ ಕಾಲನೇಮಿಯನ್ನು ಕೊಂದ ಪರಮಾತ್ಮನ ಧ್ಯಾನವನ್ನರಿಯಬೇಕು. ॥೬೪೮॥

(ಪರಿಹರಿಸುವುದಕ್ಕೆ ಅಶಕ್ಯವಾಗಿರುವ ಕಾಲಚಕ್ರದ ಅವಿದ್ಯಾಎಂಬ ಯಾವ ನೇಮಿಯುಂಟೋ ಅದನ್ನು ನಾಶಪಡಿಸುವನೆಂದು ಅರ್ಥವು)

## (೬೪೯ನೇ ನಾಮವು) ಶೌರಿಃ,
## ಓಮ್॥ ಶೌರಯೇನಮಃ.

(ಶಂ॥ ಮ) ಶೂರರಾದವರ ಕುಲದಲ್ಲಿ ಹುಟ್ಟಿದವನು. (ಶಂ) ಅಥವಾ ಪರಾಕ್ರಮಶಾಲಿಯು. (ವಿ॥ ಭಾ) ಉತ್ಪಲಾವತಕವೆಂಬ ಕ್ಷೇತ್ರದಲ್ಲಿ 'ಶೌರಿ' ಎಂಬ ದಿವ್ಯನಾಮವನ್ನು ಧರಿಸಿರುವಂತವನು. ಶೂರನಾದ ವಸುದೇವರ ಪುತ್ರನಾದುದರಿಂದಲೂ 'ಶೌರಿಃ' ಎನ್ನಲ್ಪಡುವನು ॥೬೪೯॥

## (೬೫೦ನೇ ನಾಮವು) ಶೂರಃ,
## ಓಮ್॥ ಶೂರಾಯನಮಃ.

(ವಿ॥ ಭಾ) ಚಿತ್ರಕೂಟವೆಂಬ ಪರ್ವತದಲ್ಲಿ ರಾಕ್ಷಸಸಮೂಹಕ್ಕೆ ನಾಶಕನಾಗಿರುವ ಪದ್ಮಪತ್ರಾಕ್ಷನಾದ 'ರಾಮನು' ಶೂರಃ, ಎನ್ನಲ್ಪಡುವನು. ॥೬೫೦॥

(ಇಲ್ಲಿ "ಕಾಲನೇಮಿನಿಹಾವೀರಶ್ಶೌರಿಃ" ಎಂಬದಾಗಿ (ಮ॥ ಶಂ) ಪಾಠವು ಆವಾಗ ವೀರಶಬ್ದಕ್ಕೆ ಶೂರನೆಂದರ್ಥವು)

## (೬೫೧ನೇ ನಾಮವು) ಶೂರಜನೇಶ್ವರಃ,
## ಓಮ್॥ ಶೂರಜನೇಶ್ವರಾಯನಮಃ.

(ವಿ॥ ಮ) ಶೂರರಾದ ಜನರೆಲ್ಲರಿಗೂ ಪ್ರಭುವು. (ಶಂ) ಶೂರರಾದ ಇಂದ್ರಾದಿ ದೇವತೆಗಳಿಗೆ ಇಷ್ಟನು. ॥೬೫೧॥

## (೬೫೨ನೇ ನಾಮವು) ತ್ರಿಲೋಕಾತ್ಮಾ,
## ಓಮ್॥ ತ್ರಿಲೋಕಾತ್ಮನೇನಮಃ.

(ಶಂ॥ ಬಾ) ಮೂರುಲೋಕಗಳಿಗೂ ಅನ್ತರ್ಯಾಮಿಾ, ಅಥವಾ ತ್ರಿಲೋಕಗಳಿಗಿಂತಲೂ ಭಿನ್ನನಾದವನಲ್ಲವು. (ವಿ॥ ಭಾ) ಮಗಧ ದೇಶ

ದಲ್ಲಿ "ಮಗಧಾ ಮಂಡಲೆ ವಿಪ್ರಮಹಾಬೋಧ ಧರಾಶ್ರಿತಃ । ಸಂಸ್ಥಿತೋ ಲೋಕನಾಥಾತ್ಮಾ ದೇವದೇವೋ ಜನಾರ್ದನಃ" ಎಂಬಂತೆ ತ್ರಿಲೋಕನಾಥನೆಂಬ ದಿವ್ಯನಾಮದಿಂದ ಪ್ರಸಿದ್ಧಿ ಹೊಂದಿದವನು. ಮೂರುಲೋಕಗಳಿಗೂ ಆತ್ಮಾ ಎಂದರೆ ಭಕ್ತಾನುಗ್ರಹಾರ್ಥವಾಗಿ ಸದಾ ಮೂರುಲೋಕಗಳಲ್ಲಿಯೂ ಓಡಿಯಾಡುವನೆಂದರ್ಥವು. (ಮ) ತ್ರಿಲೋಕಗಳಿಗೂ ಸ್ವಾಮಿಯು. ‖೬೫೦‖

## (೬೫೧ನೇ ನಾಮವು) ತ್ರಿಲೋಕೇಶಃ,
## ಓಮ್‖ ತ್ರಿಲೋಕೇಶಾಯನಮಃ.

(ಶಂ‖ ಭಾ) ತ್ರಿಲೋಕದಲ್ಲಿರುವ ಸರ್ವರೂ ಇವನಿಂದ ಆಜ್ಞಾಪಿಸಲ್ಪಟ್ಟು ತಮ್ಮ ತಮ್ಮ ಕಾರ್ಯಗಳಲ್ಲಿರುವುದರಿಂದ; (ವಿ‖ ಭಾ) ಪ್ರಾಗ್ಜ್ಯೋತಿಷವೆಂಬ ಪಟ್ಟಣದಲ್ಲಿ ವಿಶ್ವೇಶ್ವರನೆಂಬ ದಿವ್ಯನಾಮದೊಡನೆ ಇರುವುದರಿಂದ; 'ತ್ರಿಲೋಕೇಶಃ' ಎನ್ನಲ್ಪಡುವನು. ‖೬೫೧‖

## (೬೫೨ನೇ ನಾಮವು) ಕೇಶವಃ,
## ಓಮ್‖ ಕೇಶವಾಯನಮಃ.

(ಶಂ‖ ಭಾ) ಕೇಶ ಶಬ್ದದಿಂದ ಸೂರ್ಯಾದಿಗಳಲ್ಲಿರುವ ಕಿರಣಗಳು ಹೇಳಲ್ಪಡುವುವು. ಅವು ವುಳ್ಳವನು. ಇದಕ್ಕೆ "ಅಂಶವೋಯೇ ಪ್ರಕಾಶಂತೆ ಮಮತೇ ಕೇಶಸಂಜ್ಞಿತಾಃ । ಸರ್ವಜ್ಞಾಃ ಕೇಶವಂತಸ್ಮಾ ನ್ಮಾಮಾಹುರ್ದ್ವಿಜ ಸತ್ತಮಾಃ" (ಭಾರ‖ ಶಾ‖ ೩೪೧‖ ೪೭) ಎಂಬೀ ಪ್ರಮಾಣವು ಆಧಾರವಾಗಿರುವುದು. ಅಥವಾ ಬ್ರಹ್ಮ ವಿಷ್ಣು ಶಿವಾತ್ಮಕವಾದ ತ್ರಿಶಕ್ತಿಗಳು ಕೇಶಗಳೆನ್ನಲ್ಪಡುವುವು; "ಮತ್ಕೇಶೌ ವಸುಧಾತಲೆ" (ವಿಷ್ಣುಪು) ಎಂಬ ಪ್ರಮಾಣದಲ್ಲಿ ಈ ಅರ್ಥವು ತೋರುವುದು. ಅಂತಹ ಶಕ್ತಿಗಳುಳ್ಳವನು ಕೇಶವನು. ಕ ಎಂಬ ಅಕ್ಷರದಿಂದ ಹೇಳಲ್ಪಟ್ಟ ಚತುರ್ಮುಖನೂ ಈಶಶಬ್ದವಾಚ್ಯನಾದ ರುದ್ರನೂ ಇವನ ಅಂಶದಿಂದ ಹುಟ್ಟಿದವರಾದ ಕಾರಣ ಕೇಶವನೆಂತಲೂ ಹೇಳಬಹುದು. (ವಿ‖ ಭಾ) ಮಧುರಾ ಮತ್ತು ಕಾಶೀಪಟ್ಟಣದಲ್ಲಿ ಕೇಶವನಾಮದಿಂದ ಸರ್ವರಿಗೂ ಸೇವ್ಯ

ನಾಗಿರುವಂತವನು. (ಮ) ಕೇಶಶಬ್ದಕ್ಕೆ ಸೂರ್ಯರಶ್ಮಿಪರವಾದ ಅರ್ಥವು ಯುಕ್ತವಲ್ಲವು. ರಾಮಕೃಷ್ಣಾದ್ಯಂಶಗಳೇ ಅರ್ಥವು. ಬ್ರಹ್ಮರುದ್ರ ನಿಯಾಮಕನೆಂತಲೂ ಹೇಳಹುದು. ಇದರಿಂದ " ಕೇಶವಃ ಪುರುಷೋತ್ತಮಃ " ಎಂಬ ನಾಮಕ್ಕಿಂತಲೂ ಅರ್ಥಭೇದವು ಸಿದ್ಧವು. ‖೬೫೪‖

## (೬೫೫ನೇ ನಾಮವು) ಕೇಶಿಹಾ,

## ಓಮ್‖ ಕೇಶಿಘ್ನೇನಮಃ.

(ಶಂ‖ ವಿ‖ ಮ) ಕೇಶಿ ಎಂಬ ರಾಕ್ಷಸನನ್ನು ಕೊಂದವನು. (ವಿ) ಎಂದರೆ 'ಕೇಶವಂ ಕೇಶಿಹಂ ತಾರಂ' ಎಂಬಂತೆ ಕೇಶವನೆಂಬ ನಾಮವುಳ್ಳವನೆಂತಲೇ ಅರ್ಥವು. ‖೬೫೫‖

## (೬೫೬ನೇ ನಾಮವು) ಹರಿಃ,

## ಓಮ್‖ ಹರಯೇನಮಃ.

(ಶಂ‖ ಭಾ) ಸಂಸಾರ ಮೂಲೋಚ್ಛೇದಕನು. (ಮ) ಪಾಪಪರಿಹಾರಕನು. (ವಿ‖ ಭಾ) ಗೋವರ್ಧನಪರ್ವತದಲ್ಲಿ ಹರಿ ಎಂಬ ನಾಮದೊಡನೆ ಸರ್ವಸೇವ್ಯನಾಗಿರುವಂತವನು. ‖೬೫೬‖

ಈ ೬೯ನೇ ಶ್ಲೋಕದಲ್ಲಿರುವ ೯ ನಾಮಗಳಿಗೂ "ಕಾಲಚಕ್ರಸ್ಯಯಾ ನೇಮಿ ರವಿದ್ಯಾಖ್ಯಾಚ ದುರ್ಧರಾ | ತಾಂನಾಶಯತಿ ಯಸ್ಮಾತ್ಸಾ " ಕಾಲನೇಮಿನಿಹಾ" (೬೪೮) ಸ್ಮೃತಃ ‖ ಅಷ್ಟಾಕ್ಷರೋ ಮನುರಯ ಮವಿದ್ಯಾ ಮೂಲಮೋಚಕಃ | ಶೌರಿನಾಮ್ನಾ ಸ್ಥಿತ " ಶೌರಿ " (೬೪೯) ರುತ್ಪಲಾವರ್ತ್ತಕೇಶುಭೆ | ಸರ್ವರಕ್ಷಃಕ್ಷಯಕರೊ " ಶೂರ " (೬೫೦) ಇತ್ಯಭಿಧೀಯತೆ ‖ ಪರಾಕ್ರಮ ಜನೇಶತ್ವ ಸ್ಮೃತ " ಶೂರ ಜನೇಶ್ವರಃ " (೬೫೧) ಯಸ್ಮಾತ್ತತ್ಯೇನ ಲೋಕಾಂ ಸ್ತ್ರೀನ್ ಭಕ್ತಾನುಗ್ರಹಕಾಮ್ಯಯಾ | ಗಚ್ಛತೀತಿ " ತ್ರಿಲೋಕಾತ್ಮಾ" (೬೫೨) ವಸ್ವರ್ಣೋರ್ಭೂತಿದಾಯಕಃ‖ ತ್ರಿಲೋಕಾನಾಮೀಶತಯಾ " ತ್ರಿಲೋಕೇಶಃ " (೬೫೩) ಪ್ರಕೀರ್ತಿತಃ| ಬ್ರಹ್ಮೇಶಯೋಸ್ಸ್ವಾಂಗ ಜತ್ವಾ " ತ್ಕೇಶವಃ " (೬೫೪) ಪರಿಕೀರ್ತಿತಃ ‖

ಅಸುರಂ ಕೇಶಿನಾಮಾನಂ ಹತವಾನ್ "ಕೇಶಿಹಾ" (೬೫೫) ಸ್ಮೃತಃ | ಭಕ್ತಾನಾಂ ದುಃಖಹರಣಾದ್ವರ್ಣ ಶ್ರೈಷ್ಠ್ಯಾ "ದ್ಧರಿಃ" (೬೫೬) ಸ್ಮೃತಃ" ಎಂಬಂತೆ ವಿವೃತಿಯನ್ನು ಕಾಣಬೇಕು.

ಮೂ॥ ಕಾಮದೇವಃ ಕಾಮಪಾಲಃ ಕಾಮೀ ಕಾಂ
ತಃ ಕೃತಾಗಮಃ | ಅನಿರ್ದೇಶ್ಯವಪು ರ್ವಿಷ್ಣು
ರ್ವೀರೋ ಽನಂತೋ ಧನಂಜಯಃ ॥೭೦॥

(೬೫೭ನೇ ನಾಮವು) ಕಾಮದೇವಃ,

ಓಮ್॥ ಕಾಮದೇವಾಯನಮಃ.

(ಶಂ॥ ಭಾ) ಸರ್ವರಿಗೂ ಧರ್ಮಾರ್ಥಕಾಮಮೋಕ್ಷಗಳೆಂಬ ಸರ್ವ ಪುರುಷಾರ್ಥಗಳನ್ನು ಕೊಡುವಂತವನು. (ವಿ॥ ಭಾ) ಶಂಕರಾಲಯಕ್ಷೇತ್ರದಲ್ಲಿ ಸರ್ವರಿಗೂ ಸರ್ವ ಪುರುಷಾರ್ಥಗಳನ್ನು ಕೊಡುವುದರಿಂದ ಕಾಮದೇವನೆಂಬ ನಾಮವನ್ನು ವಹಿಸಿ ಅಪ್ಸರಸ್ಸುಗಳಿಂದ ಪೂಜಿಸಲ್ಪಡುವಂತವನು. (ಮ) ಸೌಂದರ್ಯದಿಂದ ಅತ್ಯಂತವಾಗಿ ಪ್ರಕಾಶಿಸುವಂತವನು. ಅದವಾ ತನ್ನ ಸೌಂದರ್ಯದಿಂದಲೇ ಸರ್ವರನ್ನೂ ಪರವಶರನ್ನಾಗಿ ಮಾಡಿ ಜಯಿಸುವಂತವನು. ॥೬೫೭॥

(೬೫೮ನೇ ನಾಮವು) ಕಾಮಪಾಲಃ,

ಓಮ್॥ ಕಾಮಪಾಲಾಯನಮಃ.

(ಶಂ॥ ಭಾ) ಅಪೇಕ್ಷಿಸುವಂತವರ ಇಷ್ಟಾರ್ಥಗಳನ್ನು ಕೊಡುವಂತವನು. (ಮ) ಭಕ್ತರ ಅಪೇಕ್ಷಿತಗಳನ್ನು ಕೊಡುವಂತವನು. (ವಿ॥ ಭಾ) ತನ್ನಿಂದ ಕೊಡಲ್ಪಟ್ಟವುಗಳನ್ನು ತಾನೇ ಪರಿಪಾಲಿಸುವಂತವನು. ॥೬೫೮॥

(೬೫೯ನೇ ನಾಮವು) ಕಾಮೀ,

ಓಮ್॥ ಕಾಮಿನೇನಮಃ.

(ಶಂ॥ ಮ) ಪೂರ್ಣಕಾಮಸ್ವಭಾವನಾದಕಾರಣ 'ಕಾಮೀ' (ವಿ॥ ಭಾ) ಪುರುಷಾರ್ಥಗಳನ್ನು ಅಧಿಕವಾಗಿ ಕೊಡುವುದರಿಂದ ಅಪೇಕ್ಷಿಸಲ್ಪಡುವಂತವನು. ॥೬೪೯॥

## (೬೭೦ನೇ ನಾಮವು) ಕಾಂತಃ,

## ಓಮ್॥ ಕಾಂತಾಯನಮಃ.

(ಶಂ॥ ಭಾ) ಮನೋಜ್ಞವಾದ ದಿವ್ಯದೇಹವುಳ್ಳವನು. (ಶಂ॥ ಮ) ಚತುರ್ಮುಖನಿಗೆ ಅವನ ದ್ವಿಪರಾರ್ಧಾವಸಾನ ಸಮಯದಲ್ಲಿ ಇವನಿಂದ ನಾಶವುಂಟಾಗುವುದರಿಂದ 'ಕಾಂತಃ' ಎನ್ನಲ್ಪಡುವನು. (ವಿ॥ ಭಾ) ತಾನೂ ಮನೋಹರನಾಗಿರುವಂತವನು. ಆದುದರಿಂದಲೇ ತಾನೆ ಅವನನ್ನು ಅಪ್ಸರಸ್ಸುಗಳುಕೂಡ ಅರ್ಚಿಸುವದು. ಈ ಪ್ರಕಾರವೇ ಮುಂದೆಯೂ ಅಲ್ಲಲ್ಲಿ ದಿವ್ಯನಾಮಗಳ ಸಾಮರ್ಥ್ಯದಿಂದ ಆಯಾ ಕ್ಷೇತ್ರಸಂಬಂಧವನ್ನು ಊಹಿಸಿಕೊಳ್ಳಬೇಕು. ॥೬೭೦॥

## (೬೭೧ನೇ ನಾಮವು) ಕೃತಾಗಮಃ,

## ಓಮ್॥ ಕೃತಾಗಮಾಯನಮಃ.

(ಶಂ॥ ಮ) ಶ್ರುತಿಸ್ಮೃತ್ಯಾದಿರೂಪಗಳಾದ ಆಗಮಗಳನ್ನುಂಟು ಮಾಡಿದವನು. "ವೇದಾಶ್ಶಾಸ್ತ್ರಾಣಿ ವಿಜ್ಞಾನಮೇತತ್ಸರ್ವಂ ಜನಾರ್ದನಾತ್ ॥ ಶ್ರುತಿಸ್ಮೃತಿ ರ್ಮಮೈವಾಜ್ಞಾ" ಇತ್ಯಾದಿಗಳು ಈ ಅರ್ಥದಲ್ಲಿ ಪ್ರಮಾಣಗಳು. (ವಿ॥ ಭಾ) ಇನ್ನು ಮುಂದೆ ಶಕ್ತಿಗಳಿಗೆಲ್ಲವೂ ಈಶನಾದ ಅವತಾರವು ಹೇಳಲ್ಪಡುವದು. ನಾನಾವಿಧಗಳಾದ ಮಂತ್ರವಿದ್ಯೆಗಳನ್ನು ಮಾಡಿದವನು. ॥೬೭೧॥

## (೬೭೨ನೇ ನಾಮವು) ಅನಿರ್ದೇಶ್ಯವಪುಃ,

## ಓಮ್॥ ಅನಿರ್ದೇಶ್ಯವಪುಷೇನಮಃ.

(ಶಂ॥ ಭಾ) ಗುಣಾತೀತನಾದ ಕಾರಣ ಇಂತಾದ್ದು ಅಂತಾದ್ದೆಂ

ದು ನಿರೂಪಿಸಲಿಕ್ಕೆ ಆಗದ ದೇಹವುಳ್ಳವನು. (ವಿ|| ಭಾ) ಅಯಾ ಯು ಗಾನುಸಾರವಾಗಿ ಅವತಾರ ಶರೀರಪರಿಗ್ರಹವನ್ನು ಮಾಡುವುದರಿಂದ ಅವನ ಶರೀರವು ಇಂತಾದ್ದೆಂದು ಹೇಳುವದಕ್ಕೆ ಅನರ್ಹವಾಗಿರುವದು. (ಮ) ಇಂತಾದ್ದೆಂದು ನಿರ್ದೇಶಿಸುವದಕ್ಕೆ ಅಶಕ್ಯವಾದ ಬ್ರಹ್ಮಾಂಡಕ್ಕೆ ಹೊರಗಾದ ಪ್ರದೇಶದಲ್ಲಿಯೂ ವ್ಯಾಪಿಸಿರುವ ದೇಹವುಳ್ಳವನು. ಇದರಿಂದ 'ಅನಿರ್ದೇಶ್ಯವಪು ಶ್ರೀಮಾನ್' ಎಂಬ ನಾಮದೊಡನೆ ಭೇದಸಿದ್ಧಿಯು. ||೬೬೦||

## (೬೬೩ನೇ ನಾಮವು) ವಿಷ್ಣುಃ,

### ಓಮ್|| ವಿಷ್ಣವೇನಮಃ.

(ಶಂ|| ಭಾ) ಭೂಮ್ಯಂತರಿಕ್ಷಗಳನ್ನು ವ್ಯಾಪಿಸಿರುವ ಅಧಿಕವಾದ ಕಾಂತಿಯುಳ್ಳವನು. (ವಿ|| ಭಾ) ಈ ರೀತಿಯಾದ ತನ್ನ ಆಜ್ಞಾಶಕ್ತಿಯಿಂದ ಸಮಸ್ತವನ್ನೂ ವ್ಯಾಪಿಸಿದವನು. (ಮ) ಸಮಸ್ತವಸ್ತುಗಳೂ ಇವಲ್ಲಿ ಪ್ರವೇಶಿಸುವುದರಿಂದ 'ವಿಷ್ಣುಃ' ಎನ್ನಲ್ಪಡುವನು ಇದರಿಂದ 'ವಿಶ್ವಂ ವಿಷ್ಣುಃ' ಎಂಬ ನಾಮದೊಡನೆ ಭೇದವು ಸಿದ್ಧಿಸುವದು. ||೬೬೩||

## (೬೬೪ನೇ ನಾಮವು) ವೀರಃ,

### ಓಮ್|| ವೀರಾಯನಮಃ.

(ಶಂ|| ಭಾ) ಗಮನವುಳ್ಳವನು. (ವಿ|| ಭಾ) ಸಾಧುಸಂತಾಪಕರಾದವರನ್ನು ತನ್ನ ಗದಾಚಕ್ರಾದಿಗಳಿಂದ ನಿರಾಕರಿಸುವಂತವನು. (ಮ) ಗರುಡನಿಂದ ಗಮನವುಳ್ಳವನು. ||೬೬೪||

## (೬೬೫ನೇ ನಾಮವು) ಅನಂತಃ,

### ಓಮ್|| ಅನಂತಾಯನಮಃ.

(ವಿ|| ಭಾ) ದೇಶಕಾಲವಸ್ತುಪರಿಚ್ಛೇದರಹಿತನು. ಎಂದರೆ ಸರ್ವ ದೇಶ ಸರ್ವ ಕಾಲ ಸರ್ವ ವಸ್ತು ಪರಿಪೂರ್ಣನೆಂದರ್ಥವು. (ಶಂ|| ಮ)

ಸರ್ವವ್ಯಾಪಿಯೂ ನಿತ್ಯನೂ ದೇಶಕಾಲಪರಿಚ್ಛೇದರಹಿತನೂ ಸರ್ವಗುಣ ಪರಿಪೂರ್ಣನೂ ಆದವನು. ॥೬೬೫॥

## (೬೬೬ನೇ ನಾಮವು) ಧನಂಜಯಃ,

## ಓಮ್॥ ಧನಂಜಯಾಯನಮಃ.

(ಶಂ॥ ಮ) "ಪಾಂಡವಾನಾಂ ಧನಂಜಯಃ" (ಗೀ॥ ೧೦) ಎಂಬಂತೆ ಅಧಿಕವಾದ ಧನವನ್ನು ಸಂಪಾದಿಸಿದ ಅರ್ಜುನಸ್ವರೂಪಿಯು. (ವಿ॥ ಭಾ) ಗುಣವಿಭೂತ್ಯಾದಿಗಳೆಲ್ಲವೂ ಹೀಗೆಯೇ ಅನಂತಗಳೆನ್ನುವದು ಈ ಮುಂದಿನ ನಾಮವು. ಧನಂಜಯಃ — ಧನವನ್ನು ಜಯಿಸಿದವನು ಎಂದರೆ–ಇದನ್ನು ನಾವು ಹೊಂದಬೇಕೆಂಬ ಅಪೇಕ್ಷೆಯೂ, ಸಂಪಾದಿಸಿದ ದ್ರವ್ಯವನ್ನು ತ್ಯಾಗಮಾಡದ ಲೋಭವೂ ಅದರ ರಕ್ಷಣದಲ್ಲಿ ಆಸಕ್ತಿಯೂ ಅದರಿಂದಲೇ ಜೀವಿಸುವದೆಂಬೀಮೊದಲಾದವುಗಳಿಂದ ಚಿನ್ನ ಬೆಳ್ಳಿ ರತ್ನ ಮೊದಲಾದವುಗಳು ಅಪೇಕ್ಷಿಸಲ್ಪಡುವವು. ಇವುಗಳಿಂದ ಪರಿಪೂರ್ಣನಿಗೆ ಆಗಬೇಕಾದ ಕಾರ್ಯವಿಲ್ಲವಾದುದರಿಂದ ಅವುಗಳನ್ನು ತಿರಸ್ಕರಿಸಿದವನೆಂದರ್ಥವು. ॥೬೬೬

ಈ ೭೦ನೇ ಶ್ಲೋಕದಲ್ಲಿ ಪ್ರಕೃತಗಳಾದ ೧೦ ನಾಮಗಳಿಗೂ "ಸರ್ವೇಷಾಂ ಕಾಮದತ್ವಾಚ್ಚ "ಕಾಮದೇವ" (೬೫೭) ಇತೀರಿತಃ। ದತ್ವಾತು ಪಾಲನಕರಃ "ಕಾಮಪಾಲಃ" (೬೫೮) ಪ್ರಕೀರ್ತಿತಃ॥ ಪ್ರದೇಯಾತಿಶಯಾ "ತ್ಕಾವಿ" (೬೫೯) "ಕಾನ್ತ" (೬೬೦) ಸ್ಸಾಸ್ತ್ರಕಮನೀಯಕಃ। ಮಂತ್ರವಿದ್ಯಾ ವ್ಯಂಜಕತ್ವಾ "ತ್ಕೃತಾಗಮಃ" (೬೬೧) ಇತೀರಿತಃ॥ ಯುಗಾನುಸಾರಿ ರೂಪತ್ವಾ "ದನಿರ್ದೇಶ್ಯವಪು" (೬೬೨) ಸ್ಸ್ಮೃತಃ। ಸ್ವಶಕ್ತ್ಯಾ ಜಗತೋವ್ಯಾಪ್ತೇ ರ್ಯದ್ವಾ ವಿಕ್ರಮಣಾತ್ಪ್ರತಃ। "ವಿಷ್ಣುಃ" (೬೬೩) ಸ್ಮೃತೋ ವಿಶೇಷೇಣ "ವೀರಃ" (೬೬೪) ಸ್ಸ್ಯಾತ್ಸಾಧು ದುಃಖಹಾ॥ ದೇಶತಃ ಕಾಲತೋವಾಪಿ ಗುಣತೋ ವಸ್ತುತೋಪಿವಾ। ಅವಧಿರ್ಯಸ್ಯ ನಾಸ್ತೀತಿಸೋ "ಽನಂತಃ" (೬೬೫) ಸಮುದಾಹೃತಃ॥ ಪ್ರೇಪ್ಸೋಪಾರ್ಜನಲೋಭಾದಿ ಯೋಗ್ಯತ್ವಾಧಿಕ್ಯತಸ್ತುತಃ। ಮಣಿಮೌಕ್ತಿಕರತ್ನಾನಿ ಹೇಮರೂಪ್ಯಾದಿಕಂಧನಂ।

ಯೋಽರ್ಧಾಕರೋತಿಸತತಂ "ಧನಂಜಯ" (೬೬೬) ಇತೀರಿತಃ " ಎಂ ಬಂತೆ ವಿವೃತಿಯನ್ನು ಕಾಣಬಹುದು.

## ಮೂ॥ ಬ್ರಹ್ಮಣ್ಯೋ ಬ್ರಹ್ಮಕೃದ್ಬ್ರಹ್ಮಾ ಬ್ರಹ್ಮ ಬ್ರಹ್ಮವಿವರ್ಧನಃ । ಬ್ರಹ್ಮವಿ ದ್ಬ್ರಾಹ್ಮಣೋ ಬ್ರಹ್ಮೀ ಬ್ರಹ್ಮಜ್ಞೋ ಬ್ರಾಹ್ಮಣಪ್ರಿಯಃ ॥೭೧॥

## (೬೬೭ನೇ ನಾಮವು) ಬ್ರಹ್ಮಣ್ಯಃ,

## ಓಮ್॥ ಬ್ರಹ್ಮಣ್ಯಾಯನಮಃ.

(ಶಂ॥ ಮ) "ಬ್ರಹ್ಮಸತ್ಯಂ ತಪೋವೇದಾಃ ॥ ತಪೋವೇದಾಶ್ಚ ಸತ್ಯಂಚ ಜ್ಞಾನಂಚ ಬ್ರಹ್ಮಸಂಜ್ಞಿತಂ " ಎಂಬ ಪ್ರಮಾಣಾನುಸಾರವಾಗಿ ಬ್ರಹ್ಮಶಬ್ದವು ತಪೋವೇದ ಸತ್ಯಜ್ಞಾನವಾಚಕಗಳಾಗಿ ಇವುಗಳಿಗಿಂತಲೂ ಪರಮಾತ್ಮನು ಹಿತನೆಂತಲಾದರೂ ಈ ತಪೋವೇದಾದಿಗಳನ್ನು ತಿಳಿದವನೆಂತಲಾದರೂ ಹೇಳಬಹುದು. (ವಿ॥ ಭಾ) ದೊಡ್ಡದಾದವುಗಳಿಗೆ ಹಿತನಾದವನು ;—ಎಂದರೆ ಅಪರಿಮಿತಗಳಾದ ಭೋಗ ಮೋಕ್ಷಗಳೆಂಬ ಈ ಎರಡೂ ಕರ್ಮಜ್ಞಾನಗಳಿಂದ ಅನುಭವಿಸಲ್ಪಡುವುದರಿಂದ ದೊಡ್ಡದಾದ ಚೇತನಕ್ಕೂ ಅಳವಿಲ್ಲದ ಭೋಗೋಪಕರಣವಾಗಿ ಪರಿಣಮಿಸುವುದರಿಂದ ದೊಡ್ಡದಾಗಿರುವ ಅಚೇತನಕ್ಕೂ ಸ್ಥಿತಿಭೋಗವೇ ಮೊದಲಾದ ಸರ್ವಾವಸ್ಥೆಗಳಿಗೂ ಕಾರಣನಾಗಿ ಹಿತವಾಗಿರುವನೆಂದರ್ಥವು. ॥೬೬೭॥

## (೬೬೮ನೇ ನಾಮವು) ಬ್ರಹ್ಮಕೃದ್ಬ್ರಹ್ಮಾ,

## ಓಮ್॥ ಬ್ರಹ್ಮಕೃದ್ಬ್ರಹ್ಮಣೇನಮಃ

(ವಿ॥ ಭಾ) ಪ್ರಕೃತಿಕಾರ್ಯಗಳಾದ ಮಹದಹಂಕಾರಾದಿ ವಿಸ್ತಾರಗಳನ್ನುಂಟುಮಾಡುವ ಚತುರ್ಮುಖನಿಗೂಕೂಡ ಸೇವ್ಯನಾಗಿ ನಿಯಮಿಸುವಂತವನು. (ಶಂ॥ ಮ) ಬ್ರಹ್ಮಕೃತ್—ಬ್ರಹ್ಮ ಎಂಬದಾಗಿ ಎರಡು

ನಾಮಗಳು. (ಶಂ) ತಪೋವೇದಾದಿಗಳಿಗೆ ಕರ್ತಾ ಆಗಿರುವಂತವನು. ಬ್ರಹ್ಮರೂಪದೊಡನೆ ಸಮಸ್ತವನ್ನೂ ಸೃಷ್ಟಿಸುವಂತವನು, ಬ್ರಹ್ಮ- "ಸತ್ಯಂಜ್ಞಾನಮನಂತಂ ಬ್ರಹ್ಮ ॥ ಪ್ರತ್ಯಸ್ತಮಿತಭೇದಂ ಯತ್ಸತ್ತಾ ಮಾತ್ರಮಗೋಚರಂ । ವಚಸಾಮಾತ್ಮ ಸಂವೇದ್ಯಂ ತದ್ಜ್ಞಾನಂ ಬ್ರಹ್ಮ ಸಂಜ್ಞಿತಂ" ॥ ಎಂಬೀ ಶ್ರುತಿವಿಷ್ಣುಪುರಾಣ ಪ್ರಮಾಣಾನುಸಾರವಾಗಿ ಅಧಿಕನಾದವನೂ ಸಮಸ್ತವನ್ನು ಆಕ್ರಮಿಸುವಂತವನೂ ಆದವನು ಈ ಮುಂದಿನ ಬ್ರಹ್ಮಶಬ್ದದಿಂದ ಹೇಳಲ್ಪಡುವನು.

ಬ್ರಹ್ಮವು ಸತ್ಯಜ್ಞಾನಾನಂದರೂಪವಾದದ್ದು. ಭೇದಶೂನ್ಯವೂ ಸತ್ತಾಮಾತ್ರವೂ ವಾಕ್ಕುಗಳಿಗೆ ಅಗೋಚರವೂ ಆತ್ಮದಿಂದ ತಿಳಿಯತಕ್ಕದ್ದೂ ಆದ ಜ್ಞಾನವು ಬ್ರಹ್ಮಶಬ್ದ ದಿಂದ ಹೇಳಲ್ಪಡುವದೆಂದೀಪ್ರಮಾಣದ್ವಯಾರ್ಥವು)

(ಮ) ಹಿರಣ್ಯಗರ್ಭನನ್ನು ಸೃಷ್ಟಿಸುವಂತವನು ಬ್ರಹ್ಮಕೃತ್, ಸೃಷ್ಟಿಗೋಸ್ಕರ ಚತುರ್ಮುಖಬ್ರಹ್ಮರೂಪವನ್ನು ಧರಿಸಿರುವುದರಿಂದ ಸೃಷ್ಟಿಕರ್ತಆದವನು ಬ್ರಹ್ಮ ಎನ್ನಲ್ಪಡುವನು. ॥೬೬೮॥

## (೬೬೯ನೇ ನಾಮವು) ಬ್ರಹ್ಮ,

## ಓಮ್॥ ಬ್ರಹ್ಮಣೇನಮಃ.

(ವಿ॥ ಭಾ) ಈ ರೀತಿಯಿಂದ ವ್ಯಕ್ತವಾಗಿಯೂ ಅವ್ಯಕ್ತವಾಗಿಯೂ ಇರುವ ಸಮಷ್ಟಿ ವ್ಯಷ್ಟಿಪುರುಷರನ್ನು ವೃದ್ಧಿಪಡಿಸುವುದರೊಡನೆ ತಾನೂ ಅತ್ಯತಿಶಯಿತಗಳಾದ ಕಲ್ಯಾಣ ಗುಣಗಳಿಂದಲೂ ವಿಭವಗಳಿಂದ ಲೂ ವೃದ್ಧಿಹೊಂದಿ ಸರ್ವ ವೇದಾಂತ ವೇದ್ಯವಾದ ಪರಬ್ರಹ್ಮಸ್ವರೂಪವಾ ಗಿರುವಂತವನು. (ಮ) ಪರಬ್ರಹ್ಮನು. ॥೬೬೯॥

## (೬೭೦ನೇ ನಾಮವು) ಬ್ರಹ್ಮವಿವರ್ಧನಃ,

## ಓಮ್॥ ಬ್ರಹ್ಮವಿವರ್ಧನಾಯನಮಃ.

(ಶಂ॥ ವಿ॥ ಮ) ಈ ಪ್ರಕಾರವಾಗಿ ವೃದ್ಧಿಹೊಂದುವ ಪ್ರಪಂಚಕ್ಕೆ ಆದಿಕಾರಣವಾದ ತಪಸ್ಸು ಮೊದಲಾದವುಗಳನ್ನು ವೃದ್ಧಿಹೊಂದಿಸುವಂ ತವನು. ॥೬೭೦॥

## (೬೭೧ನೇ ನಾಮವು) ಬ್ರಹ್ಮವಿತ್,
## ಓಮ್॥ ಬ್ರಹ್ಮವಿದೇನಮಃ.

(ಶಂ॥ ವಿ॥ ಮ) ಬ್ರಹ್ಮಕ್ಕೆ ವಾಚಕವಾಗಿರುವುದರಿಂದ ಬ್ರಹ್ಮವೆನ್ನಲ್ಪಡುವ ವೇದವನ್ನು (ಶಂ॥ ಮ॥ ವೇದಾರ್ಥವನ್ನೂ) ತಿಳಿದವನು. "ಅನಾದಿನಿಧನಂಬ್ರಹ್ಮ ನದೇವಾ ನರ್ಷಯೋವಿದುಃ। ಏಕಸ್ತದ್ವೇದ ಭಗವಾನ್ ಧಾತಾ ನಾರಾಯಣಸ್ಸ್ವಯಂ" (ಭಾರ॥ ಮೊ॥ ೩೮೦॥ ೧೯) ಎಂಬೀ ಪ್ರಮಾಣವು ಈ ಅರ್ಥವನ್ನು ಬೋಧಿಸುವುದು. ॥೬೭೧॥

## (೬೭೨ನೇ ನಾಮವು) ಬ್ರಾಹ್ಮಣಃ,
## ಓಮ್॥ ಬ್ರಾಹ್ಮಣಾಯನಮಃ.

(ಶಂ॥ ಭಾ) ಬ್ರಹ್ಮರೂಪದೊಡನೆ ಸರ್ವಲೋಕಗಳಿಗು ವಿಸ್ತಾರವನ್ನುಂಟುಮಾಡತಕ್ಕವನು. (ವಿ॥ ಭಾ) ಅಂತಹ ವೇದಗಳಲ್ಲಿ ತಿಳಿಯಬೇಕಾದ ಅಂಶಗಳನ್ನು ವ್ಯವಸ್ಥೆ ಮಾಡುವುದಕ್ಕಾಗಿ ತಾನು ಅತ್ರಿವಂಶದಲ್ಲಿಯೂ ಇತರ ಬ್ರಾಹ್ಮಣ ವಂಶಗಳಲ್ಲಿಯೂ ದತ್ತಾತ್ರೇಯಾದಿ ಬ್ರಾಹ್ಮಣರೂಪದಿಂದ ಅವತರಿಸಿದವನು. ॥೬೭೨॥

## (೬೭೩ನೇ ನಾಮವು) ಬ್ರಹ್ಮೀ,
## ಓಮ್॥ ಬ್ರಹ್ಮಿಣೇನಮಃ.

(ಶಂ॥ ಭಾ) ಬ್ರಹ್ಮ ಶಬ್ದದಿಂದ ಹೇಳಲ್ಪಡುವ ಸರ್ವ ಚೇತನರೂ ಅವನಿಗೆ ಶೇಷಭೂತರಾದ ಕಾರಣ, ಬ್ರಹ್ಮಿ. (ವಿ॥ ಭಾ) ಪ್ರಮಾಣರೂಪವೂ ಪ್ರಮೇಯರೂಪವೂ ಆದ ಸರ್ವವಸ್ತುಗಳನ್ನೂ ತನ್ನದಾಗಿಯೆ ವುಳ್ಳವನು. (ಮ) ತಪಸ್ಸೇ ಮೊದಲಾದವು ಇವನಲ್ಲಿರುವುದರಿಂದ ಬ್ರಹ್ಮಿ ॥೬೭೩॥

## (೬೭೪ನೇ ನಾಮವು) ಬ್ರಹ್ಮಜ್ಞಃ,
## ಓಮ್॥ ಬ್ರಹ್ಮಜ್ಞಾಯನಮಃ.

(ಶಂ॥ ಮ) ವೇದಗಳನ್ನು ತನಿಗೆ ಆತ್ಮಭೂತಗಳನ್ನಾಗಿ ತಿಳಿಯು

ವಂತವನು. (ವಿ॥ ಭಾ) ವೇದಗಳನ್ನು ಅರ್ಥಪರ್ಯಂತವಾಗಿ ಸಾಕ್ಷಾತ್ಕರಿಸಿ ದವನು. "ವೇದವಿದೇವಚಾಹಂ" ಎಂಬ ಪ್ರಮಾಣವನ್ನಿಲ್ಲಿ ತಿಳಿಯ ಬೇಕು. ॥೬೭೪॥

## (೬೭೫ನೇ ನಾಮವು) ಬ್ರಾಹ್ಮಣಪ್ರಿಯಃ,
## ಓಮ್॥ ಬ್ರಾಹ್ಮಣಪ್ರಿಯಾಯನಮಃ.

(ಶಂ॥ ವಿ॥ ಮ) ವೇದಾಧಿಕಾರಿಗಳಾದ ಬ್ರಾಹ್ಮಣರಲ್ಲಿ ಪ್ರೀತಿಯು ಳ್ಳವನು. ಅಥವಾ ಅಂತವರನ್ನೇ ಪ್ರಿಯವಸ್ತುಗಳನ್ನಾಗಿ ವುಳ್ಳವನು. ಇದಕ್ಕೆ "ಘ್ನಂತಂಶಪಂತಂ ಪರುಷಂವದಂತಂ ಯೊಬ್ರಾಹ್ಮಣಂ ನಪ್ರಣ ವೇದ್ಯಥಾಹಂ। ಸಪಾಪಕೃದ್ಬ್ರಹ್ಮದವಾಗ್ನಿ ದ ಗ್ಧೋವಧ್ಯಶ್ಚದಂಡ್ಯ ಶ್ಚನಚಾಸ್ಮದೀಯಃ॥ ಭಕ್ತಾಸ್ತೇತೀವಮೇಪ್ರಿಯಾಃ॥ (ಗೀ॥ ೧೨॥ ೨೦) ಕಿಂಪುನರ್ಬ್ರಾಹ್ಮಣಾಃಪುಣ್ಯಾಃ" (ಗೀ॥ ೯॥ ೧೩) ಇತ್ಯಾದಿ ಪ್ರಮಾ ಣಗಳನ್ನರಿಯಬೇಕು. ॥೬೭೫॥

ಈ ೭೦ನೇ ಶ್ಲೋಕದಲ್ಲಿ ಪ್ರಕೃತಗಳಾದ "ಜೀವಾತ್ಮಾ ಪ್ರಕೃತಿ ಶ್ಚಾಪಿ ಬ್ರಹ್ಮೇತಿವ್ಯ ಪದಿಶ್ಯತೆ ತಾಭ್ಯಾಂಯಸ್ಸ್ರಥತಿ ಭೋಗಾದೇ ಸ್ಸರ್ವಾ ವಸ್ಥಾಸು ಕಾರಣಂ॥ "ಬ್ರಹ್ಮಣ್ಯ" (೬೬೭) ಸ್ಸತುವಿಜ್ಞೇಯಸ್ಸಪ್ತಾ ರ್ಣೋಭೋಗದಾಯಕಃ। ಮಹದಾದಿ ತಮಃಕಾರ್ಯಂ ಬ್ರಹ್ಮೇತಿಹ್ಯಭಿ ಧೀಯತೆ॥ ತಸ್ಯಕರ್ತಾ ಸ್ವಯಂಬ್ರಹ್ಮಾ ನಿಯಾಮ್ಯೋಯಸ್ಯಸರ್ವದಾ। ಸತುಸ್ಯಾ "ದ್ಬ್ರಹ್ಮಕೃದ್ಬ್ರಹ್ಮಾ" (೬೬೮) ನವಾರ್ಣ್ನಸ್ಸರ್ವಶಕ್ತಿ ದಃ॥ ವ್ಯಕ್ತಾವ್ಯಕ್ತ ಸಮಷ್ಟ್ಯಾದಿ ಪುರುಷಾಂಶ್ಚೈವನಿತ್ಯಶಃ। ಗು ಣೈಶ್ಚಕಲ್ಯಾಣತಮೈರ್ಬ್ರಹ್ಮ ಬೃಂಹಯತೀತಿಚ॥ ರೂಪೈಸ್ಸ್ವರೂಪೇ ಣಗುಣೈರ್ವಿಭವೈಶ್ಚ ಸ್ವಯಂಮಹಃ। ಬ್ರಹ್ಮೇತಿಸತುವಾ "ಬ್ರಹ್ಮ" (೬೬೯) ಷಡರ್ಣ್ನಸ್ಸಂತತಿಪ್ರದಃ॥ ತಪೋವಿವರ್ಧನಾನ್ನಿತ್ಯಂ ಸ್ಮೃತೋ "ಬ್ರಹ್ಮವಿವರ್ಧನಃ" (೬೭೦) ಯೋವೇದಾನನ್ತತೋ ವೇತ್ತಿಸ "ಬ್ರ ಹ್ಮವಿತ್" (೬೭೧) ಉದೀರಿತಃ॥ ದತ್ತಾತ್ರೇಯಾದಿ ರೂಪೇಣ ಹ್ಯ ದೀರ್ಣ್ನೋ "ಬ್ರಾಹ್ಮಣ" (೬೭೨) ಸ್ಸ್ಮೃತಃ। ಪಠನಾದ್ವಾಥವೇದಸ್ಯ 'ಬ್ರಾಹ್ಮಣಃ' ಪರಿಕೀರ್ತಿತಃ॥ ಮಾನಮೇಯ ಸ್ವರೂಪತ್ವಾಸ್ಸ್ವಯಂ

"ಬ್ರಹ್ಮೀ" (೬೭೩) ತಿಶಬ್ದ್ಯತೇ | ಯೋವೇದಾ ನರ್ಥತೋವೇತ್ತಿ ಸೋಪಿ "ಬ್ರಹ್ಮಜ್ಞ" (೬೭೪) ಈರಿತಃ || ವೇದಾಧಿಕಾರಿಣೋವಿಪ್ರಾಃ ಪ್ರಿಯಾಯಸ್ಯೇತಿ ವೈಸದಾ | "ಬ್ರಾಹ್ಮಣಪ್ರಿಯ" (೬೭೫) ಇತ್ಯುಕ್ತೋನವಾರ್ಣೋ ಧರ್ಮದೋಮನುಃ" ಎಂಬೀ ರೀತಿಯಾಗಿ ವಿವೃತಿಯನ್ನು ಕಾಣಬಹುದು.

ಮೂ|| ಮಹಾಕ್ರಮೋ ಮಹಾಕರ್ಮಾ ಮಹಾತೇ
ಜಾ ಮಹೋರಗಃ| ಮಹಾಕ್ರತು ರ್ಮಹಾಯಜ್ವಾ
ಮಹಾಯಜ್ಞೋ ಮಹಾಹವಿಃ ||೭೧||

(೬೭೬ನೇ ನಾಮವು) ಮಹಾಕ್ರಮಃ,

ಓಮ್|| ಮಹಾಕ್ರಮಾಯನಮಃ.

(ಶಂ|| ಮ) ತ್ರಿವಿಕ್ರಮಾವತಾರದಲ್ಲಿ ಲೋಕಗಳನ್ನು ಆಕ್ರಮಿಸುವಂತಹ ಪಾದ ವಿಕ್ಷೇಪವುಳ್ಳವನು. (ವಿ|| ಭಾ) ಇನ್ನು ಮುಂದೆ ಭಗವತ್ಪ್ರಾಪ್ತಿಯಲ್ಲಿ ಆಸಕ್ತಿಯುಳ್ಳ ಪರಮಭಕ್ತರಲ್ಲಿ ಅವನಿಗಿರುವ ವಾತ್ಸಲ್ಯಗುಣದ ಆನಂತ್ಯವು (ಅಪಾರವಾಗಿರುವಿಕೆಯು) ಹೇಳಲ್ಪಡುವುದು. ಸರ್ವೋನ್ನತನಾದ ತನ್ನನ್ನು ಹೊಂದುವಂತೆ ಅತಿ ನೀಚವೂ ಅಗಾಧವೂ ಆದ ಸಂಸಾರವೆಂಬ ಪಾತಾಳದಿಂದ ಜೀವಾತ್ಮರನ್ನು ಉದ್ಧರಿಸುವುದಕ್ಕಾಗಿ ಮಹತ್ತಾದ ಸೋಪಾನವನ್ನು ಕಟ್ಟಿರುವಂತವನು. ಎಂದರೆ ತಾಯಿಯಾದವಳು ಹೇಗಾದರೆ ಮೊಲೆಯುಣ್ಣುವ ಮಕ್ಕಳಿಗೆ ಮೊದಲು, ಸ್ತನ್ಯವನ್ನು ಕೊಟ್ಟು, ಅನಂತರ ಹಸಿವಿನ ಹಾಲನ್ನೂ, ತಂದನಂತರದಲ್ಲಿ ಆಹಾರವನ್ನೂ, ಅನಂತರ ಭೋಗವನ್ನೂ ಎಂಬೀ ಕ್ರಮದಿಂದ ಕೊಡುವಳೋ ಅದರಂತೆಯೇ ಸರ್ವೇಶ್ವರನೂ ಸುಕೃತಿಯಾದವನಿಗೆ ಮೊದಲು ತನ್ನಲ್ಲಿ ದ್ವೇಷವನ್ನು ಬಿಡಿಸಿ ಅನಂತರ ತನ್ನಲ್ಲಿ ಆಭಿಮುಖ್ಯವನ್ನುಂಟುಮಾಡಿಸಿ ತನ್ನನ್ನು ಅನುಸರಿಸುವಂತೆ ಮಾಡಿ ಜ್ಞಾನ ಭಕ್ತಿ ವಿಶ್ವಾಸಾದಿಗಳನ್ನು ಕ್ರಮವಾಗಿ ಹುಟ್ಟಿಸಿ ಈ ರೀತಿಯಿಂದ ಕ್ರಮಕ್ರಮವಾಗಿ ತನ್ನ ದಾಸನನ್ನಾಗಿ ಸ್ವೀಕರಿಸಿ ರಕ್ಷಿಸುವನೆಂದರ್ಥವು. ||೬೭೬||

## (೬೭೭ನೇ ನಾಮವು) ಮಹಾಕರ್ಮಾ,

## ಓಮ್॥ ಮಹಾಕರ್ಮಣೇನಮಃ.

(ಶಂ॥ ಮ) ಜಗತ್ಸೃಷ್ಟ್ಯಾದಿ ರೂಪಗಳಾದ ಮಹತ್ಕಾರ್ಯಗಳ ನ್ನು ಮಾಡುವಂತವನು. (ಕ್ರಿಮಿಕೀಟಾದಿಗಳಂತೆ ಇರುವ ಅಲ್ಪ ಪ್ರಾಣಿಗಳಿಗೂ ಕೂಡ ಮಹತ್ತಾದ ತನ್ನ ವಿಭವವನ್ನು ಅನುಭವಿಸುವಂತೆ ಉನ್ನತ ಸ್ಥಿತಿಯಲ್ಲಿರುವುದರಿಂದ ಅತ್ಯಂತಾಶ್ಚರ್ಯಕರವಾದ ಕಾರ್ಯವನ್ನು ಮಾಡುವಂತವನು. ॥೬೭೭॥

## (೬೭೮ನೇ ನಾಮವು) ಮಹಾತೇಜಾಃ,

## ಓಮ್॥ ಮಹಾತೇಜಸೇನಮಃ.

(ಶಂ॥ ಭಾ) ಸೂರ್ಯಾದಿಗಳಾದ ತೇಜೋವಂತರಿಗೂ ತೇಜಸ್ಸನ್ನು ಕೊಡುವಂತವನು (ವಿ॥ ಬಾ) ತಾಮಸ ಪುರುಷರಿಗೆ ಈ ರೀತಿಯಿಂದ ಅನಾದಿಯಾಗಿ ಸಂಬಂಧಿಸಿರುವ ಅಜ್ಞಾನಾಂಧಕಾರವನ್ನು ನಾಶಪಡಿಸುವಂತಹ ಮಹಾ ತೇಜಸ್ಸುಳ್ಳವನು. ॥೬೭೮॥

## (೬೭೯ನೇ ನಾಮವು) ಮಹೋರಗಃ,

## ಓಮ್॥ ಮಹೋರಗಾಯನಮಃ.

(ಶಂ॥ ಭಾ) ವಾಸುಕಿಯೆಂಬ ಮಹತ್ತಾದ ಸರ್ಪ ರೂಪನು. " ಸರ್ಪಾಣಾಮಸ್ಮಿವಾಸುಕಿಃ " (ಗೀ॥ ೧೦) ಎಂಬ ಪ್ರಮಾಣವನ್ನರಿಯಬೇಕು. (ಮ) ಆದಿಶೇಷನೇ ಇವನಿಗೆ (ಶಯ್ಯಾ) ಹಾಸಿಗೆಯಾಗಿರುವುದರಿಂದ ಮಹತ್ತಾದ ಉರಗವೆಂದರೆ ಸರ್ಪವುಳ್ಳವನು. (ವಿ॥ ಭಾ) ಇವನ ಮಹತ್ತ್ವವು ತಾನೆ ಯೆಂಥಾದ್ದೆಂದರೆ :—ಮಹೋರಗಃ-ಅತ್ಯಂತಮಹಾನಾದ ತಾನು ಅತ್ಯಲ್ಪಗಳಾದ ಪ್ರಾಣಿಗಳನ್ನು ಸಮೀಪಿಸಿ, ಅವರ ಇಂದ್ರಿಯಗಳಲ್ಲಿ ಅನುಪ್ರವೇಶಿಸಿ, ಆದರಲ್ಲಿಯೂ ಅವರ ಮನಸ್ಸನ್ನು ಹೊಂದಿ ಅವರ ಅಜ್ಞಾನವನ್ನು ನಾಶಪಡಿಸುವಂತವನು. ॥೬೭೯॥

# (೬೮೦ನೇ ನಾಮವು) ಮಹಾಕ್ರತುಃ,

## ಓಮ್॥ ಮಹಾಕತ್ರವೇನಮಃ.

(ಶಂ॥ ಭಾ) "ಯಥಾಶ್ವಮೇಧಃಕ್ರತುರಾಟ್" (ಮನು ೧೧॥ ೨೬೦) ಎಂಬಂತೆ ಕ್ರತುಶ್ರೇಷ್ಠವಾದ ಅಶ್ವಮೇಧವೆಂಬ ಯಾಗಸ್ವರೂಪನು. ಅಂತಹ ಯಾಗವೂ ಅವನೇ ಎಂಬದಾಗಿ ಸ್ತುತಿಯು. (ವಿ॥ ಭಾ) ಅತ್ಯಂತ ಸುಲಭ ಸಾಧ್ಯವಾದ ಆರಾಧನವುಳ್ಳವನು. "ಯೇನವಿತ್ತೈರ್ನ ವಿಭವೈರ್ನವಾಸೋಭಿ ರ್ನ ಭೂಷಣೈಃ। ತೋಷ್ಯತೇ ಹೃದಯೇನೈವ ಕಸ್ತಮಿಶಂ ನಪೂಜಯೇತ್" ಇತ್ಯಾದಿ ಪ್ರಮಾಣಗಳನ್ನು ಭಾಷ್ಯದಲ್ಲಿ ಈ ಅರ್ಥಕ್ಕೆ ಆಧಾರಗಳನ್ನಾಗಿ ಕಾಣಬಹುದು. (ಮ) ಜಗತ್ಸೃಷ್ಟ್ಯಾದಿ ಸಂಕಲ್ಪವುಳ್ಳವನು. ॥೬೮೦॥

# (೬೮೧ನೇ ನಾಮವು) ಮಹಾಯಜ್ವಾ,

## ಓಮ್॥ ಮಹಾಯಜ್ವನೇನಮಃ.

(ವಿ॥ ಭಾ) ತನ್ನನ್ನಾರಾಧಿಸುವಂತವರು ಅನ್ಯದೇವತಾ ಭಕ್ತರಿಗಿಂತಲೂ ಶ್ರೇಷ್ಠರಾದ ಕಾರಣ ಮಹತ್ತಾದ ಯಾಜಕರುಳ್ಳವನು. (ಶಂ॥ ಭಾ) ಲೋಕಸಂಗ್ರಹಕ್ಕಾಗಿ ಅಧಿಕವಾದ ಯಜ್ಞಗಳನ್ನು ಸಾಂಗವಾಗಿ ನೆರವೇರಿಸಿದವನು. ॥೬೮೧॥

# (೬೮೨ನೇ ನಾಮವು) ಮಹಾಯಜ್ಞಃ,

## ಓಮ್॥ ಮಹಾಯಜ್ಞಾಯನಮಃ.

(ಶಂ॥ ಮ) ಮಹತ್ತಾದ ಜಪ ಯಜ್ಞಸ್ವರೂಪನು. "ಯಜ್ಞಾನಾಂ ಜಪಯಜ್ಞೋಽಸ್ಮಿ" (ಗೀ॥ ೧೦) ಎಂಬ ಭಗವದ್ವಚನವನ್ನರಿಯಬೇಕು. (ವಿ॥ ಭಾ) ಇತರ ದೇವತಾ ವಿಷಯವಾದ ಆರಾಧನಕ್ಕಿಂತಲೂ ಶ್ರೇಷ್ಠವಾದ ಅಭಿಗಮನ ಭೋಗ ಮಧುಪರ್ಕಾದಿ ರೂಪಗಳಾದ ತನ್ನ ಯೆಂಟು ಅಂಗವುಳ್ಳ ಆರಾಧನವುಳ್ಳವನು. ಇದೇ ಅಷ್ಟಾಂಗಯಜನವು. ॥೬೮೨॥

# (೬೮೩ನೇ ನಾಮವು) ಮಹಾಹವಿಃ,
## ಓಮ್॥ ಮಹಾಹವಿಷೇನಮಃ.

(ಶಂ॥ ಭಾ) ಮಹತ್ತಾದ ಹವಿಸ್ಸ್ವರೂಪನು. ಅಥವಾ ಬ್ರಹ್ಮಾತ್ಮಕವಾದ ಜಗತ್ತಿನಲ್ಲಿ ಬ್ರಹ್ಮರೂಪದೊಡನೆ ಹೋಮ ಮಾಡಲ್ಪಡುವಂತವನು. (ವಿ॥ ಭಾ) ಹಿಂಸಾದಿರಹಿತವಾಗಿರುವ ಅತ್ಯಂತ ಸಾತ್ವಿಕವಾದ ಹವಿಸ್ಸುಳ್ಳವನು. "ಬ್ರಹ್ಮಾರ್ಪಣಂ ಬ್ರಹ್ಮಹವಿಃ" ಎಂಬೀ ಗೀತಾವಾಕ್ಯದಿಂದ ಈ ಅರ್ಥವು ಯೇರ್ಪಡುವುದು. ಅಥವಾ "ಇದಮಹಂಮಾ ಮಮೃತಯೋನೌ ಸೂರ್ಯೇಜ್ಯೋತಿಷಿ ಜುಹೋಮಿಸ್ವಾಹಾ" ಎಂಬ ಶ್ರುತ್ಯನುಸಾರವಾಗಿ ಜೀವಾತ್ಮನೆಂಬ ಮಹತ್ತಾದ ಹವಿಸ್ಸುಳ್ಳವನೆಂತಲೂ ಆಗಬಹುದು. (ಮ) ವಿಷ್ಣುವೇಹವಿ ಸ್ಸ್ವರೂಪನು. ಪಮಾರೂಪವಾದ ಜಗತ್ತನ್ನೇ ಭಕ್ಷ್ಯವಾಗಿ ವುಳ್ಳವನೆಂತಲೂ ಹೇಳಬಹುದು. ॥೬೮೩॥

ಈ (೭೦) ನೇ ಶ್ಲೋಕದಲ್ಲಿ ಪ್ರಕೃತಗಳಾಗಿರುವ (೮) ನಾಮಗಳಿಗೂ "ಪರಮೋನ್ನತಿಮಾತ್ಮಾನಂ ಸನಿಮ್ನಾದ್ಭವಪಾತಕಾತ್ । ಜೀವಾನ್ಸಮಾರೋಹಯತೋ ಜ್ಞಾನ ಭಕ್ತ್ಯಾದಿರೂಪಿಣೀ ॥ ಪೂರ್ವಾನುಪೂರ್ವೀ ಯಸ್ಯಾಸ್ತಿ "ಮಹಾಕ್ರಮ" (೬೭೬) ಈತೀರಿತಃ ॥ ಅತ್ಯಂತಹೀನಾನ್ ಜಂತೂಂಶ್ಚ ಯೋಗ್ಯಾನ್ಸ್ವಾನುಭವಸ್ಯಚ। ಕರೋತಿಮಹದಾಶ್ಚರ್ಯಂ ಕರ್ಮಯಸ್ಯಾಸ್ತಿ ಸರ್ವದಾ ॥ "ಮಹಾಕರ್ಮಾ" (೬೭೭) ಸವಿಜ್ಞೋಯೋಹ್ಯಷ್ಟಾರ್ಣೋ ಮನುರುತ್ತಮಃ । ಅನಾದ್ಯವಿದ್ಯಾಖ್ಯ ತಮೋಹಾರಿತೇಜೋ ಮಹದ್ಯತಃ ॥ "ಮಹಾತೇಜಾ" (೬೭೮) ಹ್ಯತಃ ಖ್ಯಾತಸ್ತೇಜೋದೋ ವಸುವರ್ಣಕಃ । "ಮಹೋರಗ" (೬೭೯) ಇತಿಖ್ಯಾತಶ್ಚಿತ್ತದ್ವಾರಾ ಪ್ರವೇಶನಾತ್ ॥ ಸರ್ವೈ ರ್ಶ್ಚನುಕರಾಪೂಜಾ ಯಸ್ಯಸ್ಯಾತ್ಸ "ಮಹಾಕ್ರತುಃ" (೬೮೦) । ದೇವತಾಂತರಯಾಜಿಭ್ಯಸ್ಸ್ವಯಾಜ್ಯಾತ್ಕೃಷ್ಟಕಾರಕಃ ॥ "ಮಹಾಯಜ್ವಾ" (೬೮೧) ಸಮುದಿಷ್ಟಸ್ಸತ್ಕರ್ಮಫಲದೋಮನುಃ । ಅನ್ಯೇಭ್ಯೋದೇವಯಾಗೇಭ್ಯ ಸ್ಸ್ವಯಾಗೋತ್ಕೃಷ್ಟಕಾರಕಃ । "ಮಹಾಯಜ್ಞ" (೬೮೨) ಸ್ಸವಾಖ್ಯಾತೋಹ್ಯ

ಷ್ಕ್ಯರ್ಣ್ಣೀ ಹರಿಃಗುಣಗಣಃ || ಆತ್ಮರೂಪಂ ಹವಿರ್ಯಸ್ಯಸ " ಮಹಾಹವಿ " (೬೮೩) ರುಚ್ಯತೇ" ಎಂಬೀರೀತಿಯಾಗಿ ವಿವೃತಿಯನ್ನು ಕಾಣಬಹುದು.

ಮೂ|| ಸ್ತವ್ಯ ಸ್ತವಪ್ರಿಯ ಸ್ತೋತ್ರಂ
ಸ್ತುತ ಸ್ತೋತಾ ರಣಪ್ರಿಯಃ | ಪೂರ್ಣಃ ಪೂರ
ಯಿತಾ ಪುಣ್ಯಃ ಪುಣ್ಯಕೀರ್ತಿ ರನಾಮಯಃ ||೭೩||

(೬೮೪ನೇ ನಾಮವು) ಸ್ತವ್ಯಃ,
ಓಮ್|| ಸ್ತವ್ಯಾಯನಮಃ.

(ಶಂ|| ಭಾ) ಸರ್ವರಿಂದಲೂ ತಾನು ಸ್ತುತಿಸಲ್ಪಡುವನಲ್ಲದೆ ತಾನು ಯಾರನ್ನು ಸ್ತೋತ್ರಮಾಡುವಂತವನಲ್ಲವು. (ವಿ|| ಭಾ) ಈ ರೀತಿಯಾಗಿ ಮಾನಸಕಾಯಿಕ ಕೈಂಕರ್ಯಗಳಿಂದ ಆರಾಧಿಸಲ್ಪಡುವ ಪ್ರಕಾರವನ್ನು ಹೇಳಿ ಇನ್ನು ಮುಂದೆ ವಾಚಿಕ ಕೈಂಕರ್ಯದಿಂದ ಆರಾಧಿಸಲ್ಪಡುವ ಪ್ರಕಾರವು ಹೇಳಲ್ಪಡುವುದು. ಸ್ತೋತ್ರಮಾಡುವುದಕ್ಕೆ ಅರ್ಹನು. ಇದಕ್ಕೆ ಕಾರಣವು ಅಸ್ಖಲಿತ ಮಂಗಳವೂ ನಿತ್ಯವೂ ನಿರತಿಶಯವೂ ದೋಷರಹಿತವೂ ಆಗಿರುವ ಗುಣಗಳು ಸ್ವತಸ್ಸಿದ್ಧವಾಗಿರುವ ಕಾರಣದಿಂದ ಸಹಸ್ರ ದಿವ್ಯನಾಮ ಯುಕ್ತನಾಗಿರುವಿಕೆಯು; ಇಂತಹ ನಮ್ಮ ಸರ್ವ ಜಗತ್ಪ್ರಭುವಲ್ಲದೆ ಮತ್ತೆ ಯಾರುತಾನೆ ಸ್ತುತಿಗೆ ಅರ್ಹರಾಗುವರು ? ರಾಜಸ ತಾಮಸಾದಿಗುಣ ಪಾರವಶ್ಯದಿಂದ ವಿಪರೀತಗುಣ ಯುಕ್ತರಾದ ದೇವತಾಂತರಗಳನ್ನು ಹೇಗೆತಾನೆ ಸ್ತುತಿಸಬಹುದು ? ಆದುದರಿಂದ ದ್ರವ್ಯಾಪೇಕ್ಷೆಯಿಂದ ಯಾಚಕನು ಧನವಂತನನ್ನು ಯಾವ ರೀತಿಯಿಂದ ಸ್ತುತಿಸುವನೊ, ಅದೇರೀತಿಯಿಂದ ಜಗತ್ಕರ್ತನಾದ ನಮ್ಮ ಸ್ವಾಮಿಯನ್ನು ಸ್ತುತಿಸುವಂತವನು ಯಾವನುತಾನೆ ಸಂಸಾರಬಂಧದಿಂದ ಬಿಡಲ್ಪಡಲಾರನೆನ್ನುವ ಬಾರ್ಹಸ್ಪತ್ಯಸ್ಮೃತಿ ವಚನಾನುಸಾರವಾಗಿ ಅವನೇ ಸ್ತುತಿಸಿಕೊಳ್ಳುವದಕ್ಕೆ ಅರ್ಹನೆಂದು ಭಾವವು. (ಮ) ಸ್ತುತಿಗೆ ಅರ್ಹನು. ||೬೮೪||

(೬೮೫ನೇ ನಾಮವು) ಸ್ತವಪ್ರಿಯಃ,
ಓಮ್|| ಸ್ತವಪ್ರಿಯಾಯನಮಃ.

(ಶಂ|| ಭಾ) " ಸ್ತೂಯತೇಯೇನ ತತ್ಸ್ತೋತ್ರಂ ಗುಣ ಸಂಕೀರ್ತನಾತ್ಮಕಂ " ಎಂಬ ರೀತಿಯಿಂದ ಸ್ತುತಿಸಲ್ಪಡುವಂತವನಾದುದರಿಂದ ' ಸ್ತವಪ್ರಿಯ ' ನೆನ್ನಲ್ಪಡುವನು. (ವಿ|| ಭಾ) ಹೇಗಾದರೂ ಯಾವ ಭಾಷೆಯಿಂದಲಾದರೂ ಯಾವನೇ ಆಗಲಿ ತನ್ನ ತೇಜಸ್ಸಿಗೆ ಅಭಿವರ್ಧಕನಾಗಿರಲಿ (ಅಥವಾ) ತಾಳ್ಮೆಯನ್ನು ಉಂಟುಮಾಡತಕ್ಕವನಾಗಿರಲಿ ಭಗವದ್ಗುಣ ಸಂಕೀರ್ತನವನ್ನು ಮಾಡಬೇಕೆಂಬ ವಿಶ್ವಾಸದೊಡನೆ ಮಾಡಲ್ಪಡುವ ಸ್ತೋತ್ರವಾಗಿದ್ದು, ಅದು ತನ್ನ ವಿಷಯವಾಗಿದ್ದರೆ ಅದರಲ್ಲಿ ಅತ್ಯಂತ ಪ್ರೀತಿಯುಳ್ಳವನು. ಈ ವಿಷಯವು ಘಂಟಾಕರ್ಣ ವೃತ್ತಾಂತದಲ್ಲಿ ಸುಸ್ಪಷ್ಟವು. || ೬೮೫ ||

## (೬೮೬ನೇ ನಾಮವು) ಸ್ತೋತ್ರಮ್,

## ಓಮ್|| ಸ್ತೋತ್ರಾಯನಮಃ.

(ಶಂ|| ಭಾ) ಸ್ತುತಿರೂಪವಾದ ವ್ಯಾಪಾರಕ್ಕೆ ವಿಷಯಭೂತನು. (ಮ) ಸ್ತುತಿ ವ್ಯಾಪಾರರೂಪನು. (ವಿ|| ಭಾ) ಅದು ತನ್ನ ಸ್ತೋತ್ರವಾಗಿದ್ದರೂ ಅದನ್ನು ತಾನೇ ಅನುಗ್ರಹಿಸಿ ಸ್ವೀಕರಿಸಿಕೊಳ್ಳುವಂತವನು. ಈ ವಿಷಯವು ಧ್ರುವನು ಮಾಡಿದ ಸ್ತೋತ್ರದಲ್ಲಿ ಕಾಣಲ್ಪಡುವುದು. ||೬೮೬||

## (೬೮೭ನೇ ನಾಮವು) ಸ್ತುತಃ,

## ಓಮ್|| ಸ್ತುತಾಯನಮಃ.

(ವಿ|| ಭಾ) ಸಹಸ್ರ ಫಣಾಮಂಡಿತರಾದ ಆದಿಶೇಷರಿಂದಲೂ ವೇದಸ್ವರೂಪನಾದ ಗರುತ್ಮಂತನಿಂದಲೂ ಇತರ ನಿತ್ಯಸೂರಿಗಳಿಂದಲೂ ಬ್ರಹ್ಮರುದ್ರಾದಿಗಳಿಂದಲೂ ನಮ್ಮಂತವರಿಂದಲೂ ಕೂಡ ತಾರತಮ್ಯವಿಲ್ಲದೆ ಅವಧಿರಹಿತವಾದ ಕಾಲತತ್ವ ವಿರುವವರಿಗೂ ಅವರವರ ಇಷ್ಟಸಿದ್ಧಿಗಾಗಿ ಸ್ತುತಿಸಲ್ಪಡುವಂತವನು ಈ ಅರ್ಥವು " ಅಶೇಷದೇವೇಶನರೇಶ್ವರೇಶ್ವರೈಸ್ಸದಾಸ್ತುತಂ ಯಚ್ಚರಿತಂ ಮಹಾದ್ಭುತಂ" ಎಂಬೀ ವಿಷ್ಣುಧರ್ಮ ವಚನದಿಂದ ಬೋಧಿತವಾಗುವುದು. (ಶಂ|| ಮ) ಸ್ತುತಿಕ್ರಿಯೆಗೆ ಕರ್ಮಭೂತನು. ||೬೮೭||

## (೬೮೮ನೇ ನಾಮವು) ಸ್ತೋತಾ,

### ಓಮ್॥ ಸ್ತೋತ್ರೇನಮಃ.

(ಶಂ॥ ಮ) ಸ್ತೋತ್ರ ಕ್ರಿಯೆಯುಳ್ಳವನು (ಮ) ಈ ಮೂರು ಅಂಶವೂ "ಬ್ರಹ್ಮಾರ್ಪಣಂ ಬ್ರಹ್ಮಹವಿಃ ಬ್ರಹ್ಮಾಗ್ನೌ" ಎಂಬ ಗೀತೋಕ್ತ ಕ್ರಮದಿಂದ ಹೇಳಲ್ಪಟ್ಟಿರುವುದು. (ವಿ॥ಭಾ) ತನ್ನನ್ನು ಸ್ತುತಿಸುವಂತವನನ್ನು ಕುರಿತು ಸ್ತೋತ್ರಮಾಡುವ ಸ್ವಭಾವವುಳ್ಳವನು ಈ ವಿಷಯವು ಕೈಲಾಸ ಯಾತ್ರೆಯಲ್ಲಿ ತಾನು ಮಾಡಿದ ರುದ್ರ ವಿಷಯಕ ವಾದ ಸ್ತುತಿಯಲ್ಲಿ ಪ್ರಸಿದ್ಧವು.

## (೬೮೯ನೇ ನಾಮವು) ರಣಪ್ರಿಯಃ,

### ಓಮ್॥ ರಣಪ್ರಿಯಾಯನಮಃ.

(ಶಂ॥ ಮ) ಲೋಕರಕ್ಷಣಕ್ಕಾಗಿ ಸದಾ ಪಂಚಾಯುಧಗಳನ್ನು ಧರಿಸಿಕೊಂಡು ಯುದ್ಧದಲ್ಲಿ ಪ್ರೀತಿಯುಳ್ಳವನು. (ವಿ॥ ಭಾ) ಶ್ರೀಮದ್ರಾಮಾಯಣ ಶ್ರೀಮಹಾಭಾರತಾದಿಗಳಲ್ಲಿ ಸ್ತುತಿಸಲ್ಪಟ್ಟ ಯುದ್ಧವೇ ಮೊದಲಾದ ಶ್ರೇಷ್ಠವಾದ ದಿವ್ಯ ಚೇಷ್ಟಿತಗಳುಳ್ಳವನು ತನ್ನ ಭಕ್ತರಾದವರು ಪ್ರೀತಿಯಿಂದ ಸಂತೋಷಿಸುವುದಕ್ಕಾಗಿ "ತತಸ್ಸಕಾಮಂ ಸುಗ್ರೀವಮಂಗದಂಚ ಮಹಾಬಲಂ | ಚಕಾರರಾಘವಃ ಪ್ರೀತೌ ಹತ್ವಾರಾವಣಮಾಹವೇ" (ರಾ॥ ಯು॥ ೧೧೧॥ ೩೧) ಎಂಬಂತೆ ಯುದ್ಧವನ್ನಾದರೂ ಮಾಡುವಂತವನಲ್ಲವೊ. ॥೬೮೯॥

## (೬೯೦ನೇ ನಾಮವು) ಪೂರ್ಣಃ,

### ಓಮ್॥ ಪೂರ್ಣಾಯನಮಃ.

(ಶಂ॥ ಮ) ಸಮಸ್ತಗಳಾದ ಅಪೇಕ್ಷಿತಗಳಿಂದಲೂ ಶಕ್ತಿಗಳಿಂದಲೂ ಪೂರ್ಣನಾದವನು. (ವಿ॥ ಭಾ) ಅಧಿಕವಾದ ಖರ್ಚುಗಳನ್ನು ಮಾಡಿ ಅಧಿಕವಾದ ಆಯಾಸದಿಂದ ಸತ್ಕರಿಸಲವಶ್ಯಕವಿಲ್ಲದೆ ಈ ರೀತಿಯಾದ ಸ್ತೋತ್ರಮಾತ್ರದಿಂದ ಇವನು ಸಾಧ್ಯನಾಗುವುದಕ್ಕೆ ಕಾರಣವು

ಹೇಳಲ್ಪಡುವುದು ; ಸರ್ವಾಭೀಷ್ಟಗಳಿಂದ ಪರಿಪೂರ್ಣನು. ‖೬೯೦‖

## (೬೯೧ನೇ ನಾಮವು) ಪೂರಯಿತಾ,

### ಓಮ್‖ ಪೂರಯಿತ್ರೇನಮಃ.

(ಶಂ‖ ಮ) ಸರ್ವ ಸಂಪತ್ತುಗಳನ್ನು ಕೊಟ್ಟು ಪೂರ್ತಿಯನ್ನುಂಟುಮಾಡತಕ್ಕವನು (ವಿ‖ ಭಾ) ಈ ಪ್ರಕಾರವಾಗಿ ಪರಿಪೂರ್ಣನಾಗಿದ್ದರೂ ಪರಿಪೂರ್ಣನಲ್ಲದವನಂತೆ ಸ್ತೋತ್ರವನ್ನು ಅಪೇಕ್ಷಿಸಿದವನಾಗಿ ಸ್ತುತಿಸುವಂತವನ ಮನೋರಥವನ್ನು ಪೂರ್ತಿಮಾಡಿಸುವಂತಹ ಶೀಲವುಳ್ಳವನು. ‖೬೯೧‖

## (೬೯೨ನೇ ನಾಮವು) ಪುಣ್ಯಃ,

### ಓಮ್‖ ಪುಣ್ಯಾಯನಮಃ.

(ಶಂ‖ಭಾ) ಸ್ಮರಣಮಾತ್ರದಿಂದ ಸಮಸ್ತ ಪಾಪಗಳನ್ನು ಪರಿಹರಿಸುವಂತವನು. (ಮ) ಪುಣ್ಯಾತ್ಮಕನು. ಕೆಲವರು ಪಾಪವಿರೋಧಿ ಸ್ವರೂಪನೆನ್ನುವರು. (ವಿ‖ ಭಾ) ಪಾಪಿಗಳನ್ನು ಕೂಡ ಪುಣ್ಯ ಕರ್ಮಕ್ಕೆ ಯೋಗ್ಯರಾಗುವಂತೆ ಪರಿಶುದ್ಧರನ್ನಾಗಿ ಮಾಡುವಂತವನು. ‖೬೯೨‖

## (೬೯೩ನೇ ನಾಮವು) ಪುಣ್ಯಕೀರ್ತಿಃ,

### ಓಮ್‖ ಪುಣ್ಯಕೀರ್ತಯೇನಮಃ

(ಶಂ‖ ಭಾ) ಪಾವನವಾದ ಕೀರ್ತಿಯುಳ್ಳವನು. ಇವನ ಕೀರ್ತಿಯು ಅನ್ಯರಿಗೂ ಪುಣ್ಯಜನಕವಾಗಿರುವುದರಿಂದ 'ಪುಣ್ಯಕೀರ್ತಿಃ' ಎನ್ನಲ್ಪಡುವನು (ಮ) ಪುಣ್ಯ ಸಂಪಾದಕವಾದ ಕೀರ್ತಿಯುಳ್ಳವನು. (ವಿ‖ ಭಾ) "ನಾಮಸಂಕೀರ್ತನಂ ಭಕ್ತ್ಯಾ ವಿಲಾಪನ ಮನುತ್ತಮಂ | ಮೈತ್ರೇಯಾಶೇಷಪಾಪಾನಾಂ ಧಾತೂನಾಂ ಮವಪಾವಕಃ" (ವಿಷ್ಣು ಪು‖) ಎಂಬಂತೆ ತನ್ನ ನಾಮ ಸಂಕೀರ್ತನವೂ ಅದರಂತೆ ಪರಿಶುದ್ಧಿಯನ್ನುಂಟುಮಾಡತಕ್ಕದ್ದಾಗಿರುವಂತವನು ಆದುದರಿಂದಲೇ ತಾನೇ ಅವನ ವಿಷಯವಾದ ಸೂಕ್ತಿಗಳನ್ನು ಕೂಡ ಪರಮಪಾವನವೆನ್ನುವರು. ‖೬೯೩‖

## (೬೯೪ನೇ ನಾಮವು) ಅನಾಮಯಃ,

## ಓಮ್॥ ಅನಾಮಯಾಯನಮಃ.

(ಶಂ॥ ಬಾ) ಕರ್ಮಜನ್ಯಗಳಾದ ಬಾಹ್ಯಾಭ್ಯಂತರ ವ್ಯಾಧಿಗಳಿಂದ ಪೀಡಿಸಲ್ಪಡದವನು. (ಮ) ವ್ಯಾಧಿರಹಿತನು (ವಿ॥ ಭಾ) ಈ ಪ್ರಕಾರ ವಾಗಿ ತನ್ನ ಸಂಬಂಧವೆಂಬ ದಿವ್ಯೌಷಧದಿಂದ ಸಂಸಾರವೆಂಬ ಮಹಾ ರೋಗವನ್ನು ನಾಶಪಡಿಸುವುದರಿಂದ ರೋಗ ವಿರೋಧಿಯಾದವನು ಪರ ಮಾತ್ಮನನ್ನು ಅನುಭವಿಸದಂತೆ ಮಾಡಿ ಚೇತನ ಶಕ್ತಿಯನ್ನು ಕೆಡಿಸುವು ದರಿಂದ ಸಂಸಾರವನ್ನು ರೋಗವನ್ನಾಗಿ ಹೇಳುವರು. ॥೬೯೪॥

ಈ ೭೩ನೇ ಶ್ಲೋಕದಲ್ಲಿ ಪ್ರಕೃತಗಳಾದ ನಾಮಗಳಿಗೆ "ಚೇತಶ್ಚ ರೀರಯೋರ್ಜಂತೋ ರ್ವ್ಯಾಪಾರಾರಾಧ್ಯತಾಹರೇಃ । ಉಕ್ತಾನಾರಾಯ ಣಸ್ಯಾದ ವಾಗಾರಾಧ್ಯತ್ವ ಮುಚ್ಯತೇ ॥ ಸ್ತ್ರಕ್ರತಃಸ್ತುತ್ಯರ್ಹಣಾತ್ "ಸ್ತವ್ಯಃ" (೬೮೪) ಷಡರ್ಣೋ ಬಂಧಮೋಚಕಃ ॥ ಯಯಾಕಯಾಚಿ ದ್ವಾಚರತ್ವಾ ಯೇನಕೇನಾಪಿಜಂತುನಾ । ಯಥಾಕಥಂ ಚಿತ್ಕಥಿತೋ ಯನ್ಯಪ್ರಿಯತಮಸ್ತವಃ ॥ ಸ್ತವಪ್ರಿಯಃ (೬೮೫) ಸ ಕಥಿತೋವಸ್ವ ರ್ಣಃ ಪ್ರೀತಿವರ್ಧಕಃ । ಸ್ವೋನ್ಯೈವನಿಷ್ಪಾದ್ಯತಯಾ ಸ್ವಸ್ತುತೇಃ "ಸ್ತೋ ತ್ರ" (೬೮೬) ಮುಚ್ಯತೆ ॥ ಶೇಷಶೇಷಾಶನಾದ್ಯೈರ್ಯ ಸ್ಸೂರಿಭಿಶ್ಚಾಸ್ಮ ದಾದಿಭಿಃ । ಸ್ತುತತ್ವಾದವಿಶೇಷೇಣ "ಸ್ತುತ" (೬೮೭) ಇತ್ಯಭಿಧೀಯ ತೇ ॥ ಸ್ವಸ್ತೋತಾರಂ ಪರಂಸ್ತೋತುಂ ಶೀಲಂಯಸ್ಯಾಸ್ತಿ ಸರ್ವದಾ । "ಸ್ತೋತಾ" (೬೮೮) ಸಗಾನ್ಯತ್ಪಂಚವರ್ಣಸ್ಸತ್ವಸ್ತುತ್ಯ ತ್ವದೋಮ ನುಃ ॥ ಸುಹೃತ್ಪ್ರಿಯಂ ಯುದ್ಧಕರ್ಮ ಯಸ್ಯಾಸ್ತಿಸ "ರಣಪ್ರಿಯಃ" (೬೮೯) ॥ ಅವಾಪ್ತಸರ್ವಕಾಮತ್ವಂ ಯಸ್ಯಾಪ್ತಿ "ಪೂರ್ಣ" (೬೯೦) ಉಚ್ಯತೆ । ಸದಾ ಪೂರಯಿತುಂಶೀಲಂ ಯಸ್ಯಸ್ತೋತೃಮನೋರಥಾನ್ ॥ ಸಗಾನ್ಯ "ತ್ಪೂರಯಿತಾ" (೬೯೧) "ಪುಣ್ಯೋ" (೬೯೨) ಯೋಸಾ ಪಾತಕಿ ಪಾವನಃ । ಪುಣ್ಯಶ್ಲೋಕೋಸ್ತಿ ಯಸ್ಯೇತಿ "ಪುಣ್ಯಕೀರ್ತಿ" (೬೯೩) ಸ್ಸತುಸ್ಮೃತಃ ॥ ಸಂಸಾರಾಖ್ಯ ಮಹಾವ್ಯಾಧೇ ರ್ವಿರೋಧಿತ್ವಾ "ದನಾಮಯಃ" (೬೯೪) ಎಂಬೀರೀತಿಯಿಂದ ವಿವೃತಿಯನ್ನು ಕಾಣ ಬೇಕು.

ಮೂ|| ಮನೋಜವಸ್ತೀರ್ಥಕರೋ ವಸುರೇತಾ ವಸುಪ್ರದಃ । ವಸುಪ್ರದೋ ವಾಸುದೇವೋ ವಸುರ್ವಸುಮನಾ ಹವಿಃ

(೬೯೫ನೇ ನಾಮವು) ಮನೋಜವಃ
ಓಮ್|| ಮನೋಜವಾಯನಮಃ

ಭಾ) ಸಮಸ್ತ ವಸ್ತುಗಳನ್ನೂ ಹೊಂದಿರುವುದರಿಂದ ಮನೋವೇಗಕ್ಕೆ ಸಮಾನವಾದ ವೇಗವುಳ್ಳವನು. (ವಿ|| ಭಾ) ಹಿಂದೇ ಹೇಳಿರುವಂತವುಗಳನ್ನು ಭಕ್ತಜನರಿಗೆ ಶೀಘ್ರವಾಗಿ ಮಾಡುತ್ತಾನೆಂಬ ಕಾರಣದಿಂದ 'ಮನೋಜವಃ.' ಇದಕ್ಕೆ "ಕ್ಷಿಪ್ರಂಭವತಿಧರ್ಮಾತ್ಮಾ || (ಗೀ|| ೯|| ೩೧) ಸಪ್ತಜನ್ಮ ಕೃತಂಪಾಪಂ ಸ್ವಲ್ಪಂವಾಯದಿವಾಬಹು | ವಿಷ್ಣೋರಾಲಯವಿನ್ಯಾಸ ಪ್ರಾರಂಭಾದೇವ ನಶ್ಯತಿ" (ವಿ|| ಧ|| ೮೩ ೨೦) ಎಂಬಂತೆ ಭಕ್ತರಿಗೆ ಪಾಪ ಪರಿಹಾರವನ್ನೂ ಜ್ಞಾನಾದಿರೂಪವಾದ ಸಮೃತ್ತನ್ನೂ ಶೀಘ್ರವಾಗಿ ಮಾಡುತ್ತಾನೆಂಬ ಈ ವಚನಗಳು ಆಧಾರಗಳಾಗಿರುವುವು. (ಮ) ಮನೋವೇಗಕ್ಕಿಂತಲೂ ಅತಿಶಯಿತವಾದ ವೇಗವುಳ್ಳವನು. ||೬೯೫||

(೬೯೬ನೇ ನಾಮವು) ತೀರ್ಥಕರಃ,
ಓಮ್|| ತೀರ್ಥಕರಾಯನಮಃ

(ಶಂ|| ಬಾ) ಹದಿನಾಲ್ಕು ವಿದ್ಯೆಗಳಿಗೂ ವೇದಬಾಹ್ಯಗಳಾದ ಸಿದ್ಧಾಂತಗಳಿಗೂ ಪ್ರವರ್ತಕನು. ಮತ್ತು ಹಯಗ್ರೀವ ರೂಪದಿಂದ ಮಧುಕೈಟಭರನ್ನು ಸಂಹರಿಸಿ ಸೃಷ್ಟ್ಯಾದಿಯಲ್ಲಿ ಚತುರ್ಮುಖನಿಗೆ ಸರ್ವಶ್ರುತಿಗಳನ್ನೂ ಸಕಲ ವಿದ್ಯೆಗಳನ್ನೂ ಉಪದೇಶಿಹವನೆಂತಲೂ ದೇವಶತ್ರುಗಳಾದ ಅಸುರರಿಗೆ ವೇದಬಾಹ್ಯಗಳಾದ ವಿದ್ಯೆಗಳನ್ನು ವಂಚನಾರ್ಥವಾಗಿ ಉಪದೇಶಿಸಿದವನೆಂತಲೂ ಪೌರಾಣಿಕರು ಹೇಳುವರು. (ವಿ|| ಭಾ) ತನ್ನಂತೆಯ ಸ್ಮರಣ ಕೀರ್ತನ ಮಾತ್ರದಿಂದ ಸಮಸ್ತರನ್ನೂ ಪವಿತ್ರರ

ಸ್ನಾನಗಿ ಮಾಡುವ ಗಂಗಾ ಪುಷ್ಕರಾದಿ ತೀರ್ಥಗಳಿಗೂ ಕೂಡ ಪಾರಿಶುದ್ಧ್ಯವನ್ನುಂಟುಮಾಡತಕ್ಕವನು. (ಅಥವಾ) ಶ್ರುತಿಸ್ಮೃತ್ಯಾದಿಗಳಾದ ಒಳ್ಳೇ ಸಿದ್ಧಾಂತಗಳನ್ನು ಪ್ರವರ್ತನಮಾಡುವಂತವನು (ಯದ್ವಾ) ಪ್ರವೇಶಿಸುವುದಕ್ಕೆ ಅನರ್ಹವಾದ ಅಗಾಧವಾಗಿರುವ ಸಮುದ್ರದಂತೆ ಇರುವ ತನ್ನಲ್ಲಿ ಪ್ರವೇಶಿಸುವುದಕ್ಕೆ ಅನುಕೂಲವಾದ ಸೋಪಾನವನ್ನುಂಟುಮಾಡಿದವನೆಂತಲೂ ಆಗಬಹುದು. (ಮ) ಶಾಸ್ತ್ರವನ್ನು ಮಾಡುವಂತವನು. ||೬೯೬||

## (೬೯೭ನೇ ನಾಮವು) ವಸುರೇತಾಃ,

### ಓಮ್|| ವಸುರೇತಸೇನಮಃ.

(ಶಂ|| ಮ) ಪರಮಾತ್ಮನು ಸೃಷ್ಟ್ಯಾದಿಕಾಲದಲ್ಲಿ ಮೊದಲು ಜಲವನ್ನು ಸೃಷ್ಟಿಸಿ ಅದರಲ್ಲಿ ತನ್ನ ವೀರ್ಯವನ್ನು ಬಿಡಲು ಅದು ಸಹಸ್ರಸೂರ್ಯಸಮಾನವಾದ ಕಾಂತಿಯುಳ್ಳ ಸ್ವರ್ಣಮಯವಾದ ಅಂಡವಾಗಿ ಹುಟ್ಟಿತೆಂಬ ವ್ಯಾಸ ವಾಕ್ಯಾನುಸಾರನಾಗಿ ಸ್ವರ್ಣಮಯವಾದ ರೇತಸ್ಸು (ವೀರ್ಯವು) ಳ್ಳವನು. (ವಿ|| ಭಾ) ಇನ್ನು ಮುಂದೆ ಕೃಷ್ಣಾವತಾರವು ಹೇಳಲ್ಪಡುವುದು. ದಿವ್ಯ ತೇಜಸ್ಸನ್ನೇ ಉಪಾದಾನಕಾರಣವುಳ್ಳವನಾಗಿ ಅವತಾರವನ್ನು ಮಾಡಿದವನು. ವಸು ಶಬ್ದವು ತೇಜಃಪರವಾಗಿರುವುದು. ||೬೯೭||

## (೬೯೮—೬೯೯ನೇ ನಾಮವು) ವಸುಪ್ರದಃ,

### ಓಮ್|| ವಸುಪ್ರದಾಯನಮಃ.

(ಶಂ|| ಮ) ಧನವನ್ನು ಅಧಿಕವಾಗಿ ಕೊಡುವಂತವನು. ಇವನೇ ಸಾಕ್ಷಾತ್ ಧನಾಧ್ಯಕ್ಷನು, ಅನ್ಯರಿಗೆ ಇವನ ಅನುಗ್ರಹದಿಂದ ಧನಾಧ್ಯಕ್ಷತ್ವವೂ ಧನ ಪ್ರದತ್ವವೂ ಎಂದರಿಯಬೇಕು. ಎರಡನೇ "ವಸುಪ್ರದ" ಶಬ್ದಕ್ಕೆ ಅಧಿಕವಾದ ಮೋಕ್ಷ ಫಲವನ್ನು ಭಕ್ತರಿಗೆ ಕೊಡುವಂತವನೆಂತಲೂ ರಾಕ್ಷಸರ ಧನವನ್ನು ಖಂಡಿಸುವಂತವನೆಂತಲೂ ಅರ್ಥವನ್ನರಿಯಬೇಕು. (ವಿ|| ಭಾ) ಪರಮನಿಧಿಯಾದ ತನ್ನನ್ನು ದೇವಕೀ ವಸುದೇವರುಗಳಿಗೆ

ಪುತ್ರಧನವನ್ನಾಗಿ ಕೊಟ್ಟವನು. (೧ನೇ ನಾಮಕ್ಕೆ) ಜಗತ್ತಿಗೆಲ್ಲವೂ ತಂದೆಯಾದ ತನಿಗೂ ಕೂಡ ತಾಯಿತಂದೆಗಳಾಗಿರುವುದೆಂಬ ಮಹತ್ತಾದ ತೇಜಸ್ಸನ್ನು ಅವರಿಗೆ ಕೊಟ್ಟವನು. ‖೬೯೮–೬೯೯‖

## (೭೦೦ನೇ ನಾಮವು) ವಾಸುದೇವಃ,

## ಓಮ್‖ ವಾಸುದೇವಾಯನಮಃ.

ವಿ‖ ಮ) ವಸುದೇವರಿಗೆ ಪುತ್ರನಾದ ಕಾರಣ 'ವಾಸುದೇವಃ' ಎನ್ನಲ್ಪಡುವನು. ‖೭೦೦‖

ಈ ರೀತಿಯಿಂದ ಶ್ರೀಪರಾಶರ ಭಟ್ಟಾರ್ಯ ಭಾಷಿತವಾದ ಭಗವದ್ಗುಣ ದರ್ಪಣವೆಂಬ ಶ್ರೀಸಹಸ್ರನಾಮ ಭಾಷ್ಯದಲ್ಲಿ ಸಪ್ತಮ ಶತಕವು ಸಮಾಪ್ತವು



## (೭೦೧ನೇ ನಾಮವು) ವಸುಃ,

## ಓಮ್‖ ವಸವೇನಮಃ.

(ಶಂ‖ ಭಾ) ಸರ್ವಭೂತಗಳೂ ಇವನಲ್ಲಿಯೂ ಸರ್ವ ಭೂತಗಳಲ್ಲಿ ಈ ಪರಮಾತ್ಮನೂ ವಾಸಮಾಡುವುದರಿಂದ 'ವಸುಃ' ಎನ್ನಲ್ಪಡುವನು. (ತನ್ನ ಸ್ವರೂಪವನ್ನು ಮಾಯೆಯಿಂದ ಮುಚ್ಚುವಂತವನೆಂತಲೂ ಹೇಳಬಹುದು.) (ವಿ‖ ಭಾ) ಈ ಕೃಷ್ಣಾವತಾರಕ್ಕೆ ಕಾರಣವಾದ ಕ್ಷೀರಾಬ್ಧಿವಾಸವನ್ನು ಹೇಳುತ್ತಾರೆ. ಕ್ಷೀರಾಬ್ಧಿಯಲ್ಲಿ ವಾಸಮಾಡುವಂತವನು (ಮ) ಅಷ್ಟ ವಸುಗಳಲ್ಲಿ ಒಬ್ಬರಾದ ವಸುವಿನ ಅವತಾರ ಭೂತರಾದಕಾರಣದಿಂದಲೂ ಭಗವದ್ವಿಭೂತಿಭೂತರಾದ ಕಾರಣದಿಂದಲೂ ವಸು ಶಬ್ದದಿಂದ ಭೀಷ್ಮರು ಹೇಳಲ್ಪಡುವರು. ಹೀಗಿಲ್ಲದಿದ್ದರೆ ಭೀಷ್ಮಾಚಾರ್ಯರಿಗೆ ವಿಚಿತ್ರ ಶಕ್ತಿಯೋಗವೂ ಸರ್ವಜ್ಞತ್ವವೂ ಉಂಟಾಗಲಾರದಷ್ಟೆ. ‖೭೦೧‖

## (೭೦೨ನೇ ನಾಮವು) ವಸುಮನಾಃ,

## ಓಮ್‖ವಸುಮನಸೇನಮಃ.

(ಶಂ|| ಭಾ) ತಾರತಮ್ಯವಿಲ್ಲದೆ ಸರ್ವ ವಸ್ತುಗಳಲ್ಲಿಯೂ ವಾಸಮಾಡುವಂತಹ ಮನಸ್ಸುಳ್ಳವನು. (ವಿ|| ಭಾ) ತನಿಗೆ ಪ್ರಾಣಪದವಾದ ಶ್ರೀಲಕ್ಷ್ಮೀದೇವಿಯ ಅವತಾರ ಸ್ಥಲವಾಗಿರುವ ಕ್ಷೀರಾಬ್ಧಿಯಲ್ಲಿ ತಾನು ವಾಸಮಾಡುತಲಿದ್ದರೂ ಅಸುದೇವರಲ್ಲಿಡಲ್ಪಟ್ಟ ಮನಸ್ಸುಳ್ಳವನು. ದೇವದತ್ತನಿಗೆ ದತ್ತಶಬ್ದಮಾತ್ರದಿಂದಲೂ ಸತ್ಯಭಾಮೆಗೆ ಭಾಮೆ ಎಂಬ ಶಬ್ದಮಾತ್ರದಿಂದಲೂ ಅರ್ಥೋಕ್ತಿಯಿಂದ ಪೂರ್ಣೋಕ್ತಿಯಾಗುವುದೆಂಬ ಮಹಾಭಾಷ್ಯಕಾರರ ಸೂಕ್ತಿಯಂತೆ ಇಲ್ಲಿ ವಸು ಶಬ್ದದಿಂದ ವಸುದೇವರು ಹೇಳಲ್ಪಟ್ಟರೆಂದರಿಯಬೇಕು. (ಮ) ವಸುವಾದ ಭೀಷ್ಮರಲ್ಲಿ ಪ್ರಸನ್ನವಾದ ಮನಸ್ಸುಳ್ಳವನು. ಇಂತಹ ಮನಸ್ಸು ಇವನಿಗಿಲ್ಲದಿದ್ದರೆ ಚಕ್ರವನ್ನು ಹಿಡಿಯಲಾರನೆಂಬ ತನ್ನ ಪ್ರತಿಜ್ಞೆಯನ್ನು ವ್ಯರ್ಥವನ್ನಾಗಿ ಮಾಡಿಕೊಂಡಾದರೂ ಚಕ್ರವನ್ನು ಹಿಡಿಸುವೆನೆಂಬ ತನ್ನ ಭಕ್ತರಾದ ಭೀಷ್ಮರ ಪ್ರತಿಜ್ಞೆಯನ್ನು ಸಮರ್ಥಿಸಲಾರನಷ್ಟೆ. "ವಸುರ್ವಸುಮನಾಃ|| ಮಹೇಂದ್ರೋ ವಸುದೋವಸುಃ" ಎಂಬೀ ಸ್ಥಲಗಳಲ್ಲಿ ಅರ್ಥಭೇದ ವಿರುವುದರಿಂದ ಪುನರುಕ್ತಿ ಇರುವುದಿಲ್ಲವು (ಶಂ) ಭಾಷ್ಯದಲ್ಲಿ ಅರ್ಥಾಂತರವಿರುವುದಿಲ್ಲವಾದುದರಿಂದ ಪುನರುಕ್ತದೋಷವು ದುಷ್ಪರಿಹರವು. ||೭೦೦||

## (೭೦೩ನೇ ನಾಮವು) ಹವಿಃ,

## ಓಮ್|| ಹವಿಷೇನಮಃ.

(ಶಂ|| ಮ) "ಬ್ರಹ್ಮಾರ್ಪಣಂ ಬ್ರಹ್ಮಹವಿಃ" (ಗೀ|| ೪|| ೨೪) ಬ್ರಹ್ಮವೇ ಹವಿಸ್ಸ್ವರೂಪವಾಗಿರುವುದರಿಂದ 'ಹವಿಃ' ಎನ್ನಲ್ಪಡುವುದು. (ವಿ|| ಭಾ) ಇವನಿಗೆ ದೇವಕೀ ವಸುದೇವರುಗಳಲ್ಲಿ ವಾಸಮಾಡಲಪೇಕ್ಷೆ ಇದ್ದರೂ ಅವರುಗಳು ಇವನಿಗೆ ಕಂಸನಿಂದ ಯೆಂತಹ ಭಯ ಉಂಟಾಗುವುದೊ ಎಂದು ಇವನಲ್ಲುಂಟಾದ ಪ್ರೀತಿ ವಿಶೇಷದಿಂದ ಅತಿಶಂಕೆ ಪಟ್ಟು ಇವನ ರಕ್ಷಣಾರ್ಥವಾಗಿ ಯಶೋದಾನಂದ ಗೋಪರಿಗೆ ಇವನನ್ನು ಸಮರ್ಪಿಸಲೂ ಅವರಿಂದ ಸ್ವೀಕೃತನಾದಕಾರಣ 'ಹವಿಃ' ಎನ್ನಲ್ಪಡುವನು. ||೭೦೩||

ಈ ಪ್ರಕಾರವಾಗಿ ೭೪ ಶ್ಲೋಕದಲ್ಲಿರುವ ನಾಮಗಳಿಗೆ 'ಭಕ್ತಾನಾಂ ಸರ್ವ್ವದ್ರೀಶ್ರೀಂ ಕರೋತೀತಿ "ಮನೋಜವಃ" (೬೯೫) ೭೦

ಗಾದಿತೀರ್ಥ ಹೇತುತ್ವಾಚ್ಚ ತಿಸ್ಮೃತ್ಯೋಃ ಪ್ರವರ್ತನಾತ್ | ಆತ್ಮ ಪ್ರವೇಶ ಸೋಪಾನಂಕೃತ್ವಾ " ತೀರ್ಥಕರಃ " (೬೯೬) ಸ್ಮೃತಃ || ವಸುಶಬ್ದೋ ಜ್ಯೋತಿರರ್ಥೋ ರೇತಸ್ತತ್ಕಾರಣಂಮತಂ || ದಿವ್ಯಜ್ಯೋತಿಃ ಕಾರಣತ್ವಾತ್ " ವಸುರೇತಾಃ " (೬೯೭) ಪ್ರಕೀರ್ತಿತಃ || ದೇವಕೀವಸುದೇವಾಭ್ಯಾ ಮಾತ್ಮರೂಪಂ ಮಹದ್ಧನಂ | ಪುತ್ರತ್ವೇನ ಪ್ರಕರ್ಷೇಣ ದದಾತೀತಿ " ವಸುಪ್ರದಃ " (೬೯೮) ದೇವಕೀವಸುದೇಭ್ಯಾಂ ಸ್ವಪಿತೃತ್ವಂ ಮಹದ್ವಸು | ತೇಜೋಽಯ ಪ್ರದಾತೀತಿ " ವಸುಪ್ರದ " (೬೯೯) ಈರಿತಃ || ವಸುದೇವಾಪತ್ಯತಶ್ಚ " ವಾಸುದೇವಃ " (೭೦೦) ಪ್ರಕೀರ್ತಿತಃ | ವಸತೀತಿ " ವಸುಃ " (೭೦೧) ಲೋಕಹಿತೇಚ್ಛುಃ ಕ್ಷೀರಸಾಗರೇ|| ಜನ್ಮಭೂಮ್ಯರ್ಣವೇಲಕ್ಷ್ಮ್ಯಾ ವಸತೋಯುಸ್ಯವ್ಯಮನಃ | ಅಸ್ತೀತಿ ವಸುದೇವೇಹಿ ಸಚಸ್ಸ್ಯಾ " ತ್ವಸುಮನಾಃ " (೭೦೨) ಪರಂ || ನಂದಗೋಪಯಶೋದಾಭ್ಯಾಂ ಕಂಸೋಽಸದ್ರವ ಶಾಂತಯೇ | ಆದೀಯತೇ ಸ್ವೀಕ್ರಿಯತೇ ಸ " ಹವಿಃ " (೭೦೩) ಪರಿಕೀರ್ತಿತಃ " || ಎಂಬ ರೀತಿಯಿಂದ ವಿವೃತಿಯನ್ನು ಕಾಣಬೇಕು.

ಮೂ|| ಸದ್ಗತಿ ಸತ್ಕೃತಿ ಸ್ಸತ್ತಾ ಸದ್ಭೂತಿ ಸ್ಸತ್ಪರಾಯಣಃ | ಶೂರಸೇನೋ ಯದುಶ್ರೇಷ್ಠ ಸ್ಸನ್ನಿವಾಸಸ್ಸುಯಾಮುನಃ ||೭೫||

(೭೦೪ನೇ ನಾಮವು) ಸದ್ಗತಿಃ,

ಓಮ್|| ಸದ್ಗತಯೇನಮಃ.

( ಶಂ|| ಭಾ ) " ಅಸ್ತಿಬ್ರಹ್ಮೇತಿಚೇದ್ವೇದ ಸನ್ತಮೇನಂತತೋವಿದುಃ " ಎಂಬ ತೈತ್ತಿರೀಯ ಶ್ರುತ್ಯನುಸಾರವಾಗಿ ಬ್ರಹ್ಮವಿರುವುದೆಂಬ ಬ್ರಹ್ಮಾಸ್ತಿತ್ವ ಜ್ಞಾನವುಳ್ಳ ಸತ್ತುಗಳು, ಎಂದರೆ ಅಂತವರೆ ಸತ್ಪುರುಷರು, ಅವರಿಂದ ಹೊಂದಲ್ಪಡುವಂತವನು. (ಅಥವಾ) ಶ್ರೇಷ್ಠವಾದ ಸದ್ಬುದ್ಧಿ ಯುಳ್ಳವನು. ||೭೦೪||

## (೭೦೫ನೇ ನಾಮವು) ಸತ್ಕ್ರತಿಃ,

## ಓಮ್॥ ಸತ್ಕ್ರತಯೇನಮಃ,

(ಶಂ॥ ಭಾ) ಜಗದ್ರಕ್ಷಣ ರೂಪವಾದ ಯೋಗ್ಯ ವ್ಯಾಪಾರವುಳ್ಳವನು. ॥೭೦೦॥

—ಈ ರೀತಿಯಾಗಿ (ಮ॥ ಶಂ) ಪ್ರಕಾರ ಸಪ್ತಮಶತಕವು—

(ವಿ॥ ಭಾ) ತನ್ನ ಕೃಷ್ಣಾವತಾರದಲ್ಲಿ ಮೊಸರು ಬೆಣ್ಣೆಗಳನ್ನು ಕದಿಯುವುದೂ, ರಾಸಕ್ರೀಡಾದಿಗಳನ್ನಾಡುವುದೂ, ಒರಳುಕಲ್ಲಿನಲ್ಲಿ ಕಟ್ಟಲ್ಪಡುವುದೆಂಬೀ ಮೊದಲಾದ ವೃತ್ತಾಂತಗಳನ್ನು ಕಂಡೂ ಕೇಳಿಯೂ ಇರುವಂತವರಿಗೆ ಸಂಸಾರ ಬಂಧವನ್ನು ಬಿಡಿಸುವಂತಹ ಸದ್ವ್ಯಾಪಾರವುಳ್ಳವನು. ॥೭೦೫॥

## (೭೦೬ನೇ ನಾಮವು) ಸತ್ತಾ,

## ಓಮ್॥ ಸತ್ತಾಯೈನಮಃ.

(ಶಂ॥ ಭಾ) ಸಜಾತೀಯ ವಿಜಾತೀಯ ಸ್ವಗತ ಭೇದರಹಿತವಾದ ಅನುಭೂತಿಯುಳ್ಳವನು. (ಅನುಭೂತಿರನುಭವಃ) (ವಿ॥ ಭಾ) ಸಜ್ಜನರ ಸತ್ತೆಯೂ ತಾನೇ ಆಗಿರುವಂತವನು. ಅವನಿಲ್ಲದಿದ್ದರೆ ಯಾವುದೂ ಆಗುವುದಿಲ್ಲವಷ್ಟೆ:— ಸರ್ವದೇಶ ಸರ್ವಕಾಲಗಳಲ್ಲಿಯೂ ತನ್ನ ಸತ್ತೆಗೆ ಹಾನಿ ಇಲ್ಲದವನು. ॥೭೦೬॥

## (೭೦೭ನೇ ನಾಮವು) ಸದ್ಭೂತಿಃ,

## ಓಮ್॥ ಸದ್ಭೂತಯೇನಮಃ.

(ಶಂ॥ ಭಾ) ಸಜಾತೀಯ ವಿಜಾತೀಯ ಭೇದ ಶೂನ್ಯವಾಗಿ ಕೇವಲ ಸತ್ತಾಮಾತ್ರವಾಗಿದ್ದರೂ ನಾನಾಪ್ರಕಾರವಾಗಿ ತೋರುವಂತವನು. (ವಿ॥ ಭಾ) ಸತ್ಪುರುಷರಿಗೆ ಪುತ್ರಮಿತ್ರ ಬಂಧು ದೂತ ಸಾರಥಿಯೇ ಮೊದಲಾದ ಸಕಲ ವಿಧವಾದ ವಿಭೂತಿಯೂ ತಾನೇ ಆಗಿರುವಂತವನು. (ಮ) ಶ್ರೇಷ್ಠವಾದ ಅವತಾರರೂಪವಾಗಿರುವ ಉತ್ಪತ್ತಿಯುಳ್ಳವನು. ಅಥವಾ ಸತ್ಪುರುಷರಿಗೆ ಅಧಿಕವಾದ ಐಶ್ವರ್ಯರೂಪವಾಗಿರುವಂತವನು ॥೭೦೭॥

## (೭೦೮ನೇ ನಾಮವು) ಸತ್ಪರಾಯಣಃ,

ಓಮ್|| ಸತ್ಪರಾಯಣಾಯ ನಮಃ.

(ಶಂ|| ವಿ|| ಮ) ಸತ್ಪುರುಷರಿಗೆ ಪರಮಗತಿಯಾದವನು, (ವಿ) ಸತ್ಪರಾಯಣಃ ಎಂದು ಪಾಠವಾದಾಗ ಸಾಧುಗಳನ್ನೆ ತನಿಗೆ ಪರಮಗತಿಯನ್ನಾಗಿವುಳ್ಳವನೆಂದರ್ಥವು. ||೭೦೮||

## (೭೦೯ನೇ ನಾಮವು) ಶೂರಸೇನಃ,

ಓಮ್|| ಶೂರಸೇನಾಯ ನಮಃ.

(ಶಂ|| ಮ) ಆಂಜನೇಯರೇ ಮೊದಲಾದ ಮಹಾ ಶೂರರಾದ ಸೇನಾಪತಿಯುಳ್ಳ ಸೇನೆಯುಳ್ಳವನು. (ವಿ|| ಭಾ) ಭೂಭಾರ ನಿರಾಕರಣಕ್ಕಾಗಿ ಶೂರರಾದ ಯಾದವ ಪಾಂಡವರನ್ನೇ ಸಹಾಯವಾಗಿ ವುಳ್ಳವನು. ||೭೦೯||

## (೭೧೦ನೇ ನಾಮವು) ಯದುಶ್ರೇಷ್ಠಃ,

ಓಮ್|| ಯದುಶ್ರೇಷ್ಠಾಯ ನಮಃ.

(ಶಂ|| ಮ) ಯಾದವರಲ್ಲಿ ಪ್ರಧಾನನು. (ವಿ|| ಭಾ) ಯಾದವರನ್ನು ಉದ್ಧರಿಸುವುದಕ್ಕಾಗಿ ಅವರ ಕುಲದಲ್ಲಿ ಅತ್ಯಂತ ಶ್ರೇಷ್ಠನಾಗಿ ಅವತರಿಸಿದವನು. ||೭೧೦||

## (೭೧೧ನೇ ನಾಮವು) ಸನ್ನಿವಾಸಃ,

ಓಮ್|| ಸನ್ನಿವಾಸಾಯ ನಮಃ.

(ಶಂ|| ಮ) ಸತ್ಪುರುಷರಿಗೆ ಆಶ್ರಯಭೂತನು. (ವಿ|| ಭಾ) ಮನುಷ್ಯಧರ್ಮ ಶೀಲನಾಗಿರುತಲಿದ್ದರೂ ಸನಕಾದಿ ಸಾಧುಗಳಿಗೆ ವಿಶ್ರಾಂತಿ ಭೂಮಿಯಾಗಿರುವಂತವನು. ||೭೧೧||

## (೭೧೨ನೇ ನಾಮವು) ಸುಯಾಮುನಃ,

ಓಮ್|| ಸುಯಾಮುನಾಯ ನಮಃ.

(ಶಂ॥ ವಿ॥ ಮ) ಯಮುನಾನದೀ ಸಂಬಂಧಿಯಾದ ಜಲಕ್ರೀಡಾ ರಾಸಕ್ರೀಡಾ ಪುಷ್ಪಗ್ರಹಣ ಕ್ರೀಡಾದಿಗಳನ್ನೇ ಮನೋಹರವಾದ ವ್ಯಾಪಾರವಾಗಿವುಳ್ಳವನು ॥೨೧೨॥

ಈ ೨೨ನೇ ಶ್ಲೋಕದಲ್ಲಿರುವ (೯) ನಾಮಗಳಿಗೂ "ಉತ್ಪನ್ನ ಏವ ಕಂಸಾದಿಕೃತಬಾಧಾಪನೋದನಾತ್ । ಸತಾಂಪ್ರಾಪ್ಯ ತಯಾಚೈವ "ಸದ್ಗತಿ" (೨೦೪) ಸ್ಸಮುದಾಹೃತಃ ॥ ರಾಸಕ್ರೀಡಾದಿ ಕೃತಯಸ್ಸಂತ್ಯಾಯಸ್ಯಚ "ಸತ್ಕೃತಿಃ" (೨೦೫) । ಸ್ವಯಮೇವಸತಾಂಸತ್ತಾಯಸ್ಮಾತ್ "ತ್ಸತ್ತೇ" (೨೦೬) ತಿಕೀರ್ತ್ಯತೇ ॥ ಸತಾಂಪುತ್ರಕಲತ್ರಾದಿಭೂತ್ವಾ "ಸದ್ಭೂತಿ" (೨೦೭) ರುಚ್ಯತೇ । ಸತಾಂಪರಂ ಸ್ಯಾದಯನಂ ಸಂತ್ರೋಯಸ್ಯೋತ್ತಮಾಯನಂ । ಸ "ಸತ್ಪರಾಯಣಂ" ಖ್ಯಾತೋಯದ್ವಾಸ್ಯ "ತ್ಸತ್ಪರಾಯಣಃ (೨೦೮) ॥ ಭೂಭಾರಹರಣಾರ್ಥಾಯ ಯಾದವಾಃ ಪಾಂಡವಾಶ್ಚಯೇ । ಶೂರಾಸ್ಸಹಾಯಾ ಯಸ್ಯೇತಿ "ಶೂರಸೇನ" (೨೦೯) ಸ್ಸಕಥ್ಯತೇ ॥ ಮಗ್ನಂತುಯಾದವಂವಂಶ ಮುದ್ಧರಿಷ್ಯತಿಯಶ್ಚಸಃ । ಯದುಶ್ರೇಷ್ಠ" (೨೧೦) ಇತಿಖ್ಯಾತೋವಸ್ವರ್ಣೋ ವಂಶವರ್ಧನಃ ॥ ಸನಕಾದಿನಿವಾಸೋಹಿ ಮಾನುಷ್ಯತ್ವೇಪಿಯಸ್ಸದಾ । "ಸನ್ನಿವಾಸ" (೨೧೧) ಸ್ಸವಿಜ್ಞೇಯೋಹ್ಯಷ್ಟವರ್ಣಸ್ಸಧನದಾಯಕಃ ॥ ಗೋಪೀಭಿರ್ಯಮುನಾಯಾಂತು ಶೋಭನಂಪಾವನಂಮಹತ್ । ಜಲಕ್ರೀಡಾದಿಯಸ್ಯೇತಿ "ಸುಯಾಮುನ" (೨೧೨) ಇತೀರಿತಃ" ॥ ಎಂಬೀ ರೀತಿಯಾಗಿ ವಿವೃತಿಯನ್ನು ಕಾಣಬಹುದು.

ಮೂ॥ ಭೂತಾವಾಸೋ ವಾಸುದೇವ ಸ್ಸರ್ವಾಸುನಿಲಯೋ ಽನಲಃ । ದರ್ಪಹಾ ದರ್ಪದೋ ಽದೃಪ್ತೋ ದುರ್ಧರೋ ಽಥಾಪರಾಜಿತಃ ॥೨೩॥

(೨೧೩ನೇ ನಾಮವು) ಭೂತಾವಾಸಃ,

ಓಮ್॥ ಭೂತಾವಾಸಾಯನಮಃ.

(ವಿ॥ ಭಾ) ಕೃಷ್ಣನಾಗಿ ಅವತರಿಸಿದ್ದರೂ ಪರತ್ವದ ದಶೆಯಲ್ಲಿ

ಹೇಗೋ ಅದರಂತೆ (ಶಂ|| ವಿ|| ಮ) ಸರ್ವಭೂತಗಳಿಗೂ ನಿವಾಸಭೂಮಿ ಯಾಗಿರುವಂತಹವನು. ||೭೦೬||

## (೭೦೭ನೇ ನಾಮವು) ವಾಸುದೇವಃ,

### ಓಮ್|| ವಾಸುದೇವಾಯನಮಃ.

(ಶಂ|| ಭಾ) ಮಾಯೆಯಿಂದ ಪ್ರಪಂಚವನ್ನು ಮುಚ್ಚುವಂತಹವನು. (ವಿ|| ಭಾ) ವಸುದೇವನ ಪುತ್ರನಾಗಿದ್ದರೂ ವ್ಯೂಹ ವಾಸುದೇವನಾಗಿರುವಂತಹವನು, (ವಾಸುದೇವ ಸಂಕರ್ಷಣ ಪ್ರದ್ಯುಮ್ನಾನಿರುದ್ಧರೆನ್ನುವುದೆ ವ್ಯೂಹವು) (ಮ) ತನ್ನ ವಕ್ಷಸ್ಸ್ಥಳದಲ್ಲಿ ಸದಾ ವಾಸಮಾಡುತಲಿರುವ ಶ್ರೀದೇವಿಯೊಡನೆ ಸದಾಕ್ರೀಡಿಸುವಂತಹವನು. ನಮ್ಮ ವ್ಯಾಖ್ಯಾನದಲ್ಲಿ ಹಿಂದಿನ ಅರ್ಥದೊಡನೆ ಪುನರುಕ್ತಿ ಇಲ್ಲವು. (ಶಂ) ಭಾಷ್ಯದಲ್ಲಿ ಪುನರುಕ್ತಿದೋಷವಿರುವುದು. ||೭೦೭||

## (೭೦೮ನೇ ನಾಮವು) ಸರ್ವಾಸುನಿಲಯಃ,

### ಓಮ್|| ಸರ್ವಾಸುನಿಲಯಾಯನಮಃ.

(ಶಂ|| ಭಾ) ಸಮಸ್ತಗಳಾದ ಪ್ರಾಣಿಗಳು ಜೀವಾತ್ಮಕನಾದ ಯಾವತಾನೆಂಬ ಆಶ್ರಯದಲ್ಲಿ ಲಯಿಸಿರುವುವೋ ಅವನು 'ಸರ್ವಾಸುನಿಲಯಃ' ಎನ್ನಲ್ಪಡುವನು. (ವಿ|| ಮ) ಸಕಲ ಪ್ರಾಣಿಗಳಿಗು ಪ್ರಾಣಧಾರಕನಾಗಿರುವಂತಹವನು. ||೭೦೮||

## (೭೦೯ನೇ ನಾಮವು) ಅನಲಃ,

### ಓಮ್|| ಅನಲಾಯನಮಃ.

(ಶಂ|| ಭಾ) ತನ್ನಲ್ಲಿರುವ ಶಕ್ತಿ ಸಂಪತ್ತುಗಳಿಗೆ ಇಷ್ಟೆಂಬ ಪರ್ಯಾಪ್ತಿ ಇಲ್ಲನಾದಕಾರಣ 'ಅನಲಃ' ಎನ್ನಲ್ಪಡುವನು. (ವಿ|| ಭಾ) ಅಂತಹ ಸಾಧುಗಳಿಗೆ ತಾನು ಸರ್ವಕಾರ್ಯಗಳನ್ನೂ ಮಾಡಿದರೂ ತೃಪ್ತಿಯನ್ನು ಹೊಂದದವನು. ತನ್ನ ಭಕ್ತರ ವಿಷಯದಲ್ಲಿ ಅಪರಾಧಮಾಡುವ

ದಕ್ಕೆ ಶಕ್ತಿಯಿಲ್ಲದವನೆಂತಲೂ ಹೇಳಬಹುದು. (ಮ) ಇವನ ಮುಂದೆ ನಿಲ್ಲುವುದಕ್ಕೆ ಯಾರೂ ಸಮರ್ಥರಲ್ಲವು. ಅಥವಾ ಅಗ್ನಿಯಂತೇ ತೇಜಸ್ವಿಯಾಗಿರುವಂತವನು. ಇದರಿಂದ "ಪವನಃ ಪಾವನೋಽನಲಃ" ಎಂಬ ನಾಮದೊಡನೆ ಭೇದವು ಸಿದ್ಧವು. ||೨೧೬||

## (೨೧೭ನೇ ನಾಮವು) ದರ್ಪಹಾ,

## ಓಮ್|| ದರ್ಪಘ್ನೇನಮಃ.

(ಶಂ|| ಮ) ಧರ್ಮವಿರುದ್ಧವಾದ ಮಾರ್ಗದಲ್ಲಿರುವಂತವರ ಅಹಂಕಾರವನ್ನು ಖಂಡಿಸುವಂತವನು. (ವಿ|| ಭಾ) ಗೋವರ್ಧನ ಪರ್ವತವನ್ನು ಛತ್ರವನ್ನಾಗಿ ಹಿಡಿದೂ, ಪಾರಿಜಾತಹಾರವನ್ನು ಮಾಡಿಯೂ, ಬಾಣಾಸುರನ ತೋಳುಗಳನ್ನು ಖಂಡಿಸಿಯೂ, ದೇವತೆಗಳ ಗರ್ವಮಾತ್ರವನ್ನು ಖಂಡಿಸಿದವನು. ||೨೧೭||

## (೨೧೮ನೇ ನಾಮವು) ದರ್ಪದಃ,

## ಓಮ್|| ದರ್ಪದಾಯನಮಃ

(ಶಂ|| ಭಾ) ಧರ್ಮಮಾರ್ಗದಲ್ಲಿರುವಂತವರಿಗೆ (ದರ್ಪ) ಗರ್ವವನ್ನು ಕೊಡುವಂತವನು. (ವಿ|| ಭಾ) ಮಧುರಾಪಟ್ಟಣದಲ್ಲಿ ಯಾದವರಿಗೆ ಮಧುಪಾನಾದಿಗಳಿಂದ ದರ್ಪವನ್ನು ಕೊಟ್ಟವನು. ||೨೧೮||

## (೨೧೯ನೇ ನಾಮವು) ಅದೃಪ್ತಃ,

## ಓಮ್|| ಅದೃಪ್ತಾಯನಮಃ.

(ಶಂ|| ಮ) ದೃಪ್ತಃ ಎಂದು ಪಾಠವು – ತನ್ನ ಆತ್ಮನೆಂಬ ದಿವ್ಯಾಮೃತ ರಸಾಸ್ವಾದದಿಂದ ನಿತ್ಯ ಸಂತುಷ್ಟನು. (ವಿ|| ಭಾ) ಆದರೂ "ಏವಂವಿಧಾನಿಕರ್ಮಾಣಿ ಕೃತ್ವಾಗರುಡವಾಹನಃ | ನವಿಸ್ಮಯಮುಪಾಗಚ್ಛತ್ಪಾರಮೇಷ್ಠ್ಯೇನತೇಜಸಾ" || (ಭಾ|| ಸ್ಕ|| ೫೧|| ೭೯) ಎಂಬಂತೆ ತಾನು ಗರ್ವವಿಲ್ಲದವನು. ||೨೧೯||

# (೭೫೦ನೇ ನಾಮವು) ದುರ್ಧರಃ,

## ಓಮ್॥ ದುರ್ಧರಾಯನಮಃ.

(ಶಂ॥ ಭಾ) ಇವನು ಸರ್ವೋಪಾಧಿಗಳಿಂದ ಬಿಡಲ್ಪಟ್ಟಿರುವಂತವನಾದಕಾರಣ ಧ್ಯಾನಾದಿ ದಶೆಯಲ್ಲಿ ಧಾರಣಾ ಎಂಬ ಯೋಗವು ಅತ್ಯಶಕ್ಯವಾಗಿರುವುದು. ಆದರೂ ಅವನ ಅನುಗ್ರಹದಿಂದ ಮಹಾ ಪ್ರಯಾಸದೊಡನೆ ಕೆಲವರಿಂದ ಹೃದಯದಲ್ಲಿ ಜನ್ಮಾಂತರ ಸಹಸ್ರದಿಂದ ಅಭ್ಯಸ್ತವಾಗಿರುವ ಭಾವನಾ ಪ್ರಕರ್ಷದಿಂದ ಧರಿಸಲ್ಪಡುವನು ; ಆದುದರಿಂದಲೇ ' ದುರ್ಧರಃ ' ಎನ್ನಲ್ಪಡುವನು. ಈ ಅರ್ಥವು " ಕ್ಲೇಶೋಽಧಿಕತರಸ್ತೇಷಾ ಮವ್ಯಕ್ತಾಸಕ್ತಚೇತಸಾಂ | ಅವ್ಯಕ್ತಾಹಿ ಗತಿರ್ದುಃಖಂ ದೇಹವದ್ಭಿರವಾಪ್ಯತೇ " (ಗೀ॥ ೧೨॥ ೫) ಎಂಬ ಭಗವದ್ವಚನದಿಂದಲೂ ಸಿದ್ಧವಾಗಿರುವುದು. (ವಿ॥ ಭಾ) ಬಾಲಲೀಲಾ ಪ್ರಸಂಗದಲ್ಲಿ ಯಶೋದಾನಂದ ಗೋಪರ ಉಪಲಾಲನದಿಂದ ಮತ್ತನೂ ಗರ್ವಿತನೂ ಆಗಿ ಅವರುಗಳಿಗೆ ಮದಿಸಿರುವ ಆನೆಯಂತೆ ದುರ್ಗ್ರಹನಾಗಿರುವಂತವನು. ಅಥವಾ ನಿವಾರಿಸುವುದಕ್ಕೆ ಅಶಕ್ಯವಾದ ಚಂಚಲವಾದ ವ್ಯಾಪಾರವುಳ್ಳವನು. ಇದನ್ನು ಕುರಿತೆ ಶ್ರೀ ಯಶೋದಾದೇವಿಯು " ಯದಿಶಕ್ನೋಷಿಗಚ್ಛತ್ವ ಮತಿಚಂಚಲಚೇಷ್ಟಿತ " (ಶ್ರೀವಿಷ್ಣು ಪು॥ ೫॥ ೬॥ ೧೫) ಎಂದು ಹೇಳಿರುವಳು.

(ಎಲೈ ಕೃಷ್ಣಾ ನೀನು ನನ್ನ ಕೈಗೆ ಸಿಕ್ಕದೇ ಬಹಳವಾಗಿ ಓಡಿಯಾಡುವಿ, ಈಗ ನಿನ್ನನ್ನು ಹಿಡಿದಿಧೇನೆ. ಸಾಮರ್ಥ್ಯವಿದ್ದರೆ ಓಡಿಹೋಗು ನೋಡೋಣ ವೆಂಬದಾಗಿ ಬಾಲಕ್ರೀಡೆಯಲ್ಲಿ ಕೈಗೆ ಸಿಕ್ಕಿದ ಕೃಷ್ಣನನ್ನು ನೋಡಿ ಹೇಳಿದ ಯಶೋದಾ ವಾಕ್ಯವು)

ಅಥವಾ ದುರಾತ್ಮರಿಂದ ಪ್ರಯಾಸದಿಂದಲೂ ಕೂಡ ಗ್ರಹಿಸಲಶಕ್ಯನಾದವನು. ಈ ಅಂಶವು " ಇಮಂಹಿಪುಂಡರೀಕಾಕ್ಷಂ ಜಿಘೃಕ್ಷತ್ಯಲ್ಪಚೇತಸಃ | ಪಟೇನಾಗ್ನಿಂ ಪ್ರಜಲ್ವಿತಂ ಯಥಾಬಾಲೋಯಥಾಽಬಲಾಃ॥ (ಭಾರ॥ ಉ॥ ೧೨೯॥ ೧೬) ದುರ್ಗ್ರಹಃಪಾಣಿನಾವಾಯುಃ ದುಃಸ್ಪರ್ಶಃ ಪಾಣಿನಾಶಶೀ | ದುರ್ಧರಾ ಪೃಥಿವೀಮೂರ್ಧ್ನಾ ದುರ್ಗ್ರಹಃ ಕೇಶವೋ ಬಲಾತ್ " ॥ (ಭಾರ॥ ಉ॥ ೧೨೯॥ ೪೦) ಇತ್ಯಾದಿಗಳಲ್ಲಿ ವ್ಯಕ್ತವಾಗುವುದು.

(ಇದರ ಅರ್ಥವು–ಈ ಪುಂಡರೀಕಾಕ್ಷನಾದ ಶ್ರೀ ಕೃಷ್ಣನನ್ನು ಅಲ್ಪ ಬುದ್ಧಿಯು ಳ್ಳವರು ಅಧಿಕವಾಗಿ ಜ್ವಲಿಸುತಲಿರುವ ಅಗ್ನಿಯನ್ನು ತನ್ನ ವಸ್ತ್ರದಿಂದ ಮುಚ್ಚಿ ಕೊಂಡು ಹಿಡಿಯುವುದಕ್ಕೆ ವಿವೇಕ ವಿಹೀನರಾದ ಮೂಢರು ಹೇಗೆ ಪ್ರಯತ್ನಿಸುವರೋ ಅದರಂತೆ ಹಿಡಿಯುವುವಕ್ಕೆ ಪ್ರಯತ್ನಿಸುವರು. ತನ್ನ ಕೈಯಿಂದ ಘಾಳಿಯನ್ನು ಹಿಡಿ ಯಲಾದೀತೆ? ಕೈಯ್ಯಿಂದ ಆಕಾಶಗತನಾದ ಚಂದ್ರನನ್ನು ಸ್ಪರ್ಶಿಸಬಹುದೆ? ತನ್ನ ತಲೆ ಯಿಂದ ಭೂಮಿಯನ್ನು ಧರಿಸಲು ಸಾಧ್ಯವೆ? ಅದರಂತೆ ಶ್ರೀಕೇಶವನ್ನು ಹಿಡಿಯಲೂ ಆಗುವದಿಲ್ಲವೆಂದರ್ಥವು)

(ಮ) ಯೋಗಿಗಳಿಂದ ಅನೇಕ ಜನ್ಮಗಳಲ್ಲಿ ಅಭ್ಯಾಸಮಾಡಲ್ಪಟ್ಟ ವೈರಾಗ್ಯದಿಂದಲೂ ಇಂದ್ರಿಯ ನಿಗ್ರಹದಿಂದಲೂ ಪ್ರಾಪ್ತವಾದ ಭಾವ ನಾಪ್ರಕರ್ಷದಿಂದ ಮಹಾಪ್ರಯಾಸದೊಡನೆ ಹೃದಯದಲ್ಲಿ ಧರಿಸಲ್ಪಡು ವಂತವನು. ಅಥವಾ ಕಾಲಯವನರೇ ಮೊದಲಾದ ಅತಿವೇಗಶಾಲಿಗಳಾದ ಶತ್ರುಗಳಿಂದ ಧರಿಸುವುದಕ್ಕೂ ಹಿಡಿಯುವುದಕ್ಕೂ ಅವರಿಗೆ ಸಿಕ್ಕದ ವನು. ||೬೨೦||

## (೬೨೧ನೇ ನಾಮವು) ಅಪರಾಜಿತಃ,

## ಓಮ್|| ಅಪರಾಜಿತಾಯನಮಃ.

(ಶಂ|| ಭಾ) ರಾಗಾದಿಗಳಾದ ಆಂತರ ಶತ್ರುಗಳಿಂದಲೂ ಬಾಹ್ಯೇ ರಾದ ದಾನವಾದಿ ಶತ್ರುಗಳಿಂದಲೂ ಕೂಡ ಜಯಿಸಲಸಕ್ಯನಾದವನು. (ಪ|| ಭಾ) ಇಲ್ಲಿನ ಅಥ ' ಶಬ್ದವು ಆನಂತರ್ಯಾರ್ಥದಲ್ಲಿಯಾದರೂ ಮುಂದೇ ಹೇಳಲ್ಪಡುವ ಭಗವತ್ಪರಿಗ್ರಹದಿಂದುಂಟಾದ ಜಯರೂಪವಾದ ಮಂಗಲಾ ರ್ಥದಲ್ಲಿಯಾದರೂ ವರ್ತಿಸುವುದು. ಭಾರತ ಯುದ್ಧದಲ್ಲಿ ಆಯುಧಾದಿ ಯಾವದೊಂದು ಪರಿಕರವಿಲ್ಲದ ತನ್ನನ್ನು ಸಹಾಯವಾಗಿ ಅಪೇಕ್ಷಿಸಿದ ಮಾತ್ರದಲ್ಲಿಯೆ ಶತ್ರುಗಳಿಂದ ಜಯಿಸಲಶಕ್ಯರಾದ ಪಾಂಡವರುಳ್ಳವನು, ಎಂದರೆ.—ಯಾವದೊಂದು ಬಲವೂ ಇಲ್ಲದೇ ಕೇವಲ ಭಗವದ್ಬಲದಿಂ ದಲೇ ಯುದ್ಧಮಾಡುತಲಿರುವ ಪಾಂಡವರನ್ನು ಅನಂತೋಪಕರಣಗಳಿಂದ ರೂಢಮೂಲರಾದ ದುರ್ಯೋಧನಾದಿಗಳಿಂದ ಜಯಿಸಲಶಕ್ಯರಾದವರ ನ್ನಾಗಿ ಮಾಡಿದವನು. ಈ ಅರ್ಥವು " ಯಸ್ಯತ್ವಂ ಪುರುಷವ್ಯಾಘ್ರ ಸಾರಥ್ಯಮುಪಜಗ್ಮಿವಾನ್ | ಧ್ರುವಏವ ಜಯಸ್ತಸ್ಯ ನತಸ್ಯಾಸ್ತಿ ಪರಾ

ಜಯಃ ” (ಭಾ|| ಉ|| ೫೨|| ೧೨) ಶಕ್ತೋಹಂ ಧನುಷೈಕೇನ ನಿಹಂತುಂ ಸರ್ವಪಾಂಡವಾನ್ | ಯದ್ಯೇಷಾಂನಭವೇದ್ಗೋಪ್ತಾವಿಷ್ಣುಃ ಕಾರಣಪೂರುಷಃ ” (ಭಾರ) ಇತ್ಯಾದ್ಯನೇಕ ವಚನಗಳಲ್ಲಿ ಪ್ರತಿಪಾದಿಸಲ್ಪಡುವುದು. (ಮ) ಗ್ರಂಥಮಧ್ಯದಲ್ಲಿರುವ ‘ ಅಥ ’ ಎಂಬುವುದು ಮಂಗಳಾರ್ಥಕವಾದ ಶಬ್ದವು “ಓಂಕಾರಶ್ಚಾಥ ಶಬ್ದಶ್ಚ ದ್ವಾವೇತೌ ಬ್ರಹ್ಮಣಃಪುರಾ| ಕಂಠಂ ಭಿತ್ವಾ ವಿನಿರ್ಯಾತೌ ತಸ್ಮಾನ್ಮಾಂಗಲಿಕಾವುಭೌ” ಎಂಬೀವಚನವು ಈ ಅರ್ಥವನ್ನು ಹೇಳುವದು. ಪರಾಜಯವಿಲ್ಲದವನು. ||೭೨೧||

ಈ ಶ್ಲೋಕದಲ್ಲಿ ಪ್ರತಿಪಾದ್ಯಗಳಾದ (೯) ನಾಮಗಳಿಗೂ “ ಯಸ್ಮಿನ್ವಸಂತಿ ಭೂತಾನಿ “ ಭೂತಾವಾಸ ” (೭೧೩) ಸ್ಸಕಥ್ಯತೇ || ವಸುದೇವಾಪತ್ಯತಯಾ ದ್ವಾದಶಾಧ್ಯಾತ್ಮಮಂಜಸಾ | ನಿಯಚ್ಛತಿ ಸದಾಯಸ್ತು “ ವಾಸುದೇವ ” (೭೧೪) ಸ್ಸಈರಿತಃ || “ ಸರ್ವಾಸುನಿಲಯ ” (೭೧೫) ಸ್ಸಸ್ಯಾತ್ಸರ್ವ ಪ್ರಾಣಾ ವಲಂಬನಂ || ಸರ್ವಂಕೃತ್ವಾಪಿಗೋಪಾನಾಂ ನಚಕಿಂಚಿನ್ಮಯಾಕೃತಂ | ಇತ್ಯೇವ ಮವಿತೃಪ್ತೋಯೋ “ ಹ್ಯನಲಃ ” (೭೧೬) ಪರಿಕೀರ್ತಿತಃ || ಸ್ವಭಕ್ತೇಭ್ಯಃ ಕೃತಮಂತುಂ ನಾಲಂ ಸೋಢುಂಸದಾಽನಲಃ || ಗೋವರ್ಧನಸ್ಯೋದ್ಧರಣೇ ಪಾರಿಜಾತ ಪರಿಗ್ರಹೇ | ಬಾಲದೋರ್ದಂಡ ಶಂಡಾನಾಂ ಖಂಡನಾದೌತದಾತದಾ | ದೇವಾನಾಂವೈ ದರ್ಪಮಾತ್ರಂ ಹತವಾನ್ಯಸ್ಸ “ ದರ್ಪಹಾ ” || (೭೧೭) ಮಥುರಾಯಾಂ ಯಾದವೇಭ್ಯೋ ಮಧುಪಾನಾದಿನಾತತಃ | ದರ್ಪಂಚದತ್ತವಾನ್ಯೋಸಾ “ ದರ್ಪದಃ ” (೭೧೮) ಪರಿಕೀರ್ತಿತಃ || ಅಥಾಪ್ಯಗರ್ವಿತೋಯೋಸಾ “ ಅದೃಪ್ತಃ ” (೭೧೯) ಸ್ಸಮುದಾಹೃತಃ | ಬಾಲಲೀಲಾ ಪ್ರಸಂಗೇಷು ಯಶೋದನಂದಲಾಲನಾತ್ | ದೃಪ್ತೋಮತೋ ಭವೇತ್ತಾಭ್ಯಾಂ ದುರ್ಗ್ರಹೋ “ ದುರ್ಧರೋ ” (೭೨೦) ಮತಃ | ದುರ್ಯೋಧನಾದಿಬಿರ್ನಿತ್ಯಂ ರೂಢಮೂಲೈಃ ಪರಾಜಯಃ | ನಯಸ್ಯಕುತ್ರಚಿದ್ವಾಪಿಸೊ “ಽಪರಾಜಿತ ” (೭೨೧) ಈರಿತಃ || ” ಎಂಬೀ ರೀತಿಯಿಂದ ವಿವೃತಿಯನ್ನು ಕಾಣಬಹುದು.

ಮೂ॥ ವಿಶ್ವಮೂರ್ತಿ ರ್ಮಹಾಮೂರ್ತಿ ರ್ದೀಪ್ತ
ಮೂರ್ತಿ ರಮೂರ್ತಿಮಾನ್ । ಅನೇಕಮೂರ್ತಿ
ರವ್ಯಕ್ತ ಶ್ಶತಮೂರ್ತಿ ಶ್ಶತಾನನಃ ॥೭೭॥

(೭೨೭ನೇ ನಾಮವು) ವಿಶ್ವಮೂರ್ತಿಃ,

ಓಮ್॥ ವಿಶ್ವಮೂರ್ತಯೇನಮಃ

(ಶಂ॥ ಭಾ) ಸರ್ವಾತ್ಮಕನಾದ ಕಾರಣ ವಿಶ್ವಮೂರ್ತಿಯಾಗಿರುವಂತವನು. (ವಿ॥ ಭಾ) ದುರ್ಬಲರಾದ ಪಾಂಡವರನ್ನು ಬಲಿಷ್ಠರಾದ ದುರ್ಯೋಧನಾದಿಗಳು ಹೀಗೆ ಜಯಿಸಲಾರರೆಂದರೆ:—ಸಮಸ್ತವೂ ತನ್ನ ಶರೀರವಾಗಿರುವುದರಿಂದ ತನಿಗೆ ಇಷ್ಟರಾದ ಪಾಂಡವರು ಬಲಹೀನರಾಗಿದ್ದರೂ ಅವರನ್ನು ಬಲಿಷ್ಠರಾದ ದುರ್ಯೋಧನಾದಿಗಳು ಜಯಿಸುವುದು ತನಿಗೆ ಇಷ್ಟವಿಲ್ಲವು; ತನಿಗೆ ಅನಭಿಮತವಾದ ವಿಷಯದಲ್ಲಿ ತನ್ನ ಶರೀರವು ಪ್ರವರ್ತಿಸಲಾರದಷ್ಟೆ.—ಆದುದರಿಂದ ಜಯಿಸಲ್ಪಡಲಿಲ್ಲವೆಂಬೀ ಅರ್ಥವನ್ನು ಗರ್ಭೀಕರಿಸಿಕೊಂಡು ಈ ಮುಂದಿನ ನಾಮವು ಪ್ರವೃತ್ತವಾಗಿರುವುದು. ಸಮಸ್ತವನ್ನು ತನಗೆ ಶರೀರವಾಗಿ ವುಳ್ಳವನು. ॥೭೨೭॥

(೭೨೮ನೇ ನಾಮವು) ಮಹಾಮೂರ್ತಿಃ,

ಓಮ್॥ ಮಹಾಮೂರ್ತಯೇನಮಃ.

(ಶಂ॥ ಭಾ) ಶೇಷಪರ್ಯಂಕಶಾಯಿಯಾದ ಇವನಿಗೆ ಮಹತ್ತಾದ ವಿಗ್ರಹವಿರುವುದರಿಂದ ಮಹಾಮೂರ್ತಿಃ ಎನ್ನಲ್ಪಡುವನು. (ವಿ॥ ಭಾ) ವಿಶ್ವರೂಪ ಪ್ರದರ್ಶನಕಾಲದಲ್ಲಿ ಪ್ರಪಂಚವೆಲ್ಲವೂ ಆಶ್ರಯಿಸುವಂತಹ ಮಹತ್ತಾದ ಶರೀರವುಳ್ಳವನು. ॥೭೨೮॥

(೭೨೯ನೇ ನಾಮವು) ದೀಪ್ತಮೂರ್ತಿಃ,

ಓಮ್॥ ದೀಪ್ತಮೂರ್ತಯೇನಮಃ.

(ಶಂ||ಭಾ) ಜ್ಞಾನಮಯವಾದ ಮೂರ್ತಿಯುಳ್ಳವನು ಮೂರ್ತಿಯೆಂದರೆ ಶರೀರವು. ಅಥವಾ ಸ್ವೇಚ್ಛಾಗೃಹೀತವಾದ ತೇಜೋಮಯವಾಗಿರುವ ದಿವ್ಯಶರೀರವುಳ್ಳವನು (ವಿ||ಭಾ) ಪ್ರಪಂಚದಲ್ಲಿ ಯಾವದೊಂದು ವಸ್ತುವೊ ಯಾವ ಗುಣದಿಂದ ಪ್ರಕಾಶಿಸುವುದೊ ಅಂತಹ ಪ್ರಕಾಶಾದಿ ಧರ್ಮವೆಲ್ಲವೂ ತನ್ನ ಮೂರ್ತಿಯಾಗಿವುಳ್ಳವನು. ||೭೦೪||

(೭೦೫ನೇ ನಾಮವು) ಅಮೂರ್ತಿಮಾನ್,

ಓಮ್|| ಅಮೂರ್ತಿಮತೇನಮಃ

(ಶಂ|| ಭಾ) ಕರ್ಮಸಂಬಂಧವಾದ ಶರೀರವಿಲ್ಲದವನು. (ವಿ|| ಭಾ) ಅವ್ಯಕ್ತವು, ಪುರುಷನು ಮೊದಲಾದ ಮೂರ್ತಿರಹಿತಗಳಾದವುಗಳನ್ನು ಕೂಡ ತನ್ನ ಶರೀರವನ್ನಾಗಿ ವುಳ್ಳವನು. "ಯಸ್ಯಾವ್ಯಕ್ತಂ ಶರೀರಂ || ಯಸ್ಯಾತ್ಮಾ ಶರೀರಂ" (ಶತಪಥಬ್ರಾ|| ೧೪|| ೬|| ೩೦) ಇತ್ಯಾದಿ ಪ್ರಮಾಣಗಳನ್ನು ಈ ಅರ್ಥದಲ್ಲಿ ಅರಿಯಬೇಕು. ಇಲ್ಲಿ ಹಿಂದೆಯೂ ಮುಂದೆಯೂ ಪರಮಾತ್ಮನಿಗೆ ಮೂರ್ತಿ ಸದ್ಭಾವವನ್ನು ಹೇಳುವುದರಿಂದ ಈ ನಾಮವು ಮೂರ್ತಿ ನಿಷೇಧಪರವೆಂದು ವ್ಯಾಖ್ಯಾನ ಮಾಡುವುದು ಉಚಿತವಲ್ಲವು. ಒಂದುವೇಳೆ ಹೀಗೆ ಅರ್ಥಮಾಡುವ ಪಕ್ಷದಲ್ಲಿ 'ಅಮೂರ್ತಿಃ' ಎಂಬಿಷ್ಟೇ ನಾಮವಿರಬಹುದು ; ಅಮೂರ್ತಿಮಾನ್ ಎಂಬದಾಗಿರುವುದೇ ಅನಾವಶ್ಯಕವಾದೀತು. ಆದುದರಿಂದ ನಾವಿಲ್ಲಿ ಬರೆದಿರುವ ಅರ್ಥವೇ ಯುಕ್ತವಾದದ್ದೆಂದರಿಯಬೇಕು ||೭೦೫||

(೭೦೬ನೇ ನಾಮವು) ಅನೇಕಮೂರ್ತಿಃ,

ಓಮ್|| ಅನೇಕಮೂರ್ತಯೇನಮಃ.

(ಶಂ|| ಭಾ) ಅವತಾರಗಳಲ್ಲಿ ಸ್ವೇಚ್ಛೆಯಿಂದ ಲೋಕೋಪಕಾರಕಗಳಾದ ಅನೇಕ ರೂಪಗಳನ್ನು ಹೊಂದಿದವನು. (ವಿ|| ಭಾ) ಕೃಷ್ಣನಾಗಿ ಅವತಾರವನ್ನು ಮಾಡಿದ್ದರೂ ವಾಸುದೇವಾದಿ ವ್ಯೂಹ ಚತುಷ್ಟಯವನ್ನು ಬಿಟ್ಟಿರದೇ ಇರುವುದರಿಂದಲೂ, ಇನ್ನೂ ಈ ಅವತಾರದಲ್ಲಿ

" ಷೋಡಶಸ್ತ್ರೀ ಸಹಸ್ರಾಣಿ ಶತಮೇಕಂತತೋಽಧಿಕಂ| ತಾವಂತಿಚಕ್ರೇ ರೂಪಾಣಿ ಭಗವಾನ್ ದೇವಕೀಸುತಃ " (ವಿ|| ಪು|| ೫|| ೩೧|| ೧೮) ಎಂಬಂತೆ ಅನೇಕಮೂರ್ತಿ ಪರಿಗ್ರಹದಿಂದಲೂ " ಅನೇಕಮೂರ್ತಿಃ " ಎನ್ನಲ್ಪಡುವನು. (ಮ) ಅನೇಕವತಾರ ಶರೀರಗಳುಳ್ಳವನು. ||೭೧೬||

## (೭೧೭ನೇ ನಾಮವು) ಅವ್ಯಕ್ತಃ,

### ಓಮ್|| ಅವ್ಯಕ್ತಾಯನಮಃ.

(ಶಂ|| ಭಾ) ವಸ್ತುತಃ ಅನೇಕ ಮೂರ್ತಿಗಳುಳ್ಳವನಾಗಿದ್ದರೂ ಇಂತವನೆಂದು ತೋರಲ್ಪಡದವನು (ವಿ|| ಭಾ) ಇದನ್ನು ತಾನೇ ಮನುಷ್ಯತ್ವಾಭಿ ನಯದಿಂದ ಹೊರಪಡಿಸದವನು. ನಾಹಂಪ್ರಕಾಶಸ್ಸರ್ವಸ್ಯ || (ಗೀ|| ೭|| ೨೫) ನಾಹಂವೇದೈರ್ನತಪಸಾ || (ಗೀ|| ೧೧|| ೫೩) ಆತ್ಮಾನಂ ಮಾನುಷಂಮನ್ಯೇ " (ಶ್ರೀರಾ|| ಯು|| ೧೨೦) ಇತ್ಯಾದಿಗಳನ್ನು ಈ ಅರ್ಥದಲ್ಲಿ ಪ್ರಮಾಣವನ್ನಾಗಿ ತಿಳಿಯಬೇಕು. ||೭೧೭||

## (೭೧೮ನೇ ನಾಮವು) ಶತಮೂರ್ತಿಃ,

### ಓಮ್|| ಶತಮೂರ್ತಯೇನಮಃ.

(ಶಂ|| ಭಾ) ಜ್ಞಾನಾಕಾರನಾಗಿರುವುದರ ದೆಶೆಯಿಂದ ನಾನಾವಿಕಲ್ಪಜನ್ಯಗಳಾದ ಆಕಾರಗಳುಳ್ಳವನು. (ವಿ|| ಭಾ) ತನ್ನನ್ನು ಕಾಣಲಪೇಕ್ಷಿಸುವ ಅರ್ಜುನನಿಗೆ ಸ್ಪಷ್ಟವಾಗಿ ತನ್ನ ವಿಶ್ವರೂಪಗಳನ್ನು ತೋರಿಸಿದವನು. (ಮ) ಅನೇಕ ಮೂರ್ತಿಗಳುಳ್ಳವನು. ||೭೧೮||

## (೭೧೯ನೇ ನಾಮವು) ಶತಾನನಃ,

### ಓಮ್|| ಶತಾನನಾಯನಮಃ.

(ಶಂ|| ಭಾ|| ವಿಶ್ವಾದಿಮೂರ್ತಿಯುಳ್ಳವನಾದಕಾರಣ ಅನೇಕ ಮುಖಗಳುಳ್ಳವನು ' ಶತಾನನಃ ' ಎನ್ನಲ್ಪಡುವನು. (ವಿ|| ಭಾ) ಅನೇಕ ಮುಖಗಳುಳ್ಳವನು. ||೭೧೯||

ಈ ಶ್ಲೋಕದಲ್ಲಿ ಪ್ರಕೃತಗಳಾದ (೮) ನಾಮಗಳಿಗೂ "ವಿಶ್ವಂ ಮೂರ್ತಿಸ್ತನುರ್ಯಸ್ಯ "ವಿಶ್ವಮೂರ್ತಿ" (೭೦೨) ಸ್ಸ್ಮೃತಃ ॥ ವಿಶ್ವೈಕಾಶ್ರಯಮೂರ್ತಿತ್ವಾ "ನ್ಮಹಾಮೂರ್ತಿ" (೭೦೩) ರಿತಿಸ್ಮೃತಃ ॥ ಯತ್ಕಿಂಚಿತ್ಕೇನ ಚಿದ್ದೀಪ್ರಂ ಗುಣೇನಾತ್ರವಿಶೇಷತಃ । ತತ್ಸರ್ವಂ ಮೂರ್ತಿರಸ್ಯೇತಿ "ದೀಪ್ತಮೂರ್ತಿ" (೭೦೪) ರಸೌಸ್ಮೃತಃ ॥ ಅಮೂರ್ತಿಶಬ್ದೇ ನೋಚ್ಯಂತೇ ಹವ್ಯಕ್ತ ಪುರುಷಾದಯಃ । ತಏವೆಯಸ್ಯಸ್ವಮಿತಿ ಸಸ್ಮೃತಸ್ತ್ವ್ಯ "ದಮೂರ್ತಿಮಾನ್" (೭೦೫) ॥ ಷೋಡಶಸ್ತ್ರೀ ಸಹಸ್ರಾಣಿ ಶತಮೇಕಂತತೋಧಿಕಂ । "ಅನೇಕಮೂರ್ತಿ" (೭೦೬) ರಿತ್ಯುಕ್ತಸ್ತತ್ಸಂಖ್ಯಾ ದೇಹಧಾರಣಾತ್ ॥ ಮನುಷ್ಯತ್ವೇನ ಸರ್ವತ್ರ ಪರಭಾವ ಪ್ರಕಾಶನಾತ್ । ಬುಧ್ಯೈ "ರವ್ಯಕ್ತ" (೭೦೭) ಇತಿಚಕಥಿತಸ್ತತ್ವಪಾರಗೈಃ ॥ ಅರ್ಜುನಾಯ ವ್ಯಕ್ತತಯಾ ವಿಶ್ವರೂಪ ಪ್ರದರ್ಶನಾತ್। "ಶತಮೂರ್ತಿ" (೭೦೮) ರಿತಿಖ್ಯಾತೋ ಶತಶೋಽಥ ಸಹಸ್ರಶಃ ॥ ಅನೇಕಾನನಸಮ್ಪತ್ತ್ಯಾ "ಶತಾನನ" (೭೦೯) "ಇತೀರಿತಃ" ಎಂಬೀ ರೀತಿಯಿಂದ ವಿವೃತಿಯನ್ನು ಕಾಣಬಹುದು.

ಮೂ॥ ಏಕೋ ನೈಕ ಸ್ಸ ವಃ ಕಃ ಕಿಂ ಯತ್ತ
ತ್ಪದಮನುತ್ತಮಂ । ಲೋಕಬಂಧು ರ್ಲೋಕನಾ
ಥೋ ಮಾಧವೋ ಭಕ್ತವತ್ಸಲಃ ॥೭೮॥

(೭೧೦ನೇ ನಾಮವು) ಏಕಃ,

ಓಮ್॥ ಏಕಾಯನಮಃ.

(ಶಂ॥ ಭಾ) "ಏಕಮೇವಾ ದ್ವಿತೀಯಂ ಬ್ರಹ್ಮ" (ಛಾಂ॥ ೬॥ ೨॥ ೧) ಎಂಬಂತೆ ಪರಮಾರ್ಥವಾಗಿ ಸಜಾತೀಯ ವಿಜಾತೀಯಸ್ವಗತ ಭೇದರಹಿತನಾದಕಾರಣ "ಏಕಃ" ಎನ್ನಲ್ಪಡುವನು (ವಿ॥ ಭಾ) ಹಿಂದೆ ವಿವರಿಸಲ್ಪಟ್ಟ ಮಹಿಮೆಗಳಿಂದ ಕೂಡಿದ ತನ್ನಂತೆ ಬೇರೊಬ್ಬನಿಲ್ಲವಾದ ಕಾರಣ ದ್ವಿತೀಯವಾಗಿ ಸಂಖ್ಯೆಗಳಿಗೆ ಒಳಪಡದವನಾದ ಅದ್ವಿತೀಯನು.

ರನ್ನು ರಕ್ಷಿಸುವುದರಲ್ಲಿ ಪ್ರಯತ್ನಿಸುವಂತವನು. (ಮ) ಪ್ರಲಯದಲ್ಲಿ ಸರ್ವಭೂತಗಳೂ ಎಲ್ಲಿ ಲಯಿಸುವುವೋ ಅವನು. ||೭೩೬||

## (೭೩೭ನೇ ನಾಮವು) ತತ್,

## ಓಮ್|| ತತೇನಮಃ.

(ಶಂ|| ಮ) "ಓಮ್ ತತ್ಸದಿತಿ ನಿರ್ದೇಶೋ ಬ್ರಹ್ಮಣಸ್ತ್ರಿವಿಧಃ ಸ್ಮೃತಃ" (ಗೀ|| ೧೭|| ೨೩) ಎಂಬಂತೆ ಬ್ರಹ್ಮವಾಚಕವಾದ ಶಬ್ದ ವಿದು. ವೃದ್ಧಿಯನ್ನುಂಟುಮಾಡುವಂತವನು. ತನೋತೀತಿತತ್. (ವಿ|| ಭಾ) ಅಂತಹ ಭಕ್ತರಿಗೆ ಸಮಸ್ತವಾದ ಜ್ಞಾನಭಕ್ತಿಗಳನ್ನೂ ಕೊಡು ವಂತವನು. ಆದುದರಿಂದಲೇತಾನೆ ಜ್ಞಾನಪ್ರದಾನಾರ್ಥವಾಗಿ ಗಾಯತ್ರೀ ಜಪವು ಪ್ರಾಪ್ತವಾಗಿರುವದು. ||೭೩೭||

## (೭೩೮ನೇ ನಾಮವು) ಪದಮನುತ್ತಮಂ,

## ಓಮ್|| ಪದಾಯನುತ್ತಮಾಯನಮಃ.

(ಶಂ|| ಭಾ) ಮುಮುಕ್ಷುಗಳಿಂದ ಹೊಂದಲ್ಪಡುವುದರಿಂದ 'ಪದಂ' ಎನ್ನಲ್ಪಡುವುದು ಅಂತಹ ಪದಕ್ಕಿಂತಲೂ ಉತ್ತಮವಾದ ಪದವು ಬೇರೆ ಇಲ್ಲವಾದುದರಿಂದ 'ಪದಮನುತ್ತಮಂ' ಎನ್ನಲ್ಪಟ್ಟು ವ್ಯಸ್ತವಾದ ಏಕನಾಮವು. (ವಿ|| ಭಾ) ಮುಮುಕ್ಷುಗಳಾದ ಭಕ್ತರಿಗೆ ಪರಮ ಪ್ರಾಪ್ಯನಾದವನು. ಅವರಿಂದ ಹೊಂದಲ್ಪಡುವನೆಂದರ್ಥವು. ||೭೩೮||

## (೭೩೯ನೇ ನಾಮವು) ಲೋಕಬಂಧುಃ,

## ಓಮ್|| ಲೋಕಬಂಧವೇನಮಃ.

(ವಿ|| ಭಾ) ಈ ರೀತಿಯಾಗಿ ತಾರತಮ್ಯವಿಲ್ಲದೆ ಸರ್ವರನ್ನೂ ಅನುಗ್ರಹಿಸುವುದಕ್ಕೆ ಕಾರಣವಾದ ಸಂಬಂಧವು ಹೇಳಲ್ಪಡುವುದು. ಲೋಕರಿಗೆಲ್ಲವೂ ತಾನು ಸ್ವಜನವಾಗಿರುವಂತವನು 'ಮಾತಾಪಿತಾ ಭ್ರಾತಾ ನಿವಾಸಶ್ಶರಣಂ ಸುಹೃದ್ಗತಿರ್ನಾರಾಯಣಃ' ಎಂಬದಾಗಿ ಶ್ರುತಿ ಇರು

ವುಮ. (ಶಂ) (ಈ ಅರ್ಥವನ್ನೂ ಹೇಳಿ ಮತ್ತೊಂದರ್ಥವನ್ನು ಸಹ ಹೇಳುತ್ತಾರೆ.) ಆಧಾರಭೂತನಾದ ತನ್ನಲ್ಲಿ ಸರ್ವಲೋಕಗಳೂ ಬಂಧಿಸಲ್ಪಟ್ಟಿರುವುದರಿಂದ 'ಲೋಕಬಂಧುಃ' ಎನ್ನಲ್ಪಡುವನು. ||೭೩೯||

(೭೪೦ನೇ ನಾಮವು) ಲೋಕನಾಥಃ,

ಓಮ್|| ಲೋಕನಾಥಾಯನಮಃ.

(ಶಂ|| ಭಾ) ಲೋಕರಿಂದ ಯಾಚಿಸಲ್ಪಡುವಂತವನು. ಅಥವಾ ಅವರಿಂದ ಅಪೇಕ್ಷಿಸಲ್ಪಡುವಂತವನು. ಯದ್ವಾ ಲೋಕರಿಗೆ ಇಷ್ಟನು. (ವಿ || ಭಾ) ಇವನು ಲೋಕಬಂಧುವಾಗುವದಕ್ಕೆ ಅಸಾಧಾರಣವಾದ ಸಂಬಂಧವು ಹೇಳಲ್ಪಡುವುದು. ಲೋಕಗಳಿಗೆಲ್ಲವೂ ಸ್ವಾಮಿಯಾದವನು. ||೭೪೦||

(೭೪೧ನೇ ನಾಮವು) ಮಾಧವಃ,

ಓಮ್|| ಮಾಧವಾಯನಮಃ.

(ಶಂ|| ವಿ|| ಮ) ಮಧುವೆಂಬ ಯಾದವನ ಕುಲದಲ್ಲಿ ಹುಟ್ಟಿದವನು. (ಮ) ಚಂದ್ರನಿಗೆ ಸ್ವಾಮಿಯು. ಇದರಿಂದ "ವೀರಹಾ ಮಾಧವಃ || ಮಾಧವೋ ಮಧುಸೂದನಃ" ಎಂಬನಾಮದ್ವಯಕ್ಕಿಂತಲೂ ಅರ್ಥಭೇದವು ಸಿದ್ಧವಾಯಿತು. (ವಿ|| ಭಾ) ಇವನು ಲೋಕಕ್ಕೆಲ್ಲಾ ಬಂಧುವಾಗಬೇಕಾದಾಗ ಲಕ್ಷ್ಮೀಸಹಿತನಾಗಿದ್ದುಕೊಂಡು 'ಮಾತಾ ಪಿತಾ' ಇತ್ಯಾದಿ ಬಂಧುವಾಗುವ ಅಂಶವನ್ನು ಈ ಮುಂದಿನ ನಾಮವು ಹೇಳುವುದು. ಲಕ್ಷ್ಮೀವಲ್ಲಭನು. ||೭೪೧||

(೭೪೨ನೇ ನಾಮವು) ಭಕ್ತವತ್ಸಲಃ,

ಓಮ್|| ಭಕ್ತವತ್ಸಲಾಯನಮಃ.

(ಶಂ|| ಭಾ) ಭಕ್ತರಲ್ಲಿ ಸ್ನೇಹವುಳ್ಳವನು. (ವಿ|| ಭಾ) ಹಿಂದೇ ವಿವರಿಸಲ್ಪಟ್ಟ ಪರಮಪುರುಷನ ಸರ್ವಸ್ವಾಮಿತ್ವವನ್ನಂಗೀಕರಿಸಿ ಅದರ

ಉತ್ಸಾಹದೊಡನೆ ಇರುವ ಭಕ್ತರಲ್ಲಿ ಇವನಿಗಿರುವ ವಿಶೇಷವಾದ ಆಕಾರವು ತೋರಿಸಲ್ಪಡುವುದು. ಈ ರೀತಿಯಾಗಿ ತನ್ನ ದಾಸ್ಯವನ್ನು ಅಪೇಕ್ಷಿಸುವ ಭಕ್ತರನ್ನು ಹೊಂದಿದವನಾದರೆ ತನಿಗೆ ಬೇರೊಂದು ಇರುವುದಾಗಿ ನೆನೆಯದೆ ಸರ್ವವನ್ನೂ ಮರೆತಿರುವಂತವನು. ||೭೩೨||

ಈ ೭೮ನೇ ಶ್ಲೋಕದಲ್ಲಿ ಪ್ರತಿಪಾದಿಸಲ್ಪಡುವ (೧೩) ನಾಮಗಳಿಗೂ " ದ್ವಿತೀಯಸ್ಯ ಸಜಾತೀಯರಾಹಿತ್ಯಾ "ದೇಕ" (೭೩೦)ಉಚ್ಯತೆ| " ನೈಕಃ " (೭೩೧) ಸ್ವವ್ಯಾಪಾರತಯಾ ವಿಭೂತೀನಾಮಿತೀರಿತಃ || ಸರ್ವೇಷು ಕೃಷ್ಣರೂಪೇಷು ಆ ಕುಮಾರ ಪ್ರಸಿದ್ಧಿತಃ | ಜ್ಞಾನಂಹಿ ಯಸ್ಯ ವಿಷಯಂ ಸ್ಯಾತ್ಯಸಾ " ಸ " (೭೩೨) ಇತೀರಿತಃ || ಯಥಾ ಪ್ರಸಿದ್ಧವಾಸಿತ್ವಾ ತ್ತಸ್ಯಾಪಿ ವಸತೇಕ್ಸಃ | ಭೂತಾವಾಸ ತಯಾ " ವಃ " (೭೩೩) ಸ್ಯಾತ್ಸರ್ವೇಷು ಕನತೀತಿ " ಕಃ " (೭೩೪) || ಯ ಈಪ್ಸಿತಾರ್ಥ ಪ್ರಾಪ್ತ್ಯರ್ಥಂ ಪ್ರಷ್ಟವ್ಯಃ " ಕಿ " (೭೩೫) ಮಿತಿ ಸ್ಮೃತಃ | ರಕ್ಷಾಯೈ ಪೃಚ್ಛಕಾನಾಂ ಸಯತತೆ " ಯತ್ " (೭೩೬) ಇತಿ ಸ್ಮೃತಃ || ಸ್ವಜ್ಞಾನ ಭಕ್ತಿಂಭಕ್ತಾನಾಂ ತನೋತೀತಿ " ತ " (೭೩೭) ದುಚ್ಯತೇ | ಪರಮಂ ಯತ್ಪ್ರಪನ್ನಾನಾಂ ಪ್ರಾಪ್ಯಂ " ಪದಮನುತ್ತಮಂ " (೭೩೮) ಲೋಕಾನಾಂ ಸ್ವಜನತ್ವಾದ್ಧಿ " ಲೋಕಬಂಧು " (೭೩೯) ರಿತಿ ಸ್ಮೃತಃ | ಲೋಕಬಂಧುತ್ವ ಮೂಲಾದ್ಧಿ ಲೋಕಸ್ವಾಮಿತ್ವ ಮಿತ್ಯತಃ| ಸ್ವಾಭಾವಿಕಾಚ್ಚ ಸಂಬಂಧಾ " ಲ್ಲೋಕನಾಥ " (೭೪೦) ಇತೀರಿತಃ || ಲೋಕನಾಥತ್ವ ಸಂಬಂಧ ಶ್ರೀಮತಶ್ಚೇತಿ " ಮಾಧವಃ " | ಮಧೋರ್ವಂಶೋದ್ಭವ ತ್ವಾಚ್ಚ " ಮಾಧವಃ " (೭೪೧) ಪರಿಕೀರ್ತಿತಃ || ವಿಶೇಷಂವಕ್ತಿ ಭಕ್ತೇಷು ಯೋಽಸೌ " ಸ್ಯಾದ್ಭಕ್ತವತ್ಸಲಃ " (೭೪೨) || ಎಂಬಂತೆ ವಿವೃತಿಯನ್ನರಿಯಬೇಕು.

ಮೂ|| ಸುವರ್ಣವರ್ಣೋ ಹೇಮಾಂಗೋ ವರಾಂಗ
ಶ್ಚಂದನಾಂಗದೀ | ವೀರಹಾ ವಿಷಮ ಶ್ಯೂನ್ಯೋ
ಘೃತಾಶೀ ರಚಲ ಶ್ಚಲಃ ||೭೯||

## (೭೪೩ನೇ ನಾಮವು) ಸುವರ್ಣವರ್ಣಃ,

### ಓಮ್|| ಸುವರ್ಣವರ್ಣಾಯನಮಃ.

(ಶಂ|| ಮ) ಸುವರ್ಣದ ವರ್ಣದಂತೆ ವರ್ಣವುಳ್ಳವನು. (ಮ) "ಯದಾಪಶ್ಯಃ ಪಶ್ಯತೇರುಕ್ಮವರ್ಣಂ" ಇತಿ ಶ್ರುತಿಃ. (ವಿ|| ಭಾ) ಹಿಂದೆ ವಿವರಿಸಿರುವ ಗುಣಗಳಿಗೆ ತಕ್ಕಂತೆ ಅಪರಂಜಿ-ಚಿನ್ನದ ಕಾಂತಿಯುಂತಿರುವ ದೇಹಕಾಂತಿಯಿಂದಲೂ ಸೇರಿದವನು. (ಮ) ವ್ಯಾಖ್ಯಾನದಲ್ಲಿರುವ ಶ್ರುತಿಯೂ (ಮು|| ೩|| ೩) ಮತ್ತು "ರುಕ್ಮಾಭಂ ಸ್ವಪ್ನಧೀಗಮ್ಯಂ" (ಮನು|| ೧೨|| ೧೨೨) ಆದಿತ್ಯವರ್ಣಂ (ಪು|| ಸೂ|| ೨೦) ಹಿರಣ್ಮಯಃಪುರುಷ ಸ್ಸರ್ವಏವ ಸುವರ್ಣಃ (ಛಾಂ|| ೧|| ೬|| ೬) ಇತ್ಯಾದಿ ಶ್ರುತಿಗಳು ಇದಕ್ಕೆ ಆಧಾರವಾಗಿರುವುವು. ||೭೪೩||

## (೭೪೪ನೇ ನಾಮವು) ಹೇಮಾಂಗಃ,

### ಓಮ್|| ಹೇಮಾಂಗಾಯನಮಃ.

(ಶಂ|| ಮ) ಸ್ವರ್ಣದಂತೇ ಇರುವ ಅವಯವಗಳುಳ್ಳವನು. (ವಿ||ಭಾ) ಸ್ವರ್ಣಮಯವಾದ ದಿವ್ಯ ದೇಹವುಳ್ಳವನು. ಎಂದರೆ:—ಹಿಂದೆ ವಿವರಿಸಲ್ಪಟ್ಟ ವರ್ಣಕ್ಕೆ ಆಧಾರವೂ ನಿತ್ಯವೂ ಶುದ್ಧ ಸತ್ವಮಯವೂ ಆದ ದಿವ್ಯ ದೇಹವುಳ್ಳವನೆಂದರ್ಥವು. ||೭೪೪||

## (೭೪೫ನೇ ನಾಮವು) ವರಾಂಗಃ,

### ಓಮ್|| ವರಾಂಗಾಯನಮಃ,

(ಶಂ|| ಮ) ಮಂಗಳಕರಗಳಾದ ಅಥವಾ ಶ್ರೇಷ್ಠವಾದ ಅವಯವಗಳುಳ್ಳವನು. (ವಿ|| ಭಾ) ಈರೀತಿಯಾಗಿ ಉಪನಿಷತ್ಪ್ರತಿಪಾದ್ಯವೂ ದೇವಕೀದೇವಿಯಿಂದ ಅತ್ಯಂತವಾಗಿ ಅಪೇಕ್ಷಿಸಲ್ಪಟ್ಟೂ ಇರುವ ಅಸಾಧಾರಣವಾದ ತನ್ನ ದಿವ್ಯ ಚಿಹ್ನಗಳನ್ನು ಮರೆಮಾಡಿಕೊಂಡಿರುವುದೂ ಆದ ದಿವ್ಯಮಂಗಳವಿಗ್ರಹವನ್ನು ಪರಿಗ್ರಹಿಸಿದವನು. ಇದಕ್ಕೆ "ಫುಲ್ಲೇಂದೀವರಪತ್ರಾಭಂ" (ವಿ|| ಪು|| ೫|| ೩|| ೮) ಇತ್ಯಾದಿಪ್ರಮಾಣಗಳನ್ನನುಸಂಧಿಸಬೇಕು. ||೭೪೫||

(೭೮೬ನೇ ನಾಮವು) ಚಂದನಾಂಗದೀ,

ಓಮ್॥ ಚಂದನಾಂಗದಿನೇನಮಃ.

(ಶಂ॥ ವಿ॥ ಮ) ಆಹ್ಲಾದಕರವಾದ ಬಾಜಿಬಂದು ಮೊದಲಾದ ಆಭರಣಗಳುಳ್ಳವನು. ॥೭೮೬॥

(೭೮೭ನೇ ನಾಮವು) ವೀರಹಾ,

ಓಮ್॥ ವೀರಘ್ನೇನಮಃ.

(ಶಂ॥ ಬಾ) ಧರ್ಮಸಂಸ್ಥಾಪನಕ್ಕಾಗಿ ಹಿರಣ್ಯಕಶಿಪು ಮೊದಲಾದ ರಾಕ್ಷಸರನ್ನು ಕೊಂದವನು. (ಮ) ರಾವಣಾದಿ ರಾಕ್ಷಸರನ್ನು ಕೊಂದವನು. "ವೀರಹಾ ಮಾಧವೋಮಧುಃ" ಎಂಬ ಸ್ಥಲದಲ್ಲಿ ವೀರರಾದ ಅರ್ಜುನಾದಿಗಳನ್ನು ರಕ್ಷಿಸುವುದಕ್ಕಾಗಿ ಹೋಗುವಂತವನೆಂಬ ಅರ್ಥಭೇದದಿಂದ ಪುನರುಕ್ತಿ ಇಲ್ಲವು. (ವಿ॥ ಭಾ) ಅತ್ಯಂತ ಮುಗ್ಧವಾದ ಸ್ತನಂಧಯನಾಗಿದ್ದರೂ (ಏನೂ ಅರಿಯದ ಮೊಲೆಯುಣ್ಣುವ ಅತಿ ಸಣ್ಣ ಮಗುವಾಗಿದ್ದರೂ) ಪೂತನಾ ಶಕಟಾರ್ಜುನಾದಿಗಳಾದ ದೇವಶತ್ರುಗಳನ್ನು ಸಮೂಲವಾಗಿ ಹತಮಾಡಿದವನು. ॥೭೮೭॥

(೭೮೮ನೇ ನಾಮವು) ವಿಷಮಃ,

ಓಮ್॥ ವಿಷಮಾಯನಮಃ.

(ಶಂ॥ ಭಾ) ತನಗೆ ಸಮಾನ ವಸ್ತುವಿಲ್ಲದಕಾರಣ 'ವಿಷಮಃ' ಎನ್ನಲ್ಪಡುವನು. (ಮ) ಅಸುರರಲ್ಲಿ ವೈಷಮ್ಯವುಳ್ಳವನು. (ವಿ॥ ಭಾ) ತನ್ನಲ್ಲಿ ಕೆಟ್ಟ ಅಭಿಪ್ರಾಯವುಳ್ಳವರೂ ಒಳ್ಳೇ ಅಭಿಪ್ರಾಯವುಳ್ಳವರೂ ಆದ ಪ್ರಾಣಿಗಳಿಗೆ ಕ್ರಮವಾಗಿ ಭಯ ಕ್ಷೇಮಗಳನ್ನು ಕೊಡುವುದರಿಂದ ವೈಷಮ್ಯವುಳ್ಳವನು. ॥೭೮೮॥

(೭೮೯ನೇ ನಾಮವು) ಶೂನ್ಯಃ,

ಓಮ್॥ ಶೂನ್ಯಾಯನಮಃ.

(ಶಂ|| ಭಾ) ಶೂನ್ಯವಾದದ್ದಂತೆ ಅಶೇಷವಿಶೇಷರಹಿತನು. (ಮ) ರಾಗದ್ವೇಷಾದಿ ಶೂನ್ಯನು. (ವಿ|| ಭಾ) ಮನುಷ್ಯನಾಗಿ ಅವತಾರವನ್ನು ಮಾಡಿದ್ದರೂ ಯಾವವಿಧವಾದ ದೋಷಗಳೂ ಇಲ್ಲದವನು. ||೭೪೯||

## (೭೫೦ನೇ ನಾಮವು) ಘೃತಾಶೀಃ,

ಓಮ್|| ಘೃತಾಶಿಷೇನಮಃ.

(ಶಂ|| ಭಾ) ಆಶಾರಹಿತನು. ಘೃತಾಃ—ವಿಗಲಿತಾಃ, ಆಶಿಷಃ—ಪ್ರಾರ್ಥನಾಃ, ಅಸ್ಯೇತಿಘೃತಾಶೀಃ. (ವಿ|| ಭಾ) ತನ್ನ ದಿವ್ಯ ಕಲ್ಯಾಣಗುಣಗಳಿಂದ ಜಗತ್ತನ್ನು ರಕ್ಷಿಸುವುದರಲ್ಲಿ ಶೀಲವುಳ್ಳವನು. ಅಥವಾ ಗೋಕುಲದಲ್ಲಿ ಹಾಲು ಮಸರು ಬೆಣ್ಣೆ ಮೊದಲಾದವುಗಳಲ್ಲಿ ಅಪೇಕ್ಷೆಯುಳ್ಳವನು. (ಮ) ಧೃತಾಶೀಃ ಇತಿ ಪಾಠಃ—ಭಕ್ತರಲ್ಲಿ ಒಳ್ಳೇ ಅಭಿಪ್ರಾಯವುಳ್ಳವನು. ||೭೫೦||

## (೭೫೧ನೇ ನಾಮವು) ಅಚಲಃ,

ಓಮ್|| ಅಚಲಾಯನಮಃ.

(ಶಂ|| ಭಾ) ಸ್ವರೂಪ ಸಾಮರ್ಥ್ಯ ಜ್ಞಾನವೆಂಬಿವುಗಳಿಂದ ಭ್ರಷ್ಟನಾಗದವನು. (ವಿ|| ಭಾ) ದುರ್ಯೋಧನನೇ ಮೊದಲಾದ ದುರಾತ್ಮರಿಂದ ಚಲಿಸಲಶಕ್ಯನು. ||೭೫೧||

## (೭೫೨ನೇ ನಾಮವು) ಚಲಃ,

ಓಮ್|| ಚಲಾಯನಮಃ.

(ಶಂ|| ಭಾ) ವಾಯುರೂಪದಿಂದ ಚಲಿಸುವಂತವನು. (ಮ) ಸ್ವೇಚ್ಛೆಯಿಂದ ಚಲಿಸುವಂತವನು. (ವಿ|| ಭಾ) ತನ್ನನ್ನು ಶರಣುಹೊಂದಿದ ಪಾಂಡವಾದಿಗಳ ನಿಮಿತ್ತವಾಗಿ ತನ್ನ ಸತ್ಯಸಂಕಲ್ಪ ಸ್ವಭಾವವನ್ನು ಕೂಡ ಬಿಡುವಂತವನು. ಇದು ಭೀಷ್ಮಾಚಾರ್ಯರಿಗಾಗಿ ಚಕ್ರಾಯುಧವನ್ನು ಹಿಡಿದು ತನ್ನ ಪ್ರತಿಜ್ಞಾಭಂಗವನ್ನು ಮಾಡಿಕೊಂಡ ವೃತ್ತಾಂತದಿಂದ ವ್ಯಕ್ತವಾಗುವುದು. ||೭೫೨||

ಈ ೭೯ನೇ ಶ್ಲೋಕದಲ್ಲಿರುವ (೧೦) ನಾಮಗಳಿಗೂ "ಗುಣವತ್ಸ್ವರ್ಣನಿಕಷ ನಿರ್ದೋಷೋಜ್ಜ್ವಲವರ್ಣತಃ| "ಸುವರ್ಣವರ್ಣ" (೭೪೩) ಇತ್ಯುಕ್ತೋ ಸರ್ವಾಣೋಽಭಕ್ತತಾಮುದಃ|| ಪದಾನ್ಯಶ್ರಯುಂತು ಭುಸ್ವಾಂಗಂ ದಿವ್ಯಸತ್ವಮಯಂ ಯತಃ | ಅತೋ "ಹೇಮಾಂಗ" (೭೪೪) ಇತ್ಯುಕ್ತ ಸ್ಸಪಾತ್ರೋ ಹೇಮವರ್ಣದಃ || ದೇವಕೀ ಪ್ರೀತಯೇ ಗುಪ್ತ ದಿವ್ಯಲಾಂಛನ ಮಂಗಲಂ | ಆವಿಷ್ಕೃತಂ ಸ್ವತೋಯೇನ "ವರಾಂಗ" (೭೪೫) ಸ್ಸತು ಕಥ್ಯತೇ || ಭೂಷಣಾನ್ಯಂಗದಾದೀನಿ ಸದಾಹ್ಲಾದ ಕರಾಣಿಚ | ಸನ್ನಿಯುಸ್ಯಚ ನಿತ್ಯಂತು ಸಸ್ಮೃತ "ಶ್ಚಂದನಾಂಗದೀ" (೭೪೬) || ಸಮೂಲಂ ಪೂತನಾದೀನ್ವೈ ಯೋಜಘಾನಸ "ವೀರಹಾ" (೭೪೭) | ಭೀತಿ ಕ್ಷೇಮಕರತ್ವಾದ್ಧಿ ಕುಟಿಲಾಕುಟಿಲಾತ್ಮಸು || "ವಿಷಮ" (೭೪೮) ಸ್ಸತುವಿಖ್ಯಾತ "ಶ್ಶೂನ್ಯ" (೭೪೯) ಸ್ಸ್ಯಾದ್ದೋಷವರ್ಜಿತಃ | ಗೋಪಾನಾಂ ಸದ್ಮಗವ್ಯೇವಾ ಜಗದಾಪ್ಯಾಯನೇನವಾ | ಘೃತೇಪ್ಯಾಶಾ ಹಿಯಸ್ಯಾಸ್ತಿ "ಘೃತಾಶೀಃ" (೭೫೦) ಪರಿಕೀರ್ತಿತಃ || ದುರ್ಯೋಧನಾದ್ಯಭೇದ್ಯತ್ವಾ "ದಚಲಃ" (೭೫೧) ಪರಿಕೀರ್ತಿತಃ | ಸತ್ಯಾದ್ಯೈಃ ಪಾಂಡವಾರ್ಥೇಹಿ ಚಲತೀತಿ "ಚಲಃ" (೭೫೨) ಸ್ಮೃತಃ" ಎಂಬಂತೆ ವಿವೃತಿಯನ್ನು ಕಾಣಬಹುದು.

ಮೂ || ಅಮಾನೀ ಮಾನದೋ ಮಾನ್ಯೋ ಲೋ
ಕಸ್ವಾಮೀ ತ್ರಿಲೋಕಧೃಕ್ | ಸುಮೇಧಾ ಮೇ
ಧಜೋ ಧನ್ಯ ಸ್ಸತ್ಯಮೇಧಾ ಧರಾಧರಃ ||೮೦||

(೭೫೩ನೇ ನಾಮವು) ಅಮಾನೀ,

ಓಮ್|| ಅಮಾನಿನೇನಮಃ.

(ಶಂ|| ಭಾ) ಸ್ವಚ್ಛವಾದ ಜ್ಞಾನಸಾಕಾರನಾದಕಾರಣ ಆತ್ಮವಲ್ಲದ ದೇಹಾದಿಗಳಲ್ಲಿ ಆತ್ಮಾಭಿಮಾನವಿಲ್ಲದವನು. (ಪ) ವಿಷಯಾಭಿಮಾನವಿಲ್ಲದವನು. (ವಿ|| ಭಾ) ಭಕ್ತರ ವಿಷಯದಲ್ಲಿ ಅಹಂಕಾರವನ್ನು ಬಿಟ್ಟ

ವನು. ಆದುದರಿಂದಲೇ ತಾನೆ ಪಾಂಡವರ ದ್ಯೂತಕೃತ್ಯದಲ್ಲಿ ಸ್ವಲ್ಪವೂ ಸಂಕೋಚಿಸದೆ ಪ್ರವರ್ತಿಸಿರುವನು. ||೭೫೩||

## (೭೫೪ನೇ ನಾಮವು) ಮಾನದಃ,

### ಓಮ್|| ಮಾನದಾಯನಮಃ.

(ಶಂ|| ಭಾ) ತನ್ನ ಮಾಯೆಯಿಂದ ಸರ್ವರಿಗೂ ಆತ್ಮವಲ್ಲದ ಪದಾರ್ಥಗಳಲ್ಲಿ ಆತ್ಮಾಭಿಮಾನವನ್ನು ಕೊಡುವಂತವನು. (ಅಥವಾ) ಭಕ್ತರಿಗೆ ಸತ್ಕಾರವನ್ನು ಕೊಡುವಂತವನು. ಯದ್ವಾ ಭಕ್ತರಲ್ಲದವರ ಗೌರವವನ್ನು ಖಂಡಿಸುವಂತವನು. ಅಥವಾ ತತ್ವವನ್ನು ತಿಳಿದವರಿಗೆ ಆತ್ಮವಲ್ಲದವುಗಳಲ್ಲಿ ಆತ್ಮಾಭಿಮಾನವನ್ನು ಖಂಡಿಸುವಂತವನು. (ವಿ|| ಭಾ) ಅರ್ಜುನನಿಗೆ ಸಾರಥಿ ಎಂಬ ಮರ್ಯಾದೆಯನ್ನೂ ಉಗ್ರಸೇನರಾಜನಿಗೂ ಧರ್ಮಪುತ್ರರಿಗೂ ಸಾರ್ವಭೌಮನೆನ್ನಲ್ಪಡುವ ಗೌರವವನ್ನೂ ಕೊಟ್ಟವನು. ||೭೫೪||

## (೭೫೫ನೇ ನಾಮವು) ಮಾನ್ಯಃ,

### ಓಮ್|| ಮಾನ್ಯಾಯನಮಃ

(ಶಂ|| ಭಾ) ಸರ್ವೇಶ್ವರನಾದಕಾರಣ ಸರ್ವರಿಂದಲೂ ಪೂಜಿಸಲ್ಪಡುವಂತವನು. (ವಿ|| ಭಾ) ಧರ್ಮ, ಅರ್ಜುನಾದಿ ಭಕ್ತರುಗಳಿಗೆ ವಶಪಟ್ಟಿರುವಿಕೆಯನ್ನೇ ತನಿಗೆ ಗೌರವವನ್ನಾಗಿ ತಿಳಿದವನು. ||೭೫೫||

## (೭೫೬ನೇ ನಾಮವು) ಲೋಕಸ್ವಾಮೀ,

### ಓಮ್|| ಲೋಕಸ್ವಾಮಿನೇನಮಃ

(ಶಂ|| ಭಾ) ೧೪ ಲೋಕಗಳಿಗೂ ಪ್ರಭುವಾದವನು. (ವಿ|| ಭಾ) ಭಕ್ತರ ವಿಷಯದಲ್ಲಿ ಸಾರಥ್ಯ ದೂತ್ಯಾದಿ ಕೃತ್ಯಗಳನ್ನು ಮಾಡಿದವನು ತಾನೆ ಯಾವನೆಂದರೆ—ಲೋಕಸ್ವಾಮೀ—ಸರ್ವ ಲೋಕವನ್ನೂ ಆಳುವಂತಹ ಮಹಾ ಪ್ರಭುವು. ||೭೫೬||

## (೭೫೭ನೇ ನಾಮವು) ತ್ರಿಲೋಕಧೃತ್,

### ಓಮ್‖ ತ್ರಿಲೋಕಧೃತೇನಮಃ.

(ಶಂ| ಭಾ) ಮೂರು ಲೋಕಗಳನ್ನೂ ಧರಿಸಿದವನು. (ಮ) ಮೂರು ಲೋಕಗಳಲ್ಲಿ ಪ್ರವಣನು. (ವಿ‖ ಭಾ) ಈ ಪ್ರಕಾರವಾಗಿ ಅತ್ಯುನ್ನತವಾದ ಪದವಿಯಲ್ಲಿರುವಂತವನು ಹೇಗೆ ತಾನೆ ಸಾಮಾನ್ಯರಾದ ಪಾಂಡವರೊಡನೆ ಸೇರಿದನೆಂದರೆ:—ತ್ರಿಲೋಕಧೃತ್—ಮೂರು ಲೋಕಗಳನ್ನೂ ಧರಿಸುವದೂ ಕಾಪಾಡುವದೂ ತನ್ನ ಕೆಲಸವೇ ಆಗಿರುವದರಿಂದ ಇವರೊಡನೆ ಸೇರಿರುವನೆಂದರ್ಥವು ‖೭೫೭‖

## (೭೫೮ನೇ ನಾಮವು) ಸುಮೇಧಾಃ,

### ಓಮ್‖ ಸುಮೇಧಸೇನಮಃ.

(ಶಂ‖ ಮ) ಮಂಗಳಕರವಾದ ಪ್ರಜ್ಞಾಯುಕ್ತನು. (ವಿ‖ ಭಾ) ತನ್ನನ್ನು ಆರಾಧಿಸುವ ಭಕ್ತರಲ್ಲಿ ಒಳ್ಳೇ ಅಭಿಪ್ರಾಯವುಳ್ಳವನು. ‖೭೫೮‖

## (೭೫೯ನೇ ನಾಮವು) ಮೇಧಜಃ,

### ಓಮ್‖ ಮೇಧಜಾಯನಮಃ.

(ಶಂ‖ ಭಾ) ಅಧ್ವರ (ಯಜ್ಞ) ದಲ್ಲಿ ಹುಟ್ಟಿದವನು. (ಮ.) ಸಮುದ್ರ ಮಂದರಪರ್ವತದ ಸಂಗಮದಲ್ಲಿ ಹುಟ್ಟಿದವನು. ಎಂದರೆ:— ಅಮೃತ ಮಥನಾರ್ಥವಾಗಿ ದೇವಾಸುರರು ಒಂದಾಗಿ ಸೇರಿ ಮಂದರಪರ್ವತದಿಂದ ಕ್ಷೀರಾಬ್ಧಿಯನ್ನು ಕಡೆಯಲಾರಂಭಿಸಿದಾಗ ಕೂರ್ಮರೂಪದಿಂದ ಮುಣುಗಿಹೋದ ಪರ್ವತವನ್ನು ಉದ್ಧರಿಸಿದವನೆಂದರ್ಥವು. (ವಿ‖ ಭಾ) ಆದುದರಿಂದಲೇ ತಾನೆ ದೇವಕೀದೇವಿಯು ಪುತ್ರಾಪೇಕ್ಷೆಯುಳ್ಳವಳಾಗಿ ಮಾಡಿದ ವ್ರತವೆಂಬ ಅಧ್ವರದಲ್ಲಿ ಹುಟ್ಟಿದ್ದು. ‖೭೫೯‖

## (೭೬೦ನೇ ನಾಮವು) ಧನ್ಯಃ,

### ಓಮ್‖ ಧನ್ಯಾಯನಮಃ.

(ಶಂ॥ಮ) ಕೃತಾರ್ಥನು. (ಮ) ಲಕ್ಷ್ಮೀರೂಪವೂ ಮತ್ತು ಲಕ್ಷ್ಮೀ ರೂಪವಾದ ಆನಂದಾದಿ ಧನಕ್ಕೆ ಅರ್ಹನು. (ವಿ॥ ಭಾ)ಅಲ್ಲಿ ಹುಟ್ಟಿದೆನೆಂಬ ಧನ್ಯತೆಯುಳ್ಳವನು. ॥೭೬೦॥

## (೭೬೧ನೇ ನಾಮವು) ಸತ್ಯಮೇಧಾಃ,

### ಓಮ್॥ ಸತ್ಯಮೇಧಸೇನಮಃ.

(ಶಂ॥ ಮ) ಅಮೋಘವಾದ ಪ್ರಜ್ಞೆಯುಳ್ಳವನು. (ವಿ॥ ಭಾ) ಗೋಪಾಲಕರಲ್ಲಿಯೂ ವಸುದೇವಾದಿಗಳಲ್ಲಿಯೂ ಬಾಹ್ಯವಾದ ನಟನವಿಲ್ಲ ದೇ ವಾಸ್ತವವಾಗಿ ಅವರೊಡನೆ ಏಕವಾಗಿ ಕಲೆತಿರುವಂತವನು ॥೭೬೧॥

## (೭೬೨ನೇ ನಾಮವು) ಧರಾಧರಃ,

### ಓಮ್॥ ಧರಾಧರಾಯನಮಃ.

(ಶಂ॥ ಭಾ) ಆದಿಶೇಷನೇ ಮೊದಲಾದ ಸಕಲಾಂಶಗಳಿಂದಲೂ ಭೂ ಮಿಯನ್ನು ಧರಿಸಿದವನು. (ಮ) ವರಾಹ ರೂಪದಿಂದ ಭೂಮಿಯನ್ನು ಧರಿಸಿದವನು. (ವಿ॥ ಭಾ) ಗೋವರ್ಧನವೆಂಬ ಬೆಟ್ಟವನ್ನು ಧರಿಸಿದ ವನು. ॥೭೬೨॥

ಈ ರೀತಿಯಾಗಿ ಪ್ರತಿಪಾದಿಸಲ್ಪಟ್ಟ ೧೦ ನಾಮಗಳಿಗೂ "ಅ ಮಾನೀ" (೭೫೩) ಯೋऽನಹಂಕಾರೀ ಭಕ್ತೇಷ್ವೇವಸಈರಿತಃ। ಸ "ಮಾನದೊ" (೭೫೪) ऽರ್ಜುನಾದಿಭ್ಯೋ ಮಾನಂ ರಾಜ್ಯಂಚ ದತ್ತ ವಾನ್ ॥ "ಮಾನ್ಯ" (೭೫೫) ಸ್ತದೀಯವತ್ಸ್ವೇಸ್ವಾತ್ಸ್ವಮಂತವ್ಯಸ್ತು ದೈವಸಃ। ಲೋಕಭರ್ತೃತಯಾಚೈವ "ಲೋಕಸ್ವಾಮೀ" (೭೫೬) ತಿ ಶಬ್ದ್ಯತೇ ॥ ಲೋಕತ್ರಯಸ್ಯ ಧರಣಾತ್ಸ "ತ್ರಿಲೋಕಧೃತ್" (೭೫೭) ಈರಿತಃ। ಬುದ್ಧಿಸ್ಸುಶೋಭನಾಯಸ್ಯ "ಸುಮೇಧಾಃ" (೭೫೮) ಪರಿ ಕೀರ್ತಿತಃ ॥ ದೇವಕೀಕೃತಪುತ್ರೀಯ ವ್ರತಯಜ್ಞೋಚಯುಸ್ಯವೈ। ಜನಿ ಸ್ತು "ಮೇಧಜಃ" (೭೫೯) ಸಸ್ಯಾದಷ್ಟಾರ್ಣಃ ಪುತ್ರದಾಯಕಃ ॥ "ಧನ್ಯ" (೭೬೦) ಸ್ತುದೇವಕೀ ಜನ್ಮ ಧನಲಾಭಾದಿತಿಸ್ಮೃತಃ। ನಲ್ಲವೀ

ವಸುದೇವಾದಿ ಸಾಜಾತ್ಯಸ್ಯಾಭಿಮಾನಿನೀ ‖ ಮೇಧಾಯುಕ್ತ್ಯಾತ್ಸತ್ಯಾಸ "ಸತ್ಯಮೇಧಾಃ" (೨೬೧) ಪ್ರಕೀರ್ತಿತಃ ‖ ಧರಂಗೋವರ್ಧನಂ ಶೀಘ್ರಂ ಧೃತವಾನ್ಸ "ಧರಾಧರಃ" (೨೬೨) ಇತ್ಯಾದಿ ರೀತಿಯಿಂದ ವಿವೃತಿಯನ್ನು ಕಾಣಬಹುದು.

ಮೂ‖ ತೇಜೋವೃಷೋ ದ್ಯುತಿಧರ ಸ್ಸರ್ವಶಸ್ತ್ರ
ಭೃತಾಂವರಃ । ಪ್ರಗ್ರಹೊ ನಿಗ್ರಹೊ ವ್ಯಗ್ರೊ
ನೈಕಶೃಂಗೊ ಗದಾಗ್ರಜಃ ‖೮೧‖

(೨೬೩ನೇ ನಾಮವು) ತೇಜೋವೃಷಃ,

ಓಮ್‖ ತೇಜೋವೃಷಾಯನಮಃ.

(ಶಂ‖ ಮ) ಆದಿತ್ಯರೂಪದಿಂದ ಜಲವನ್ನು ವರ್ಷಿಸುವಂತವನು. (ವಿ‖ ಭಾ) ಸುಹೃತ್ಪರಿಪಾಲನವೆಂಬ ಮಹತ್ತಾದ ತೇಜಸ್ಸನ್ನು ವರ್ಷಿಸುವಂತವನು. ‖೨೬೩‖

(೨೬೪ನೇ ನಾಮವು) ದ್ಯುತಿಧರಃ,

ಓಮ್‖ ದ್ಯುತಿಧರಾಯನಮಃ.

(ಶಂ‖ ಮ) ತನ್ನ ದಿವ್ಯದೇಹಗತವಾದ ಕಾಂತಿಯನ್ನು ಧರಿಸಿರುವಂತವನು. (ವಿ‖ ಭಾ) ಆದುದರಿಂದಲೇತಾನೆ ಬಾಲಪಶೆಯಲ್ಲಿಯೇ ಇಂದ್ರನನ್ನು ಕೂಡ ತಿರಸ್ಕರಿಸುವಂತಹ ಅತಿಮಾನುಷವಾದ ತೇಜಸ್ಸನ್ನು ಧರಿಸಿರುವನು. ‖೨೬೪‖

(೨೬೫ನೇ ನಾಮವು) ಸರ್ವಶಸ್ತ್ರಭೃತಾಂವರಃ,

ಓಮ್‖ ಸರ್ವಶಸ್ತ್ರಭೃತಾಂವರಾಯನಮಃ.

(ವಿ‖ ಭಾ) ನರಕಾಸುರ ಜರಾಸಂಧಾದಿ ಯುದ್ಧಗಳಲ್ಲಿ (ವಿ‖ ಶಂ‖ ಮ) ಶಸ್ತ್ರಧಾರಿಗಳಾದ ಸರ್ವರಿಗಿಂತಲೂ ಶ್ರೇಷ್ಠನು. ‖೨೬೫‖

## (೪೭೬ನೇ ನಾಮವು) ಪ್ರಗ್ರಹಃ,

### ಓಮ್|| ಪ್ರಗ್ರಹಾಯನಮಃ

(ಶಂ|| ಭಾ) ಭಕ್ತರಿಂದ ಸಮರ್ಪಿಸಲ್ಪಟ್ಟ ಪತ್ರಪುಷ್ಪಾದಿಗಳನ್ನು ಆದರದಿಂದ ಗ್ರಹಿಸುವಂತವನು. ಅಥವಾ (ಶಂ) ಕ್ಷುದ್ರವಿಷಯಾರಣ್ಯದಲ್ಲಿ ಓಡುತಲಿರುವ ಇಂದ್ರಿಯಗಳೆಂಬ ಅಡಗದ ಕುದುರೆಗಳನ್ನು ಅವನ ಅನುಗ್ರಹದಿಂದ ಸ್ವಾಧೀನಕ್ಕೆ ತಂದು ಕಡಿವಾಳದಿಂದ ಬಂಧಿಸುವಂತೆ ಅನುಗ್ರಹಿಸುವುದರಿಂದ "ಪ್ರಗ್ರಹಃ" ಎನ್ನಲ್ಪಡುವನು. (ವಿ|| ಭಾ) ಸಾರಥಿಯಾದ ಶ್ರೀಕೃಷ್ಣನಿಂದ ಕಡಿವಾಳಹಾಕಿದ ಕುದುರೆಯಂತೆ ಅರ್ಜುನನನ್ನು ಸ್ವಾಧೀನದಲ್ಲಿ ಗ್ರಹಿಸಿರುವಂತವನು. ||೪೭೬||

## (೪೭೭ನೇ ನಾಮವು) ನಿಗ್ರಹಃ,

### ಓಮ್|| ನಿಗ್ರಹಾಯನಮಃ.

(ಶಂ|| ಭಾ) ಸ್ವಭಾವದಿಂದಲೇ ತನ್ನಲ್ಲಿ ಸಮಸ್ತವನ್ನೂ ನಿಗ್ರಹಿಸುವಂತವನು. (ಮ) ದುಷ್ಟನಿಗ್ರಹವನ್ನು ಮಾಡುವಂತವನು. (ವಿ|| ಭಾ) ಅರ್ಜುನನ ಪೌರುಷವನ್ನು ಲಕ್ಷ್ಯಮಾಡದೆ ಕೇವಲತನ್ನ ಸಾರಥ್ಯದ ವೈಚಿತ್ರಿಯಿಂದಲೇ ಶತ್ರುಗಳನ್ನು ನಿಗ್ರಹಿಸುವಂತವನು. ||೪೭೭||

## (೪೭೮ನೇ ನಾಮವು) ವ್ಯಗ್ರಃ,

### ಓಮ್|| ವ್ಯಗ್ರಾಯನಮಃ.

(ಶಂ|| ಭಾ) ನಾಶರಹಿತನು. ಅಥವಾ ಭಕ್ತರಿಗೆ ಅಭೀಷ್ಟವನ್ನು ಕೊಡುವುದರಲ್ಲಿ ಅತ್ಯಂತ ಜಾಗರೂಕನು. (ಮ) ಅವ್ಯಗ್ರ ಇತಿಪಾಠಃ. (ವಿ|| ಭಾ) ಅರ್ಜುನನ ಶತ್ರುಗಳನ್ನು ನಿಗ್ರಹಿಸುವುದರಲ್ಲಿ ಯುದ್ಧಕರ್ಮವನ್ನು ಕೂಡ ಸಹಿಸದವನು. ಈ ಅರ್ಥವು ಭೀಷ್ಮಯುದ್ಧದಲ್ಲಿ ವ್ಯಕ್ತವು. ||೪೭೮||

## (೪೭೯ನೇ ನಾಮವು) ನೈಕಶೃಂಗಃ,

### ಓಮ್|| ನೈಕಶೃಂಗಾಯನಮಃ.

(ಶಂ॥ ಭಾ) ನಾಲ್ಕು ವೇದಗಳೆಂಬ ನಾಲ್ಕು ಶೃಂಗಗಳುಳ್ಳವನು. (ಮ) ನಾಲ್ಕು ಶೃಂಗಗಳುಳ್ಳ ಅಗ್ನಿರೂಪನಾದವನು. (ವಿ॥ ಭಾ) ನಾನಾ ವಿಧಗಳಾದ ಉಪದ್ರವಗಳನ್ನು ಕೊಡುವಂತವನು ಎಂದರೆ:—ಯುದ್ಧದಲ್ಲಿ ಬುದ್ಧಿಸಾಮರ್ಥ್ಯವು, ಸಾರಥ್ಯಾಚರಣವು, ಆಯುಧವನ್ನು ಎತ್ತುವುದಿಲ್ಲ ವೆಂಬ ಒಂದು ನೆಪವು, ಸಮಯ ಬಂದಾಗ ಆಯುಧವನ್ನು ಗ್ರಹಿಸುವುದು ಎಂಬ ಬಹುವಾದ ಶತ್ರುಗಳ ಬಾಧಕವನ್ನು ಮಾಡುವಂತವನೆಂದರ್ಥವು. ॥೭೬೯॥

## (೭೭೦ನೇ ನಾಮವು) ಗದಾಗ್ರಜಃ,

### ಓಮ್॥ ಗದಾಗ್ರಜಾಯ ನಮಃ.

(ಶಂ॥ ಭಾ) ನಿಗದವೆಂದರೆ ಮಂತ್ರವು. ಅವರಲ್ಲಿ ಮುಂದೆ ಹುಟ್ಟು ವಂತವನು. (ಇಲ್ಲಿ ನಿ ಶಬ್ದಲೋಪವು) (ಶಂ॥ ವಿ॥ ಮ) ಸುನಾಮಾ [(ಮ) ಅಥವಾ ದೇವಕಿ] ಎಂಬ ವಸುದೇವಪತ್ನಿಯ ಮಗನು ಗದನು, ಇವನಿಗೆ ಅಣ್ಣನಾಗಿ ಹುಟ್ಟಿರುವಂತವನು. ॥೭೭೦॥

ಈ ಶ್ಲೋಕದಲ್ಲಿ ಪ್ರಕೃತಗಳಾದ ೪ ನಾಮಗಳಿಗೂ "ತೇಜೋಽಭಿವರ್ಷತಿಯತಸುಹೃತ್ಪಾಲನ ಲಕ್ಷಣಂ | "ತೇಜೋವೃಷ" (೭೬೩) ಸ್ಸಮಾಖ್ಯಾತೋವೆ ಸ್ವರ್ಣೋರ್ಽ ಮಿತ್ರವೃದ್ಧಿದಃ ॥ ಅಮಾನುಷೀಂ ಯೋ ಧೃತವಾನ್ ದ್ಯುತಿಮ್ಯೆಂದಾಭಿಭಾವುಕಾಂ | ಖ್ಯಾತಸ್ಸಹಿ "ದ್ಯುತಿಧರಃ" (೭೬೪) ಪಸ್ವರ್ಣಃ ಕಾಂತಿದೋಮನುಃ ॥ ಜರಾಸಂಧಾದಿ ಸಮರಶ್ರೇಷ್ಠ ಶ್ಯಸ್ತ್ರಭೃತಾಂಚಯಃ | ಸಖ್ಯಾತ ಸ್ಸರ್ವಕಾಲೇಷು "ಸರ್ವಶಸ್ತ್ರಭೃತಾಂವರಃ" (೭೬೫) ॥ ಪಾರ್ಥಸ್ಸಾರಥಿನಾನೇನ ರಶ್ಮಿಭಿರ್ಹ್ಯಾಃ ಪ್ರಗೃಹ್ಯತೆ | ಸ "ಪ್ರಗ್ರಹ" (೭೬೬) ಸ್ಸಮಾಖ್ಯಾತ ಸ್ಸಪ್ತವರ್ಣ ಉದಾಹೃತಃ ॥ ಯೇನಸಾರಥ್ಯವೈಚಿತ್ರ್ಯ ನ್ನಿಗೃಹ್ಯಂತೇತ್ರಶತ್ರವಃ | ಸ "ನಿಗ್ರಹ" (೭೬೭) ಸ್ಸಮಾಖ್ಯಾತ ಸ್ಸಪ್ತಾರ್ಣಶ್ಶತ್ರುನಾಶಕಃ ॥ ಯುದ್ಧಕ್ರಮಾತ್ಸಹಿಷ್ಣುತ್ವಾ ತ್ಪಾರ್ಥವಿದ್ವಿಡ್ವಿನಿಗ್ರಹೆ | ಯೋಽಸಾ "ವ್ಯಗ್ರ" (೭೬೮) ಸ್ಸಮಾಖ್ಯಾತ ಷಡ್ವರ್ಣೋ ವೈರಿನಾಶಕಃ ॥ ಯಸ್ಯಸ್ಯಾ "ನ್ನೈಕಶೃಂಗಃ" (೭೬೯) ಸಬಹುಶೋ ವೈರಿಬಾಧಕಂ| ಗದನಾಮ್ನೋ

ಹ್ಯಗ್ರಜತ್ವಾ "ಚ್ಛದಾಗ್ರಜ" (೭೭೦) ಇತೀರಿತಃ ॥" ಎಂಬೀರೀತಿ
ಯಾಗಿ ವಿವೃತಿಯನ್ನು ಕಾಣಬಹುದು.

ಮೂ॥ ಚತುರ್ಮೂರ್ತಿ ಶ್ಚತುರ್ಬಾಹು ಶ್ಚತುರ್ವ್ಯೂಹ ಶ್ಚತುರ್ಗತಿಃ । ಚತುರಾತ್ಮಾ ಚತುರ್ಭಾವ ಶ್ಚತುರ್ವೇದವಿ ದೇಕಪಾತ್ ॥೮೨॥

(೭೭೧ನೇ ನಾಮವು) ಚತುರ್ಮೂರ್ತಿಃ,
ಓಮ್॥ ಚತುರ್ಮೂರ್ತಯೇನಮಃ.

(ಶಂ॥ ಭಾ) ವಿರಾಡಾತ್ಮ, ಸೂತ್ರಾತ್ಮ, ಅವ್ಯಾಕೃತಾತ್ಮ, ತುರೀಯಾತ್ಮಗಳೆಂಬ ನಾಲ್ಕುಮೂರ್ತಿಗಳುಳ್ಳವನು (ಅಥವಾ) ಬಿಳಿಪು ಕೆಂಪು ಹಳದಿ ಕಪ್ಪೆಂಬ ನಾಲ್ಕು ವರ್ಣವುಳ್ಳ ಮೂರ್ತಿಗಳುಳ್ಳವನೆಂತಲೂ ಹೇಳಬಹುದು. ಇದು ಯುಗಭೇದದಿಂದುಂಟಾಗುವ ವರ್ಣವೆಂದು ಪುರಾಣಾದಿಗಳಲ್ಲಿ ಹೇಳಲ್ಪಟ್ಟಿರುವುದು. (ವಿ॥ ಭಾ) ಈ ವಿಭವಾವತಾರದಲ್ಲಿಯೂ ಇದಕ್ಕೆ ಕಾರಣವಾದ ವ್ಯೂಹವನ್ನು ಈ ನಾಮವು ಜ್ಞಾಪಿಸುವುದು. ಬಲಭದ್ರ ವಾಸುದೇವ ಪ್ರದ್ಯುಮ್ನಾನಿರುದ್ಧರೆಂಬ ನಾಲ್ಕು ಮೂರ್ತಿಗಳೊಡನೆ ಯದುಕುಲದಲ್ಲಿ ಅವತರಿಸಿದವನು. (ಮ) ನಾಲ್ಕಾದ ಅನಿರುದ್ಧಾದಿ ಮೂರ್ತಿಗಳುಳ್ಳವನು. ॥೭೭೧॥

(೭೭೨ನೇ ನಾಮವು) ಚತುರ್ಬಾಹುಃ,
ಓಮ್॥ ಚತುರ್ಬಾಹವೇನಮಃ.

(ಶಂ॥ ಭಾ) ನಾಲ್ಕು ಬಾಹುಗಳುಳ್ಳವನು ವಾಸುದೇವನಿಗೆ ನಾಲ್ಕು ಬಾಹುಗಳುಂಟೆಂಬದಾಗಿ ಶಾಸ್ತ್ರಸಿದ್ಧವು. (ವಿ॥ ಭಾ) ವ್ಯೂಹಕ್ಕೂ ಮೂಲವಾದ ಪರಸ್ವರೂಪದೊಡನೆ ದೇವಕೀ ಗರ್ಭದಲ್ಲಿ ಜನಿಸುವಕಾಲದಲ್ಲಿಯೂ ನಾಲ್ಕು ತೋಳುಗಳೊಡನೆ ಕೂಡಿದವನು. ಆದುದರಿಂದಲೇ ಶ್ರೀದೇವಕೀದೇವಿಯು "ಉಪಸಂಹಾರವಿಶ್ವಾತ್ಮನ್ ರೂಪಮೇತ ಚ್ಚತು

ರ್ಭ್ಯಜಂ | ಜಾನಾತುಮಾವತಾರಂತೆ ಕಂಸೋಯಂದಿತಿಜನ್ಮಜಃ " (ವಿ|| ಪು|| ೫|| ೭|| ೧೭) ಎಂಬದಾಗಿ ಶ್ರೀಕೃಷ್ಣಾವತಾರಕಾಲದಲ್ಲಿ ಪ್ರಾರ್ಥಿಸಿರುವಳು. ||೭೭೨||

## (೭೭೭ನೇ ನಾಮವು) ಚತುರ್ವ್ಯೂಹಃ,

### ಓಮ್|| ಚತುರ್ವ್ಯೂಹಾಯನಮಃ.

(ಶಂ|| ಭಾ) " ಶರೀರಪುರುಷ, ಛಂದಃ ಪುರುಷೋ, ವೇದಪುರುಷೋ, ಮಹಾಪುರುಷಃ " (ಐತ|| ೭|| ೨|| ೭) ಎಂಬ ಬಹ್ವೃಚೋಪನಿಷತ್ಪ್ರತಿ ಪಾದ್ಯಗಳಾದ ನಾಲ್ಕು ವ್ಯೂಹಗಳುಳ್ಳವನು. (ವಿ|| ಭಾ) ಈ ಅವತಾರದಲ್ಲಿಯೂ ತನ್ನ ಆರು ಗುಣಗಳನ್ನು ಏಕವಾಗಿ ಸೇರಿಸಿಯೂ ಭಿನ್ನಪಡಿಸಿಯೂ ವ್ಯವಸ್ಥೆ ಮಾಡಿರುವುದರಿಂದ ನಾಲ್ಕು ವ್ಯೂಹಗಳುಳ್ಳವನು. (ಮ) ನಾಲ್ಕು ವೇದಗಳಲ್ಲಿ ವಿಚಾರಿಸಲ್ಪಡುವಂತವನು. " ಇದರಿಂದ ಚತುರಾತ್ಮಾ ಚತುರ್ವ್ಯೂಹಃ " ಎಂಬ ನಾಮದೊಡನೆ ಪುನರುಕ್ತಿಯಿಲ್ಲವು. ||೭೭೭||

## (೭೭೮ನೇ ನಾಮವು) ಚತುರ್ಗತಿಃ,

### ಓಮ್|| ಚತುರ್ಗತಯೇನಮಃ.

(ಶಂ|| ಭಾ) ನಾಲ್ಕಾದ ವರ್ಣಾಶ್ರಮ ಧರ್ಮಗಳನ್ನು ಯಥಾಕ್ರಮವಾಗಿ ಅನುಷ್ಠಿಸುವಂತವರಿಗೆ ಗತಿಯಾಗಿರುವಂತವನು. (ವಿ|| ಭಾ) ಉಪಾಸಕರ ನಾಲ್ಕು ವಿಧವಾದ ತಾರತಮ್ಯಾನುಸಾರವಾಗಿ ನಾಲ್ಕು ವಿಧವಾದ ಫಲವನ್ನು ಕೊಡುವಂತವನು. (ಮ) ವೇದಗಳಿಂದಲಾದರೂ ಯಥಾವತ್ತಾಗಿ ಅನುಷ್ಠಿಸಲ್ಪಡುವ ವರ್ಣಾಶ್ರಮ ಧರ್ಮಗಳಿಂದಲಾದರೂ ಹೊಂದಲ್ಪಡುವಂತವನು. ||೭೭೮||

## (೭೭೯ನೇ ನಾಮವು) ಚತುರಾತ್ಮಾ,

### ಓಮ್|| ಚತುರಾತ್ಮನೇನಮಃ.

(ಶಂ॥ ಭಾ) ರಾಗದ್ವೇಷಾದಿ ರಹಿತವಾಗಿರುವುದರಿಂದ ಚತುರ (ಸಮರ್ಥ) ವಾದ ಮನಸ್ಸುಳ್ಳವನು. (ಅಥವಾ) ಮನೋಬುದ್ಧ್ಯಹಂಕಾರ ಚಿತ್ತಗಳೆಂಬೀ ನಾಲ್ಕನ್ನೂ ಆತ್ಮವನ್ನಾಗಿ ಉಳ್ಳವನು. (ವಿ॥ ಭಾ) ಅಧಿಕಾರಿ ತಾರತಮ್ಯಾನುಗುಣವಾಗಿ ಪರಿಗ್ರಹಿಸಲ್ಪಟ್ಟ ಸ್ಥೂಲ ಸೂಕ್ಷ್ಮ ಗಳಲ್ಲಿ ಜಾಗ್ರದಾದ್ಯವಸ್ಥಾರೂಪವಾದ ತನ್ನ ನಾಲ್ಕು ಸ್ವರೂಪವನ್ನೂ ಪ್ರಕಾಶಪಡಿಸುವಂತವನು. (ಮ) ವಿಶ್ವತೈಜಸ ಪ್ರಾಜ್ಞತುರೀಯವೆಂಬ ಚಾತುರಾತ್ಮ್ಯವುಳ್ಳವನು. ಇದರಿಂದ ಹಿಂದಿನ 'ಚತುರಾತ್ಮಾ' ಎಂಬ ನಾಮದಿಂದ ಭೇದವು. ॥೭೭೫॥

## (೭೭೬ನೇ ನಾಮವು) ಚತುರ್ಭಾವಃ,

## ಓಮ್॥ ಚತುರ್ಭಾವಾಯನಮಃ

(ಶಂ॥ ಭಾ) ಧರ್ಮಾರ್ಥಾದಿ ಪುರುಷಾರ್ಥ ಚತುಷ್ಟಯಗಳು ಯಾವ ಪರಮಾತ್ಮನಿಂದುಂಟಾಗುವುವೋ ಅವನು 'ಚತುರ್ಭಾವಃ' ಎನ್ನಲ್ಪಡುವನು. ಚತುರೋಪುರುಷಾರ್ಥಾ, ಭಾವಯತಿ, ಉತ್ಪಾದಯತೀತಿಚತುರ್ಭಾವಃ (ವಿ॥ ಭಾ) ಈ ರೀತಿಯಾಗಿ (೧೬) ಪ್ರಕಾರವಾದ ವ್ಯೂಹಗಳು ನಾಲ್ಕುಗಳಲ್ಲಿಯೂ ಜಗದ್ವ್ಯಾಪಾರ ಶಾಸ್ತ್ರಪ್ರದಾನವೇ ಮೊದಲಾದ ಸ್ಥೂಲ ಸೂಕ್ಷ್ಮ ವ್ಯೂಹ ಪ್ರಯೋಜನ ಸಮುದಾಯ ಪ್ರಕಾಶಕನಾದಕಾರಣ ನಾಲ್ಕು ಭಾವನೆಗಳುಳ್ಳವನು. ॥೭೭೬॥

## (೭೭೭ನೇ ನಾಮವು) ಚತುರ್ವೇದವಿತ್,

## ಓಮ್॥ ಚತುರ್ವೇದವಿದೇನಮಃ

(ಶಂ॥ ಮ) ಕ್ರಮವಾಗಿ ನಾಲ್ಕು ವೇದಗಳ ಅರ್ಥಗಳನ್ನು ತಿಳಿದವನು. (ವಿ॥ ಭಾ) ವ್ಯೂಹದಲ್ಲಿಯೂ ವಿಭವದಲ್ಲಿಯೂ ಪ್ರಕಾಶ ಪಡಿಸಲ್ಪಟ್ಟ ಇಂತಹ ಮಹಾ ವೈಭವವು ಮಹಾ ವಿಭೂತಿಯೆಂಬ ಸಮುದ್ರದಲ್ಲಿ ಅಣುಮಾತ್ರವೆಂಬದಾಗಿ ಪರಾವರ ತತ್ವ ಸ್ವರೂಪವನ್ನರಿತ ಸಾಧುಗಳಿಂದ ತಿಳಿಯಲ್ಪಡುವಂತವನು. ॥೭೭೭॥

## (೭೭೮ನೇ ನಾಮವು) ಏಕಪಾತ್,

### ಓಮ್॥ ಏಕಪದೇನಮಃ

(ಶಂ॥ ಮ) ಸಮಸ್ತ ಭೂತಗಳೂ ಈ ಪರಮಾತ್ಮನಿಗೆ ಏಕಪಾದಗಳಾಗಿರುವುವು ; ಆದುದರಿಂದ 'ಏಕಪಾತ್' ಎನ್ನಲ್ಪಡುವನು. (ವಿ॥ ಭಾ) ಅಂಶಾವತಾರೋ ಬ್ರಹ್ಮರ್ಷೇ ಯೋಽಯಂ ಯದುಕುಲೋದ್ಭವಃ" (ವಿ॥ ಪು॥ ೫॥ ೧॥ ೨) ಇತ್ಯಾದಿ ಪ್ರಮಾಣಗಳಂತೆ ಏಕಾಂಶದಿಂದ ಅವತಾರವನ್ನು ಮಾಡಿರುವ ಪ್ರಯುಕ್ತ 'ಏಕಪಾತ್' ಎನ್ನಲ್ಪಡುವನು.॥೭೭೮॥

ಈ ಶ್ಲೋಕದಲ್ಲಿ ಪ್ರತಿಪಾದಿಸಲ್ಪಡುವ (೮) ನಾಮಗಳಿಗೂ "ಬಲಭದ್ರೋ ವಾಸುದೇವಃ ಪ್ರದ್ಯುಮ್ನಶ್ಚಾ ನಿರುದ್ಧಕಃ । ಚತಸ್ರೋ ಮೂರ್ತಯೋಽಯಸ್ಯ ಸ "ಚತುರ್ಮೂರ್ತಿ" (೭೭೧) ರುಚ್ಯತೇ ॥ ವ್ಯೂಹಮೂಲಪರಾವಸ್ಥಾ ನಿರುಪಾಧಿಕರೂಪತಃ ॥ ಚತ್ವಾರೋಬಾಹವೋಽಯಸ್ಯ ಸ "ಚತುರ್ಬಾಹು" (೭೭೨) ರುಚ್ಯತೇ ॥ ಸಮಸ್ತವ್ಯಸ್ತ ಷಾಡ್ಗುಣ್ಯ ವ್ಯೂಹಾವಸ್ಥಾ ಚತುಷ್ಟಯಃ । "ಚತುರ್ವ್ಯೂಹ" (೭೭೩) ಇತಿ ಖ್ಯಾತಶ್ಚತುರ್ವರ್ಗ ಪ್ರದೋಮನುಃ ॥ ಚತಸ್ರಃ ಪ್ರಾಪ್ತಯೋಽಯಸ್ಮಿನ್ಮುಕ್ತಾನಾಂಸ "ಚತುರ್ಗತಿಃ" (೭೭೪) । ಸ್ಥೂಲಸೂಕ್ಷ್ಮೇ ಜಾಗ್ರದಾದೌ ಚಾತುರಾತ್ಮ್ಯ ಪ್ರಕಾಶನಾತ್ । ಚತುರಾತ್ಮಾ" (೭೭೫) ಸವಿಜ್ಞೇಯೋಽನಸ್ವರೋ ಮನುರುತ್ತಮಃ । ಶಾಸ್ತ್ರದಾನಾದಿ ಪುಂಜಾಭಿವ್ಯಂಜನಾ ತ್ಸ್ಥೂಲಸೂಕ್ಷ್ಮಯೋಃ । "ಚತುರ್ಭಾವ" (೭೭೬) ಸ್ಸಮಾಖ್ಯಾತೋ ಮುನ್ಯರ್ಣಶ್ಚಗತಿಪ್ರದಃ॥ ಪರಾವರ ವಿಭಾಗಾನಾಂ ಕೋವಿದಾಸ್ಸ್ವಯಮೇವಯೇ । "ಚತುರ್ವೇದವಿತ್" (೭೭೭) ಇತ್ಯುಕ್ತೋನವಾರ್ಣೋ ನಿಗಮಪ್ರದಃ ॥ ಏಕಾಂಶೇನಾವತೀರ್ಣತ್ವಾತ್ "ಏಕಪಾತ್" (೭೭೮) ಇತಿಕಥ್ಯತೇ॥" ಎಂಬಂತೆ ವಿವೃತಿಯನ್ನು ಕಾಣಬಹುದು.

**ಮೂ॥ ಸಮಾವರ್ತೋ ನಿವೃತ್ತಾತ್ಮಾ ದುರ್ಜಯೋ ದುರತಿಕ್ರಮಃ । ದುರ್ಲಭೋ ದುರ್ಗಮೋ ದುರ್ಗೋ ದುರಾವಾಸೋ ದುರಾರಿಹಾ ॥೮೩॥**

(೭೭೯ನೇ ನಾಮವು) ಸಮಾವರ್ತಃ,

ಓಮ್॥ ಸಮಾವರ್ತಾಯನಮಃ.

(ಶಂ॥ ಮ) ಯಾವ ಪರಮಾತ್ಮನಿಂದ ಸಂಸಾರಚಕ್ರವು ಚನ್ನಾಗಿ ತಿರುಗಿಸಲ್ಪಡುವುದೋ ಆವನು 'ಸಮಾವರ್ತಃ' ಎನ್ನಲ್ಪಡುವನು. (ವಿ॥ ಭಾ) ಇಂತಹ ವ್ಯೂಹವಿಭವಗಳಲ್ಲವೂ ಇವನಲ್ಲಿ ಯಾವಾಗಲೂ ಎಲ್ಲೆಲ್ಲಿಯೂ ಸರ್ವವಿಧದಲ್ಲಿಯೂ ಸುತ್ತಮುತ್ತಲೂ ಸುತ್ತಿಕೊಂಡಿರುವ ಕಾರಣ "ಸಮಾವರ್ತಃ" ಎನ್ನಲ್ಪಡುವನು. ॥೭೭೯॥

(೭೮೦ನೇ ನಾಮವು) ನಿವೃತ್ತಾತ್ಮಾ,

ಓಮ್॥ ನಿವೃತ್ತಾತ್ಮನೇನಮಃ.

(ಶಂ॥ ಮ) ಸರ್ವತ್ರ ಇರುತಲಿರುವುದರಿಂದ ಹಿಂದಕ್ಕೆ ತಿರಗದವನು ಆತ್ಮಾ ಎನ್ನಲ್ಪಡುವನು. ವಿಷಯಗಳಿಂದ ಹಿಂದಕ್ಕೆ ತಿರಿಗಿಹ ಆತ್ಮವುಳ್ಳವನು 'ನಿವೃತ್ತಾತ್ಮಾ' ಎನ್ನಲ್ಪಡುವನು. (ವಿ॥ ಭಾ) ಕೃಪಾಪರವಶನಾಗಿ ಈರೀತಿಯಾದ ಇಂತಹ ಜಗತ್ಸಂಬಂಧವಾದ ವ್ಯಾಪಾರದಲ್ಲಿ ಬರುವನಲ್ಲದೆ ತಾನು ಅವಾಪ್ತ ಸಮಸ್ತ ಕಾಮನಾಗಿರುವುದರಿಂದ ಇವಕಲ್ಲಿ ಸ್ವಲ್ಪವೂ ಅಪೇಕ್ಷಾರಹಿತನು. ॥೭೮೦॥

(೭೮೧ನೇ ನಾಮವು) ದುರ್ಜಯಃ,

ಓಮ್॥ ದುರ್ಜಯಾಯನಮಃ.

(ಶಂ॥ ಮ) ಜಯಿಸಲಶಕ್ಯನು. (ವಿ॥ ಭಾ) ದೇವಮನುಷ್ಯರು ತಮ್ಮ ಶಕ್ತಿಯಿಂದ ಇವನನ್ನು ವಶಪಡಿಸಬೇಕೆಂದರೆ ಅವಕಾಶಾಗದವನು. ॥೭೮೧॥

(೭೮೨ನೇ ನಾಮವು) ದುರತಿಕ್ರಮಃ,

ಓಮ್॥ ದುರತಿಕ್ರಮಾಯನಮಃ

(ಶಂ॥ ಮ) ಭಯಕಾರಣನಾಗಿರುವುದರಿಂದ ಸೂರ್ಯಾದಿಗಳು ಕೂಡ ಇವನ ಆಜ್ಞೆಯನ್ನು ಅತಿಕ್ರಮಿಸಲಾರರಾದ ಕಾರಣ 'ದುರತಿಕ್ರಮಃ' ಎನ್ನಲ್ಪಡುವನು. (ವಿ॥ ಭಾ) ಈ ರೀತಿಯಾಗಿ ಸಮಸ್ತಕ್ಕೂ ತನ್ನ ಪಾದಮೂಲವನ್ನತಿಕ್ರಮಿಸಿದ ಬೇರೊಂದುಗತಿಯಿಲ್ಲದವನು. 'ನಹಿ ವಿಷ್ಣು ಸಮಾಕಾಚಿ ದ್ಗತಿರನ್ಯಾ ವಿಧೀಯತೆ। ಇತ್ಯೇವಂ ಸತತಂವೇನಾ ಮನ್ಯಂತೇನಾತ್ರಸಂಶಯಃ' (ಲೈಂಗ॥ ೨೪—೧೪೩) ಇತ್ಯಾದಿ ಪ್ರಮಾಣಗಳೇ ಅರ್ಥವನ್ನು ಬೋಧಿಸುವುವು. ॥೨೮೨॥

## (೨೮೩ನೇ ನಾಮವು) ದುರ್ಲಭಃ,

### ಓಮ್॥ ದುರ್ಲಭಾಯನಮಃ,

(ಶಂ॥ ಮ) ಮಹಾಪ್ರಯಾಸದಿಂದ ಲಭ್ಯವಾಗುವ ಭಕ್ತಿಯಿಂದ ಹೊಂದಲ್ಪಡತಕ್ಕವನು. "ಜನ್ಮಾಂತರಸಹಸ್ರೇಷು ತಪೋಧ್ಯಾನ ಸಮಾಧಿಭಿಃ। ನರಾಣಾಂ ಕ್ಷೀಣಪಾಪಾನಾಂ ಕೃಷ್ಣೇಭಕ್ತಿಃ ಪ್ರಜಾಯತೆ" ಎಂಬೀ ವ್ಯಾಸವಚನದಿಂದ ಭಕ್ತಿಯ ದೌರ್ಲಭ್ಯವು ತೋರುವುದು. (ವಿ॥ ಭಾ) ಇಂದ್ರಿಯನಿಗ್ರಹಪೂರ್ವಕವಾಗಿ ತನ್ನನ್ನು ಆರಾಧಿಸುವಂತವರಿಗಲ್ಲದೆ ಅನ್ಯರಿಗೆ ಅಸಾಧ್ಯನು. ॥೨೮೩॥

## (೨೮೪ನೇ ನಾಮವು) ದುರ್ಗಮಃ,

### ಓಮ್॥ ದುರ್ಗಮಾಯನಮಃ.

(ಶಂ॥ ಮ) ಅತ್ಯಂತ ಕಷ್ಟಸಾಧ್ಯವಾದ ವೇದಾಂತಶಾಸ್ತ್ರಭ್ಯಾಸಾದಿಗಳಿಂದ ತಿಳಿಯಲ್ಪಡುವಂತವನು. (ಮ) ಅಥವಾ ಹೊಂದಲ್ಪಡುವಂತವನು. (ವಿ॥ ಭಾ) ನೇತ್ರದುರ್ಬಲರಾದವರು ( ಕಣ್ಣಿನ ರೋಗವುಳ್ಳವರು ) ಮಧ್ಯಾಹ್ನ ಸೂರ್ಯನನ್ನು ಹೇಗೆ ನೋಡಲಾರರೊ ಅದರಂತೆ ಎದುರಿಲ್ಲದ ತೇಜಸ್ಸಿನೊಡನೆ ಕೂಡಿ ಮಹಾ ಪ್ರಕಾಶವುಳ್ಳವನಾದ ಕಾರಣ ಯಂತವರಿಗೂ ಸಮೀಪಸ್ಥಿತಿ ಪ್ರಸಕ್ತಿಗೂ ಕೂಡ ಆಗದವನು. ॥೨೮೪॥

## (೭೮೫ನೇ ನಾಮವು) ದುರ್ಗಃ,

### ಓಮ್॥ ದುರ್ಗಾಯನಮಃ.

(ಶಂ॥ ಭಾ) ಇವನನ್ನು ಹೊಂದುವ ಮಾರ್ಗವು ವಿಘ್ನಗಳಿಂದ ತಡೆ ಮಾಡಲ್ಪಡುವುದರಿಂದ 'ದುರ್ಗಃ' ಎನ್ನಲ್ಪಡುವನು. (ವಿ॥ ಭಾ) ಅವಿದ್ಯಾದಿಗಳಾದ ಆವರಣಗಳಿಂದ ಇವನನ್ನು ಹೊಂದುವುದಕ್ಕೆ ಅಸಾಧ್ಯನು. ॥೭೮೫॥

## (೭೮೬ನೇ ನಾಮವು) ದುರಾವಾಸಃ,

### ಓಮ್॥ ದುರಾವಾಸಾಯನಮಃ

(ಶಂ॥ ಮ) ಯೋಗಿಗಳಿಂದ ಸಮಾಧಿಯಲ್ಲಿ ಅತಿಕಷ್ಟದಿಂದ ತಮ್ಮ ಗಳ ಹೃದಯದಲ್ಲಿ ನಿವಾಸಮಾಡಲ್ಪಡತಕ್ಕವನು. (ವಿ॥ ಭಾ) ಈ ಪ್ರಕಾರವಾಗಿ ದುರ್ಗಮನೂ ದುರ್ಗನೂ ಆದಕಾರಣ ತನ್ನ ಪಾದಾರವಿಂದ ಸನ್ನಿಧಿಯ ಸ್ಥಿತಿಯನ್ನು ಕಷ್ಟಸಾಧ್ಯವನ್ನಾಗಿ ಮಾಡುವಂತನು. ॥೭೮೬॥

## (೭೮೭ನೇ ನಾಮವು) ದುರಾರಿಹಾ,

### ಓಮ್॥ ದುರಾರಿಘ್ನೇನಮಃ.

(ಶಂ ಮ) ದುಷ್ಟರೂ ಹೊಂದಲಶಕ್ಯರೂ ಆದ ಶತ್ರು ರಾಕ್ಷಸರನ್ನು ಕೊಂದವನು (ವಿ॥ ಭಾ) ಈ ರೀತಿಯಾಗಿ ದುರ್ಲಭನಾಗಿರುವಿಕೆಯು ಇವನ ಪ್ರಾಪ್ತಿಯನ್ನಪೇಕ್ಷಿಸದ ಪಾಪಿಗಳ ವಿಷಯವೆನ್ನುವುದಕ್ಕಾಗಿ ಪರಮಾತ್ಮನ ಬುದ್ಧಾವತಾರವು ಮುಂದೆ ಹೇಳಲ್ಪಡುವುದು. ದುರಾರಿಹಾ – ದುರ್ಮಾರ್ಗದಲ್ಲಿರುವುದರಿಂದ ತನಗೆ ವಿರೋಧಿಗಳಾಗಿರುವ ಅಸುರ ಪ್ರಕೃತಿಗಳಿಗೆ ವೇದಮಾರ್ಗ ಪ್ರವರ್ತನವನ್ನು ತಪ್ಪಿಸುವುದೇ ಮೊದಲಾದ ಅನೇಕ ಉಪಾಯಗಳಿಂದ ನಾಶಕನಾಗಿರುವಂತವನು.॥೭೮೭॥

ಇಲ್ಲಿ ಪ್ರತಿಪಾದಿಸಲ್ಪಡುವ (೯) ನಾಮಗಳಿಗೂ "ಏತಾದೃಶಂಹಿ ಸರ್ವತ್ರ ಸರ್ವದಾ ಸರ್ವಥಾಪಿಚ ॥ ವ್ಯೂಹಸ್ಯ ವಿಭವಸ್ಯಾಪಿ ಯಸ್ಯಾ

ಸ್ತಾತ್ಯ ವರ್ತನಂತ್ವಿತಿ ॥ ಸಮಾವರ್ತ " (೭೭೯) ಸ್ಸಮಾಖ್ಯಾತೋಽವ ಸ್ವರ್ಣೋ ಜನ್ಮನಾಶಕಃ । " ನಿವೃತ್ತಾತ್ಮಾ " (೭೮೦) ಮನೋಯಸ್ಯ ಸದಾ ಜಗದಮಿಶ್ರಿತಂ । ಶಕ್ತ್ಯಾದೇವ ಮನುಷ್ಯಾದ್ಯೈ ರ್ವಶೀಕರ್ತುಂ ನಶಕ್ಯತೇ ॥ ಅನ್ಯೇಷ್ವಂವಾಪಿಯಸ್ಯಸ್ಯಾ " ದ್ದುರ್ಜಯ " (೭೮೧) ಸ್ಸಮ್ಯ ವರ್ಣಕಃ । ಅತಿಕ್ರಮ್ಯ ಸ್ವಪನ್ಮೂಲಂ ಸರ್ವೇಷಾಂ ಪಾಪಕಾಂ ತರಂ ನಾಸ್ತೀತಿ ಸರ್ವಪಾಪಘ್ನಂಸಸ್ಮೃತೋ "ದುರತಿಕ್ರಮಃ"(೭೮೨) ಅಜಿತೇಂದ್ರಿಯೆ ದುಷ್ಪ್ರಾಪೋ " ದುರ್ಲಭ " (೭೮೩) ಸ್ಸಚಕಥ್ಯತೇ॥ ನೇತ್ರದುರ್ಬಲವೃತ್ತೀನಾಂ ಮಧ್ಯಾಹ್ನ ಮ್ಯಮಣೇರ್ಯಥಾ ॥ ಪ್ರಾಪ್ತು ರ್ದುಷ್ಕರತೇಜಸ್ತ್ವಾ " ದ್ದುರ್ಗಮಃ " (೭೮೪) ಪರಿಕೀರ್ತಿತಃ ॥ ದು ಷ್ಪ್ರವೇಶತಯಾದುರ್ಗಃ " (೭೮೫) ಪಾಪಿಭಿಸ್ತು ಕದಾಚನ ॥ ದುಷ್ಕ ರಾವಾಸ ಭೂಮಿತ್ವಾ " ದ್ದುರಾವಾಸ " (೭೮೬) ಇತೀರಿತಃ ॥ ದುರಾರಿ ಣಸ್ತು ದುರ್ಮಾರ್ಗ ಗಾಮಿನಸ್ತಾನ್ನಿಹಂತಿಯಃ। ತ್ರಯೀಮಾರ್ಗತ್ಯಾಜ ನಾದ್ವೈ ಸ್ಸಸ್ಯಾನ್ನಿತ್ಯಂ "ದುರಾರಿಹಾ" (೭೮೭)॥ " ಎಂಬೀಪ್ರಕಾರ ದಿಂದ ವಿವೃತಿಯನ್ನು ಕಾಣಬಹುದು.

ಮೂ॥ ಶುಭಾಂಗೋ ಲೋಕಸಾರಂಗ ಸ್ಸುತಂತು
ಸ್ತಂತುವರ್ಧನಃ । ಇಂದ್ರಕರ್ಮಾ ಮಹಾಕರ್ಮಾ
ಕೃತಕರ್ಮಾ ಕೃತಾಗಮಃ ॥೯೪॥

(೭೮೮ನೇ ನಾಮವು) ಶುಭಾಂಗಃ,

ಓಮ್॥ ಶುಭಾಂಗಾಯನಮಃ.

(ಶಂ॥ ಮ) ಧ್ಯಾನಾರ್ಹನಾಗಿರುವುದರಿಂದ ಅದಕ್ಕೆ ಯೋಗ್ಯವಾಗಿ ಶುಭಂತ ಮಂಗಳಕರಗಳಾದ ಅವಯವಗಳುಳ್ಳವನು. (ವಿ॥ ಭಾ) ಇವನು ಅವರಿಗೆ ಹೊಂದಲ್ಪಡುವುದು ತಾನೆ ಹೇಗೆ? ಎಂದರೆ :—ಶುಭಾಂಗಃ— ಇವನು ಅತ್ಯಂತವಾಗಿ ವಿಶ್ವಾಸ ಮಾಡಲಿಕ್ಕೆ ಅರ್ಹನೆಂದು ವ್ಯಾಮೋಹಿಸು ಮಂತೆ ಅತಿ ಮನೋಹರವಾದ ದಿವ್ಯಮಂಗಳ ವಿಗ್ರಹವುಳ್ಳವನು ॥೭೮೮॥

## (೭೪೯ನೇ ನಾಮವು) ಲೋಕಸಾರಂಗಃ,

### ಓಮ್|| ಲೋಕಸಾರಂಗಾಯನಮಃ.

(ವಿ|| ಭಾ) ಅದು ಹೇಗೆ ವ್ಯಾಮೋಹಿಸುವನೆಂದರೆ ;—ಲೋಕಕಸಾರಂಗಃ—ಲೋಕದಲ್ಲಿ ಸಾರವಾದ ಭೋಗಮೋಕ್ಷಮಾರ್ಗಗಳನ್ನು ಬಿಡದೇನೆ ಹೊಂದಿರುವಂತವನು. (ಶಂ|| ಭಾ) ಲೋಕಸಾರವನ್ನು ಸಾರಂಗಶಬ್ದವಾಚ್ಯಗಳಾದ ಭ್ರಮರಗಳಂತೆ ಗ್ರಹಿಸುವಂತವನು. ಅಥವಾ ಲೋಕದಲ್ಲಿ ಸಾರವಾದದ್ದು ಪ್ರಣವಾಕ್ಷರವು. ಅದರಿಂದ ಪ್ರತಿಪಾದಿಸಲ್ಪಡುವನೆಂತಲೂ ಹೇಳಬಹುದು. (ಮ) ಜ್ಞಾನಿಗಳಿಂದ ಕಾಣಲ್ಪಡುವ ಸಾರವಾದ ಅವಯವಗಳುಳ್ಳವನು. ||೭೪೯||

## (೭೫೦ನೇ ನಾಮವು) ಸುತಂತುಃ,

### ಓಮ್|| ಸುತಂತವೇನಮಃ.

(ಶಂ|| ಭಾ) ಮಂಗಳಕರವೊ ಅಥವಾ ವಿಸ್ತಾರವೊ ಆದ ಪ್ರಪಂಚವುಳ್ಳವನು. (ಮ) ವ್ಯಾಪಿಸುವಂತವನು. (ವಿ|| ಭಾ) ಶಾಂತನಾಗಿರುವಂತೆ ತೋರಿ ತಾನು ಮಾಡುವ ಕೃತ್ರಿಮವ್ಯಾಪಾರವೆಂಬ ಬಲೆಯನ್ನ ಅವರು ಅತಿಕ್ರಮಿಸದಂತೆ ಮಾಡುವಂತವನು. ||೭೫೦||

## (೭೫೧ನೇ ನಾಮವು) ತಂತುವರ್ಧನಃ,

### ಓಮ್|| ತಂತುವರ್ಧನಾಯನಮಃ.

(ಶಂ|| ಭಾ) ಪ್ರಪಂಚವನ್ನು ವೃದ್ಧಿಪಡಿಸುವುದು ಅಥವಾ ಛೇದಿಸುತ್ತಾನಾದಕಾರಣ 'ತಂತುವರ್ಧನಃ' ಎನ್ನಲ್ಪಡುವನು. (ಮ) ಊರ್ಣನಾಭಿ ಎಂಬ ನೂಲುಕಟ್ಟುವ ಜಾಡರಹುಳುವು ತನ್ನ ನೂಲುಗಳನ್ನು ವೃದ್ಧಿಪಡಿಸುವಂತೆ ಸೃಷ್ಟಿಸಲ್ಪಟ್ಟ ಪ್ರಪಂಚವನ್ನು ವೃದ್ಧಿಪಡಿಸುವಂತವನು. (ವಿ|| ಭಾ) ಈರೀತಿಯಾಗಿ ಅವರಿಗೆ ಹೃದಯದಲ್ಲಿ ರುಚಿಯನ್ನುಂಟುಮಾಡಿ ಅದರಿಂದ ಸಂಸಾರಪಾಶವನ್ನು ವೃದ್ಧಿಪಡಿಸುವಂತವನು. "ತಾನಹಂ ದ್ವಿಷತಃ ಕ್ರೂರಾನ್ಸಂಸಾರೇಷು ನರಾಧಮಾನ್" (ಗೀ|| ೧೬|| ೧೯) ಎಂಬೀವಾಕ್ಯವನ್ನರಿಯಬೇಕು. ||೭೫೧||

ಸ್ಸ್ಯ ವರ್ತನಂತ್ವಿತಿ ॥ ಸವಾವರ್ತ " (೭೭೯) ಸ್ಸಮಾಖ್ಯಾತೋವ ಸ್ವರ್ಗೋ ಜನ್ಮನಾಶಕಃ । " ನಿವೃತ್ತಾತ್ಮಾ " (೭೮೦) ಮನೋಯಸ್ಯ ಸದಾ ಜಗದಮಿಶ್ರಿತಂ । ಶಕ್ಯ್ಯದೇವ ಮನುಷ್ಯಾದ್ಯೈ ರ್ವಶೀಕರ್ತುಂ ನಶಕ್ಯತೇ ॥ ಅನ್ಯೇಷ್ಟುಂವಾಪಿಯಸ್ಯಸ್ಯಾ " ದ್ದುರ್ಜಯ " (೭೮೧) ಸ್ಸಸ್ತುವರ್ಣಕಃ । ಅತಿಕ್ರಮ್ಯ ಸ್ವಪಸನ್ಮೂಲಂ ಸರ್ವೇಷಾಂ ಪಾಪಕಾಂ ತರಂ ನಾಸ್ತೀತಿ ಸರ್ವಪಾಪಘ್ನಸ್ಸಸ್ಮೃತೋ "ದುರತಿಕ್ರಮಃ"(೭೮೨) ಅಜಿತೇಂದ್ರಿಯ ದುಷ್ಪ್ರಾಪ್ಯೋ " ದುರ್ಲಭ " (೭೮೩) ಸ್ಸಚಕದ್ಯತೇ॥ ನೇತ್ರದುರ್ಬಲವೃತ್ತೀನಾಂ ಮಧ್ಯಾಹ್ನ ದ್ಯುಮಣೇರ್ಯಥಾ ॥ ಪ್ರಾಪ್ತು ರ್ದುಷ್ಕರತೇಜಸ್ತ್ವಾ " ದ್ದುರ್ಗಮಃ " (೭೮೪) ಪರಿಕೀರ್ತಿತಃ ॥ ದು ಷ್ಪ್ರವೇಶತಯಾ ದುರ್ಗಃ " (೭೮೫) ಪಾಪಿಭಿಸ್ತು ಕದಾಚನ ॥ ದುಷ್ಕ ರಾವಾಸ ಭೂಮಿತ್ವಾ " ದ್ದುರಾವಾಸ " (೭೮೬) ಇತೀರಿತಃ ॥ ದುರಾರಿ ಣಸ್ತು ದುರ್ಮಾರ್ಗ ಗಾಮಿನಸ್ತಾನ್ನಿಹಂತಿಯಃ। ತ್ರಯೀಮಾರ್ಗತ್ಯಾಜ ನಾದ್ಯೈ ಸ್ಸಸ್ಯಾನ್ನಿತ್ಯಂ "ದುರಾರಿಹಾ" (೭೮೭)॥ " ಎಂಬೀಪ್ರಕಾರ ದಿಂದ ವಿವೃತಿಯನ್ನು ಕಾಣಬಹುದು.

ಮೂ॥ ಶುಭಾಂಗೋ ಲೋಕಸಾರಂಗ ಸ್ಸುತಂತು ಸ್ತಂತುವರ್ಧನಃ । ಇಂದ್ರಕರ್ಮಾ ಮಹಾಕರ್ಮಾ ಕೃತಕರ್ಮಾ ಕೃತಾಗಮಃ ॥೯೪॥

(೭೮೮ನೇ ನಾಮವು) ಶುಭಾಂಗಃ,

ಓಮ್॥ ಶುಭಾಂಗಾಯನಮಃ.

(ಶಂ॥ ಮ) ಧ್ಯಾನಾರ್ಹನಾಗಿರುವುದರಿಂದ ಅದಕ್ಕೆ ಯೋಗ್ಯವಾಗಿ ಶುಭಂತ ಮಂಗಳಕರಗಳಾದ ಅವಯವಗಳುಳ್ಳವನು. (ವಿ॥ ಭಾ) ಇವನು ಅವರಿಗೆ ಹೊಂದಲ್ಪಡುವುದು ತಾನೆ ಹೇಗೆ? ಎಂದರೆ :—ಶುಭಾಂಗಃ— ಇವನು ಅತ್ಯಂತವಾಗಿ ವಿಶ್ವಾಸ ಮಾಡಲಿಕ್ಕೆ ಅರ್ಹನೆಂದು ವ್ಯಾಮೋಹಿಸು ಮತ್ತೆ ಅತಿ ಮನೋಹರವಾದ ದಿವ್ಯಮಂಗಳ ವಿಗ್ರಹವುಳ್ಳವನು ॥೭೮೮॥

## (೭೪೯ನೇ ನಾಮವು) ಲೋಕಸಾರಂಗಃ,

## ಓಮ್॥ ಲೋಕಸಾರಂಗಾಯನಮಃ.

(ವಿ॥ ಭಾ) ಅದು ಹೇಗೆ ವ್ಯಾಮೋಹಿಸುವನೆಂದರೆ ;—ಲೋಕಸಾರಂಗಃ—ಲೋಕದಲ್ಲಿ ಸಾರವಾದ ಭೋಗಮೋಕ್ಷಮಾರ್ಗಗಳನ್ನು ಬಿಡದೇನೆ ಹೊಂದಿರುವಂತವನು. (ಶಂ॥ ಭಾ) ಲೋಕಸಾರವನ್ನು ಸಾರಂಗಶಬ್ದವಾಚ್ಯಗಳಾದ ಭ್ರಮರಗಳಂತೆ ಗ್ರಹಿಸುವಂತವನು. ಅಥವಾ ಲೋಕದಲ್ಲಿ ಸಾರವಾದದ್ದು ಪ್ರಣವಾಕ್ಷರವು. ಅದರಿಂದ ಪ್ರತಿಪಾದಿಸಲ್ಪಡುವನೆಂತಲೂ ಹೇಳಬಹುದು. (ಮ) ಜ್ಞಾನಿಗಳಿಂದ ಕಾಣಲ್ಪಡುವ ಸಾರವಾದ ಅವಯವಗಳುಳ್ಳವನು. ॥೭೪೯॥

## (೭೫೦ನೇ ನಾಮವು) ಸುತಂತುಃ,

## ಓಮ್॥ ಸುತಂತವೇನಮಃ.

(ಶಂ॥ ಭಾ) ಮಂಗಳಕರವೂ ಅಥವಾ ವಿಸ್ತಾರವೂ ಆದ ಪ್ರಪಂಚವುಳ್ಳವನು. (ಮ) ವ್ಯಾಪಿಸುವಂತವನು. (ವಿ॥ ಭಾ) ಶಾಂತನಾಗಿರುವಂತೆ ತೋರಿ ತಾನು ಮಾಡುವ ಕೃತ್ರಿಮವ್ಯಾಪಾರವೆಂಬ ಬಲೆಯನ್ನು ಅವರು ಅತಿಕ್ರಮಿಸದಂತೆ ಮಾಡುವಂತವನು. ॥೭೫೦॥

## (೭೫೧ನೇ ನಾಮವು) ತಂತುವರ್ಧನಃ,

## ಓಮ್॥ ತಂತುವರ್ಧನಾಯನಮಃ.

(ಶಂ॥ ಭಾ) ಪ್ರಪಂಚವನ್ನು ವೃದ್ಧಿಪಡಿಸುವುದು ಅಥವಾ ಭೇದಿಸುತ್ತಾನಾದಕಾರಣ 'ತಂತುವರ್ಧನಃ' ಎನ್ನಲ್ಪಡುವನು. (ಮ) ಊರ್ಣನಾಭಿ ಎಂಬ ನೂಲುಕಟ್ಟುವ ಜಾಡರಹುಳುವು ತನ್ನ ನೂಲುಗಳನ್ನು ವೃದ್ಧಿಪಡಿಸುವಂತೆ ಸೃಷ್ಟಿಸಲ್ಪಟ್ಟ ಪ್ರಪಂಚವನ್ನು ವೃದ್ಧಿಪಡಿಸುವಂತವನು. (ವಿ॥ ಭಾ) ಈರೀತಿಯಾಗಿ ಅವರಿಗೆ ಹೃದಯದಲ್ಲಿ ರುಚಿಯನ್ನುಂಟುಮಾಡಿ ಅದರಿಂದ ಸಂಸಾರಪಾಶವನ್ನು ವೃದ್ಧಿಪಡಿಸುವಂತವನು. "ತಾನಹಂ ದ್ವಿಷತಃ ಕ್ರೂರಾನ್ಸಂಸಾರೇಷು ನರಾಧಮಾನ್" (ಗೀ॥ ೧೬॥ ೧೯) ಎಂಬೀವಾಕ್ಯವನ್ನರಿಯಬೇಕು. ॥೭೫೧॥

(೭೯೨ನೇ ನಾಮವು) ಇಂದ್ರಕರ್ಮಾ,
ಓಮ್॥ ಇಂದ್ರಕರ್ಮಣೇನಮಃ.

(ಶಂ॥ ಮ) ಇಂದ್ರನ ಕರ್ಮವೆಂದರೆ ಐಶ್ವರ್ಯವು ಅದನ್ನುಳ್ಳವನು. (ಮ) ಅಥವಾ ಇಂದ್ರನನ್ನು ಮಾಡುವಂತವನು. (ವಿ॥ ಭಾ) ಶರಣಾಗತರಾದ ಇಂದ್ರಾದಿಗಳಿಗಾಗಿ ಇಂತಹ ಅಸುರ ಸಂಹಾರಾದಿ ಕಾರ್ಯಗಳನ್ನು ಮಾಡುವಂತವನು. ॥೭೯೨॥

(೭೯೩ನೇ ನಾಮವು) ಮಹಾಕರ್ಮಾ,
ಓಮ್॥ ಮಹಾಕರ್ಮಣೇನಮಃ.

(ಶಂ॥ ಭಾ) ಆಕಾಶಾದಿ ಮಹತ್ತಾದ ಕಾರ್ಯಗಳನ್ನು ಮಾಡುವಂತವನು. (ಮ) ಮಹತ್ತತ್ವವನ್ನೂ ಅದಕ್ಕೆ ಅಭಿಮಾನಿದೇವತೆಯಾದ ಹಿರಣ್ಯಗರ್ಭನನ್ನೂ ಸೃಷ್ಟಿಸುವಂತವನು. (ವಿ॥ ಭಾ) ಈ ರೀತಿಯಾಗಿ ಅಶ್ರಿತಸಂರಕ್ಷಣಾರ್ಥವಾಗಿಯೂ ದುಷ್ಟಶಿಕ್ಷಣಾರ್ಥವಾಗಿಯೂ ಪರಮದಯಾಳುವಾದ ಪರಮಪುರುಷನು ಅಸುರರನ್ನು ವಂಚಿಸುವುದು ಯುಕ್ತವಾಗಿರುವುದರಿಂದ ಅತ್ಯಂತವಾಗಿ ನ್ಯಾಯಯುಕ್ತವಾಗಿರುವ ಕಾರ್ಯವುಳ್ಳವನು. ॥೭೯೩॥

(೭೯೪ನೇ ನಾಮವು) ಕೃತಕರ್ಮಾ,
ಓಮ್॥ ಕೃತಕರ್ಮಣೇನಮಃ.

(ಶಂ॥ ಮ) ಈ ಪರಮಾತ್ಮನಿಂದ ಸಮಸ್ತ ಕರ್ಮಗಳು ಮಾಡಲ್ಪಟ್ಟಿರುವುವಲ್ಲದೆ ಮಾಡತಕ್ಕ ಕರ್ಮಗಳ್ಯಾವವೂ ಇಲ್ಲವು; ಅಥವಾ (ಶಂ) ಧರ್ಮಾತ್ಮಕ ಕರ್ಮಗಳು ಇವನಿಂದ ಮಾಡಲ್ಪಟ್ಟಿರುವುವಾದುದರಿಂದಲೂ 'ಕೃತಕರ್ಮಾ' ಎನ್ನಲ್ಪಡುವನು. (ವಿ॥ ಭಾ) ಅವರ ವಂಚನಾರ್ಥವಾಗಿ ತಾನೂ ಅಂತಹ ವಂಚನ ವ್ಯಾಪಾರಗಳನ್ನು ಮಾಡುವಂತವನು. ॥೭೯೪॥

(೭೯೫ನೇ ನಾಮವು) ಕೃತಾಗಮಃ,
ಓಮ್॥ ಕೃತಾಗಮಾಯನಮಃ

(ಶಂ॥ ಭಾ) ವೇದಾತ್ಮಕಗಳಾದ ಆಗಮಗಳನ್ನು ಮಾಡಿದವನು. (ವಿ॥ ಭಾ) ಹಿಂದೇ ತಾನು ಮಾಡಿದ ಕಟ್ಟಳೆಯನ್ನು ಸ್ಥಿರಪಡಿಸುವುದಕ್ಕಾಗಿ ಬೌದ್ಧ ಆರ್ಹತಾದ್ಯಾಗಮಗಳನ್ನು ಮಾಡಿದವನು. (ಮ) ಆಪರೋಕ್ಷ ಜ್ಞಾನಿಗಳಿಂದ ಮಾಡಲ್ಪಟ್ಟ ಕರ್ಮಗಳನ್ನು ನಿವೃತ್ತಿಸುವಂತವನು. ಅಥವಾ ಮಾಡಲ್ಪಟ್ಟ ಕರ್ಮಗಳಿಂದ ತಿಳಿಯಲ್ಪಡುವಂತವನು. ॥೭೯೫॥

ಈ ೮೪ನೇ ಶ್ಲೋಕದಲ್ಲಿ ಪ್ರಕೃತಗಳಾದ ೮ ನಾಮಗಳಿಗೂ " ಮಾಯಾಮೋಹನ ವೇಷೇಣ ವಿಪ್ರಲಭ್ಯಾ ಸುರಾನಪಿ | ಅನುಪ್ರವಿಷ್ಟ ಸ್ಥಾನ್ಯೋಸೌ " ಶುಭಾಂಗ " (೭೮೮) ಇತಿಕಥ್ಯತೇ ‖ ನ್ಯಾಯಾನಪೇತಂ ಯತ್ಸಾರಂ ಭೋಗನಿರ್ವಾಣವರ್ತ್ಮಚ | ಲೋಕೇತದ್ಗಚ್ಛತಿ ಸದಾ " ಲೋಕಸಾರಂಗ " (೭೮೯) ಈರಿತಃ ‖ ತಂತುಃಕಿತ್ರಿಕುಶಾಂತ್ಯಾದಿ ರೂಪಸ್ತದ್ಗ್ರಹಣಾಯವೈ | " ಸುತಂತುಃ " (೭೯೦) ಶೋಭನೋಸ್ಯೇತಿ ಸರ್ಪಾಣೋರ್ಣೇ ದೋಷನಾಶಕಃ ‖ ಅಂಶುಭಿಃಪಾಪರುಚಿಭಿಸ್ತಂತುಂ ಸಂಸಾರನಾಮಕಂ | ಯಸ್ತನೋತೀತಿ ಸದಾ " ತಂತುವರ್ಧನ " (೭೯೧) ಈರಿತಃ ‖ ಪ್ರಪನ್ನೇಂದ್ರಾದ್ಯರ್ಥತಯಾ ದೈತ್ಯ ಸಂಹಾರರೂಪಕಂ | ಕರ್ಮಯಸ್ಯಾ " ಇಂದ್ರಕರ್ಮಾ "(೭೯೧) ಹ್ಯಷ್ಟಾರ್ಣೋ ಮನುರುತ್ತಮಃ‖ ಏವಂ ನ್ಯಾಯಪ್ರವೃತ್ತತ್ವಾ " ನ್ಮಹಾಕರ್ಮೇ " (೭೯೩) ತಿಶಬ್ಧ್ಯತೇ ‖ ಸ್ವನುಷ್ಠಿತ ಸದಾಚಾರಃ " ಕೃತಕರ್ಮೇ " (೭೯೪) ತಿಕಥ್ಯತೇ | ಕೃತಬುದ್ಧಾದ್ಯಾಗಮತ್ವಾ " ತ್ಕೃತಾಗಮ " (೭೯೫) ಉದಾಹೃತಃ " ಎಂಬೀ ರೀತಿಯಾಗಿ ವಿವೃತಿಯನ್ನು ಕಾಣಬಹುದು.

ಮೂ॥ ಉದ್ಭವ ಸ್ಸುಂದರ ಸ್ಸುಂದೊ ರತ್ನನಾ
ಭ ಸ್ಸುಲೋಚನಃ। ಅರ್ಕೊ ವಾಜಸನಿ ಶೃಂಗೀ
ಜಯಂತ ಸ್ಸರ್ವವಿ ಜ್ಜಯಿ ॥೯೫॥

(೭೯೬ನೇ ನಾಮವು) ಉದ್ಭವಃ,
ಓಮ್॥ ಉದ್ಭವಾಯನಮಃ.

(ಶಂ|| ಭಾ) ಸ್ವೇಚ್ಛೆಯಿಂದ ಅವತಾರಜನ್ಮಗಳನ್ನು ಹೊಂದುವಂತವನು. ಅಥವಾ ಸರ್ವಕಾರಣನಾದಕಾರಣ (ಪ್ರಾಕೃತರಂತೆ) ಜನ್ಮವಿಲ್ಲದವನು. (ಮ) ಸಂಸಾರವಿಲ್ಲದವನು. ಇದರಿಂದ "ಉದ್ಭವಃಕ್ಷೋಭಣಃ" ಎಂಬೀ ನಾಮಕ್ಕಿಂತಲೂ ಭೇದವು. (ವಿ|| ಭಾ) ಮೋಕ್ಷೋಪದೇಶ ನಟನಸಮಯದಲ್ಲಿ ಆಗಲೇ ಸಂಸಾರಮಂಡಲದಿಂದ ಉತ್ತೀರ್ಣನಾದಂತೆಯೂ ಸಂಸಾರವಿಲ್ಲದವನಂತೆಯೂ ಕಾಣಲ್ಪಡುವಂತವನು. ||೭೯೬||

## (೭೯೭ನೇ ನಾಮವು) ಸುಂದರಃ,

### ಓಮ್|| ಸುಂದರಾಯನಮಃ.

(ವಿ|| ಭಾ) ಅಪರರುಗಳ ಕಣ್ಣಿಗೆ ಅತ್ಯಂತ ಸುಂದರನಾಗಿ ಕಾಣುವಂತವನು. (ಶಂ|| ಮ) ಸರ್ವಾತಿಶಾಯಿಯಾದ ಸೌಭಾಗ್ಯದಿಂದ ಪ್ರಕಾಶಿಸುವಂತವನು. ||೭೯೭||

## (೭೯೮ನೇ ನಾಮವು) ಸುಂದಃ,

### ಓಮ್|| ಸುಂದಾಯನಮಃ.

(ಶಂ|| ಭಾ) ಕರುಣಾಶಾಲಿಯು. (ಸುಷ್ಠು ಉನತ್ತೀತಿ ಸುಂದಃ- ಆರ್ದ್ರೀಭಾವಸ್ಯ ವಾಚಕಃ) (ಮ) ಸುಂ-ಸುಖಂ, ದದಾತೀತಿ ಸುಂದಃ:- ಸುಖವನ್ನು ಕೊಡುವಂತವನು. (ವಿ|| ಭಾ) ಅಸುರರ ಕಣ್ಣುಗಳಿಗೆ ಸುಂದರನಾಗಿ ತೋರುವುದರಿಂದಲೆ ಅವರ ಮನಸ್ಸನ್ನು ದಯಾರಸದಿಂದ ನೆನೆಸುವಂತವನು. ಅವರನ್ನು ದಯಾರ್ದ್ರ ಮನಸ್ಕರನ್ನಾಗಿ ಮಾಡುವಂತವನೆಂದರ್ಥವು. ||೭೯೮||

## (೭೯೯ನೇ ನಾಮವು) ರತ್ನನಾಭಃ,

### ಓಮ್|| ರತ್ನನಾಭಾಯನಮಃ.

(ಶಂ|| ಭಾ) ರತ್ನದಂತೆ ಸುಂದರವಾದ ನಾಭಿಯುಳ್ಳವನು. (ಮ) ನಾಭಿಯಲ್ಲಿ ರತ್ನಗಳುಳ್ಳವನು. (ವಿ|| ಭಾ) ಇವನ ಪಾಂಡಿತ್ಯಕ್ಕೆ ಅನು

ಸಾರವಾದ ಸುಂದರವಾದ ಉದರವೂ (ಉದರ–ಹೊಟ್ಟೆ) ಸುಂದರವಾದ ನಾಭಿಯೂ ಉಳ್ಳವನು. ||೭೯೯||

## (೮೦೦ನೇ ನಾಮವು) ಸುಲೋಚನಃ,

## ಓಮ್|| ಸುಲೋಚನಾಯನಮಃ

(ಶಂ|| ಭಾ) ಮಂಗಳಕರಗಳಾದ ಕಣ್ಣುಗಳು ಅಥವಾ ಜ್ಞಾನವುಳ್ಳವನು. (ವಿ|| ಭಾ) ಸ್ವಲ್ಪಮಟ್ಟಿಗೆ ತನ್ನಲ್ಲಿ ಮನಸ್ವಿಗಳಾಗಿದ್ದರೂ ಅಂತವರನ್ನು ಅಪಹರಿಸುವ ಸುಂದರವಾದ ಕಣ್ಣುಗಳು ಅಥವಾ ಜ್ಞಾನವುಳ್ಳವನು. (ವಿ|| ಭಾ) ಸ್ವಲ್ಪಮಟ್ಟಿಗೆ ತನ್ನಲ್ಲಿ ಮನಸ್ವಿಗಳಾದರೂ ಅಂತವರನ್ನು ಅಪಹರಿಸುವ ಸುಂದರವಾದ ಕಣ್ಣುಗಳುಳ್ಳವನು. ||೮೦೦||

ಈ ರೀತಿಯಾಗಿ ಶ್ರೀಪರಾಶರ ಭಟ್ಟಾರ್ಯ ಭಾಷಿತವಾದ ಶ್ರೀ ಭಗವದ್ಗುಣ ದರ್ಪಣದಲ್ಲಿ ೮ನೇ ಶತಕವು ಪೂರ್ಣವಾಯಿತು

## (೮೦೧ನೇ ನಾಮವು) ಅರ್ಕಃ,

## ಓಮ್|| ಅರ್ಕಾಯನಮಃ.

(ಶಂ|| ಮ) ಬ್ರಹ್ಮಾದಿ ದೇವತೆಗಳಿಂದ ಪೂಜಿಸಲ್ಪಡುವಂತವನು. (ವಿ|| ಭಾ) ಅಹೋ ಇವನು ಮಹಾತ್ಮನು, ಅತಿಧಾರ್ಮಿಕನೆಂದು ಕೊಂಡಾಡಲ್ಪಟ್ಟು ಅವರಿಂದ ಸ್ತುತಿಸಲ್ಪಡುವಂತವನು. ||೮೦೧||

## (೮೦೨ನೇ ನಾಮವು) ವಾಜಸನಿಃ,

## ಓಮ್|| ವಾಜಸನಯೇನಮಃ

(ಶಂ|| ಮ) ವಾಜಸನಃ–ಅಪೇಕ್ಷಿಸುವಂತವರಿಗೆ ಅನ್ನವನ್ನು ಕೊಡುವಂತವನು. (ವಿ|| ಭಾ) ನಾಸ್ತಿಕವಾದವನ್ನು ಹೇಳಿ ಈ ಲೋಕಾನುಭಾವ್ಯಗಳಾದ ಅನ್ನಪಾನಾದಿಗಳನ್ನೇ ಮಹಾ ಪುರುಷಾರ್ಥವನ್ನಾಗಿ ಭಾವಿಸುವಂತವನು. ಆ ಮತಸ್ಥರು ಪ್ರಾತಃಕಾಲದಲ್ಲಿ ದಧ್ಯನ್ನವನ್ನು ಗ್ರಹಿಸುವುದು ಪ್ರಸಿದ್ಧವಷ್ಟೆ. ||೮೦೨||

## (೮೦೩ನೇ ನಾಮವು) ಶೃಂಗೀ,

ಓಮ್॥ ಶೃಂಗಿಣೇನಮಃ.

(ಶಂ॥ ಮ) ಪ್ರಲಯಜಲದಲ್ಲಿ ಶೃಂಗವುಳ್ಳ ಮತ್ಸ್ಯವಿಶೇಷವಾಗಿ ಅವತಾರವನ್ನು ಮಾಡಿದವನು (ವಿ॥ ಭಾ) ಹಿಂಸೆಮಾಡಕೂಡದೆಂಬುವುದಕ್ಕೆ ಗುರ್ತಾಗಿ ಕೈಯಲ್ಲಿ ನವಿಲುಗರಿಗಳನ್ನು ಹಿಡಿದವನು. "ಬರ್ಹಿಪತ್ರಧರಃ" (ವಿ। ಪು॥ ೩॥ ೧೮॥ ೨) ಎಂದು ಪ್ರಸಿದ್ಧವಷ್ಟೆ. ॥೮೦೩॥

## (೮೦೪ನೇ ನಾಮವು) ಜಯಂತಃ,

ಓಮ್॥ ಜಯಂತಾಯನಮಃ.

(ಶಂ॥ ಮ) ಶತ್ರುಗಳನ್ನು ಜಯಿಸುವಂತಹವನು ಅಥವಾ (ಶಂ) ಶತ್ರುವಿಜಯಕ್ಕೆ ಕಾರಣನು. (ವಿ॥ ಭಾ) ಜ್ಞಾನವೇ ಆತ್ಮವೆಂತಲೂ ಪ್ರಪಂಚವೆಲ್ಲವೂ ಮಿಥ್ಯೆಯೆಂತಲೂ (ಮಿಥ್ಯೆ—ಸುಳ್ಳು) ಹೇಳಿಕೊಂಡು ಮಿಥ್ಯಾವಾದಗಳಿಂದ ಆಸ್ತಿಕರನ್ನು ಜಯಿಸುವಂತಹವನು. ॥೮೦೪॥

## (೮೦೫ನೇ ನಾಮವು) ಸರ್ವವಿಜ್ಜಯೀ,

ಓಮ್॥ ಸರ್ವವಿಜ್ಜಯಿನೇನಮಃ

(ಶಂ॥ ಮ) ಸರ್ವವಿಷಯವಾದ ಜ್ಞಾನವುಳ್ಳವನು, ಜಯೀ—ಅಂತರಶತ್ರುಗಳಾದ ರಾಗಾದಿಗಳನ್ನೂ ಬಾಹ್ಯಶತ್ರುಗಳಾದ ಹಿರಣ್ಯಾದಿಗಳನ್ನೂ ಜಯಿಸುವಂತಹ ಸ್ವಭಾವವುಳ್ಳವನು. ಅಥವಾ ಸರ್ವಜ್ಞನೂ ಜಯಶಾಲಿಯೂ ಎಂಬದಾಗಿ ಏಕನಾಮವನ್ನಾಗಿಯೂ ತಿಳಿಯಬಹುದು. (ವಿ॥ ಭಾ) ಹೇಗೆ ತಾನೆ ಇವರನ್ನು ಪ್ರಮಾಣವಿರುದ್ಧಗಳಾದ ನಾಸ್ತಿಕವಾದಗಳನ್ನು ನಂಬುವಂತೆ ಮಾಡಬಹುದೆಂದರೆ.—ಸರ್ವಜ್ಞರನ್ನೂ ಜಯಿಸುವಂತಹ ಸಮರ್ಥನು. ಹೀಗಾದಮೇಲೆ ಸಾಮಾನ್ಯರಾದ ಆಸುರರನ್ನು ವ್ಯಾಮೋಹಪಡಿಸುವುದು ಇವನಿಗೆ ಅಸಾಧ್ಯವಲ್ಲವಷ್ಟೆ. ॥೮೦೫॥

ಇಲ್ಲಿ ಪ್ರಕೃತಗಳಾದ ೧೦ ನಾಮಗಳಿಗೂ "ಮೋಕ್ಷೋಪದೇನ ನಟನಾದ್ಭವಾದುದ್ಭವತಸ್ಸಧಃತಃ। "ಉದ್ಭವ" (೭೯೫) ಸೂಚವಿಜ್ಞೇಯ

ಸ್ಸುಪರ್ಣಃ ಪಾಪನಾಶಕಃ ॥ ಸಸ್ಮಾತ್ಸ್ಯ "ತ್ರಿಸುಂದರ" (೭೯೬) ಉದ್ಧಿಪ್ತ ಸ್ತ್ರೀಷಾಂ ದೃಷ್ಟಿಮನೋಹರಃ । ನಿಶ್ಶಾಂತಿಶಾಯಿ ಸೌಭಾಗ್ಯಶಾಲಿತ್ವಾ "ತ್ರಿಸುಂದರಃ" (೭೯೭) ಸ್ಮೃತಃ॥ ಉನತ್ತಾನುಷ್ಟ್ರ ಚೇತಾಂಸಿ ರಕ್ಷಸಾಂ "ಸುಂದ" (೭೯೮) ಈರಿತಃ । ಸ "ರತ್ನನಾಭ" (೭೯೯) ಇತ್ಯುಕ್ತೋ ಯಃ ಪಾಂಡಿತ್ಯವಿಡಂಬನಾತ್ । ಮೃಷ್ಟೋಪರವ್ಯಕ್ತ ರಮ್ಯನಾಭಿಸ್ಸಕ್ಷಲದೋಮನಃ ॥ "ಸುಲೋಚನ" (೮೦೦) ಇತಿಪ್ರೋಕ್ತೋ ದೃಜಾತ್ಮಯಾ ಮೋಹಿತೇಕ್ಷಣಃ ॥ ಅತ್ಯಂತ ಧಾರ್ಮಿಕ ಇತಿಸ್ತುತಸ್ಸೈ "ರ್ಕ" (೮೦೧) ಈರಿತಃ ॥ ಅನ್ನಾದೀನ್ಯೈಹಿಕಾನೀವ ಯುಸ್ಮಾನ್ಯರ್ಹ್ಯಂ ಭವಂತಿಹಿ ॥ ಸ "ವಾಜಸನಿ" (೮೦೨) ರಿತ್ಯುಕ್ತೋ ವಸ್ವಾರ್ಣೋಽನ್ನಪ್ರದೋಮನುಃ ॥ ಕರೇಸ್ತಿಪಿಂಛಿಕಾಯುಸ್ಯ "ಶೃಂಗೀ" (೮೦೩) ಹಿಂಸಾವಿಡಂಬನಾತ್ । ಸರ್ವಪ್ರಪಂಚ ಮಿಥ್ಯಾತ್ವ ಸಂವಿದಾತ್ಮತ್ವವಾದತಃ ॥ ಆಸ್ತಿಕ್ಯವಾದಿನಾಂ ಜೇತಾ "ಜಯಂತ" (೮೦೪) ಇತಿಕಥ್ಯತೇ । ಯಸ್ಯೋಜಯ್ಯಾಶ್ಚ ಸರ್ವಜ್ಞಾ ಸ್ಸಜೋಕ್ತ "ಸರ್ವವಿಜ್ಜಯೀ" (೮೦೫) ಎಂಬೀ ರೀತಿಯಾಗಿ ವಿವೃತಿಯನ್ನು ಕಾಣಬಹುದು.

ಮೂ॥ ಸುವರ್ಣಬಿಂದು ರಕ್ಷೋಭ್ಯ ಸ್ಸರ್ವವಾಗೀ
ಶ್ವರೇಶ್ವರಃ । ಮಹಾಹ್ರದೋ ಮಹಾಗರ್ತೋ
ಮಹಾಭೂತೋ ಮಹಾನಿಧಿಃ ॥೮೬॥

(೮೦೬ನೇ ನಾಮವು) ಸುವರ್ಣಬಿಂದುಃ,

ಓಮ್॥ ಸುವರ್ಣಬಿಂದವೇನಮಃ.

(ಶಂ॥ ಮ) ಸುವರ್ಣಕ್ಕೆ ಸಮಾನಗಳಾದ ಬಿಂದುಗಳೆಂದರೆ ಅವಯವಗಳುಳ್ಳವನು. "ಆಪ್ರಣಖಾತ್ಸುವರ್ಣಃ" ಎಂಬ ಶ್ರುತಿಯನ್ನು ಕಾಣಬೇಕು. (ಶಂ) ಅಥವಾ ಮಂಗಳಕರಗಳಾದ ವರ್ಣವೆಂದರೆ ಅಕ್ಷರವು, ಅದೂ ಬಿಂದುವೂ ಯಾವ ಮಂತ್ರದಲ್ಲಿ ಸೇರಿರುವುವೋ ಅಂತಹ ಮಂತ್ರಸ್ವರೂಪನು (ವಿ॥ ಭಾ) ಅತ್ಯಂತ ಚಾತುರ್ಯವುಳ್ಳ ಅಕ್ಷರಗಳೊಡನೆ ಕೂಡಿದ ವಾಕ್ಚಾತುರ್ಯದಿಂದ ಆಸ್ತಿಕವಾದವನ್ನು ನಿರಾಕರಿಸುವಂತವನು. ॥೮೦೬॥

ಈ ರೀತಿಯಾಗಿ ಶ್ರೀಮಚ್ಛಂಕರ ಭಾಷ್ಯದಲ್ಲಿಯೂ ಶ್ರೀ ಮಧ್ವಮತಾನುಸಾರಿ ವ್ಯಾಖ್ಯಾನದಲ್ಲಿಯೂ ಅಷ್ಟಮ ಶತಕವು

## (೮೦೭ನೇ ನಾಮವು) ಅಕ್ಷೋಭ್ಯಃ,
## ಓಮ್|| ಅಕ್ಷೋಭ್ಯಾಯನಮಃ.

(ಶಂ|| ಭಾ) ರಾಗದ್ವೇಷಾದಿಗಳಿಂದಲೂ ಶಬ್ದಾದಿ ವಿಷಯಗಳಿಂದಲೂ ರಾಕ್ಷಸರಿಂದಲೂ ತಿರಸ್ಕರಿಸಲ್ಪಡದವನು. (ವಿ|| ಭಾ) ಗಂಭೀರ ಹೃದಯವುಳ್ಳವನಾದಕಾರಣ ವ್ಯಾಕುಲಿಸಲ್ಪಡದವನು. ||೮೦೭||

## (೮೦೮ನೇ ನಾಮವು) ಸರ್ವವಾಗೀಶ್ವರೇಶ್ವರಃ,
## ಓಮ್|| ಸರ್ವವಾಗೀಶ್ವರೇಶ್ವರಾಯನಮಃ.

(ಶಂ|| ಮ) ವಾಗೀಶ್ವರರಾದ ಬ್ರಹ್ಮಾದಿಗಳಿಗೂ ಪ್ರಭುವಾದವನು. (ವಿ|| ಭಾ) ವಾಕ್ಕು ವುಳ್ಳ ಸಮಸ್ತರನ್ನೂ ಅಡಗಿಸಿಕೊಂಡು ಆಳುವಂತವನು. ||೮೦೮||

## (೮೦೯ನೇ ನಾಮವು) ಮಹಾಹ್ರದಃ,
## ಓಮ್|| ಮಹಾಹ್ರದಾಯನಮಃ.

(ಶಂ|| ಭಾ) ಯೋಗಿಗಳು ಯಾವ ಬ್ರಹ್ಮಾನಂದವೆಂಬ ಮಡುವಿನಲ್ಲಿ ಮುಣುಗಿ ವಿಶ್ರಮಿಸಿಕೊಂಡು ಸುಖಿತರಾಗುವರೋ ಅಂತವನು 'ಮಹಾಹ್ರದಃ' ಎನ್ನಲ್ಪಡುವನು. (ವಿ|| ಭಾ) ಪಾಪಶೀಲರಾದವರು ಪುನಃ ತಲೆಯನ್ನು ತೋರಿಸದೇ ಇರುವಂತೆಯೂ ಪುಣ್ಯಶೀಲರಾದವರು ಅತ್ಯಂತವಾಗಿ ಮುಣುಗಿ ತೃಪ್ತಿಹೊಂದುವಂತೆ ಇರುವ ಅತಿ ಗಂಭೀರವಾದ ಮಡುವಿನಂತೆ ಇರುವಂತವನು. (ಮ) ಮಡುವಿನಂತೆ ಗಂಭೀರನಾದವನು. ||೮೦೯||

## (೮೧೦ನೇ ನಾಮವು) ಮಹಾಗರ್ತಃ,

### ಓಮ್॥ ಮಹಾಗರ್ತಾಯನಮಃ

(ಶಂ॥ ಭಾ) ದೊಡ್ಡದಾದ ಹಳ್ಳವನ್ನು ಹೇಗಾದರೆ ದಾಟುವುದು ಅಶಕ್ಯವೋ ಅದರಂತೆ ಇವನ ಮಾಯೆಯನ್ನು ದಾಟುವುದು ಅಶಕ್ಯವು. ಅಥವಾ ಗರ್ತಶಬ್ದವು ರಥಪರ್ಯಾಯವಾಗಿ ಭಾರತ ಯುದ್ಧಾದಿಗಳಲ್ಲಿ ಪ್ರಸಿದ್ಧವಾದ 'ಮಹಾರಥಃ' ಎಂಬುದನ್ನೂ ಹೇಳುವುದು (ವಿ॥ ಭಾ) ಈ ಪ್ರಕಾರವಾಗಿ ಬಾಹ್ಯಕುದೃಷ್ಟಿಮತಗಳಲ್ಲಿ ಪ್ರವೇಶಿಸಿ ಆತ್ಮನಾಶವನ್ನಪೇಕ್ಷಿಸಿದವರಿಗೆ ರೌರವಾದಿ ನರಕಗಳೆಂಬ ಮಹಾಹಳ್ಳಗಳನ್ನು ಕೊಡುವಂತವನು. ॥೮೧೦॥

## (೮೧೧ನೇ ನಾಮವು) ಮಹಾಭೂತಃ,

### ಓಮ್॥ ಮಹಾಭೂತಾಯನಮಃ,

(ಶಂ॥ ಭಾ) ಕಾಲತ್ರಯದಲ್ಲಿಯೂ ಅವಿಚ್ಛಿನ್ನಸ್ವರೂಪನಾದ ಆಕಾರವುಳ್ಳವನು. (ಮ) ಮಹಾಭೂತಗಳೆಲ್ಲವೂ ಯಾವನಲ್ಲಿರುವುವೋ ಅವನು 'ಮಹಾಭೂತಃ' ಎನ್ನಲ್ಪಡುವನು. (ವಿ॥ ಭಾ) ಈ ಪ್ರಕಾರವಾಗಿ ಭಗವದಾಜ್ಞಾರೂಪವಾದ ಶಾಸ್ತ್ರವನ್ನುಲ್ಲಂಘಿಸುವ ಅಸುರರ ಪ್ರಕೃತಿಗಳನ್ನು ನಿಗ್ರಹಮಾಡುವ ಪ್ರಕಾರವು ಹೇಳಲ್ಪಟ್ಟಿತು. ಇನ್ನು ಮುಂದೆ ದೇವಪ್ರಕೃತಿಗಳಾದವರನ್ನು ಅನುಗ್ರಹಿಸುವ ಪ್ರಕಾರವು ಬೋಧಿಸಲ್ಪಡುವುದು. ಮಹಾತ್ಮರನ್ನು ತನ್ನ ಸ್ವತ್ತನ್ನಾಗಿ ಭಾವಿಸುವಂತವನು. ॥೮೧೧॥

## (೮೧೨ನೇ ನಾಮವು) ಮಹಾನಿಧಿಃ,

### ಓಮ್॥ ಮಹಾನಿಧಯೇನಮಃ,

(ಶಂ॥ ಭಾ) ಸರ್ವಭೂತಗಳಿಗೂ ನಿವಾಸಭೂತನು. ಅಥವಾ ದೊಡ್ಡದಾದ ನಿಧಿಯಂತೆ ಕಾಣಲ್ಪಡುವನು. (ವಿ॥ ಭಾ) ನಿಧಿಯಂತೆ ಆವರುಗಳಲ್ಲಿ ಅತ್ಯಂತ ಪ್ರಿಯವಾಗಿರುವಂತವನು. ॥೮೧೨॥

ಈ ೮೬ನೇ ಶ್ಲೋಕದಲ್ಲಿ ಪ್ರಕೃತಗಳಾದ ೭ ನಾಮಗಳಿಗೂ "ಆಸ್ತೃಕತ್ವಾ ಪಲಾಪೇನ ಪಟುಭಿಃ ಪದಕಾಕ್ಷರೈಃ | "ಸುವರ್ಣಬಿಂದು" (೮೦೬) ರ್ಗದಿತೋ ನವಾರ್ಣಃ ಪಾಪನಾಶನಃ ‖ ಗಂಭೀರಾಶಯವತ್ತ್ವೇ ನ ಹ್ಯಧಿಕಾರಿತಯಾಚಸಃ ‖ "ಅಕ್ಷೋಭ್ಯ" (೮೦೭) ಸ್ಸಪ್ತವರ್ಣಸ್ಸ್ಯ ದಕ್ಷೋಭ್ಯತ್ವಪ್ರದಾಯಕಃ ‖ ವಾದಿವಾಗ್ಮಿತ್ವಯೋಃಪಾರಂ ಯೋಗಚ್ಛ ತಿ ಸವಿಶ್ರುತಃ | ರವ್ಯರ್ಣೋ ವಾಕ್ಪ್ರದಇತಿ "ಸರ್ವವಾಗೀಶ್ವರೇಶ್ವರಃ" (೮೦೮) ‖ ಶಾಸ್ತ್ರಾರ್ಥತ್ರ ವೃಣ್ಯಾಂತೃಪ್ತಿಂ ಸಗಾಹಂಗಾಹಂ "ಮಹಾಹ್ರದಃ" (೮೦೯) | ಮಾಮಾಕಾಂತತಯಾನಷ್ಟ ಪ್ರಜ್ಞಾನಾಂ ರೌರವಾದಯಃ ‖ ಗರ್ತ್ತಾಯುಸ್ಮಾ "ನ್ಮಹಾಗರ್ತ" (೮೧೦) ಸ್ಸಸ್ಸಪ್ತೋ ವಸುವರ್ಣಕಃ | ನಿಗ್ರಾಹಕತ್ವಂ ಕಥಿತಂಸ್ವಸ್ಯೈವಾಜ್ಞಾತಿಲಂಘನಾತ್ ‖ ಸ್ವಾಜ್ಞಾನುವರ್ತಿನಾಪುಂಸಾ ಮನುಗ್ರಾಹಸ್ತ್ವಥೋಚ್ಯತ | "ಮಹಾಭೂತೋ" (೮೧೧) ಮಹಾತ್ಮಾನೊ ಸ್ವಭೂತಾಯಸ್ಯ ಚೋಚ್ಯತೆ ‖ ಮಹಾತ್ಮಾನೊ ನಿಧಿರಿಷ್ಪ್ರಯಾಯಸ್ಯ "ಮಹಾನಿಧಿಃ" (೮೧೨) ‖ " ಎಂಬಂತೆ ವಿವೃತಿಯನ್ನರಿಯಬೇಕು.

ಮೂ‖ ಕಮುದಃ ಕುಂದರಃ ಕುಂದಃ ಪರ್ಜನ್ಯಃ
ಪಾವನೋಽನಿಲಃ | ಅಮೃತಾಶೋ ೭ಮೃತವ ಪು
ಸ್ಸರ್ವಜ್ಞ ಸ್ಸರ್ವತೋಮುಖಃ ‖೮೭‖

(೮೧೩ನೇ ನಾಮವು) ಕುಮುದಃ,
ಓಮ್‖ ಕುಮುದಾಯನಮಃ.

(ಶಂ‖ ಮ) ಭೂಭಾರವನ್ನು ಇಳಿಸಿ ಭೂದೇವಿಯನ್ನು ಸಂತೋಷಪಡಿಸಿದವನು. (ವಿ‖ ಭಾ) ಈ ಪ್ರಕೃತಿಮಂಡಲದಲ್ಲಿ ಅವರೊಡನೆ ಕಲೆತು ಸಂತೋಷಿಸುವಂತವನು. ಅಥವಾ ಅವರಿಗೆ ಮೋಕ್ಷಭೂಮಿಯನ್ನು ಕೊಡುವಂತವನು. ‖೮೧೩‖

(೮೧೪ನೇ ನಾಮವು) ಕುಂದರಃ,
ಓಮ್‖ ಕುಂದರಾಯನಮಃ.

(ಶಂ|| ಮ) ಕುಂದಪುಷ್ಪಕ್ಕೆ ಸಮಾನವೋ ಶುದ್ಧವೋ ಆದ ಫಲಗಳನ್ನು [(ಮ) ಕರ್ಮಫಲಗಳನ್ನು] ಕೊಡುವಂತವನು, (ರಂ) ಅಥವಾ ಸ್ವೀಕರಿಸುವಂತವನು. ಹಿರಣ್ಯಾಕ್ಷನ ಸಂಹಾರಕ್ಕಾಗಿ ವರಾಹರೂಪವನ್ನು ಧರಿಸಿದವನೆಂತಲೂ ಹೇಳಬಹುದು. (ವಿ|| ಭಾ) ಕುಂದಪುಷ್ಪದಂತೆ ಅತ್ಯಂತ ನಿರ್ಮಲವಾದ ಪರತತ್ವಜ್ಞಾನವನ್ನು ಅವರುಗಳಿಗೆ ಕೊಡುವಂತವನು. ಕುಂದವೆಂದರೆ ಬಿಳುಪಾಗಿರುವ ಸಣ್ಣ ಆಕಾರವುಳ್ಳ ಮಲ್ಲಿಕಾ ಪುಷ್ಪದಂತೆ ಇರುವ ಪುಷ್ಪವಿಶೇಷವು. ||೮೧೪||

## (೮೧೫ನೇ ನಾಮವು) ಕುಂದಃ,
## ಓಮ್|| ಕುಂದಾಯನಮಃ.

(ಶಂ|| ಮ) ಸರ್ವಪಾಗಲಿಶುದ್ಧ್ಯರ್ಥಂ ವಾಜಿಮೇಧೇನಜೇಷ್ಟವಾನ್ | ತಸ್ಮಿನ್ ಯಜ್ಞೇಮಹಾದಾನೇ ದಕ್ಷಿಣಾಂ ಭೃಗುನಂದನಃ || ಮಾರೀಚಾಯದದೌಪ್ರೀತಃ ಕಾಶ್ಯಪಾಯವಸುಂಧರಾಂ || " ಎಂಬಂತೆ ಪರಶುರಾಮನು ತಾನು ಮಾಡಿದ ಕ್ಷತ್ರಿಯಸಂಹಾರಪ್ರಯುಕ್ತವಾಗಿ ಅಶ್ವಮೇಧವೆಂಬ ಮಹಾಯಾಗವನ್ನು ಮಾಡುವಾಗ ಮಹಾದಾನವುಳ್ಳ ಆ ಯಾಗದಲ್ಲಿ ಮರೀಚಿಪುತ್ರರಾದ ಕಾಶ್ಯಪರಿಗೆ ಭೂಮಿಯನ್ನು ದಾನಮಾಡಿದ್ದು ಸರ್ವವಿದಿತವಷ್ಟೆ. ಅಂತಹ ಪರಶುರಾಮರೂಪನೆಂತಲಾದರೂ (ಶಂ) ಕುಂದಪುಷ್ಪದಂತೆ ಸುಂದರಗಳಾದ ಅವಯವಗಳುಳ್ಳವನೆಂತಲಾದರೂ " ನಿಃಕ್ಷತ್ರಿಯಾಂಯಶ್ಚ ಚಕಾರಮೇದಿನೀ ಮನೇಕಶೋ ಬಾಹುವನಂ ತಥಾಽಚ್ಛಿನತ್ || ಯಃಕಾರ್ತವೀರ್ಯಸ್ಯ ಚ ಭಾರ್ಗವೋತ್ತಮೋ ಮಾಮಸ್ತುಮಾಂಗಲ್ಯ ವಿವೃದ್ಧಯೇಹರಿಃ " ಎಂಬ ವಿಷ್ಣುಧರ್ಮಪ್ರಮಾಣಾನುಸಾರವಾಗಿ ಕ್ಷತ್ರಿಯರನ್ನು ಖಂಡಿಸಿದವನೆಂತಲೂ ಹೇಳಹುದು, ಕುಂಖಂಡಯತೀತಿವಾಕುಂದಃ, ಕು ಶಬ್ದದಿಂದ ಭೂಮಿಶ್ವರರು ಲಕ್ಷಣಾವೃತ್ತಿಯಿಂದ ಬೋಧಿಸಲ್ಪಡುವರು (ನ|| ಭಾ) ಕ್ರಮಕ್ರಮವಾಗಿ ಮೊದಲಿನ ಅವಿದ್ಯಾದಿವಾಸನೆಗಳನ್ನು ಜಯಿಸಿ ಜ್ಞಾನ ಭಕ್ತ್ಯಾದಿಗಳನ್ನು ಹೊಂದಿದವರಿಗೆ ಮೇಲುಮೇಲೆ ಪರಭಕ್ತಿ ಪರಜ್ಞಾನ ಪರಮಭಕ್ತಿಗಳನ್ನು ಕೊಡುವಂತವನು. (ಅಥವಾ) ಕುಂದರಃ—ಪಾಪನಾಶಕನು, ಕುದಃ—ಬಿಡಿಸಿದ ಪಾಪಗಳನ್ನು ಶೋಧಿಸುವಂತವನು. ||೮೧೫||

## (೮೧೬ನೇ ನಾಮವು) ಪರ್ಜನ್ಯಃ,
### ಓಮ್|| ಪರ್ಜನ್ಯಾಯನಮಃ.

(ಶಂ|| ವಿ|| ಮ) ತನ್ನ ತತ್ವವೇದಿಗಳಾದ ಮಹಾತ್ಮರ ತಾಪತ್ರಯನಿವಾರಣಕ್ಕಾಗಿ ಮೇಘದಂತೆ ಕಟಾಕ್ಷವನ್ನು ವರ್ಷಿಸುವಂತವನು. ||೮೧೬||

## (೮೧೭ನೇ ನಾಮವು) ಪಾವನಃ,
### ಓಮ್|| ಪಾವನಾಯನಮಃ.

(ಶಂ|| ವಿ|| ಮ) ಅದರಂತೆಯೇ ಸ್ಮೃತಿಮಾತ್ರದಿಂದ ಪರಿಶುದ್ಧಿಯನ್ನುಂಟುಮಾಡತಕ್ಕವನು. ||೮೧೭||

## (೮೧೮ನೇ ನಾಮವು) ಅನಿಲಃ,
### ಓಮ್|| ಅನಿಲಾಯನಮಃ.

(ಶಂ|| ಮ) ಇಲತಿ—ಪ್ರೇರಣವನ್ನು ಮಾಡುತ್ತಾನೆ, ಆದುದರಿಂದ ಪ್ರೇರಿಸುವಂತವನು 'ಇಲಃ' ಎನ್ನಲ್ಪಡುವನು. ಪರಮಾತ್ಮತತ್ವವಾದ ಕಾರಣ ಅಂತಹ ಪ್ರೇರಕನಿಲ್ಲದವನು. ಅಥವಾ (ಶಂ) ಭಕ್ತಸುಲಭನು. ಯದ್ವಾ ನಿದ್ರೆಮಾಡುವಂತವನು ಇಲನು. ಅಂತಹ ಜೀವನಿಗಿಂತಲೂ ವಿಲಕ್ಷಣನಾದಕಾರಣ ಯಾವಾಗಲೂ ನಿದ್ರೆಯಿಲ್ಲದವನು. (ವಿ|| ಭಾ) ಅವರನ್ನು ನಿಗ್ರಹಿಸುವ ವಿಷಯದಲ್ಲಿ ತನ್ನನ್ನು ಪ್ರೇರಿಸತಕ್ಕವರಿಲ್ಲವಾದ ಕಾರಣ 'ಅನಿಲಃ' ಎನ್ನಲ್ಪಡುವನು. ||೮೧೮||

## (೮೧೯ನೇ ನಾಮವು) ಅಮೃತಾಶಃ,
### ಓಮ್|| ಅಮೃತಾಶಾಯನಮಃ

(ಶಂ|| ಭಾ) ಸ್ವಾತ್ಮಾನುಭವಾಮೃತ ರಸವನ್ನು ಪಾನಮಾಡಿದವನು. ಕಡೆಯಲ್ಪಟ್ಟ ಅಮೃತವನ್ನು ದೇವತೆಗಳು ಪಾನಮಾಡುವಂತೆ ಮಾಡಿ ತಾನೂ ಪಾನಮಾಡಿದವನು. ಅಥವಾ ನಾಶರಹಿತವಾದ ಫಲವುಳ್ಳ

ವನು. ಯದ್ವಾ ನಾಶರಹಿತವಾದ ಅಪೇಕ್ಷಾದಿಗಳುಳ್ಳವನು. (ವಿ॥ ಭಾ) ತನ್ನ ಗುಣಾಮೃತಗಳನ್ನು ಅವರು ಪಾನಮಾಡುವಂತೇ ಮಾಡುವವಂತನು. (ಮ) ಅಮೃತಾಂಶಃ-ಮರಣರಹಿತವಾದ ರಾಮಕೃಷ್ಣಾದ್ಯಂಶಾವತಾರವುಳ್ಳವನು. ಅಮೃತಾಶಃ ಎಂಬ ಪಾಠವಲ್ಲಿ ಅಮೃತ ಪಾನಮಾಡುವನೆಂದರ್ಥವು. ॥೮೧೯॥

## (೮೨೦ನೇ ನಾಮವು) ಅಮೃತವಪುಃ,

### ಓಮ್॥ ಅಮೃತವಪುಷೇನಮಃ

(ಶಂ॥ ಮ) ಮರಣರಹಿತಗಳಾದ ರಾಮಕೃಷ್ಣಾದಿ ಶರೀರಗಳುಳ್ಳವನು. (ಮ) ಶರೀರ ತ್ಯಾಗವು ಪುರಾಣಾದಿಗಳಲ್ಲಿ ಹೇಳಿರುವುದಕ್ಕೆ ತನ್ನ ಶರೀರಕ್ಕೆ ಸದೃಶವಾದ ಬೇರೊಂದು ಶರೀರವನ್ನು ನಿರ್ಮಿಸಿ ಇಲ್ಲಿ ಸರ್ವರಿಗೂ ಗೋಚರಪಡಿಸಿರುವಂತೆ ತಿಳಿಯಬೇಕು ಅನ್ಯಥಾ ಶುದ್ಧ ಸತ್ವ ಶರೀರಕ್ಕೆ ಪ್ರಾಕೃತ ಶರೀರದಂತೆ ಮರಣವನ್ನು ಹೇಳುವುದು ಅಸಂಗತವಷ್ಟೆ. (ವಿ॥ ಭಾ) ಅಮೃತ ರಸದಂತೆ ಆಶ್ರಿತ ತಾಪ ಹರವಾದ ದಿವ್ಯ ದೇಹವುಳ್ಳವನು. ॥೮೨೦॥

## (೮೨೧ನೇ ನಾಮವು) ಸರ್ವಜ್ಞಃ,

### ಓಮ್॥ ಸರ್ವಜ್ಞಾಯನಮಃ

(ಶಂ॥ ಭಾ) ಸಮಸ್ತವನ್ನು ತಿಳಿದವನು. "ಯಸ್ಸರ್ವಜ್ಞಸ್ಸರ್ವವಿತ್" ಎಂಬೀ ಶ್ರುತಿಯನ್ನು ತಿಳಿಯಬೇಕು. (ವಿ॥ ಭಾ) ಅವರಿಂದ ಇದಾಗುವುದು ಇದಾಗುವುದಿಲ್ಲವು, ಇದನ್ನು ಸಾಧಿಸುವೆವು ಇದನ್ನು ಸಾಧಿಸಲಾರೆವೆಂಬ ಸಮಸ್ತವನ್ನೂ ತಿಳಿದವನು. (ಮ) ಸರ್ವಜ್ಞನಾದ ಜೀವನು ಯಾವ ಪರಮಾತ್ಮಾಂಶ ಭೂತನೋ ಅವನು ಸರ್ವಜ್ಞನು. ಅಥವಾ ಯಾವ ಪರಮಾತ್ಮನನ್ನು ಮುಕ್ತಾತ್ಮನು ಮೋಕ್ಷದ ದಶೆಯಲ್ಲಿ ಪ್ರವೇಶಿಸುವುನೋ ಅವನೆಂತಲೂ ಹೇಳಬಹುದು. ॥೮೨೧॥

## (೮೨೨ನೇ ನಾಮವು) ಸರ್ವತೋಮುಖಃ,

### ಓಮ್॥ ಸರ್ವತೋಮುಖಾಯನಮಃ.

(ಶಂ॥ ಮ) "ಸರ್ವತೋಕ್ಷಿ ಶಿರೋಮುಖಂ" (ಗೀ॥ ೧೧)

ಎಂಬಂತೆ ಸುತ್ತಮುತ್ತಲೂ ಮುಖವುಳ್ಳವನು. (ವಿ॥ ಭಾ) ಈ ಉಪಾಯದಿಂದಲೆ ತಾನೆ ಇವನನ್ನು ಸಾಧಿಸಬಹುದು, ಇದಕ್ಕಿಂತಲೂ ಬೇರೆಯಾದ ಉಪಾಯವಿಲ್ಲವೆಂಬ ನಿರ್ಬಂಧವಿಲ್ಲದೆ ಯಾವದಾದರೊಂದು ನೆಪದಿಂದ ಆವರು ಈ ಪರಮಾತ್ಮನಾದ ತನ್ನನ್ನು ಹೊಂದುವದಕ್ಕೆ ತಕ್ಕವನಾಗಿರುವನು ॥೮೨॥

ಈ ಶ್ಲೋಕದಲ್ಲಿ ಪ್ರಕೃತಗಳಾದ (೧೦) ನಾಮಗಳಿಗೂ "ಪ್ರಾಕೃತೇಮಂಡಲೆ ಭೂಮೌಮೋದನಾಚ್ಚ ಮಹಾತ್ಮಭಿಃ । ಮುಕ್ತಿಭೂಮಿ ಪ್ರದಾನಾದ್ವಾ "ಕುಮುದಃ" (೮೧೩) ಪರಿಕೀರ್ತಿತಃ ॥ ಭಕ್ತೇಭ್ಯಶ್ಚ ಸದಾ ಕುಂದ ಸುಮವದ್ವಿಮಲಾಂಮತಿಂ । ಸ್ವೀಯಾಂರಾತಿ ದದಾತೀತಿ "ಕುಂದರಃ" (೮೧೪) ಪರಿಕೀರ್ತಿತಃ ॥ ಕುಮಿತ್ಯಯಂ ಪಾಪವಾಚಿ "ಕುಂದರ" ಸ್ತಸ್ಯದಾರಣಾತ್ । ಭಕ್ತೇಭ್ಯಃ ಪರಭಕ್ತ್ಯಾದಿ ಪ್ರದಾನಾ "ತ್ಕುಂದ" (೮೧೫) ಉಚ್ಯತೇ ॥ ವಿದಾರಿತಂ ಪಾಪಜಾತಂ ಕುಂದ ಶ್ರೀಧ ಯತೀತಿವಾ । ಸ್ವತತ್ವಜ್ಞಾನದಾನೇನ ನಿತ್ಯಂತಾಪತ್ರಯಾಪಹಾ॥ "ಪರ್ಜನ್ಯ" (೮೧೬) ಸ್ಸಮಾಖ್ಯಾತಃ "ಪವನಃ" (೮೧೭) ಪವತೇಹಿಯಃ ॥ ಸ್ವಸ್ಯಸ್ವಸ್ಮಾತ್ಪ್ರೇರಕೋಽನ್ಯಃ ಪ್ರಸನ್ನಾನುಗ್ರಹೇಸದಾ । ನಾಸ್ತೀತಿ "ಸೋಽನಿಲಃ" (೮೧೮) ಪ್ರೋಕ್ತೋಮುನ್ಯರ್ಣ್ಯೋ ಮನುರುತ್ತಮಃ ॥ ಯಶ್ಚಾಶಯತಿ ಭಕ್ತಾನ್ಸ್ವೈ ಸ್ವಗುಣಾಮೃತಮಾದರಾತ್। "ಅಮೃತಾಶ" (೮೧೯) ಸ್ಸಇತ್ಯುಕ್ತಶ್ಶ್ರುತ ಪೀಯೂಷದೋಮನುಃ ॥ ವಪುರ್ಯಸ್ಯಾಮೃತಮಿತಿ ಸಜಾ "ಽಮೃತವಪುಃ" (೮೨೦) ಸ್ಸ್ಮೃತಃ । ಶಕ್ತ್ಯಶಕ್ತ್ಯಾದಿಕಂಸರ್ವಂ ಸಾಧ್ಯಾಸಾಧ್ಯಾದಿಕಂಚಯಃ ॥ ಭಕ್ತಾನಾಮನುಸಂಧತ್ತೇಸ "ಸರ್ವಜ್ಞೋ" (೮೨೧) ಇತೀರಿತಃ ॥ ತತ್ತನ್ನಿಯಮಮುತ್ಸೃಜ್ಯಯೋಜ್ಞಾತುಂ ಶಕ್ಯತೇಬುಧೈಃ । ವ್ಯಾಜೇನಯೇನಕೇನಾಪಿ ಸಸ್ಸ್ಮೃತ "ಸ್ಸರ್ವತೋಮುಖಃ" (೮೨೨) ಎಂಬಂತೆ ವಿವೃತಿಯನ್ನು ಕಾಣಬಹುದು.

ಮೂ॥ ಸುಲಭ ಸ್ಸುವ್ರತ ಸಿದ್ಧ ಶ್ಶತ್ರುಜಿ ಚ್ಛ
ತ್ರುತಾಪನಃ । ನ್ಯಗ್ರೋಧೋದುಂಬರೋಽಶ್ವ
ತ್ಥ ಶ್ಚಾಣೂರಾಂಧ್ರ ನಿಷೂದನಃ ॥೮೮॥

## (೮೦೭ನೇ ನಾಮವು) ಸುಲಭಃ,

## ಓಮ್॥ ಸುಲಭಾಯ ನಮಃ

(ಶಂ॥ ಭಾ) ಭಕ್ತಿಮಾತ್ರದಿಂದ ಸಮರ್ಪಿಸಲ್ಪಡುವ ಪತ್ರಪುಷ್ಪವೇ ಮೊದಲಾದವುಗಳಿಂದ ಸುಖವಾಗಿ ಹೊಂದಲ್ಪಡುವಂತವನು. "ಪತ್ರೇಷು ಪುಷ್ಪೇಷು ಫಲೇಷುತೋಯೇ ಷ್ವಕ್ರೀತಲಭ್ಯೇಷು ಸದೈವಸತ್ಸು॥ ಭಕ್ತ್ಯೇಕಲಭ್ಯೇ ಪುರುಷೇಪುರಾಣೆ ಮುಕ್ತ್ಯೈಕಥಂನಕ್ರಿಯತೇ ಪ್ರಯತ್ನಃ॥ ಪತ್ರಂ ಪುಷ್ಪಂ ಫಲಂತೋಯಂ ಯೋಮೇಭಕ್ತ್ಯಾ ಪ್ರಯಚ್ಛತಿ॥" ಇತ್ಯಾದಿ ಭಾರತಗೀತಾ ವಾಕ್ಯಗಳನ್ನು ನೋಡಬೇಕು.

(ಗಿಡದ ಯಲೆಯೊ ಅಥವಾ ಪುಷ್ಪವೊ ಫಲವೊ ಅಥವಾ ನೀರೋ ಯಾವದಾದರೂ ಸರಿಯೆ ಕ್ರಯವಿಲ್ಲದೆ ದೊರಕುವ ಪದಾರ್ಥಗಳು ಭಗವದಾರಾಧನಾರ್ಥವಾಗಿ ಸದಾ ಇರುತಲಿರುವಾಗಲೂ, ಪರಮಪುರುಷನು ಕಾಯಕ್ಲೇಶಾರ್ಥವ್ಯಯ ಕಾಲದೈಘ್ರ್ಯಾದಿಗಳೆಂಬ ಯಾವದನ್ನು ಪರಿಗಣಿಸದೆ ಕೇವಲ ಭಕ್ತಿಮಾತ್ರದಿಂದ ಪ್ರಸನ್ನನಾಗುವಾಗಲೂ, ಮೋಕ್ಷಾರ್ಥವಾಗಿ ಜನರು ಪಿತಕ್ಕೋಸ್ಕರವಾಗಿ ಪ್ರಯತ್ನಿಸಲಾರರು? ಪತ್ರ ಪುಷ್ಪಾದಿಗಳನ್ನು ಭಕ್ತಿಯಿಂದ ನನಿಗೆ ಯಾರಾದರೆ ಸಮರ್ಪಣೆ ಮಾಡುವರೊ ಅಂತಹ ಭಕ್ತಿಯಿಂದ ಕೊಡಲ್ಪಟ್ಟ ಅವುಗಳನ್ನು ಸಾದರವಾಗಿ ಸ್ವೀಕರಿಸುವೆನೆಂದು ಈ ಪ್ರಮಾಣದ್ವಯ ತಾತ್ಪರ್ಯವು.)

(ವಿ॥ ಭಾ) ಆದುದರಿಂದಲೇ ತಾನೆ ತಾನು ಮಹಾರ್ಘ (ಮಹತ್ತಾದ ಬೆಲೆಯುಳ್ಳವ) ನಾಗಿದ್ದರೂ ಸುಲಭಸಾಧ್ಯನಾಗಿರುವಂತವನು. (ಮ) ಯೋಗಿಗಳಿಗೆ ಸುಲಭನು. ॥೮೦೭॥

## (೮೦೮ನೇ ನಾಮವು) ಸುವ್ರತಃ,

## ಓಮ್॥ ಸುವ್ರತಾಯ ನಮಃ.

(ಶಂ॥ಮ) ಭೋಜನವಿಲ್ಲದ ವ್ರತವುಳ್ಳವನು (ಶಂ) ಅಥವಾ ಮಂಗಳಕರವಾದ ವ್ರತವನ್ನು ನಿಯತವಾಗಿ ಅನುಭವಿಸುವಂತವನು. (ವಿ॥ ಭಾ) ಯಾವ ವಿಧದಲ್ಲಿಯಾದರೂ ತನ್ನ ಸಮೀಪಸ್ಥರಾದ ಭಕ್ತರನ್ನು ಕೈಬಿಡದೆ ಸರ್ವವಿಧದಲ್ಲಿಯೂ ಪರಿಪಾಲಿಸುವಂತಹ ವ್ರತವುಳ್ಳವನು. ॥೮೦೮॥

## (೮೨೫ನೇ ನಾಮವು) ಸಿದ್ಧಃ,
## ಓಮ್॥ ಸಿದ್ಧಾಯನಮಃ.

(ಶಂ॥ ಭಾ) ಬೇರೊಬ್ಬರ ಅಧೀನವಿಲ್ಲದೆ ಸಿದ್ಧವಾದವನು. (ನು) ಸಿದ್ಧರಾದ ಕಪಿಲ ಮುನಿಯು." ಸಿದ್ಧಾನಾಂ ಕಪಿಲೋ ಮುನಿಃ" ಎಂಬ ಗೀತಾವಾಕ್ಯವನ್ನು ಅರಿಯಬೇಕು (ವಿ॥ ಭಾ) ತನ್ನ ತತ್ವಸ್ಥಿತಿಯನ್ನು ಯಥಾವತ್ತಾಗಿ ತಿಳಿದವರಿಗೆ ಸ್ವಲ್ಪಪ್ರಯತ್ನವೂ ಇಲ್ಲದೇ ಸಾಧಿಸಲರ್ಹ ನಾಗಿ ಸಿದ್ಧವಾಗಿರುವಂತವನು ॥೮-೨೫॥

## (೮೨೬ನೇ ನಾಮವು) ಶತ್ರುಜಿಚ್ಛತ್ರುತಾಪನಃ,
## ಓಮ್॥ ಶತ್ರುಜಿಚ್ಛತ್ರುತಾಪನಾಯನಮಃ

(ಶಂ॥ ಮ) ಶತ್ರುಜಿತ್—ದೇವಶತ್ರುಗಳಾದ ಅಸುರರೇ ಇವನಿಗೂ ಶತ್ರುಗಳಾಗಿರ್ರುವದರಿಂದ ಅವರನ್ನು ಕೊಲ್ಲುವಂತವನು. ಶತ್ರುತಾಪನಃ— ಶತ್ರುಗಳನ್ನು ಸಂತಾಪಪಡಿಸುವಂತವನು ಭಿನ್ನ ನಾಮಗಳಿವು. (ವಿ॥ಭಾ) ಈ ರೀತಿಯಾಗಿ ಅವನು ಸಾಕ್ಷಾತ್ತಾಗಿ ನಿಂತು ರಕ್ಷಿಸುವ ಕಾರಣವನ್ನು ಹೇಳಿ ಇನ್ನು ಮುಂದೆ ಪರೋಕ್ಷವಾಗಿ ಪ್ರಯೋಜನಾಂತರಗಳನ್ನು ಕೊಟ್ಟು ರಕ್ಷಿಸುವ ಪ್ರಕಾರವನ್ನು ಹೇಳುತ್ತಾರೆ. ಶತ್ರುವಿಜಯದಲ್ಲಿ ಸಮರ್ಥರಾದ ಕುಕುತ್ಸ್ಥ ಪುರುಕುತ್ಸಾದಿಗಳಿಗೆ ತನ್ನ ಶಕ್ತಿಯನ್ನು ಕೊಟ್ಟು ಅವರ ಮೂಲಕವಾಗಿ ಅವರ ಶತ್ರುಗಳನ್ನು ಜಯಿಸುವಂತವನು. ॥೮-೨೬॥

## (೮೨೭ನೇ ನಾಮವು) ನ್ಯಗ್ರೋಧೋದುಂಬರಃ,
## ಓಮ್॥ ನ್ಯಗ್ರೋಧೋದುಂಬರಾಯನಮಃ.

(ವಿ॥ಭಾ) ತಾನು ಅತ್ಯಂತ ಮಹಾತ್ಮರಿಂದ ಸೇವ್ಯನಾಗಿದ್ದರೂ ಅತಿನೀಚರಾದ ಅವರುಗಳಿಂದ ತನ್ನ ಅನುಗ್ರಹವನ್ನು ಅಪೇಕ್ಷಿಸಿ ಪ್ರಾರ್ಥಿಸಲ್ಪಡುವಂತವನಾಗಿ ಸರ್ವ ಗುಣಗಳಿಂದ ಸರ್ವೋನ್ನತವೂ ಲಕ್ಷ್ಮೀಪರಿಜನ ಪರಿವಾರಾದಿಗಳಿಂದ ಸಂಪನ್ನವೂ ಆದ ಪರಮಾಕಾಶವನ್ನು ಸ್ಥಾನವಾಗಿ ಉಳ್ಳವನು. (ಶಂ॥ ಮ) ಸರ್ವಭೂತಗಳನ್ನು ತಿರಸ್ಕರಿಸಿ ಸರ್ವರಿಗೂ ಮೇಲೆ

ಇರುವಂತವನು "ನ್ಯಗ್ರೋಧಃ" ಎನ್ನಲ್ಪಡುವನು. (ಶಂ) ಅಥವಾ ತನ್ನ ಮಾಯೆಯಿಂದ ಮುಚ್ಚುವಂತವನು. ಉದುಂಬರಃ—(ಶಂ॥ಮ) ಕಾರಣಭೂತನಾಗಿರುವದರಿಂದ ಆಕಾಶಾದಿಗಳಿಗಿಂತಲೂ ಬೇರೆಯಾದವನು. ಅಥವಾ (ಶಂ) "ಉದುಂಬರಮನ್ನಾದ್ಯಂ" ಎಂಬ ಶ್ರುತ್ಯನುಸಾರವಾಗಿ ಅನ್ನವೇ ಮೊದಲಾದವುಗಳಿಂದ ಪ್ರಪಂಚವನ್ನು ರಕ್ಷಿಸುವಂತವನು. ॥೮೨೭॥

## (೮೨೮ನೇ ನಾಮವು) ಅಶ್ವತ್ಥಃ,

### ಓಮ್॥ ಅಶ್ವತ್ಥಾಯನಮಃ.

(ಶಂ॥ ಭಾ) ಅಶ್ವತ್ಥವೃಕ್ಷದಂತೆ ಅನಿತ್ಯವಾದ ಸಂಸಾರರೂಪವಾಗಿ ಪ್ರತಿಭಾಸಿಸುವಂತವನು. (ವಿ॥ ಭಾ) ಅನಿತ್ಯವಾದ ಇಂದ್ರಾದಿಗಳಾದ ಅಧಿಕಾರಿ ಪುರುಷರ ಹೃದಯದಲ್ಲಿ ನಿಯಾಮಕನಾಗಿರುವಂತವನು. (ಮ) ಅಶ್ವತ್ಥವೃಕ್ಷವು ಇವನ ವಿಭೂತಿಯು. ॥೮೨೮॥

## (೮೨೯ನೇ ನಾಮವು) ಚಾಣೂರಾಂಧ್ರನಿಷೂದನಃ,

### ಓಮ್॥ ಚಾಣೂರಾಂಧ್ರನಿಷೂದನಾಯನಮಃ.

(ಶಂ॥ ವಿ॥ ಮ) ಇಂದ್ರಾದಿಗಳಿಗೆ ವಿರುದ್ಧರಾದ ಚಾಣೂರ ಆಂಧ್ರನೆಂಬ ರಾಕ್ಷಸರನ್ನು ಕೊಲ್ಲುವಂತವನು. ॥೮೨೯॥

ಇಲ್ಲಿ ಪ್ರತಿಪಾದ್ಯಗಳಾದ ನಾಮಗಳಿಗೆ "ಸರ್ವೇಷಾಂ ಸುಪ್ರವೇಶತ್ವಾ "ತ್ಸುಲಭಃ" (೮೧೩) ಪರಿಕೀರ್ತಿತಃ। ಪತ್ರಂ ಪುಷ್ಪಂ ಫಲಂ ತೋಯಂ ಯೋಮೇಭಕ್ತ್ಯಾಪ್ರಯಚ್ಛತಿ ॥ ಯೇನಕೇನಪ್ರವಿಷ್ಟಾನಾಂ ಸರ್ವಥಾ ಪರಿಪಾಲನಾತ್ । ದೃಢಂಸುಷ್ಠುವ್ರತಂ ಯಸ್ಯ ಸ "ಸುವ್ರತ" (೮೧೪) ಉದಾಹೃತಃ ॥ ಸಕೃದೇವಪ್ರಪನ್ನಾಯ ತವಾಸ್ಮೀತಿ ಚಯಾಚತೇ। ಅಭಯಂ ಸರ್ವಭೂತೇಭ್ಯೋ ದದಾಮ್ಯೇತದ್ವ್ರತಂಮಮ। ಅಯತ್ನಸಾಧ್ಯ "ಸ್ಸಿದ್ಧ" (೮೧೫) ಸ್ಸ್ವಾತ್ಸ್ವತತ್ವಸ್ಥಿತಿವೇದಿನಾಂ । ಪುರುಕುತ್ಸಕಕುತ್ಸ್ಥಾದ್ಯೈ ಶ್ಶತ್ರುಜಿದ್ಭಿಸ್ಸ್ವತೇಜಸಾ॥ ಆಧ್ಯೋಯತ್ನೈರಘುಗಣಾನ್ಯಸ್ಮಾ ಪಯುಕ್ತಿನಿತ್ಯಶಃ। "ಶತ್ರುಜಿಚ್ಛತ್ರುತಾಪನ" (೮೧೬)

ಇತಿವಿದ್ವದ್ಗಣೋದಿತಃ || ನ್ಯಗ್ಭೂತೈಃ ಪ್ರಣತೈಸ್ಸರ್ವಾನು ಗೃಹ್ಣಾನ್ನ್ಯಕ್ಷ್ಯೇನರುಧ್ಯತೇ| ಯೋಽವ್ಯವಸ್ಥಾಪ್ಯತೇಽನಿತ್ಯಂ 'ನ್ಯಗ್ರೋಧ'ಸ್ಸ ಉದಾಹೃತಃ || ಗುಣತ್ರಯಾದುದ್ಗತಂ ಯತ್ಪರಮಂಧಾಮ ಚಾಂಬರಂ | ಲಕ್ಷ್ಮೀ ಪರಿಜನಾದಿ ಶ್ಚಯಸ್ಯಾಸ್ತಿ ಸ 'ಉದುಂಬರಃ' || "ನ್ಯಗ್ರೋಧೋದುಂಬರ" ಇತಿಶ್ಯೇಕನಾಮಪ್ರಕೀರ್ತಿತಂ || ಅತ್ಯುಚ್ಛ್ರಿತಾನಾಂ ಸೇವ್ಯೋಽಯೋ ಪ್ಯತಿನೀಚಾನುವರ್ತನಾತ್ | "ನ್ಯಗ್ರೋಧೋದುಂಬರ" (೮೨೭) ಸ್ಸಸ್ಯಾದಶಾರ್ಣಸ್ಸರ್ವಸಿದ್ಧಿದಃ || ಅನಿತ್ಯಮಿಂದ್ರಾದಿಪದಂ ಯೇಷಾಂ ತೇಷ್ವಪಿ ನಿತ್ಯಶಃ| ನಿಯಾಮಕತ್ವೇನಾ "ಽಶ್ವತ್ಥಃ" (೮೨೮) ತಿಪ್ರತೀ ತಿಸಕೀರ್ತಿತಃ || ಊರ್ಧ್ವಮೂಲ ಮವಾಕ್ಶಾಖ ಮಿಷೋಽಶ್ವತ್ಥಸ್ಸನಾತನಃ|| ಚಾಣೂರಾಖ್ಯಾ ಸುರಂಯೋಽರಿಂ ಮಲ್ಲಂಸೂದಿತವಾಂಶ್ಚಸಃ | ಪ್ರೋಚ್ಯತೇಽಮುನಿಭಿರ್ನಿತ್ಯಂ "ಚಾಣೂರಾಂಧ್ರನಿಷೂದನಃ" (೮೨೯) ಎಂಬಂತೆ ವಿವೃತಿಯನ್ನು ಕಾಣಬಹುದು.

ಮೂ|| ಸಹಸ್ರಾರ್ಚಿ ಸ್ಸಪ್ತಜಿಹ್ವ ಸ್ಸಪ್ತೈಧಾ
ಸ್ಸಪ್ತವಾಹನಃ | ಅಮೂರ್ತಿ ರನಘೋಽಚಿಂತ್ಯೋ
ಭಯಕೃ ದ್ಭಯನಾಶನಃ ||೮೯||

(೮೩೦ನೇ ನಾಮವು) ಸಹಸ್ರಾರ್ಚಿಃ,
ಓಮ್|| ಸಹಸ್ರಾರ್ಚಿಷೇನಮಃ.

(ಶಂ|| ಮ) ಅನಂತಗಳಾದ ಕಿರಣಗಳುಳ್ಳವನು. (ವಿ|| ಭಾ) ಪರಿಶುದ್ಧಗಳೂ ಶೋಷಣದಾಹನ ಪ್ರಕಾಶಾದಿ ಧರ್ಮಗಳುಳ್ಳವುಗಳಾಗಿ ಲೋಕೋಪಕಾರಿಗಳೂ ಆದ ಸಹಸ್ರ ಕಿರಣಗಳನ್ನು ಸೂರ್ಯನಿಗೆ ಕೊಟ್ಟವನು. ||೮೩೦||

(೮೩೧ನೇ ನಾಮವು) ಸಪ್ತಜಿಹ್ವಃ,
ಓಮ್|| ಸಪ್ತಜಿಹ್ವಾಯನಮಃ.

(ಶಂ|| ಮ|| ವಿ) ಅದರಂತೆಯೇ "ಕಾಳೀಕರಾಳೀ ಸುಮನೋಜವಾಚ ಸುಧೂಮ್ರವರ್ಣಾಚ ಸುಲೋಹಿತಾಚ | ಸ್ಫುಲಿಂಗಿನೀ ವಿಶ್ವಮುಖೀ

ಜಿಹ್ವೇವಿ ಲೋಲಾಯಮಾನಾ ಇತಿಸಪ್ತಜಿಹ್ವಾಃ" (ಮುಂಡುಕೊ ೧॥ ೨॥ ೪) ಎಂಬ ಯೇಳುನಾಮುಗಳುಳ್ಳ ನಾಲಿಗೆಗಳುಳ್ಳವನೂ, ದೇವತೆಗಳಿಗೆ ಹವಿಃಪ್ರಾಪಕನೂ ಆದ ಅಗ್ನಿಯಲ್ಲಿರುವಂತವನು. ॥೮೩೧॥

## (೮೩೨ನೇ ನಾಮವು) ಸಪ್ತೈಧಾಃ,

## ಓಮ್॥ ಸಪ್ತೈಧಸೇನಮಃ

(ಶಂ॥ ಮ) ಯೇಳುವಿಧಗಳಾದ ದೀಪ್ತಿಗಳೆಂದರೆ ಪ್ರಕಾಶವುಳ್ಳವನು. (ವಿ॥ ಭಾ) ಯೇಳು ಸಮಿತ್ತುಗಳುಳ್ಳವನು; ಎಂದರೆ:—ವೈದಿಕಾಗ್ನಿಗೆ ಔಪಾಸನವೈಶ್ವದೇವಸ್ಥಾಲೀಪಾಕ ಅಷ್ಟಕಾಮಾಸಶ್ರಾದ್ಧ ಈಶಾನ ಬಲಿಸರ್ಪಬಲಿ" ಎಂಬ ಪಾಕ ಯಜ್ಞಗಳು ಯೇಳೂ, "ಅಗ್ನಿಹೋತ್ರದರ್ಶಪೂರ್ಣಮಾಸ ಪಿಂಡ ಪಿತೃಯಜ್ಞ ಪಶುಬಂಧ ಆಗ್ರಯಣ ಚಾತುರ್ಮಾಸ್ಯ ಸೌತ್ರಾಮಣ್ಯ" ವೆಂಬ ಯೇಳು ಹವಿರ್ಯಜ್ಞಗಳೂ, ಅಗ್ನಿಷ್ಟೋಮ ಅತ್ಯಗ್ನಿಷ್ಟೋಮ ಉಕ್ಥ್ಯಷೋಡಶ ವಾಜಪೇಯ ಅತಿರಾತ್ರ ಆಪ್ತೋರ್ಯಾಮ" ಗಳೆಂಬ ಸೋಮ ಸಂಸ್ಥಗಳೆಂಬ ಯೇಳೂ, ಸಮಿತ್ತುಗಳಾಗಿರುವುದರಿಂದ ಅವುಗಳುಳ್ಳವನು. (ಅಥವಾ) ಇಷ್ಟಾಪೂರ್ತಾದಿಗಳಾದ ಯೇಳು ಕರ್ಮಗಳನ್ನು ಸಮಿತ್ತನ್ನಾಗಿ ವುಳ್ಳವನು. ಯದ್ವಾ ಅಶ್ವತ್ಥಪಾಲಾಶಾದಿಗಳಾದ ಸಪ್ತ ಸಮಿತ್ತುಗಳುಳ್ಳವನು. ॥೮೩೨॥

## (೮೩೩ನೇ ನಾಮವು) ಸಪ್ತವಾಹನಃ,

## ಓಮ್॥ ಸಪ್ತವಾಹನಾಯನಮಃ

(ಶಂ॥ ಮ) "ಏಕೋಅಶ್ವೋ ವಹತಿ ಸಪ್ತನಾಮಾ" (ತೈ॥ ಆ॥ ೩॥ ೧೧) ಎಂಬಂತೆ ಯೇಳುವಾಹನಗಳುಳ್ಳವನು ಅದವಾ ಸಪ್ತವೆಂಬ ನಾಮವುಳ್ಳ ಕುದುರೆಯನ್ನು ವಾಹನವನ್ನಾಗಿ ವುಳ್ಳವನು. (ವಿ॥ ಭಾ) ಗಾಯತ್ರೀ ಮೊದಲಾದ ವೈದಿಕ ಮಂತ್ರಗಳಿಗೆ ಅಭಿಮಾನಿಗಳಾದ ಯೇಳು ಸೂರ್ಯರಥ ವಾಹನಗಳುಳ್ಳವನು. (ಅಥವಾ) "ಸಪ್ತಪ್ರಾಣಾಃ ಪ್ರಭವಂತಿ" (ತೈ॥ ಉ॥ ೬॥ ೧೦) ಎಂಬಂತೆ ಸಪ್ತವಾಯು ಸ್ಕಂಧಗಳನ್ನು ಅಧಿಷ್ಠಿಸಿರುವಂತವನು. ॥೮೩೩॥

## (೮೩೪ನೇ ನಾಮವು) ಅಮೂರ್ತಿಃ,

### ಓಮ್॥ ಅಮೂರ್ತಯೇನಮಃ.

(ಶಂ॥ ಮ॥ ಭಾ) ಈರೀತಿಯಾಗಿ ತನ್ನಿಂದ ಅಧಿಷ್ಠಿಸಲ್ಪಟ್ಟ ಭೌತಿಕಮೂರ್ತಿಗಿಂತಲೂ ತಾನು ಭಿನ್ನನಾಗಿರುವಂತವನು. ॥೮೩೪॥

## (೮೩೫ನೇ ನಾಮವು) ಅನಘಃ,

### ಓಮ್॥ ಅನಘಾಯನಮಃ.

(ವಿ॥ ಬಾ) ಕರ್ಮಕ್ಕೆ ವಶಪಟ್ಟವನಲ್ಲವಾದಕಾರಣ ಅಂತಹ ಭೂತಚಕ್ರಗಳಲ್ಲಿ ಸಿಕ್ಕಿಕೊಂಡು ದುಃಖಿಸುತಲಿರುವ ಜೀವರಿಗಿಂತಲೂ ವಿಲಕ್ಷಣನಾದವನು. (ಶಂ॥ ಮ) ದುಃಖವೂ ಅದಕ್ಕೆ ಕಾರಣವಾದ ಪಾಪವೂ ಇಲ್ಲದವನು. ॥೮೩೫॥

## (೮೩೬ನೇ ನಾಮವು) ಅಚಿಂತ್ಯಃ,

### ಓಮ್॥ ಅಚಿಂತ್ಯಾಯನಮಃ.

(ಶಂ॥ ಭಾ) ಪ್ರಮಾತ್ರಾದಿ ಸಾಕ್ಷಿಯಾಗಿರುವುದರಿಂದ ಸರ್ವ ಪ್ರಮಾಣಗಳಿಗೂ ಅಗೋಚರನು. ಪ್ರಪಂಚ ವಿಲಕ್ಷಣನಾದಕಾರಣ ಇವನಿಂತವನೆಂದು ಚಿಂತಿಸಲಿಕ್ಕೆ ಅನರ್ಹನು. (ವಿ॥ ಭಾ) ಮುಕ್ತಪುರುಷರೊಡನೆಯೂ ಸಮವಾಗಿ ನೆನೆಯಲಿಕ್ಕೆ ಆಗದವನು. ॥೮೩೬॥

## (೮೩೭ನೇ ನಾಮವು) ಭಯಕೃತ್,

### ಓಮ್॥ ಭಯಕೃತೇನಮಃ.

(ಶಂ॥ ಭಾ) ದುರ್ಮಾರ್ಗವೃತ್ತಿಯುಳ್ಳವರಿಗೆ ಭಯವನ್ನುಂಟುಮಾಡುವಂತವನು. ಭಕ್ತರಿಗೆ ಭಯವನ್ನು ನಾಶಪಡಿಸುವಂತವನು. (ವಿ॥ ಭಾ) ತನ್ನ ಆಜ್ಞಾತಿಲಂಘನಮಾಡತಕ್ಕವರಿಗೆ ಭಯವನ್ನುಂಟುಮಾಡತಕ್ಕವನು. ॥೮೩೭॥

## (೮೩೮ನೇ ನಾಮವು) ಭಯನಾಶನಃ,

## ಓಮ್॥ ಭಯನಾಶನಾಯನಮಃ.

(ಶಂ॥ ವಿ॥ ಮ) ತನ್ನ ಆಜ್ಞಾಮಪಾಲನವನ್ನು ಮಾಡತಕ್ಕ ವರ್ಣಾಶ್ರಮಧರ್ಮ ನಿಷ್ಠರಿಂದ ಆರಾಧಿಸಲ್ಪಟ್ಟು ಅವರ ಭಯವನ್ನು ನಾಶಪಡಿಸುವಂತವನು. ॥೮೩೮॥

ಈ ಶ್ಲೋಕದಲ್ಲಿ ಪ್ರತಿಪಾದಿಸಲ್ಪಡುವ ನಾಮಗಳಿಗೆ "ಸೂರ್ಯೇಸಹಸ್ರಮರ್ಚಿರ್ಲಿಂಪೆ ಶೋಷಣಾದಿಷುಕೇತವಃ। ಅಭಿವಿಷ್ಯಾನಿಯೇನಾಸೌ "ಸಹಸ್ರಾರ್ಚಿ" (೮೩೦) ರಿತಿಸ್ಮೃತಃ॥ ದಿವಿಸೂರ್ಯಸಹಸ್ರಸ್ಯ ಭವೇದ್ಯುಗಪದುತ್ಥಿತಾ। ಯದಿಭಾಸ್ಸದೃಶೀಸಾಸ್ಯಾ ದ್ಭಾಸಸ್ತಸ್ಯಮಹಾತ್ಮನಃ॥ ಯಸ್ಮಾತ್ಕಾಲ್ಯಾದಿ ಜಿಹ್ವಾಶ್ಚ ಅಗ್ನೇರ್ಭವಂತಿ ಸಪ್ತಚ। ಸ "ಸಪ್ತಜಿಹ್ವ" (೮೩೧) ಆಖ್ಯಾತೋಲೋಕ ಸಂತರ್ಪಣೇರತಃ॥ ಮಾನಸ್ಪತ್ಯಾಕ್ಷಸಮಿಧಸ್ಸಪ್ತಸಂಸ್ಥಾನಿವಾತಥಾ। ಇಷ್ಟ್ಯಪೂರ್ತಾದಿ ಕರ್ಮಾಣಿ "ಸಪ್ತೈಧಾ" (೮೩೨) ಸ್ಸಂತಿಯಸ್ಯಸಃ॥ ಯೋವಹತ್ಯ ನಿಲಸ್ಕಂಧಾನ್ಸಪ್ತಾಸೌ "ಸಪ್ತವಾಹನಃ" (೮೩೩)॥ ವಾಹನಾನಿಚ ಸಂತ್ಯಸ್ಯ ಸಪ್ತವಾ ಸಪ್ತವಾಹನಃ। ಸ್ಥೂಲಭೌತಿಕಮೂರ್ತಿಭ್ಯೋ ವ್ಯಾವೃತ್ತೋ "ಅಮೂರ್ತಿ" (೮೩೪) ರುಚ್ಯತೇ॥ ಜೀವೇಭ್ಯಃಕರ್ಮವಶ್ಯೇಭ್ಯೋ ವ್ಯಾವೃತ್ತಶ್ಚ "ಅನಘಃ"(೮೩೫) ಸ್ಮೃತಃ। "ಅಚಿಂತ್ಯೋ" (೮೩೬)ದುರ್ನಿರೂಪಸ್ವಾನ್ಯಸ್ಮಾತ್ಕಾದ್ಯುಪಮೆಯಾಪಿಸಃ॥ ಆಜ್ಞಾತಿಲಂಘಿನಾಂಪುಂಸಾಂ ನರಕಾದಿ ಭಯಂಕರಃ। "ಭಯಕೃತ್" (೮೩೭) ಸಸಮಾಖ್ಯಾತ ಸ್ಸಪಾಪಿನಾಂ ಭಯವರ್ಧನಃ॥ ಆಜ್ಞಾನುವರ್ತಿನಾಂಸ್ವಸ್ಯ ಭಯಂನಾಶಯತೀತಿಯಃ। "ಭಯನಾಶನ" (೮೩೮) ಇತ್ಯುಕ್ತೋ ನವಾರ್ಣಃ ಕರ್ಮಪಾರಕಃ॥ ವರ್ಣಾಶ್ರಮಾಚಾರವತಾ ಪುರುಷೇಣ ಪರಃಪುಮಾನ್। ವಿಷ್ಣುರಾರಾಧ್ಯತೇಪಂಥಾ ನಾನ್ಯತ್ತತ್ತೋಷಕಾರಕಃ॥" ಎಂಬಂತೆ ವಿವೃತಿಯನ್ನು ಕಾಣಬಹುದು.

ಮೂ॥ ಅಣು ರ್ಬೃಹ ತ್ಕೃಶ ಸ್ಸ್ಥೂಲೊ ಗುಣ
ಭೃ ನ್ನಿರ್ಗುಣೋ ಮಹಾನ್। ಅಧೃತ ಸ್ಸ್ವಧೃತ
ಸ್ಸ್ವಾಸ್ಯಃ ಪ್ರಾಗ್ವಂಶೋ ವಂಶವರ್ಧನಃ ॥೯೦॥

(೮೩೯ನೇ ನಾಮವು) ಅಣುಃ,

ಓಮ್|| ಅಣವೇನಮಃ

(ವಿ|| ಭಾ) ಅತಿಸೂಕ್ಷ್ಮವಾದ ದಹರಾಕಾಶ ಅವ್ಯಕ್ತಜೀವಾದಿಗಳ ಲ್ಲಿ ಪ್ರವೇಶಿಸುವ ಸಾಮರ್ಥ್ಯವುಳ್ಳವನು. ||೮೩೯||

(೮೪೦ನೇ ನಾಮವು) ಬೃಹತ್,

ಓಮ್|| ಬೃಹತೇನಮಃ.

(ವಿ|| ಭಾ) ಅತಿವಿಸ್ತಾರವಾದ ಪರಮಾಕಾಶವನ್ನು ಅಲ್ಪಾಕಾಶದಲ್ಲಿ ಅಡಗಿಕೊಳ್ಳುವಂತಹ ಪರಮ ಮಹತ್ತಾದವನು. "ಮಹತೋಮಹೀಯಾನ್" ಎಂಬದಾಗಿ ಶ್ರುತಿಃ (ಮ) ಪ್ರತಿವಸ್ತುಕಾಲಗುಣಪರಿಪೂರ್ಣನು. ||೮೪೦||

(೮೪೧ನೇ ನಾಮವು) ಕೃಶಃ,

ಓಮ್|| ಕೃಶಾಯನಮಃ

(ಶಂ|| ಮ) "ಅಸ್ಥೂಲಂ" ಎಂಬ ಶ್ರುತ್ಯನುಸಾರವಾಗಿ [(ಶಂ) ದ್ರವ್ಯತ್ವಪ್ರತಿಷೇಧದಿಂದ] ಸೂಕ್ಷ್ಮವಾಗಿರುವಂತವನು. (ವಿ|| ಭಾ) ಹತ್ತಿ, ಹೊಳ್ಳಿಎಂಬಿವುಗಳಿಗಿಂತಲೂ ಅತ್ಯಂತ ಲಘುವಾಗಿರುವುದರಿಂದ ಎಲ್ಲೆಲ್ಲಿಯೂ ತಡೆಯಿಲ್ಲದ ಸಂಚಾರತ್ವರೆಯುಳ್ಳವನು. ||೮೪೧||

(೮೪೨ನೇ ನಾಮವು) ಸ್ಥೂಲಃ,

ಓಮ್|| ಸ್ಥೂಲಾಯನಮಃ

(ಶಂ|| ಭಾ) ಸರ್ವಾತ್ಮಕನಾದ ಕಾರಣ ಸ್ಥೂಲನೆಂಬದಾಗಿ ಉಪಚಾರದಿಂದ ಹೇಳಲ್ಪಡುವನು. (ವಿ|| ಭಾ) ತಾನು ಒಂದುಕಡೆಯಲ್ಲಿದ್ದರೂ ಸಮಸ್ತವನ್ನೂ ಸಮೀಪದಲ್ಲಿರುವಂತೆ ಸ್ಪರ್ಶಿಸುವುದಕ್ಕೆ ಅರ್ಹನಂತೆ ಇರುವಂತವನು. ಅಥವಾ ತಾನು ಭೂಮಿಯಲ್ಲಿದ್ದರೂ ಆಕಾಶಗತನಾದ ಚಂ

ದ್ರನನ್ನು ಹಿಡಿಯುವದಕ್ಕೆ ಯೋಗ್ಯನಾಗಿರುವಂತೆ ಸ್ಥೂಲನಾದವನು. (ಮ) ಸರ್ವಪ್ರದೇಶಗಳಲ್ಲಿಯೂ ಸೇರಿದವನು. ಅಸ್ಥೂಲಇತ್ಯಾದಿ ಶ್ರುತಿಗಳು ಪ್ರಾಕೃತವಾದ ದೇಹಕ್ಕುಂಟಾಗುವ ವೃದ್ಧಿಯನ್ನು ಪರಮಾತ್ಮನಲ್ಲಿ ನಿಷೇಧಿಸುವುವು. ||೮೪೦||

## (೮೪೧ನೇ ನಾಮವು) ಗುಣಭೃತ್,

### ಓಮ್|| ಗುಣಭೃತೇನಮಃ.

(ಶಂ|| ಭಾ) ಸೃಷ್ಟಿಸ್ಥಿತ್ಯಾದಿ ಕರ್ಮಗಳಲ್ಲಿ ಅಧಿಷ್ಠಾತಾ ಆಗಿರುವುದರಿಂದ ಸತ್ವರಜಸ್ತಮಸ್ಸುಗಳೆಂಬ ಗುಣಗಳನ್ನು ಧರಿಸಿದವನು. (ವಿ|| ಭಾ) ತನ್ನ ಸಂಕಲ್ಪದಿಂದ ಸಮಸ್ತವನ್ನೂ ಸರ್ವಾವಸ್ಥೆಗಳಲ್ಲಿಯೂ ತನ್ನ ಗುಣಗಳಂತೆ ಧರಿಸುವಂತವನು ಇದು ತಾನೆ ಉತ್ಕೃಷ್ಟವಾದ ಇವನ ಐಶ್ವರಸ್ವಭಾವವು, (ಮ) ಅನಂತ ಕಲ್ಯಾಣಗುಣಗಳನ್ನು ಧರಿಸಿದವನು. ||೮೪೧||

## (೮೪೨ನೇ ನಾಮವು) ನಿರ್ಗುಣಃ,

### ಓಮ್|| ನಿರ್ಗುಣಾಯನಮಃ.

(ಶಂ|| ಭಾ) "ಕೇವಲೋ ನಿರ್ಗುಣಶ್ಚ" ಎಂಬ ಶ್ರುತ್ಯನುಸಾರವಾಗಿ ವಾಸ್ತವದಿಂದ ಯಾವ ಗುಣಗಳೂ ಇಲ್ಲದವನು. (ವಿ|| ಭಾ) ಈ ಪ್ರಕಾರವಾಗಿ ಸಮಸ್ತವನ್ನೂ ಧರಿಸಿದರೂ ಅವುಗಳಿಗೆ ವಶನಾಗದ ಕಾರಣದಿಂದ ವ್ಯಾಪ್ಯಗತವಾದ ದೋಷಸಂಬಂಧದಿಂದ ಸ್ವಲ್ಪವೂ ಸೇರದವನು. (ಮ)ಸತ್ವಾದಿಪ್ರಾಕೃತ ಗುಣಗಳಿಲ್ಲದವನು ಆದರೆ 'ಗುಣಭೃತ್—ನಿರ್ಗುಣಃ' ಎಂಬೀ ಎರಡೂ ಪರಸ್ಪರ ವಿರುದ್ಧವಲ್ಲವೋ ? ಎಂದು ಸಂದೇಹಿಸದೆ ಜ್ಞಾನಾನಂದಾದಿ ಗುಣಗಳಿಂದ ಕೂಡಿರುವಿಕೆಯನ್ನೂ ಪ್ರಾಕೃತ ಗುಣಶೂನ್ಯತೆಯನ್ನೂ ಬೋಧಿಸುವ ಈ ಎರಡು ನಾಮಗಳು ಪರಸ್ಪರ ವಿರುದ್ಧಗಳಾಗಲಾರವು. ಅಥವಾ ಸತ್ವಾದಿಗುಣಗಳಿಂದುಂಟಾಗುವ ಶಬ್ದಸ್ಪರ್ಶಾದಿಗಳನ್ನು ತಾರ್ಕಿಕರು ಗುಣಗಳನ್ನಾಗಿ ಹೇಳುವರು. ಅಂತಹ ಗುಣಗಳಿಲ್ಲದವನೆಂದು "ಅಶಬ್ದಮಸ್ಪರ್ಶಂ" ಇತ್ಯಾದಿ ಶ್ರುತಿ

ಗಳಿಂದ ಹೇಳಬಹುದು. ಅಥವಾ ಧರ್ಮಿಸ್ವರೂಪದಿಂದ ಭಿನ್ನ ಪಟ್ಟ ಗು ಣಗಳಿಲ್ಲದವನೆಂದೂ "ಏವಂ ಧರ್ಮಾನ್ ಪೃಥಕ್ಪಶ್ಯನ್" ಇತ್ಯಾದಿ ಶ್ರುತಿ ಗಳಿಂದ ಹೇಳಬಹುದು. ಆದರೆ ಈ ಶ್ರುತಿಯಿಂದ ಸರ್ವಥಾ ಯಾವ ಧರ್ಮ ವೂ ಇಲ್ಲವೆಂಬ ಸರ್ವಧರ್ಮ ನಿಷೇಧವೇ ಬೋಧಿಸಲ್ಪಡುವ ಪಕ್ಷದಲ್ಲಿ 'ಪೃ ಥಕ್' ಎಂಬ ಪದವೇ ಅನಾವಶ್ಯಕವಾಗಿ ಕಂಡುಬರುವದು. ಆದುದರಿಂದ ಆ ರೀತಿಯಾಗಿ ಹೇಳಕೂಡದು. ಇತ್ಯಾದಿಗಳನ್ನು ಸ್ಪಷ್ಟವಾಗಿ ವ್ಯಾ ಖ್ಯಾನದಲ್ಲಿಯೇ ನೋಡಬಹುದು. ||೮೪೪||

## (೮೪೫ನೇ ನಾಮವು) ಮಹಾನ್,

## ಓಮ್|| ಮಹತೇನಮಃ.

(ಶಂ|| ಭಾ) ಶಬ್ದಾದಿ ಗುಣರಾಹಿತ್ಯದಿಂದಲೂ ನಿರತಿಶಯಸೂಕ್ಷ್ಮ ವಾಗಿರುವುದರಿಂದಲೂ ನಿತ್ಯ ಶುದ್ಧ ಸರ್ವಗತತ್ವದಿಂದಲೂ ನಾನಾಪ್ರ ತಿಬಂಧಕವಾದ ಧರ್ಮಸಮೂಹವನ್ನು ಯುಕ್ತಿ ಬಲದಿಂದಲೂ ಕೂಡ ಹೇಳುವುದಕ್ಕೆ ಯತ್ನವಿಲ್ಲವಾದುದರಿಂದ ಮಹಾನ್, ಎನ್ನಲ್ಪಡುವನು. (ವಿ|| ಭಾ) ಪ್ರಾಕಾಮ್ಯವೆಂಬ ಶ್ರೇಷ್ಠವಾದ ಐಶ್ವರ್ಯವುಳ್ಳವನು. ||೮೪೫||

## (೮೪೬ನೇ ನಾಮವು) ಅಧೃತಃ,

## ಓಮ್|| ಅಧೃತಾಯನಮಃ.

(ಶಂ|| ಭಾ) ಧಾರಕಗಳಾದ ಪೃಥಿವ್ಯಾದಿಗಳಿಗೂ ಕೂಡ ಧಾರಕನೂ ತನಿಗೆ ಬೇರೊಂದು ಧಾರಕವಸ್ತುವಿಲ್ಲದವನು. (ವಿ|| ಭಾ) ಅನ್ಯರ ಛಾಯೆ ಯಲ್ಲಿ ಪ್ರವೇಶಿಸಿ ಅವರ ಹೃದಯವನ್ನು ವಶೀಕರಿಸುವುದೆಂತಲೂ, ತನ್ನ ನ್ನು ಧ್ಯಾನಿಸುವಂತವರ ಹೃದಯದಲ್ಲಿ ಅಧಿಷ್ಠಾನಮಾಡುವ ಸ್ವಭಾವವೆಂ ತಲೂ, ಜೀವನೊಡನೆ ಕೂಡಿಯೂ ಜೀವರಹಿತವೂ ಆದ ಶರೀರದಲ್ಲಿ ಪ್ರ ವೇಶಿಸುವುದೆಂತಲೂ, ಇಷ್ಟಾಪೂರ್ತಾದಿ ಸತ್ಕಾರ್ಯಗಳಲ್ಲಿ ಅಧಿಷ್ಠಾನ ಮಾ ಡಿರುವಿಕೆಯೆಂತಲೂ ; ನಾಲ್ಕು ವಿಧಗಳಾದ ಅವನ ಯಥೇಚ್ಛಾ ವ್ಯಾಪಾ ರಾತಿಶಯದಿಂದ ಯಾವದೊಂದರಲ್ಲಿಯೂ ಬದ್ಧನಾಗದ ಕಾರಣ 'ಅಧೃ ತಃ' ಎನ್ನಲ್ಪಡುವನು. ಇದರಿಂದ ನೆನೆಸಿದ ಕಾರ್ಯಗಳನ್ನೆಲ್ಲಾ ಪೂರ್ತಿ

ಪೊಡಿಸುವಂತಹ ಸಮರ್ಥನೆಂಬ ಕಾಮೋವನಾಯಿತ್ವದ ಅತಿಶಯವು ಹೇಳಲ್ಪಟ್ಟಿತು. ಇವನು ತಾನೆ ಪರಮಪದಕ್ಕೆ ಹೋಗಲು ಯೋಗ್ಯವಾದಸಿದ್ಧಿರಹಿತರಾಗಿರುವ ವೈದಿಕಪುತ್ರರನ್ನು ತನ್ನ ಸಂಕಲ್ಪಮಾತ್ರದಿಂದ ಪರಮಪದಗತರನ್ನಾಗಿ ಮಾಡಿರುವುದರೊಡನೆ ಪುನರಾವೃತ್ತಿರಹಿತವಾದ ಪರಮಪದದಿಂದ ಪುನಃ ಈ ಸಂಸಾರಮಂಡಲಕ್ಕೆ ಅವರನ್ನು ಬರುವಂತೆ ಮಾಡಿದವನು. ಇದರಿಂದ ಇವನು ಚಿದಚಿತ್ತ್ವಗಳ ಸ್ವಭಾವವನ್ನೂ ಕೂಡ ಅನ್ಯಥಾ ಮಾಡುವುದಕ್ಕೆ ಸಮರ್ಥನಾಗಿದ್ದರೂ ಯಾವದೋ ಒಂದು ಕಾರಣದಿಂದ ಅವುಗಳನ್ನು ನಾಶಪಡಿಸದೆ ಇರುವನೆಂದು ಸೂಚಿಸಲ್ಪಡುವನು. ||೮೪೬||

## (೮೪೭ನೇ ನಾಮವು) ಸ್ವಧೃತಃ,

## ಓಮ್|| ಸ್ವಧೃತಾಯನಮಃ.

(ಶಂ|| ಮ) "ಸ್ವೇಮಹಿಮ್ನಿ ಪ್ರತಿಷ್ಠಿತಃ" ಎಂಬಂತೆ ತನ್ನಿಂದಲೇ ತಾನು ಧರಿಸಲ್ಪಡುವಂತವನು. (ವಿ|| ಭಾ) ಮನ್ತ್ರೌಷಧಿತಪಸ್ಸಮಾಧಿಗಳಿಂದ ಸಿದ್ಧಿಹೊಂದಿರುವ ಬದ್ಧಸಂಸಾರಿಗಳ ಅಣಿಮಾದ್ಯೈಶ್ವರ್ಯಕ್ಕಿಂತಲೂ ಇವನ ಐಶ್ವರ್ಯಕ್ಕುಂಟಾದ ಅತಿಶಯವು ಮುಂದೇ ಹೇಳಲ್ಪಡುವುದು, ಸಮಾಧಿ ಮೊದಲಾದ ಉಪಾಧಿ ವಶದಿಂದ ಪ್ರಾಪ್ತವಲ್ಲದೆ ಹಿಂದೇ ಪ್ರಕೃತವಾದ ಐಶ್ವರ್ಯವನ್ನು ತಾನಾಗಿಯೇ ಪಡೆದವನು. ||೮೪೭||

## (೮೪೮ನೇ ನಾಮವು) ಸ್ವಾಸ್ಯಃ,

## ಓಮ್|| ಸ್ವಾಸ್ಯಾಯನಮಃ.

(ಶಂ|| ಮ) ಸುಂದರವಾದ ಪದ್ಮದಂತೆ ರಮಣೀಯವಾದ ಮುಖವುಳ್ಳವನು. (ವಿ|| ಭಾ) ಸಂಸಾರಾವಸ್ಥೆಯಲ್ಲಿ ಸಿಕ್ಕಿಕೊಂಡು ಮೋಕ್ಷದಶೆಯಲ್ಲಿ ಆವಿರ್ಭವಿಸುವ ಮುಕ್ತಪುರುಷರ ಸ್ವಾಭಾವಿಕವಾದ ಐಶ್ವರ್ಯದಂತೆ ಇಲ್ಲದೆ ಯಾವಾಗಲೂ ಆವಿರ್ಭೂತವಾದ ಐಶ್ವರ್ಯವೆಂಬ ಯೋಗ್ಯವಾದ ಆಸನವುಳ್ಳವನು. ||೮೪೮||

## (೭೮೯ನೇ ನಾಮವು) ಪ್ರಾಗ್ವಂಶಃ,

### ಓಮ್॥ ಪ್ರಾಗ್ವಂಶಾಯ ನಮಃ

(ಶಂ॥ ಭಾ) ಲೋಕದಲ್ಲಿ ವಂಶವುಳ್ಳ ಮೂಲಪುರುಷನು ವಂಶಾದಿಯುಳ್ಳಿರುವನು. ಅವನಿಂದ ವಂಶವು ಉಂಟಾಗುವದು. ಇವನ ವಂಶರೂಪವಾಗಿರುವ ಸರ್ವಪ್ರಪಂಚವು ಸಮಸ್ತ ವಂಶಕ್ಕಿಂತಲೂ ಮುಂದಾಗಿರುವುದಲ್ಲದೆ ಹಿಂದೆ ಬಂದದ್ದಲ್ಲವಾದುದರಿಂದ ಪ್ರಾಗ್ವಂಶಃ ಎನ್ನಲ್ಪಡುವನು. (ವಿ॥ ಭಾ) ಅನಾದಿ ಮುಕ್ತರಾದ ನಿತ್ಯ ಸೂರಿಗಳಿಗೂ ಉತ್ಪತ್ತಿಸ್ಥಾನವಾಗಿರುವಂತವನು. ಸಮಸ್ತ ವ್ಯಾಪಾರಗಳೂ ಅವನ ಇಚ್ಛಾಧೀನವಾಗಿರುವುದರಲ್ಲಿ ವಿವಾದವಿಲ್ಲವಾದ ಕಾರಣ ನಿತ್ಯರಿಗೆ ಅನಾದಿಕಾಲದಿಂದುಂಟಾಗಿರುವ ಸ್ವರೂಪಾವಿರ್ಭಾವವೂ ಭಗವಂತನ ನಿತ್ಯೇಚ್ಛಾಸಿದ್ಧವೆಂದರ್ಥವು. (ಮ) ಲೋಕದಲ್ಲಿರುವ ಸಮಸ್ತಗಳಾದ ವಿದ್ಯಾವಂಶಕ್ಕೂ ಉದರಸಂಬಂಧವಾದ ವಂಶಕ್ಕೂ ಮೂಲಕಾರಣನು. ॥೭೮೯॥

## (೭೯೦ನೇ ನಾಮವು) ವಂಶವರ್ಧನಃ,

### ಓಮ್॥ ವಂಶವರ್ಧನಾಯ ನಮಃ.

(ಶಂ॥ ಭಾ) ತನ್ನ ವಂಶವಾದ ಪ್ರಪಂಚವನ್ನು ಅಭಿವೃದ್ಧಿಪಡಿಸುವಂತವನು. ಅಥವಾ ಛೇದಿಸುವಂತವನು. (ವಿ॥ ಭಾ) ಅಂತಹ ನಿತ್ಯಸೂರಿಗಳಿಗಿಂತಲೂ ಇವನು ವಿಲಕ್ಷಣನಾಗಿರುವದಕ್ಕೆ ಕಾರಣವಾದ ಇವನ ಹೇತುತ್ವವನ್ನು ಬೋಧಿಸುವದೀ ನಾಮವು. ಹಿಂದೆ ಹೇಳಿರುವಂತೆ ತನ್ನ ಸಂತಾನಭೂತರಾದ ನಿತ್ಯಸೂರಿಗಳ ವಂಶವನ್ನು ವಿಸ್ತರಿಸುವಂತವನು. ॥೭೯೦॥

ಈ ಪ್ರಕಾರವಾಗಿ ಇಲ್ಲಿ ಪ್ರಕೃತಗಳಾದ(೧೨)ನಾಮಗಳಿಗೂ "ಅತಿಸೂಕ್ಷ್ಮ ಹೃದಾಕಾಶಾ ವ್ಯಕ್ತಜೀವಪ್ರವೇಶನೆ। ಶಕ್ತಿಮಾ "ನಣು" (೭೭೯) ರಿತ್ಯುಕ್ತ ಷಡ್ಗುಣ್ಯ ಸ್ಸರ್ವಶಕ್ತಿದಃ॥ ವಿಪುಲಂ ಪರಮವ್ಯೋಮ ಮಹಿಮ್ನಾ ಚುಲಕೀಕೃತಂ। ಯೇನನಾಮ್ನಾ "ಬೃಹ" (೭೮೦) ತ್ತಸ್ಯಾ ತ್ಷಡ್ಗುಣ್ಯಶ್ಚ ಬೃಹಸ್ಪದಃ॥ ಸರ್ವತ್ರಾಪ್ರತಿಹತಗತಿ ರ್ಲಘಿಮ್ನಾ

"ಕೃಶ" (೮೪೧) ಈರಿತಃ | ಸ್ಥಿತ್ವೈ ಕತ್ರಾಖಿಲಂಸ್ಸ್ರಷ್ಟುಂ ಶಕ್ತ್ಯಾ ಮಹತ್ತೀಸದಾ || ತಯಾಪ್ರಕೃಷ್ಟ ಶಕ್ತ್ಯಾಚ ವಿಶಿಷ್ಟಃ "ಸ್ಥೂಲ" (೮೪೨) ಉಚ್ಯತೇ | ಸಂಕಲ್ಪಾತ್ಸ್ವಗುಣೀಭೂತ ಸರ್ವಾವಸ್ಥಮಿದಂಜಗತ್ | ಕುರ್ವನ್ಬಿಭರ್ತಿ ನಿತ್ಯಂ ಯೋ "ಗುಣಭೃ" (೮೪೩) ತ್ಸಸ್ಮೃತೋಬುಧೈಃ || ಸ್ಥಿತೋಽಪಿ ನೀರಕ್ಷೀರವಜ್ಜಗತೋ ಽಸ್ಪರ್ಶನಾದ್ಗುಣೈಃ | ಉಕ್ತಸ್ಸು "ನಿರ್ಗುಣ" (೮೪೪) ಇತಿ ಸ್ಸಪಾರ್ತ್ಥೈಃ ಪಾವನತ್ವದಃ || ಭೂವ್ಯಾಸಹಮಹಾನೀರೆ ಹ್ಯನ್ಮಜ್ಜನ ನಿಮಜ್ಜನಾತ್ || "ಮಹಾ" (೮೪೫) ನಿತಿಚವಿಖ್ಯಾತ ಷ್ಷಡರ್ಣಸ್ತು ಮಹತ್ವದಃ || ಯಶ್ಚಾನಿಂತಾಮ್ಯಃ ಕೇನಾಪಿ "ಹ್ಯಧೃತ" (೮೪೬) ಸ್ಸತುಕೀರ್ತಿತಃ | ಸ್ವಭಾವತೋಧೃತ್ಯೈಶ್ವರ್ಯಃ "ಸ್ವಧೃತಃ" (೮೪೭) ಪರಿಕೀರ್ತಿತಃ || ಆಸನಂ ಶೋಭನಂಯಸ್ಯಸ "ಸ್ವಾಸ್ಯಸ್ಯ" (೮೪೮) ಇತಿಚೋಚ್ಯತೇ|| ಅನಾದಿ ಮುಕ್ತಾಃ ಪ್ರಾಂಚೋಯೆ ತೇಷಾಮುದ್ಭವಭೂಮಿದಃ | "ಪ್ರಾಗ್ವಂಶ" (೮೪೯) ಇತಿವಿಖ್ಯಾತ ಸ್ಸಪಾರ್ತ್ಥೋ ಮನುರುತ್ತಮಃ || ನಿತ್ಯಸಿದ್ಧಸ್ಯವರ್ಗೋ ಯೋವಂಶಂ ಸಂತಾನಲಕ್ಷಣಂ | ತಂವರ್ಧಯ ತಿಯಶ್ಚಾಸೌ "ವಂಶವರ್ಧನ" (೮೫೦) ಉಚ್ಯತೇ || " ಎಂಬಂತೆ ವಿವೃತಿಯನ್ನು ಕಾಣಬಹುದು.

ಮೂ|| ಭಾರಭೃತ್ಕಥಿತೋ ಯೋಗೀ ಯೋಗೀಶ
ಸ್ಸರ್ವಕಾಮದಃ | ಆಶ್ರಮ ಶ್ಶ್ರಮಣಃ ಕ್ಷಾಮ
ಸ್ಸುಪರ್ಣೋ ವಾಯುವಾಹನಃ ||೯೧||

(೮೫೧ನೇ ನಾಮವು) ಭಾರಭೃತ್,
ಓಮ್|| ಭಾರಭೃತೇನಮಃ.

(ಶಂ|| ಮ||) ಅನಂತಾದಿ ರೂಪದಿಂದ ಭೂಮಿಯ ಭಾರವನ್ನು ವಹಿಸಿದವನು. (ವಿ|| ಭಾ) ನಿತ್ಯರಿಗೆ ಮಾತ್ರವಲ್ಲದೆ ಮುಕ್ತಜೀವರ ಸಂಸಾರ್ಯವಸ್ಥಾನಾಶದಲ್ಲಿಯೂ, ಅವರ ಸ್ವರೂಪಾವಿರ್ಭಾವದಲ್ಲಿಯೂ ತನ್ನಲ್ಲಿ ಸೇರಿಸಿಕೊಳ್ಳುವುದರಲ್ಲಿಯೂ ಅವರ ಸರ್ವ ಭಾರವನ್ನು ವಹಿಸಿದವನು. ||೮೫೧||

## (೭೫೨ನೇ ನಾಮವು) ಕಥಿತಃ,

### ಓಮ್॥ ಕಥಿತಾಯ ನಮಃ.

(ಶಂ॥ ಮ) ಸರ್ವವೇದ ಇತಿಹಾಸ ಪುರಾಣಾದಿಗಳಲ್ಲಿ ಇವನೇ ಜಗತ್ಕಾರಣನೆಂದು ಸದಾ ಪ್ರಸಿದ್ಧನಾಗಿ ಹೊಗಳಲ್ಪಡುವಂತವನು. (ವಿ॥ ಭಾ) ಪೂರ್ವೋಕ್ತಗಳೂ ಮುಂದೆ ಹೇಳಲ್ಪಡುವಂತವೂ ಆದ ಸಮಸ್ತ ಕಲ್ಯಾಣಗುಣ ವಿಶಿಷ್ಟನಿವನೆಂದು ಸರ್ವಶಾಸ್ತ್ರಗಳಲ್ಲಿಯೂ ಪ್ರತಿಪಾದಿಸಲ್ಪಡುವಂತವನು. (ಮ) ತಾಮಸ ಪುರಾಣಾದಿಗಳು ಶೈವಾದ್ಯಾಗಮಗಳೂ ಅಸಚ್ಛಾಸ್ತ್ರಗಳಾದ ಕಾರಣ ಇವನನ್ನು ಪ್ರತಿಪಾದಿಸಲಾರವು. ॥೭೫೨॥

## (೭೫೩ನೇ ನಾಮವು) ಯೋಗೀ,

### ಓಮ್॥ ಯೋಗಿನೇ ನಮಃ.

(ಶಂ॥ ಮ) ಜ್ಞಾನದಿಂದ ಹೊಂದಲ್ಪಡುವಂತವನು. ಅಥವಾ ಯೋಗವೆಂದರೆ ಸಮಾಧಿಯು, ಸ್ವಾತ್ಮದಲ್ಲಿ ಸದಾ ತನ್ನನ್ನೇ ಚನ್ನಾಗಿ ನೋಡುವಂತವನು. (ವಿ॥ ಭಾ) ಹಿಂದೆ ವಿವರಿಸಲ್ಪಟ್ಟ ಸಕಲ ಕಾರ್ಯಗಳನ್ನು ಮಾಡುವಂತಹ ಅಘಟಿತ ಘಟನಾಸಮರ್ಥನು. ॥೭೫೩॥

## (೭೫೪ನೇ ನಾಮವು) ಯೋಗೀಶಃ,

### ಓಮ್॥ ಯೋಗೀಶಾಯ ನಮಃ.

(ಶಂ॥ ಭಾ) ಇತರ ಯೋಗಿಗಳ ಯೋಗವು ವಿಘ್ನಗಳಿಂದ ಕೆಡುವುದು. ಇವನು ಅಪ್ರತಿಹತವಾದ ಯೋಗವುಳ್ಳವನಾದ ಕಾರಣದಿಂದಲೂ ಯೋಗಿಗಳಿಗೆ ಪ್ರಭುವಾದವನಾದುದರಿಂದಲೂ 'ಯೋಗೀಶಃ' ಎನ್ನಲ್ಪಡುವನು. (ವಿ॥ ಭಾ) ಬದ್ಧಚೇತನಕೋಟಿಗೆ ಸೇರಿದವರಾಗಿದ್ದರೂ ಸಹಜವಾದ ಸಮಾಧಿಯೋಗವುಳ್ಳ ಸನಕಾದಿಗಳ ಯೋಗಕ್ಷೇಮನಿರ್ವಾಹಕನು. ॥೭೫೪॥

## (೭೫೫ನೇ ನಾಮವು) ಸರ್ವಕಾಮದಃ,

### ಓಮ್॥ ಸರ್ವಕಾಮದಾಯ ನಮಃ.

(ಶಂ॥ ಮ) ಸರ್ವಫಲಪ್ರದನು. (ವಿ॥ ಭಾ) ಯೋಗಭ್ರಷ್ಟರಿಗೂ ಕೂಡ ಅಣಿಮಾದಿ ಸಿದ್ಧಿಯನ್ನು ಯೋಗಕ್ಕೆ ವಿಘ್ನವನ್ನಾಗಿ ಕೊಡುವಂತವನು.

## (೮೫೬ನೇ ನಾಮವು) ಆಶ್ರಮಃ,

## ಓಮ್॥ ಆಶ್ರಮಾಯನಮಃ.

(ಶಂ॥ ಭಾ) ಸಂಸಾರವೆಂಬ ಅರಣ್ಯಪಲ್ಲಿ ಅಲೆಯುವಂತವರಿಗೆ ವಿಶ್ರಮಸ್ಥಾನನಾಗಿರುವಂತವನು. (ಮ) ಸಕಲವಾದ ಆಶ್ರಮಧರ್ಮವುಳ್ಳವನು. ಲೋಕಶಿಕ್ಷಾರ್ಥವಾಗಿ ರಾಮಕೃಷ್ಣಾದ್ಯವತಾರಗಳನ್ನು ಮಾಡಿ ಆಯಾ ಆಶ್ರಮಧರ್ಮಗಳನ್ನನುಷ್ಠಿಸಿರುವನಷ್ಟೆ. (ವಿ॥ ಭಾ) ಅಂತವರು ಅಣಿಮಾದೈಶ್ವರ್ಯವನ್ನು ಅಪೇಕ್ಷಿಸದೇ ನಿವೃತ್ತರಾದಾಗ ಬ್ರಹ್ಮವಿದ್ಯಾ ಸಂಪಾದಕಗಳಾದ ವೈಷ್ಣವೋತ್ತಮರಾದವರ ಕುಲದಲ್ಲಿ ಅವರಿಗೆ ಜನ್ಮವನ್ನುಂಟುಮಾಡಿ ವಿಶ್ರಾಂತಿಯನ್ನು ಕೊಡುವಂತವನು. ॥೮೫೬॥

## (೮೫೭ನೇ ನಾಮವು) ಶ್ರಮಣಃ,

## ಓಮ್॥ ಶ್ರಮಣಾಯನಮಃ.

(ಶಂ॥ ಭಾ) ಅವಿವೇಕವುಳ್ಳವರಿಗೆ ಸಂತಾಪಕನು. (ಮ) ತಪಸ್ವಿಯು. (ವಿ॥ ಭಾ) ಇಂತಹ ಯೋಗಭ್ರಷ್ಟರು ಅಣಿಮಾದ್ಯೈಶ್ವರ್ಯಗಳನ್ನು ಅನುಭವಿಸಿ ಮಹನೀಯರ ಕುಲದಲ್ಲಿ ಹುಟ್ಟಿದರೂ ನಾಶವಾಗದ ಪೂರ್ವ ಸಂಸ್ಕಾರಗಳಿಂದ ಈ ಜನ್ಮದಲ್ಲಿಯೂ ಅವರಿಗೆ ಅನಾಯಾಸವಾಗಿ ಸಮಾಧಿಯನ್ನು ಅಭ್ಯಾಸ ಮಾಡಿಸಿಕೊಡುವಂತವನು. ॥೮೫೭॥

## (೮೫೮ನೇ ನಾಮವು) ಕ್ಷಾಮಃ,

## ಓಮ್॥ ಕ್ಷಾಮಾಯನಮಃ

(ಶಂ॥ ಭಾ) ಸಕಲ ಪ್ರಜೆಗಳನ್ನು ಕೃಶರನ್ನಾಗಿ ಮಾಡುವಂತವನು. (ವಿ॥ ಭಾ) ಈ ಪ್ರಕಾರವಾಗಿ ತನ್ನ ವಿಷಯವಾದ್ದ ಯೋಗದಲ್ಲಿ ಪ್ರವೇಶಿ

ಸಿದ ಮಾತ್ರದಲ್ಲಿಯೇ ಅವರು ಯೋಗಭ್ರಷ್ಟರಾಗಿದ್ದರೂ ದುಃಖವನ್ನು ನಾಶಪಡಿಸಿಕೊಳ್ಳುವುದಕ್ಕೆ ಶಕ್ತರನ್ನಾಗಿ ಮಾಡುವಂತವನು. ॥೮೫೮॥

## (೮೫೯ನೇ ನಾಮವು) ಸುಪರ್ಣಃ,
## ಓಮ್॥ ಸುಪರ್ಣಾಯನಮಃ.

(ಶಂ॥ ಭಾ) "ಛಂದಾಂಸಿಯಸ್ಯಪರ್ಣಾನಿ" (ಗೀ॥ ೧೫॥ ೧) ಎಂಬಂತೆ ಸಂಸಾರ ವೃಕ್ಷರೂಪನಾದ ಇವನಿಗೆ ವೇದಗಳು ಮಂಗಳಕರಗಳಾದ ಯೆಲೆಗಳಾಗಿರುವುವಾದಕಾರಣ 'ಸುಪರ್ಣಃ' ಎನ್ನಲ್ಪಡುವನು. (ಪು) ಪಕ್ಷಿರೂಪವನ್ನು ಧರಿಸಿದವನು. (ವಿ॥ ಭಾ) ಈ ಪ್ರಕಾರವಾಗಿ ಸಮಾಧಿಸ್ಥಿತಿಯನ್ನು ಪೂರ್ತಿಮಾಡಿಕೊಂಡವರು ಸುಖವಾಗಿ ಪ್ರಕೃತಿಮಂಡಲದ ಧಡವನ್ನು ಹೊಂದುವಂತೆ ಮಾಡಿಸುವಂತವನು. ॥೮೫೯॥

## (೮೬೦ನೇ ನಾಮವು) ವಾಯುವಾಹನಃ,
## ಓಮ್॥ ವಾಯುವಾಹನಾಯನಮಃ

(ಶಂ॥ ಮ) ವಾಯುದೇವತೆಯನ್ನು ಕೂಡ ಆಜ್ಞಾಧರನನ್ನಾಗಿ ಮಾಡಿದವನು. (ವಿ॥ ಭಾ) ಅವರುತಾನೇ ಪ್ರಬಲಕಾರಣಗಳಿಂದ ಪತಿತರಾಗಿ ಹೋದರೆ ಅವರನ್ನು ಅತಿವೇಗಶಾಲಿಯಾದ ಗರುಡನಿಂದ ಉದ್ಧರಿಸುವಂತವನು. ಪರಮೇಷ್ಠಿ ಶಾಪದಿಂದ ಪರಮಭಾಗವತರಾದ ಉಪರಿಚರವಸುವು ಭೂಮಿಲ್ಲಿ ಹುಟ್ಟಿದಾಗ ಗರುತ್ಮಂತನಿಂದ ಪುನಃ ಅವರಿಗೆ ಪೂರ್ವಾವಸ್ಥೆಯನ್ನು ಕೊಟ್ಟ ವೃತಾಂತವು ಶ್ರೀವಿಷ್ಣುತತ್ವದಲ್ಲಿ ಪ್ರಸಿದ್ಧವಷ್ಟೆ. ॥೮೬೦॥

ಈ ರೀತಿಯಾಗಿ ಇಲ್ಲಿ ಪ್ರಕೃತಗಳಾದ ೧೦ ನಾಮಗಳಿಗೂ "ಮುಕ್ತಾನಾಂಬಂಧಮೋಕ್ಷಾದಿ ಭಾರಸ್ಯಭರಣಾದ್ಧ್ರುಸಃ। "ಭಾರಭೃ" (೮೫೧) ತ್ಸಸ್ತುವರ್ಣಸ್ಯಾತ್ಕಾರ್ಯ ನಿರ್ವಾಹ ಶಕ್ತಿದಃ ॥ ಉಕ್ತಶ್ಯಾಕ್ತ್ರೇಷು "ಕಥಿತೊ" (೮೫೨) ಯಸ್ಸರ್ವಗುಣವತ್ತಯಾ। ಯೋಗೋಹ್ಯಘಟಿತಾರ್ಥಸ್ಯ ಘಟಸಂತ್ರೇನ ಸರ್ವಧಾ॥ ಯಸ್ಯಾಸ್ತಿನಿತ್ಯಸಂಬಂಧಸ್ಸು "ಯೋಗೀ" (೮೫೩) ಪರಿಕೀರ್ತಿತಃ। "ಯೋಗೀಶ" (೮೫೪) ಸ್ಸನಕಾದೀ

ನಾಂ ಯೋಗಿನಾಂ ಧುರ್ಯ ಉಚ್ಯತೇ ॥ ಅಣಿಮಾದೀನ್ಸರ್ವಕಾಮಾನ್ಯೋಗಸ್ಖಲಿತಯೋಗಿನಾಂ ॥ ಅಂತರಾಯತಯಾಮುಕ್ತೇರ್ದದತ್ಯಸ್ಯ "ಸ್ಸರ್ವಕಾಮದಃ" (೮೫೫)॥ ತೇಷಾಂತುಯೋಗ ಭ್ರಷ್ಟಾನಾಂ ಹೇತುರ್ವಿಶ್ವಸದ್ಮಸು । ಸುಭಿಕ್ಷಪರನಿರ್ಯೇಷು ವಿಶ್ರಾಂತೇ "ರಾಶ್ರಮಃ" (೮೫೬) ಸ್ಮೃತಃ ॥ ಅಕ್ಷೀಣಪೂರ್ವಸಂಸ್ಕಾರೈ ರ್ಜನ್ಮನಾನುಭವೇನಚ॥ ಶ್ರಮ್ಯತೇ ಽಭ್ಯಸ್ಯತೇಂತ್ರೇತಿ "ಶ್ರಮಣಃ" (೮೫೭) ಪರಿಕೀರ್ತಿತಃ ॥ ಯೋಗಾಭಿಮುಖ್ಯ ಮಂತ್ರೇಣ ಯೋಗಭ್ರಷ್ಟಾಂ ಅಪಿಸ್ವಯಂ । ಯಸ್ಮಾತ್ಕ್ಷಪಯಂತೇಸ "ಕ್ಷಾಮೋ" (೮೫೮) ಭವಾಬ್ಧಿ ತರುಣಾಯವೈ ॥ ಪ್ರತ್ಯಾಪನ್ನ ಸಮಾಧೀನ್ಯ ಸ್ಸಮಾಧೇಃ ಪರಿಪಾಕತಃ । ತಮಸಃ ಪರಂನಯತಿ "ಸುಪರ್ಣೋ" (೮೫೯) ಸ್ಸಚಕೀರ್ತಿತಃ ॥ ವಾಯುನಾಗತ್ವರೇಣ್ಯೈವ ಕರ್ಮಣಾ ಪತಿತಾತ್ಮನಃ । ಗರುತ್ಮತಾವಾಹಯತಿ ಯಸ್ಯಸ್ಯ "ದ್ವಾಯುವಾಹನಃ" (೮೬೦) ॥" ಎಂಬಂತೆ ವಿವೃತಿಯನ್ನು ಕಾಣಬಹುದು.

ಮೂ ॥ ಧನುರ್ಧರೋ ಧನುರ್ವೇದೋ ದಂಡೋ ದ
ಮಯಿತಾ ಽದಮಃ । ಅಪರಾಜಿತ ಸ್ಸರ್ವಸಹೋ
ನಿಯಂತಾ ನಿಯಮೋ ಯಮಃ ॥೯೨॥

(೮೬೧ನೇ ನಾಮವು) ಧನುರ್ಧರಃ,
ಓಮ್॥ ಧನುರ್ಧರಾಯನಮಃ.

(ಶಂ॥ ಭಾ) ಶ್ರೀಮಂತನಾದ ರಾಮನು ಧನುರ್ಧರನು. (ಮ) ಶಾರ್ಙ್ಗವೆಂಬ ಧನುಸ್ಸನ್ನು ವಹಿಸಿದವನು, ಅಥವಾ ಶ್ರೀರಾಮನು. (ವಿ॥ ಭಾ) ಇಂತಹ ಉಪಾಸಕ ವಿರೋಧಿಗಳನ್ನು ನಾಶಪಡಿಸುವುದಕ್ಕಾಗಿ ಧನುರ್ಬಾಣಗಳನ್ನು ಕೈಯ್ಯಲ್ಲಿ ಧರಿಸಿದವನು. "ಧಾರ್ಯತೇಕ್ಷತ್ರಿಯೈಶ್ಚಾಪೋ ಮಾರ್ಗಶಬ್ದೋಭವೇದಿತಿ । ಏತದರ್ಥಂಹಿಲೋಕೇಸ್ಮಿನ್ ಕ್ಷತ್ರಿಯೈರ್ಧಾರ್ಯತೇಧನುಃ" ಎಂಬೀಪ್ರಮಾಣಗಳನ್ನರಿಯಬೇಕು. ॥೮೬೧॥

(೮೬೨ನೇ ನಾಮವು) ಧನುರ್ವೇದಃ,
ಓಮ್॥ ಧನುರ್ವೇದಾಯನಮಃ.

(ವಿ‖ ಭಾ) ಇತರರಾದ ಸುರ, ನರ, ಇಂದ್ರಾದಿಗಳಿಗೂ ಕೂಡ ಧನುರ್ವೇದಾದಿ ಶಾಸ್ತ್ರಗಳನ್ನು ಪ್ರವಚನ ಮಾಡತಕ್ಕವನು. ‖೮೬೦‖

(೮೬೧ನೇ ನಾಮವು) ದಂಡಃ,

ಓಮ್‖ ದಂಡಾಯನಮಃ.

(ಶಂ‖ವಿ‖ಮ) ವೇದೋಕ್ತಧರ್ಮಪರಿಪಾಲಕರಾದ ರಾಜರುಗಳಿಂದ ದಂಡಶಾಸ್ತ್ರದಲ್ಲಿ ಹೇಳಿರುವ ಕ್ರಮದಿಂದ ದುಷ್ಟರನ್ನು ಶಿಕ್ಷಿಸುವಂತವನು. (ಶಂ) ಶಿಕ್ಷಾಸ್ವರೂಪನು. ‖೮೬೧‖

(೮೬೨ನೇ ನಾಮವು) ದಮಯಿತಾ,

ಓಮ್‖ ದಮಯಿತ್ರೇನಮಃ.

(ಶಂ‖ ಭಾ) ಯಮನು ರಾಜರುಗಳು ಮೊದಲಾದವರಮೂಲಕವಾಗಿ ಪ್ರಜೆಗಳನ್ನು ಶಿಕ್ಷಿಸುವಂತವನು. (ವಿ‖ ಬಾ) ತಾನೂ ರಾವಣಾದಿಗಳನ್ನು ಪ್ರತ್ಯಕ್ಷದಲ್ಲಿ ಶಿಕ್ಷಿಸುವಂತಹ ಸ್ವಭಾವವುಳ್ಳವನು. ‖೮೬೨‖

(೮೬೩ನೇ ನಾಮವು) ಅದಮಃ,

ಓಮ್‖ ಅದಮಾಯನಮಃ.

(ವಿ‖ಭಾ) ತಾನು ಲೋಕಕ್ಕೆಲ್ಲಾ ಹೇಗಾದರೆ ಶಿಕ್ಷಕನೊ ಅದರಂತೆ ತನಗೂ ಬೇರೊಬ್ಬ ಶಿಕ್ಷಕನುಂಟೊ? ಎಂದರೆ :—ಅದಿಲ್ಲದವನು. ನಿರಂಕುಶಸ್ವತಂತ್ರನೆಂದರ್ಥವು. (ಶಂ‖ ಮ) ದಮಃ—ಶಿಕ್ಷಾರ್ಹರಲ್ಲಿ ದಂಡರೂಪವಾದ ಕಾರ್ಯವು ಫಲವಾಗಿರುವದು. ಅದೂ ಅವನೇ ಆಗಿರುವುದರಿಂದ 'ದಮಃ' ಎನ್ನಲ್ಪಡುವನು. ‖೮೬೩‖

(೮೬೪ನೇ ನಾಮವು) ಅಪರಾಜಿತಃ,

ಓಮ್‖ ಅಪರಾಜಿತಾಯನಮಃ.

(ವಿ‖ ಭಾ) ಈ ರೀತಿಯಿಂದ ಸರ್ವತೋಮುಖವಾದ ತನ್ನ ಆಜ್ಞೆಯಪ್ರವರ್ತನದಲ್ಲಿ ಒಂದು ಕಡೆಯೂ ಯಾವಾಗಲೂ ಯಾರಿಂದಲೂ ಪರಾಜಯಪ್ರಸಂಗವಿಲ್ಲದವನು. ‖೮೬೪‖

(೮೬೭ನೇ ನಾಮವು) ಸರ್ವಸಹಃ,

ಓಮ್॥ ಸರ್ವಸಹಾಯನಮಃ.

(ಶಂ॥ಭಾ) ಸರ್ವಕಾರ್ಯಗಳಲ್ಲಿಯೂ ಸಮರ್ಥನು, ಅಥವಾ ಸಕಲ ಶತ್ರುಗಳನ್ನೂ ಸಹಿಸುವಂತವನು. ಅಥವಾ ಪೃಥಿವ್ಯಾದಿ ರೂಪದಿಂದ ಸಮಸ್ತವನ್ನು ವಹಿಸುವಂತವನು. (ವಿ॥ ಭಾ) ತನ್ನ ಆಜ್ಞೆಯಿಂದ ಸಮಸ್ತವಾದ ದೇವತಾಂತರವನ್ನು ಮಂದಾಧಿಕಾರಿಗಳಿಗೆ ಆರಾಧ್ಯವೆಂಬದಾಗಿ ಸಹಿಸುವಂತವನು. ಮಂದಾಧಿಕಾರಿಗಳೆಂದರೆ:— ಮೋಕ್ಷಪ್ರಾಪಕವಾದ ಮಾರ್ಗದಲ್ಲಿ ಸಂಪೂರ್ಣವಾದ ಅಧಿಕಾರವನ್ನು ಹೊಂದದವರು. ॥೮೬೭॥

(೮೬೮ನೇ ನಾಮವು) ನಿಯಂತಾ,

ಓಮ್॥ ನಿಯಂತ್ರೇನಮಃ.

(ಶಂ॥ಮ) ಎಲ್ಲರನ್ನು ಅವರವರ ಕೆಲಸಗಳಲ್ಲಿ ನಿಯಮಿಸುವಂತವನು. (ವಿ॥ ಭಾ) ಅಂತಹ ಮಂದಾಧಿಕಾರಿಗಳಿಗೆ ಆಯಾ ದೇವತಾಂತರಗಳಲ್ಲಿ ವಿಶ್ವಾಸವನ್ನುಂಟುಮಾಡುವಂತವನು. ॥೮೬೮॥

(೮೬೯ನೇ ನಾಮವು) ನಿಯಮಃ,

ಓಮ್॥ ನಿಯಮಾಯನಮಃ.

ಭಾ) ಅಂತಹ ದೇವತಾಂತರಗಳಿಂದ ಅವರಿಗೆ, 'ಜಾತಿ, ಆಯುಸ್ಸು, ಭೋಗವು' ಮೊದಲಾದವುಗಳನ್ನು ಕೊಡುವಂತವನು. (ಶಂ॥ಮ) ಅನಿಯಮಃ—ತಾನೇ ಸರ್ವನಿಯಾಮಕನಾಗಿರುವುದರಿಂದ ತನಿಗೆ ಯಾರೂ ಪ್ರೇರಕರು ಅಥವಾ ವಿಧಿಸುವಂತವರಿಲ್ಲವು. ॥೮೬೯॥

(೮೭೦ನೇ ನಾಮವು) ಯಮಃ,

ಓಮ್॥ ಯಮಾಯನಮಃ

(ವಿ॥ ಭಾ) ಆಯಾ ಫಲಗಳಿಗೆ ನಿಯಾಮಕರಾದ ಯಮನು ಮೊದಲಾದವರನ್ನು ಕೂಡ ವಶಪಡಿಸಿಕೊಂಡು ಆಳುವಂತವನು. (ಶಂ॥ ಮ)

ಅಯಮಃ—ಮೃತ್ಯುವಿಲ್ಲದವನು. (ಶಂ) ಅಥವಾ ಯಮನಿಯಮಗಳೆಂಬ ಯೋಗಾಂಗಗಳಿಂದ ಹೊಂದಲ್ಪಡುವಂತವನಾದಕಾರಣ ನಿಯಮಃ–ಯಮಃ ಎನ್ನಲ್ಪಡುವನು. ‖೮೭೦‖

ಇಲ್ಲಿ ಪ್ರಕೃತಗಳಾದ ೧೦ ನಾಮಗಳಿಗೂ "ಉಪಾಸಕಾನಾಂ ಭಕ್ತೇರ್ಯಃ ಪ್ರತ್ಯೂಹ ವಿನಿವೃತ್ತಯೇ| ಧನುಷೋ ಧಾರಕೋನಿತ್ಯಂ ಸ್ವಯಂಸ ಸ್ಯಾ "ದ್ಧನುರ್ಧರಃ" (೮೬೧)‖ ಸುರೇಂದ್ರಾದ್ಯಾ ಧನುಶ್ಯಾಸ್ತ್ರಂ ಯಸ್ಮಾದ್ವಿಂದಂತಿಸ ಶ್ರುತಃ| "ಧನುರ್ವೇದೋ" (೮೬೨)ಹ್ಯಷ್ಟವರ್ಣೋ ಧನುರ್ವೇದ ಪ್ರದಾಯಕಃ‖ ವೇದಧರ್ಮಾ ರಿಷ್ಟತಾತಿನೃಪಾದಿ ಮುಖತಃಖಲಾನ್| ದಂಡನೀತ್ಯಾ ದಾಮ್ಯತೀತಿ "ದಂಡ"(೮೬೩) ಸ್ಸ್ಯಾದ್ಪೃತುವರ್ಣಕಃ‖ ತಾಚ್ಛೀಲ್ಯಾದ್ರಾವಣಾದೀನಾಂ ಹರ್ತಾ "ದಮಯಿತಾ" (೮೬೪) ಸ್ವಯಂ| ಕಶ್ಚಿದ್ದಮಯಿತಾನಾಸ್ತಿಯಸ್ಯಾಸೌ "ವದಮಃ"(೮೬೫)ಸ್ಮೃತಃ‖ ಕ್ವಚಿತ್ಕದಾಚಿತ್ಕುತಶ್ಚಿ ತ್ಸರ್ವತೋಮುಖಶಾಸನೇ| ಯಸ್ಯಾಪ್ರತಿಹತಿರ್ನಾಸ್ತಿ ಸವೈಸ್ಯಾ "ದಪರಾಜಿತಃ" (೮೬೬) ‖ ಮಂದಾಧಿಕಾರಿಣಾಂ ಸರ್ವ ಮಾರಾಧ್ಯತ್ವೇನದೈವತಂ | ಬಿಭರ್ತಿಸಹತೇಯಸ್ತುಸ "ಸರ್ವಸಹ" (೮೬೭) ಈರಿತಃ ‖ ದೈವತೇಷು ಚಸರ್ವೇಷು ತತ್ತದಿಚ್ಛಾಂ ಪ್ರರೋಚಯನ್ | ಮಂದಾಧಿಕಾರಿಣೋಯೋಸೌ "ನಿಯಂತಾ" (೮೬೮) ಸ್ಯಾನ್ನಿಯಚ್ಛತಿ ‖ ಭೋಗಾದಿಕಂ ನಿಯಮ್ಯಾಸ್ಮಿನ್ನೆಂಭೆಯ "ನ್ನಿಯಮ" (೮೬೯) ಸ್ಸಮೃತಃ | ಯಮಾದೀನ್ಯಚ್ಛತಿ "ಯಮ" (೮೭೦) ಸ್ತತ್ತತ್ಫಲ ನಿಯಾಮಕಾನ್ ‖" ಎಂಬಂತೆ ವಿವೃತಿಯನ್ನು ಕಾಣಬಹುದು.

ಮೂ ‖ ಸತ್ವವಾ ನ್ಸಾತ್ವಿಕ ಸ್ಸತ್ಯ ಸ್ಸತ್ಯಧರ್ಮ ಪರಾಯಣಃ | ಅಭಿಪ್ರಾಯಃ ಪ್ರಿಯಾರ್ಹೋ ಽ ರ್ಹಃ ಪ್ರಿಯಕೃ ತ್ಪ್ರೀತಿವರ್ಧನಃ ‖೯೩‖

(೮೭೧ನೇ ನಾಮವು) ಸತ್ವವಾನ್,

ಓಮ್‖ ಸತ್ವವತೇನಮಃ.

(ಶಂ‖ ಮ) ಶೌರ್ಯ ವೀರ್ಯಾದಿಗಳಾದ ಸತ್ವ (ಬಲ) ವುಳ್ಳವನು. (ವಿ‖ ಭಾ) ಮೋಕ್ಷಕಾರಣವಾದ ಸತ್ವ ಗುಣಕ್ಕೆ ತಾನು ಅಧಿಷ್ಠಾತಾ ಆಗಿ

ಕುವುದರಿಂದ ಸತ್ವವುಳ್ಳವನು. "ಮಹಾನ್ಪ್ರಭುರ್ವೈ ಪುರುಷಸ್ಸತ್ವಸ್ಯೈಷ ಪ್ರವರ್ತಕಃ" (ಶ್ವೇ ಉ॥ ೩॥ ೧೨) ಸತ್ವೇನಮುಚ್ಯತೇಜಂತು ಸ್ಸತ್ವಂ ನಾರಾಯಣಾತ್ಮಕಂ । ರಜಸಾಸತ್ವ ಯುಕ್ತೇನ ಭವೇಚ್ಛ್ರೀವಾನ್ಯಶೋಧಿಕಃ ॥ ತಚ್ಚಪೈತಾಮಹಂವೃತ್ತಂ ಸರ್ವಶಾಸ್ತ್ರೇಷುಪಠ್ಯತೇ । ಯದ್ರಜಸ್ತಮಸೋಪೇತಂ ಸೋಽಹಂನಾಸ್ತ್ಯತ್ರ ಸಂಶಯಃ ॥" ಇತ್ಯಾದಿಗಳಲ್ಲಿ ಸತ್ವವು ನಾರಾಯಣಾಧೀನವೆಂತಲೂ ಬ್ರಹ್ಮಾದಿಗಳು ರಜಸ್ತಮಸ್ಸುಳ್ಳವರೆಂತಲೂ, ಸತ್ವಾದಿ ತಾರತಮ್ಯದಿಂದ ಇತರರಿಗೆ ನ್ಯೂನಾಧಿಕ್ಯ ಉಂಟಾಗುವುದೆಂತಲೂ ಬೋಧಿತವಾಗುವುದು. ॥೮೭೧॥

## (೮೭೨ನೇ ನಾಮವು) ಸಾತ್ವಿಕಃ,

### ಓಮ್॥ ಸಾತ್ವಿಕಾಯನಮಃ

(ವಿ॥ ಭಾ) ಸಾತ್ವಿಕವಾದ ಧರ್ಮ ಜ್ಞಾನ ವೈರಾಗ್ಯ ಐಶ್ವರ್ಯ ರೂಪಫಲಾದಿ ಗುಣಗಳಿಗೆ ನಿಯಾಮಕನಾಗಿರುವ ಕಾರಣ ಸತ್ವಗುಣಕ್ಕೆ ಅರ್ಹನು. ॥೮೭೨॥

## (೮೭೩ನೇ ನಾಮವು) ಸತ್ಯಃ,

### ಓಮ್॥ ಸತ್ಯಾಯನಮಃ.

(ಶಂ॥ ಮ) ಸಜ್ಜನರಲ್ಲಿ ಸಾಧುವಾದವನು. (ವಿ॥ ಭಾ) ಸಾತ್ವಿಕಶಾಸ್ತ್ರಪ್ರತಿಪಾದ್ಯನಾಗಿರುವುದರಿಂದ ಯಥಾರ್ಥವಾದ ವೈಭವವುಳ್ಳವನು. ಅಥವಾ "ಸತ್ಯೇಪ್ರತಿಷ್ಠಿತಃ ಕೃಷ್ಣ ಸ್ಸತ್ಯಮಸ್ಮಿನ್ ಪ್ರತಿಷ್ಠಿತಂ । ಸತ್ತಾಸತ್ತೇಚಗೋವಿಂದ ಸ್ತಸ್ಮಾ 'ತ್ಸತ್ಯ' ಸ್ಸತಾಂಮತಃ" ಎಂಬೀ ಭಾರತ (ಉದ್ಯೋ॥ ೬೯॥ ೧೨॥ ೧೩) ವಚನಾನುಸಾರವಾಗಿ ಸತ್ಯದಲ್ಲಿ ಪ್ರತಿಷ್ಠಿತನೂ ಸತ್ಯಕ್ಕೆ ಪ್ರತಿಷ್ಠಾಪಕನೂ ಆಗಿರುವುದರಿಂದ ಸತ್ಯನೆನ್ನಲ್ಪಡುವನು. ॥೮೭೩॥

## (೮೭೪ನೇ ನಾಮವು) ಸತ್ಯಧರ್ಮಪರಾಯಣಃ,

### ಓಮ್॥ ಸತ್ಯಧರ್ಮಪರಾಯಣಾಯನಮಃ.

(ಶಂ॥ ಮ) ಕಂಡದ್ದನ್ನು ಹೇಳುವುದೆಂಬ ಸತ್ಯದಲ್ಲಿಯೂ ಚೋದನಾಲಕ್ಷಣ (ವಿಧಿರೂಪ) ವಾದ ಧರ್ಮದಲ್ಲಿಯೂ ಆಸಕ್ತಿಯುಳ್ಳವನು. (ವಿ॥ ಭಾ) ಸಾತ್ವಿಕವಾದ ಅಧಿಕಾರಿಯನ್ನೂ ಫಲವನ್ನೂ ಉಳ್ಳ ಧರ್ಮವು ನಿರುಪಾಧಿಕವಾಗಿ ತನಗೆ ಅತ್ಯಂತಪ್ರೀತಿಹೇತುವಾಗಿರುವುದರಿಂದ ‘ಸತ್ಯಧರ್ಮಪರಾಯಣಃ’ ಎನ್ನಲ್ಪಡುವನು. ‖೮೨೪‖

## (೮೨೫ನೇ ನಾಮವು) ಅಭಿಪ್ರಾಯಃ,
## ಓಮ್॥ ಅಭಿಪ್ರಾಯಾಯನಮಃ.

(ಶಂ॥ ಭಾ) ಧರ್ಮಾದಿ ಪುರುಷಾರ್ಥಾಪೇಕ್ಷಿಗಳಿಂದ ಅಪೇಕ್ಷಿಸಲ್ಪಡುವಂತವನು. ಅಥವಾ (ಶಂ॥ ಮ) ಪ್ರಳಯಕಾಲದಲ್ಲಿ ಸಮಸ್ತವೂ ತನ್ನಲ್ಲಿ ಲಯಿಸುವುದಕ್ಕೆ ಅಭಿಮುಖವಾಗಿ ಮಾಡಿಕೊಳ್ಳುವಂತವನು. (ವಿ॥ ಭಾ) ಸತ್ಯಧರ್ಮಗಳಲ್ಲಿ ಆಸಕ್ತಿಯುಳ್ಳ ಮಹಾತ್ಮರಿಂದ ಅಪೇಕ್ಷಿಸಲ್ಪಡುವಂತವನು. ‖೮೨೫‖

## (೮೨೬ನೇ ನಾಮವು) ಪ್ರಿಯಾರ್ಹಃ,
## ಓಮ್॥ ಪ್ರಿಯಾರ್ಹಾಯನಮಃ

(ಶಂ॥ ಮ) “ಯದ್ಯದಿಷ್ಟತಮಂಲೋಕೇ ಯಚ್ಚಾಸ್ಯದಯಿತಂ ಗೃಹೇ। ತತ್ತದ್ಗುಣವತೇದೇಯಂ ತದೇವಾಕ್ಷಯಮಿಚ್ಛತಾ” (ಶ್ರೀವಿಷ್ಣುಧ॥ ೫೫॥ ೩) ಎಂಬಂತೆ ಲೋಕದಲ್ಲಿ ಯಾವದು ಅತ್ಯಂತ ಪ್ರಿಯವಾದದ್ದೋ. ಗೃಹದಲ್ಲಿ ಪ್ರಿಯವಾದದ್ದುಯಾವದೋ ಅವೆಲ್ಲವನ್ನೂ ಅಕ್ಷಯವನ್ನಾಗಿ ಅಪೇಕ್ಷಿಸುವಂತವನು ಗುಣವತ್ತಾದ ಪಾತ್ರದಲ್ಲಿ ದಾನಮಾಡಬೇಕು ಎಂಬ ಸ್ಮೃತಿಪ್ರಮಾಣಾನುಸಾರವಾಗಿ ಇಷ್ಟವಾದ ವಸ್ತುವಿಗೆ ಅರ್ಹನಾಗಿರುವಂತವನು. (ವಿ॥ ಭಾ) ಈ ಪ್ರಕಾರವಾಗಿ ಪರಮಾತ್ಮನಿಗೆ ಶೇಷಭೂತರೆಂತಲೇ ದೃಢಚಿತ್ತರಾದವರನ್ನು ತಾನೆ ಅತ್ಯಂತವಾಗಿ ಪ್ರೀತಿಸುವಂತವನು. ಏಕಾಂತಭಕ್ತರಾದವರನ್ನು ಪರಮಾತ್ಮನು ತನಿಗೆ ತಾನೇ ಪ್ರೀತಿಸುವನು. ಅರ್ಥಕಾಮಪರರಾದವರನ್ನೂ ಆತ್ಮಪ್ರಾಪ್ತಿಕಾಮರಾದ ಕೇವಲರನ್ನೂ ಕೂಡ ಅವರು ತನ್ನನ್ನು ಪ್ರಾರ್ಥಿಸಿದರೆಂಬ

ನೆಸದಿಂದ (ತನ್ನ ಔದಾರ್ಯವು ಪ್ರಕಟವಾಗುವುದೆಂದು) ಪ್ರೀತಿಸುವನು. ‖೮೭೬‖

(೮೭೭ನೇ ನಾಮವು) ಅರ್ಹಃ,

ಓಮ್‖ ಅರ್ಹಾಯನಮಃ.

(ವಿ‖ ಭಾ) ಮತ್ತೊಂದನ್ನು ಅಪೇಕ್ಷಿಸದೆ ಬೆಗವದ್ದಾಸ್ಯವೇ ನವಿ ಗೆ ಉಚಿತವೆಂದು ಭಾವಿಸುವಂತವರಿಗೆ ತಾನು ಅರ್ಹನಾಗಿರುವಂತವನು. (ಮ) ಭಕ್ತರಿಗೆ ಪೂಜ್ಯನು. (ಶಂ‖ ಭಾ) ಪೂಜಾಸಾಧನಗಳಾದ ಸ್ವಾಗತ ಆಸನ ಪ್ರಶಂಸಾರ್ಘ್ಯ ಸ್ತುತಿ ನಮಸ್ಕಾರಾದಿಗಳಿಂದ ಪೂಜನೀಯನು. ‖೮೭೭‖

(೮೭೮ನೇ ನಾಮವು) ಪ್ರಿಯಕೃತ್,

ಓಮ್‖ ಪ್ರಿಯಕೃತೇನಮಃ

(ಶಂ‖ ಭಾ) ಪೂಜಾರ್ಹನಾಗಿರುವದು ಮಾತ್ರವಲ್ಲದೆ ಪೂಜಾದಿಗಳಿಂದ ಸಂತುಷ್ಟನಾಗಿ ಅವರಿಗೆ ಪ್ರಿಯವನ್ನು ಕೊಡತಕ್ಕವನು. (ವಿ‖ ಭಾ) ಪ್ರಯೋಜನಾಂತರಪರರಾದವರಿಗೂ ಕೂಡ ಅವರ ಅಪೇಕ್ಷಾನುಗುಣವಾದ ಫಲವನ್ನು ಕೊಟ್ಟು ತನ್ನಲ್ಲಿ ಪ್ರೀತಿವುಳ್ಳವರನ್ನಾಗಿ ಮಾಡುವಂತವನು.. ‖೮೭೮‖

(೮೭೯ನೇ ನಾಮವು) ಪ್ರೀತಿವರ್ಧನಃ,

ಓಮ್‖ ಪ್ರೀತಿವರ್ಧನಾಯನಮಃ.

(ವಿ‖ ಭಾ) ಅದರಂತೆ ಉತ್ತರೋತ್ತರವಾಗಿ ಅವರಿಗೆ ಗುಣಗಳನ್ನು ತೋರಿಸಿ ತನ್ನಲ್ಲಿ ಪ್ರೀತಿಯು ಅಭಿವೃದ್ಧಿಯಾಗುವಂತೆ ಮಾಡಿಕೊಳ್ಳುವಂತವನು. ‖೮೭೯‖

ಈ ರೀತಿಯಾಗಿ ಇಲ್ಲಿ ಪ್ರಕೃತಗಳಾದ ನಾಮಗಳಿಗೆ " ಪ್ರಕಾಶ ಲಾಘವ ಸುಖಸಂಪದಾಮೋಕ್ಷಸಾಧನಂ | ಸರ್ವಂಸಾಕ್ಷಾದಧಿಷ್ಠೇಯಂ ಯಸ್ಯಾಸಾ " ಸರ್ವವಾಕ್ " (೮೭೦) ಶ್ರುತಿಃ ‖ ವಿಜ್ಞಾನೈಶ್ವರ್ಯವೈರಾಗ್ಯ ಧರ್ಮರೂಪ ಫಲಂಸ್ವಯಂ | ನಿಯಮ್ಯಾರ್ಹತಿಸರ್ವಂಯ " ಸ್ವಾತ್ವಿಕಃ "

(೮೭೦) ಪರಿಕೀರ್ತಿತಃ ॥ ಯಥಾರ್ಥ ವೈಭವ “ ಸತ್ಯ ” (೮೭೩) ಸ್ಸರ್ವ ಶಾಸ್ತ್ರೇಷು ವಿಶ್ರುತಃ । ಉಪಾಧಿರಹಿತಸ್ಸರ್ವ ಮುಖ್ಯೋ ಧರ್ಮಃ ಪರಾಯಣಂ ॥ ಪರಮಪ್ರೀಣನಂ ಯಸ್ಯ “ ಸತ್ಯಧರ್ಮಪರಾಯಣಃ ” (೮೭೪) ॥ ಸ್ವಚ್ಛೇನ ಧರ್ಮನಿಷ್ಠೇನ ಸತ್ಯೇನಚ ವಿಶೇಷತಃ । ನಿರುಪಾಧಿಕೋದ್ದೇಶ್ಯ ತ್ವಾದಮಿತಃ ಪ್ರೇಯತೇಚಯಃ ॥ “ ಅಭಿಪ್ರಾಯ ” (೮೭೫) ಸ್ಸವಿಜ್ಞೇಯೋ ವಸ್ತ್ವರ್ಥೋ ಮನುರುತ್ತಮಃ ॥ ಪದಮರ್ಥ್ಯ ಜ್ಞಾನಿನಂಯಃ “ ಪ್ರಿಯಾರ್ಹಃ ” (೮೭೬) ಪ್ರಿಯಮರ್ಹತಿ । ಅನನ್ಯೇಚಾಪ್ಭವತಾಂ ಪ್ರಶಂಸಾಂ ಯೋಗ್ಯಸ್ಸೋ “ ಅರ್ಹ ” (೮೭೭) ಇತಿಸ್ಮೃತಃ ॥ ಭಜತೋಸ್ಯನ್ಯ ಭಕ್ತಾನ್ಯ ಸ್ಸ್ವಪ್ರಿಯಾನ್ಯ್ಕರುತೇಸದಾ । ಛಂದಾನುವರ್ತನೇನೇತಿ “ ಪ್ರಿಯಕೃತ್ ” (೮೭೮) ಸ್ಸಚಕಥ್ಯತೇ ॥ ಗುಣಾವಿಷ್ಕರಣಾನ್ನಿತ್ಯ ಮುತ್ತರೋತ್ತರತೋಽಧಿಕಂ । ಯಸ್ತುಪ್ರೀತಿಂ ವರ್ಧಯತಿ “ ಪ್ರೀತಿವರ್ಧನ ” (೮೭೯) ಈರಿತಃ ॥ ” ಎಂಬಂತೆ ವಿವೃತಿಯನ್ನು ಕಾಣಬಹುದು.

ಮೂ॥ ವಿಹಾಯಸಗತಿ ರ್ಜ್ಯೋತಿ ಸ್ಸುರುಚಿ ರ್ಹುತಭುಗ್ವಿಭುಃ । ರವಿರ್ವಿರೋಚನ ಸ್ಸೂರ್ಯ ಸ್ಸವಿತಾ ರವಿಲೋಚನಃ ॥೯೪॥

(೮೮೦ನೇ ನಾಮವು) ವಿಹಾಯಸಗತಿಃ,

ಓಮ್॥ ವಿಹಾಯಸಗತಯೇನಮಃ.

(ಶಂ॥ ಭಾ) ಆಕಾಶವನ್ನೇ ಆಶ್ರಯವನ್ನಾಗಿ ವುಳ್ಳವನು. ವಿಷ್ಣುಪದವೆಂತಲಾದರೂ ಆದಿತ್ಯನೆಂತಲಾದರೂ ಹೇಳಬಹುದು. (ವಿ॥ ಭಾ) ಈ ರೀತಿಯಾಗಿ ಪರಮಭಕ್ತಿನಿಷ್ಠರಾದ ಮಹನೀಯರಿಗೆ ಗತಿಯಾಗಿ ಪರಮಾಕಾಶವನ್ನು ಕೊಡುವಂತವನು, ॥೮೮೦॥

(೮೮೧ನೇ ನಾಮವು) ಜ್ಯೋತಿಃ,

ಓಮ್॥ ಜ್ಯೋತಿಷೇನಮಃ.

(ಶಂ|| ಭಾ) ಸ್ವಯಂಪ್ರಕಾಶನು (ವಿ|| ಭಾ) ಅನಂತರದಲ್ಲಿ ಅವರು ಪರಮಪದವನ್ನೇರುವುದಕ್ಕೆ ಸೋಪಾನಭೂತವಾದ ಅರ್ಚಿರಾದಿಗತಿಯು ಹೇಳಲ್ಪಡುವುದು. ಬ್ರಹ್ಮನಿಷ್ಠನಾದ ಅಧಿಕಾರಿಯು ಉಪಾಸನದಿಂದ ಪ್ರೀತನಾದ ಪರಮಾತ್ಮನು ಅವರನ್ನು ಪರಮಪದಕ್ಕೆ ಸೇರಿಸುವುದಕ್ಕಾಗಿ ಅರ್ಚಿಸ್ಸೇ ಮೊದಲಾದ ಕೆಲವು ದೇವತೆಗಳನ್ನು ನಿಯಮಿಸುವನು. ಆ ಪಂಕ್ತಿಯಲ್ಲಿ ಮೊದಲನೇಯವನಾದ ಅರ್ಚಿಸ್ಸೆಂಬ ದೇವತೆಯನ್ನು ಸೇರಿಸುವಂತವನು (ಮ) ಪ್ರಕಾಶರೂಪನು ಅಥವಾ ಜ್ಞಾನರೂಪನು. ||೮೮೧||

## (೮೮೨ನೇ ನಾಮವು) ಸುರುಚಿಃ,

## ಓಮ್|| ಸುರುಚಯೇನಮಃ

(ಶಂ|| ಭಾ) ಮಂಗಳಕರವಾದ ಕಾಂತಿ ಅಥವಾ (ಶಂ) ಇಚ್ಛೆಯುಳ್ಳವನು. (ವಿ|| ಭಾ) ಪ್ರಕಾಶವುಳ್ಳ ಹಗಲಿಗೆ ಅಭಿಮಾನಿ ದೇವತೆಯನ್ನು ನಿಯಮಿಸುವಂತವನು. ಹಿಂದಿನ ನಾಮದಲ್ಲಿ "ತೇರ್ಚಿಷಮಭಿ ಸಂಭವಂತಿ" ಎಂಬ ಶ್ರುತಿಯನ್ನೂ ಈ ನಾಮಕ್ಕೆ "ಅರ್ಚಿಷೋಽಹಃ" ಎಂಬ ಅರ್ಚಿರಾದಿಗತಿ ಪ್ರತಿಪಾದಕವಾದ ಛಾಂದೋಗ್ಯಶ್ರುತಿಯನ್ನೂ ಅನುಸಂಧಿಸಬೇಕು.|| ೮೮೨||

## (೮೮೩ನೇ ನಾಮವು) ಹುತಭುಗ್ವಿಭುಃ,

## ಓಮ್|| ಹುತಭುಗ್ವಿಭವೇನಮಃ

(ವಿ|| ಭಾ) ಅಮೃತದಂತೆ ಪರಿಣಮಿಸುವಂತಹ, ಅಗ್ನಿಯಲ್ಲಿ ಹೋಮಮಾಡಲ್ಪಟ್ಟ ದ್ರವ್ಯಗಳನ್ನು ಭುಜಿಸುವ ಚಂದ್ರನಿಗೆ ಪೂರ್ತಿಯನ್ನುಂಟುಮಾಡುವ ಶುಕ್ಲಪಕ್ಷಾಭಿಮಾನಿಯು. "ಅಹ್ನ ಆಪೂರ್ಯಮಾಣಪಕ್ಷಃ" ಎಂಬ (ಛಾಂದೋ) ಶ್ರುತಿಯನ್ನು ನೋಡಿ. (ಶಂ|| ಮ) ಹುತಭುಕ್– ವಿಭುಃ, ಎಂಬದಾಗಿ ಯರಡು ನಾಮಗಳು. ಸಮಸ್ತ ದೇವತೆಗಳನ್ನು ದ್ದೇಶಿಸಿ ಮಾಡಲ್ಪಡುವ ಕರ್ಮಗಳಲ್ಲಿ ಹೋಮಮಾಡಲ್ಪಡುವ ದ್ರವ್ಯಗಳನ್ನು ಅನುಭವಿಸುವಂತವನೆಂದು ಮೊದಲಿನ ನಾಮಕ್ಕೆ ಅರ್ಥವು. ವಿಭುಃ–

(ಶಂ) ಸರ್ವಪ್ರದೇಶ ವ್ಯಾಪಿಯು. ಅಥವಾ (ಶಂ॥ ಮ) ತ್ರಿಲೋಕಕ್ಕೂ ಪ್ರಭುವು. ॥೮೮೩॥

## (೮೮೪ನೇ ನಾಮವು) ರವಿಃ,

### ಓಮ್॥ ರವಯೇನಮಃ.

(ಶಂ॥ ಮ) "ರಸಾನಾಂಚತಥಾಽ ದಾನಾದ್ರವಿ ರಿತ್ಯಭಿಧೀಯತೇ" ಎಂಬ ವಿಷ್ಣುಧರ್ಮ ಪ್ರಮಾಣವನ್ನನುಸರಿಸಿ ರಸಗಳನ್ನು ಸ್ವೀಕರಿಸುವಂತಹ ಆದಿತ್ಯಾತ್ಮಕನು. (ವಿ॥ ಭಾ) (ಉತ್ಥಾನೈಕಾದಶೀ ಮೊದಲು ನಿದ್ರೆಯನ್ನು ಬಿಟ್ಟು ಯೇಳುವಕಾಲವು ಉತ್ತರಾಯಣಕ್ಕೆ ಸಮೀಪವಾಗಿರುವುದರಿಂದ ಈ ಅರ್ಥವು ಹೇಳಲ್ಪಡುವುದು.) ನಿದ್ರೆಯನ್ನು ಬಿಟ್ಟು ಯೇಳುವಕಾಲವಾದುದರಿಂದ ಉತ್ತರಾಯಣದಲ್ಲಿ ಕೊಂಡಾಡಲ್ಪಡುವಂತವನು. ಎಂದರೆ :—ಷಣ್ಮಾಸಾತ್ಮಕವಾದ ಉತ್ತರಾಯಣಾಭಿಮಾನಿ ದೇವತೆಯನ್ನು ಹೇಳಿತೆಂದರ್ಥವು. ರೂಯತೆ–ಪ್ರಶಸ್ಯತಇತಿರವಿಃ "ಅಪೂರ್ಯಮಾಣಪಕ್ಷಾದ್ಯಾನ್ ಷಡುಡಜ್ಞೇತಿಮಾಸಾನ್" ಎಂಬದಾಗಿ ಶ್ರುತಿ. ॥೮೮೪॥

## (೮೮೫ನೇ ನಾಮವು) ವಿರೋಚನಃ,

### ಓಮ್॥ ವಿರೋಚನಾಯನಮಃ.

(ಶಂ॥ ಭಾ) ನಾನಾವಿಧವಾಗಿ (ಶಂ॥ ಮ) ಪ್ರಕಾಶಿಸುವಂತವನು. (ವಿ॥ ಭಾ) ಅನಂತರದಲ್ಲಿ ಅಯನಗಳ ಮಾರ್ಗವಾಗಿ ಆದಿತ್ಯನಲ್ಲಿ ಸೇರಿರುವಂತಹ ಸಂವತ್ಸರಾಭಿಮಾನಿಯಾದವನು. ಆದಿತ್ಯಂ ವಿರೋಚಯತೀತಿ ವಿರೋಚನಃ ಎಂದು ವ್ಯುತ್ಪತ್ತಿಯು. "ಮಾಸೇಭ್ಯಸ್ಸಂವತ್ಸರಂ" ಎಂಬದಾಗಿ ಶ್ರುತಿ. ॥೮೮೫॥

## (೮೮೬ನೇ ನಾಮವು) ಸೂರ್ಯಃ,

### ಓಮ್॥ ಸೂರ್ಯಾಯನಮಃ

ಭಾ) ಸಮಸ್ತವನ್ನೂ ಹುಟ್ಟಿಸುವಂತವನು. (ಮ) ಲೋಕರನ್ನು ಕರ್ಮಗಳಲ್ಲಿ ಪ್ರೇರಿಸುವಂತವನು. ಅಥವಾ ಹಗಲಲ್ಲಿ ಸಂಚರಿ

ಸುವಂತವನು, (ವಿ|| ಭಾ) ವಾಯುಸ್ಸದಾಸರತ್ಯ ಸ್ಮಾದಿತಿ ಸೂರ್ಯಃ— ಸರ್ವತ್ರಗಮನವುಳ್ಳ ವಾಯು ಲೋಕಾಭಿಮಾನಿಯು. ಇಲ್ಲಿ "ಮಾಸೇಭ್ಯಸ್ಸಂವತ್ಸರಂ ಸಂವತ್ಸರಾದಾದಿತ್ಯಂ" ಎಂಬದಾಗಿ ಹೇಳಿದ್ದರೂ ವಾಯುಲೋಕಾಭಿಮಾನಿಯನ್ನು ಹೇಳುವದು ಅಪ್ರಕೃತವೆಂದು ಸಂದೇಹಿಸದೆ "ವಾಯುಮಬ್ದಾದ ವಿಶೇಷ ವಿಶೇಷಾಭ್ಯಾಂ" ಎಂಬ ಸೂತ್ರಾನುಸಾರವಾಗಿ ಸಂವತ್ಸರಕ್ಕೂ ಆದಿತ್ಯನಿಗೂ ಮಧ್ಯದಲ್ಲಿ ವಾಯುವನ್ನು ಸೇರಿಸಿಕೊಳ್ಳಬೇಕು. ಸಂವತ್ಸರವು ವಾಯುದ್ವಾರಾ ಸೂರ್ಯಪ್ರಾಪಕವೆಂದು ಶ್ರುತ್ಯರ್ಥವು. ||೮೮೬||

## (೮೮೭ನೇ ನಾಮವು) ಸವಿತಾ,

## ಓಮ್|| ಸವಿತ್ರೇನಮಃ.

(ಶಂ|| ಮ) "ಪ್ರಜಾನಾಂಚ ಪ್ರಸವನಾತ್ಸವಿತೇತ್ಯಭಿಧೀಯತೇ" ಎಂಬಂತೆ ಪ್ರಜೆಗಳನ್ನು ಪ್ರಸವಿಸುವಂತವನು. (ವಿ|| ಭಾ) ಸೂರ್ಯನು. "ಸಂವತ್ಸರಾದಾದಿತ್ಯಂ" ಇತಿ ಶ್ರುತಿಃ. ||೮೮೭||

## (೮೮೮ನೇ ನಾಮವು) ರವಿಲೋಚನಃ,

## ಓಮ್|| ರವಿಲೋಚನಾಯನಮಃ

(ಶಂ|| ಮ) "ಚಕ್ಷುಷೀಚಂದ್ರಸೂರ್ಯೌ" ಎಂಬ ಶ್ರುತ್ಯನುಸಾರವಾಗಿ ಸೂರ್ಯನನ್ನೇ ಕಣ್ಣಾಗಿ ಉಳ್ಳವನು. (ವಿ|| ಭಾ) ಸೂರ್ಯ ಕಿರಣದ್ವಾರಾ ಚಂದ್ರನು ಮಿಂಚು ವರುಣನೆಂಬ ದೇವತೆಗಳನ್ನು ತೋರಿಸುವಂತವನು. "ಆದಿತ್ಯಾಚ್ಚಂದ್ರಮಸಂ ಚಂದ್ರಮಸೋ ವಿದ್ಯುತಂ || ಸವರುಣಲೋಕಂ" ಎಂಬದಾಗಿ ಶ್ರುತಿ. ||೮೮೮||

ಈ ೯೪ನೇ ಶ್ಲೋಕದಲ್ಲಿ ಪ್ರಕೃತಗಳಾದ ನಾಮಗಳಿಗೆ "ನಿರೂಢಭಕ್ತಿಯುಕ್ತೇಹಿನಿತ್ಯಂ ಯಸ್ಮಾತ್ತುಗಮ್ಯತೇ|| ವಿಹಾಯ ಸಂಪದಂ ವ್ಯೋಮ "ವಿಹಾಯಸಗತಿಸ್ತು" (೮೮೦) ಸಃ || ಸ್ವಪ್ರಾಪ್ತೇಸ್ಸಾಧನತ್ವಾದ್ವ ಸ್ಸ್ವಯಂ ನಿತ್ಯಂ ವಿಶೇಷತಃ | ಅರ್ಚಿರಾದಿಗತೇ "ರ್ಜ್ಯೋತಿಃ" (೮೮೧) ಪ್ರಥಮಂ ಪರ್ವಕಥ್ಯತೇ | ಅಹಶ್ಶುಭಂ ಯಸ್ಯಸವೈ "ಸುರು

ಚಿಃ" (೮೮೨) ಪರಿಕೀರ್ತಿತಃ । ಸುಧಾಪರೀಕ್ಷಾಮೃತಂ ಭುಂಜಾನ ಶ್ಚಂದ್ರಮಾಸ್ತಥಾ । ವಿಭುಃ ಪ್ರೂರ್ಣೋ ಭವೇದ್ಯಸ್ಮಿನ್ ಸರ್ವಸ್ಯ "ದ್ಯುಧ ಭುಗ್ವಿಭುಃ" (೮೮೩) ॥ ಯಶ್ಚೋತ್ತರಾಯಣದ್ವಾರಾ ರೂಯತೇ ಉತ್ರಪ್ರಕಾಶ್ಯತೇ । ಸರ್ವ "ರವಿ" (೮೮೪) ಸ್ಸಮಾಖ್ಯಾತಃ ಪ್ರಾಶಸ್ತ್ಯ ಫಲದೋಮನುಃ ॥ ಅಯನದ್ವಯಗತ್ಯಾಽರ್ಕಂ ಯೋವಿರೋಚಯತಿಸ್ವಯಂ । "ವಿರೋಚನ" (೮೮೫) ಇತಿಖ್ಯಾತಃ ಪ್ರಕಾಶಫಲದೋಮನುಃ॥ ವಾಯುಸ್ಸರತಿಯಸ್ಮಾದ್ಧಿ ತಸ್ಮಾತ್ "ತ್ಸೂರ್ಯ" (೮೮೬) ಷಷ್ಡಕ್ಷರಃ॥ ವೃಷ್ಟಿಸಸ್ಯಾದಿಕಂಸೂತೆ "ಸವಿತೇ" (೮೮೭) ತಿರವೇರ್ಮುಖಾತ್ । ಸೂರ್ಯಸ್ಯ ರಶ್ಮಿಸಂಬಂಧಾದ್ವಿದ್ಯುದ್ವರುಣ ಚಂದ್ರಕಾನ್ । ನಿರಂತರಂ ಲೋಚಯತಿ "ರವಿಲೋಚನ" (೮೮೮) ಈರಿತಃ ॥" ಎಂಬಂತೆ ವಿವೃತಿಯನ್ನು ಕಾಣಬಹುದು.

ಮೂ॥ ಅನಂತ ಹುತಭುಗ್ಭೋಕ್ತಾ ಸುಖದೋ
ನೈಕದೋ ಽಗ್ರಜಃ । ಅನಿರ್ವಿಣ್ಣ ಸ್ಸದಾಮರ್ಷೀ
ಲೋಕಾಧಿಷ್ಠಾನ ಮದ್ಭುತಃ ॥೯೫॥

(೮೮೯ನೇ ನಾಮವು) ಅನಂತಹುತಭುಗ್ಭೋಕ್ತಾ,

ಓಮ್॥ ಅನಂತಹುತಭುಗ್ಭೋಕ್ತ್ರೇನಮಃ.

(ವಿ॥ ಭಾ) ಯಜ್ಞಾದಿಗಳಲ್ಲಿ ಹೋಮಮಾಡಲ್ಪಟ್ಟವುಗಳನ್ನು ಭುಜಿಸುವಂತವನು ಇಂದ್ರನು, ಸರ್ವ ಪ್ರಜಾಪರಿಪಾಲಕನು ಪ್ರಜಾಪತಿಯು, ಇಂತಹ ಅತ್ಯಂತ ಮಹಿಮಾಶಾಲಿಗಳಾದ ಇಂದ್ರ ಪ್ರಜಾಪತಿಗಳನ್ನು ಸೇರಿಸುವಂತವನು. "ಸ ಇಂದ್ರಲೋಕಂ ಸಪ್ರಜಾಪತಿಲೋಕಂ" ಎಂಬದಾಗಿ ಶ್ರುತಿ. (ಕೌಷೀ॥ ೧॥ ೩) (ಶಂ॥ ಮ) ಅನಂತಃ, ಹುತಭುಕ್, ಭೋಕ್ತಾ, ಎಂಬದಾಗಿ ಪದತ್ರಯವು. (ಶಂ) ಅನಂತಃ – ನಿತ್ಯನೂ ಸರ್ವಗತನೂ ಆದಕಾರಣ ದೇಶಕಾಲವಸ್ತು ಪರಿಚ್ಛೇದರಹಿತನು, ಶೇಷ ರೂಪನಂತಲೂ ಹೇಳಬಹುದು. (ಮ) ನಾಶವಿಲ್ಲದನು. ಹುತಭುಕ್– (ಶಂ॥ ಮ) ಹೋಮಮಾಡಲ್ಪಟ್ಟವುಗಳನ್ನು ಭುಜಿಸುವಂತವನು. ಭೋ

ಕ್ತಾ-ಅಚೇತನವೂ ಭೋಗ್ಯವೂ ಆದ ಪ್ರಕೃತಿಯನ್ನು ಅನುಭವಿಸುವಂತವನು. ॥೮೮೯॥

## (೮೯೦ನೇ ನಾಮವು) ಸುಖದಃ,

## ಓಮ್॥ ಸುಖದಾಯನಮಃ.

(ಶಂ॥ ಭಾ) ಭಕ್ತರಿಗೆ ಮೋಕ್ಷಸುಖವನ್ನು ಕೊಡುವಂತವನು. ಅಥವಾ ಅಸುಖದಃ-ಭಕ್ತರ ಅಸುಖವನ್ನು ಖಂಡಿಸುವಂತವನು. (ವಿ॥ಭಾ) ಅಮಾನವಕರಸ್ಪರ್ಶವನ್ನುಂಟುಮಾಡಿಸಿ ಸಂಸಾರವನ್ನು ಸವಾಸನವಾಗಿ ಬಿಡಿಸಿ ತನ್ನನ್ನು ಸೇರುವುದೆಂಬ ಸುಖವನ್ನು ಕೊಡುವಂತವನು. ಇದು ತಾನೆ " ತತ್ಪುರುಷೋಽಮಾನವಸ್ಸಏನಾನ್ ಬ್ರಹ್ಮಗಮಯತಿ '' ಎಂಬ (೪॥ ೧೦॥ ೫) ಛಾಂದೋಗ್ಯ ಶ್ರುತ್ಯನುಸಾರವಾದ ಕ್ರಮವು. ॥೮೯೦॥

## (೮೯೧ನೇ ನಾಮವು) ನೈಕದಃ,

## ಓಮ್॥ ನೈಕದಾಯನಮಃ

(ವಿ॥ ಭಾ) " ತಂಪಂಚಶತಾನ್ಯಪ್ಸರಸಾಂ ಪ್ರತಿಧಾವಂತಿಶತಂ ಮಾಲಾಹಸ್ತಾ ಶ್ಶತಮಂಜನ ಹಸ್ತಾಶ್ಶತಂ ಚೂರ್ಣಹಸ್ತಾಶ್ಶತಂವಾಸೋಹಸ್ತಾಶ್ಶತಂ ಭೂಷಣಹಸ್ತಾಃ '' ಎಂಬ ಶ್ರುತ್ಯುಕ್ತ ಕ್ರಮದಿಂದ ಅನೇಕವಾದ ದಿವ್ಯಾಪ್ಸರಸ್ಸತ್ಕಾರವನ್ನುಂಟುಮಾಡುವಂತವನು.

(ಇಲ್ಲಿ ಮುಮುಕ್ಷುವಾದವನನ್ನು ಮೂರ್ಧನ್ಯನಾಡೀ ಎಂಬ ಸುಷುಮ್ನಾನಾಡೀ ದ್ವಾರಾ ಬ್ರಹ್ಮಪುರವೆನ್ನಲ್ಪಡುವ ಸ್ಥೂಲ ಶರೀರದಿಂದ ವತ್ಸಲನಾದ ಹೃದಯಾಂತರ್ಯಾಮಿಯು ಹೊರಪಡಿಸಿ ಅನಂತರದಲ್ಲಿ ದೇವಯಾನಮಾರ್ಗವಾಗಿ ಮಾರ್ಗಸ್ಥನನ್ನಾಗಿ ಮಾಡಿ ತನ್ನ ಆಜ್ಞಾಧರರಾದ ಆತಿವಾಹಿಕರೆಂಬ ಅರ್ಚಿರಾದಿಮಾರ್ಗದಲ್ಲಿರುವ ದೇವತಾ ಸತ್ಕಾರವನ್ನುಂಟುಮಾಡಿಸಿ ಎಂಪರೆ :—ಅರ್ಚಿಸು - ಅಹಸ್ಸು - ಪೂರ್ವಪಕ್ಷ - ಉತ್ತರಾಯಣ — ಸಂವತ್ಸರ – ವಾಯು – ಆದಿತ್ಯ - ಚಂದ್ರ - ವೈದ್ಯುತ - ಅಮಾನವರೆಂಬ ಇವರಿಗೆ ಸಹಕಾರಿಗಳಾದ ವರುಣ ಇಂದ್ರ ಪ್ರಜಾಪತಿಗಳೆಂಬ ದೇವತೆಗಳಿರುವ ಸ್ಥಾನಗಳಲ್ಲಿ ಭಗವಚ್ಛಾಸ್ತ್ರದಲ್ಲಿ ಪ್ರಸಿದ್ಧವಾಗಿ ಹೇಳಲ್ಪಟ್ಟ ಭೋಗಗಳನ್ನನುಭವಿಸುವಂತೆ ಮಾಡಿ ದಿವ್ಯವಾದ ದೇಶ ವಿಶೇಷವನ್ನು ಸೇರಿಸುವಾಗ ಕರ್ಮಕೃತವಾದ ದೇಹವು ನಾಶವಾಗುವುದು. ಅನಂತರದಲ್ಲಿ ಗತಿಮಾತ್ರಕ್ಕಾಗಿ ಅನುಸರಿಸಿಬರುವ ಸೂಕ್ಷ್ಮ ಶರೀರವನ್ನು ಕೂಡ ನಾಶಪಡಿಸಿ

ವಿರಜಾನದಿಯನ್ನು ದಾಟುವಂತೆ ಮಾಡುವನು ಅನಂತರದಲ್ಲಿ ಅಪ್ರಾಕೃತವಾದ ಶರೀರ ವನ್ನು ಕೊಟ್ಟು ಐರಮ್ಮದೀಯ ವೆನ್ನಲ್ಪಡುವ ದಿವ್ಯ ಸರಸ್ಸನ್ನು ಸೇರಿಸಿ ತದನಂತಸ ಸೋಮಸವನವೆನ್ನುವ ಅಸ್ವತ್ಥವೃಕ್ಷದ ಅಡಿಯಲ್ಲಿ ಇಡುವನು ಅನಂತರ ೫೦೦ ದಿವ್ಯಾ ಪ್ಸರಸ್ಸುಗಳು ಬರುವರು. ಅವರಲ್ಲಿ ನೂರಪ್ಸರಸ್ಸುಗಳು ಮಾಲಿಕೆಯನ್ನು ಕೈಯಲ್ಲುಳ್ಳ ವರಾಗಿರುವರು. ಹೀಗೆಯೇ ಅಂಜನಚೂರ್ಣ ವಾಸೋ ಭೂಷಣಗಳನ್ನು ಧರಿಸಿ ಬರುವ ಅಪ್ಸರಸ್ಸುಗಳಿಂದ ಬ್ರಹ್ಮಾಲಂಕಾರದಿಂದ ಅಲಂಕರಿಸಲ್ಪಡುವನು ಅನಂತರ ಬ್ರಹ್ಮಗಂ ಧರಸತೇಜಃ ಪ್ರವೇಶವು ಅನಂತರ ಗೋಪುರಪ್ರವೇಶವು, ಬಳಿಕ ಇಂದ್ರ ಪ್ರಜಾಪತಿಗ ಳೆಂಬ ದ್ವಾರಪಾಲರ ಸಮೀಪಪ್ರಾಪ್ತಿಯು, ಅನಂತರದಲ್ಲಿ ಅಪ್ರಾಕೃತಗಳಾದ ರಾಜೋಪ ಚಾರಗಳು, ಬಳಿಕ ಆನಂದಮಯವಾದ ದಿವ್ಯಮಂಟಪ ಪ್ರವೇಶವು, ಅನಂತರ ಬ್ರಹ್ಮ ಪ್ರಾಪ್ತಿಯೇ ಮೊದಲಾದ ಪರ್ಯಂಕ ವಿದ್ಯೋಕ್ತ ವಾದ ಕ್ರಮವೆಲ್ಲವೂ ಈ ಮುಕ್ತ ನಿಗುಂ ಟಾಗುವ ಈ ಅಂಶವೆಲ್ಲವೂ ' ನೈಕದಃ ' ಎಂಬಿದೇ ಮೊದಲಾದ ನಾಮಗಳಿಂದ ಸೂಚಿಸ ಲ್ಪಡುವವು.)

(ಶಂ॥ ಭಾ) ನೈಕಜಃ–ಧರ್ಮರಕ್ಷಣಾರ್ಥವಾಗಿ ಪುನಃ ಪುನಃ ಅವತಾ ರಮಾಡುವಂತವನು, (ಮ) ನೈಕಜಃ – ಒಂದು ಪ್ರಯೋಜನವನ್ನು ದ್ದೇಶಿಸಿ ಅವತರಿಸದೇ ಅನೇಕೋದ್ದೇಶ್ಯದಿಂದ ಅವತರಿಸುವಂತವನು. ॥೪೯೧॥

## (೪೯೨ನೇ ನಾಮವು) ಅಗ್ರಜಃ,

### ಓಮ್॥ ಅಗ್ರಜಾಯನಮಃ.

(ಶಂ। ಭಾ) " ಹಿರಣ್ಯಗರ್ಭ ಸ್ಸಮವರ್ತತಾಗ್ರೇ " ಎಂಬಂತೆ ಹಿರ ಣ್ಯಾಗರ್ಭರೂಪಿಯಾಗಿ ಮೊದಲು ಹುಟ್ಟುವಂತವನು. (ಮ) ಲೋಕಸೃ ಷ್ಟಿಯನ್ನು ಮಾಡಲಪೇಕ್ಷಿಸಿ ಮೊದಲು ಪುರುಷಾವತಾರವನ್ನು ಮಾಡಿದ ವನು. (ವಿ॥ ಭಾ) ಇಂತಹ ಅರ್ಚಿರಾದಿಗತಿಯಿಂದ ತನ್ನ ಸಾಮೀಪ್ಯವನ್ನು ಹೊಂದಿದ ಮುಕ್ತರಮುಂದೆ ಸರ್ವೈಶ್ವರ್ಯ ರೂಪಿಣಿಯಾದ ಶ್ರೀದೇವಿಯೊ ಡನೆ ಕೂಡಿ " ಸಆಗಚ್ಛತ್ಯ ಮಿತೌಜಸಂಪರ್ಯಂಕಂ ॥ ಉಪಶ್ರೀರುಪಬ್ರಂ ಹಣಂತಸ್ಮಿನ್ ಬ್ರಹ್ಮಾಸ್ತೇತಮಿತ್ಥಂವಿತ್ಪಾದೇ ನೈವಾಗ್ರ ಆರೋಹತಿ ತಂಬ್ರಹ್ಮಾಹಕೋಸೀತಿ " (ಕೌಷೀ॥ ೧॥ ೫) ಇತ್ಯಾದಿ ಪರ್ಯಂಕ ವಿ ದ್ಯೋಕ್ತ ಕ್ರಮದಿಂದ ಅತ್ಯಂತ ಭೋಗ್ಯಭೂತನಾಗಿ ಮೊದಲು ಸೇವೆ ಯನ್ನು ತರುವಂತವನು. ॥೪೯೨॥

## (೮೯೩ನೇ ನಾಮವು) ಅನಿರ್ವಿಣ್ಣಃ,
### ಓಮ್|| ಅನಿರ್ವಿಣ್ಣಾಯನಮಃ.

(ಶಂ|| ಭಾ) ಅವಾಪ್ತ ಸಮಸ್ತಕಾಮನಾದ ಕಾರಣ ವ್ಯಸನವಿಲ್ಲದ ನಿತ್ಯ ತೃಪ್ತನು (ಮ) ಸದಾ ಸಂತುಷ್ಟನು. (ವಿ|| ಭಾ) ಈರೀತಿಯಾಗಿ ಆಶ್ರಿತರನ್ನು ಮಹತ್ತಾದ ಸಂಸಾರವೆಂಬ ಹಳ್ಳದಿಂದ ಉದ್ಧರಿಸಿ ತನ್ನ ಪಾದಾರವಿಂದವನ್ನು ಹೊಂದಿಸಿ ಅವರನ್ನು ಸಾಂಸಾರಿಕ ವ್ಯಸನಗಳಿಂದ ವಿಮುಕ್ತರನ್ನಾಗಿ ಕಾಣುವುದರಿಂದ ತಾನೂ ದುಃಖವಿಮುಕ್ತನಾಗುವಂತವನು. "ಕೃತಕೃತ್ಯಸ್ತದಾದಾಸೌ ವಿಜ್ವರಃ ಪ್ರಮುಮೋದ" (ಶ್ರೀರಾ|| ಬಾ) ಎಂಬ ಪ್ರಮಾಣವನ್ನು ಅನುಸಂಧಿಸಬೇಕು. ||೮೯೩||

## (೮೯೪ನೇ ನಾಮವು) ಸದಾಮರ್ಷೀ,
### ಓಮ್|| ಸದಾಮರ್ಷಿಣೇನಮಃ.

(ಶಂ|| ಮ) ಸದಾ ಸಾಧುಗಳನ್ನು ಅಭಿಮುಖವಾಗಿ ಕಂಡು ಸಹಿಸುವಂತವನು. (ವಿ|| ಭಾ) ಅದುಮೊದಲಾಗಿ ಸರ್ವಕಾಲದಲ್ಲಿಯೂ ಅವರಿಂದ ಮಾಡಲ್ಪಟ್ಟ ಕೈಂಕರ್ಯ ವರ್ಗವನ್ನು ಸಹಿಸುವಂತಹ ಸ್ವಭಾವವುಳ್ಳವನು. ||೮೯೪||

## (೮೯೫ನೇ ನಾಮವು) ಲೋಕಾಧಿಷ್ಠಾನಂ,
### ಓಮ್|| ಲೋಕಾಧಿಷ್ಠಾನಾಯನಮಃ.

(ಶಂ|| ಭಾ) ಬೇರೊಂದು ಆಧಾರವಿಲ್ಲದ ಬ್ರಹ್ಮವೇ ಲೋಕಕ್ಕೆಲ್ಲವೂ ಆಧಾರವಾಗಿರುವುದರಿಂದ 'ಲೋಕಾಧಿಷ್ಠಾನಂ' ಎನ್ನಲ್ಪಡುವನು. (ವಿ|| ಭಾ) ಮುಕ್ತಾತ್ಮರಿಗೆಲ್ಲಾ ಭೋಗ್ಯಭೂತಗಳಾದ ಲೋಕಗಳಿಗೆಲ್ಲವೂ ಆಧಾರಭೂತನಾಗಿರುವಂತವನು ||೮೯೫||

## (೮೯೬ನೇ ನಾಮವು) ಅದ್ಭುತಃ,
### ಓಮ್|| ಅದ್ಭುತಾಯನಮಃ.

(ಶಂ॥ ಮ) ಸ್ವರೂಪಶಕ್ತಿವ್ಯಾಪಾರಾದಿಗಳಿಂದ ಆಶ್ಚರ್ಯಭೂತನು. "ಶ್ರವಣಾಯಾಪಿ ಬಹುಭಿರ್ಯೋನಲಭ್ಯಃ ಶೃಣ್ವಂತೋಪಿ ಬಹವೋಯಂ ನವಿದುಃ । ಆಶ್ಚರ್ಯೋ ವಕ್ತಾಕುಶಲೋಸ್ಯಲಬ್ಧಾ ಆಶ್ಚರ್ಯೋ ಜ್ಞಾತಾಕುಶಲಾನುಶಿಷ್ಟಃ" (ಕಠೋ॥ ೧॥ ೨॥ ೭) "ಆಶ್ಚರ್ಯವತ್ಪಶ್ಯತಿ ಕಶ್ಚಿದೇನಂ" (ಗೀ॥ ೨॥ ೨೯) ಇತ್ಯಾದಿ ಪ್ರಮಾಣಗಳು ಈ ಅರ್ಥವನ್ನು ಬೋಧಿಸುವವು. (ವಿ॥ ಭಾ) ಅಂತಹ ಲೋಕಗಳಲ್ಲಿ ಸರ್ವಕಾಲದಲ್ಲಿಯೂ ಸರ್ವರಿಂದಲೂ ಸರ್ವಪ್ರಕಾರದಿಂದ ಅನುಭವಿಸಲ್ಪಟ್ಟರೂ ಅತ್ಯಂತಾಶ್ಚರ್ಯಭೂತನಾಗಿಯೇ ಇರುವಂತವನು. ॥೮೯೬॥

ಇಲ್ಲಿ ಪ್ರಕೃತಗಳಾದ (೮) ನಾಮಗಳಿಗೂ "ಮರುತ್ವಾನ್ಹುತಭುಗ್ಭೋಕ್ತಾ ಭುನಕ್ತೀತಿ ಪ್ರಜಾವಿಧಿಃ। ಸೋ "ಽನಂತಹುತಭುಗ್ಭೋಕ್ತಾ" (೮೮೯) ಮಹಾಂತೌ ಯಸ್ಯತೌಸದಾ ॥ ಅಪಾನವ ಕರಸ್ಪರ್ಶ್ಯದ್ಭವಮುತ್ಸರ್ಯ ಸತ್ವರಂ । ಸ್ವಪ್ರಾಪ್ತಿಲಕ್ಷಣಸುಖಂದದಾತಿ "ಸುಖದ" (೮೯೦) ಶ್ಚಸಃ ॥ ಬ್ರಹ್ಮಾಲಂಕಾರದಾಯಿನ್ಯೋ ಮುಕ್ತೇಭ್ಯಶ್ಚ ಪರೇಪದೇ । ದಿವ್ಯಾಶ್ಚಾಪ್ಸರಸೋಯಸ್ಯ "ನೈಕದ" (೮೯೧) ಸ್ಸಬಕಥ್ಯತೇ ॥ ಸ್ವಸ್ಯಾಗ್ರೇಪ್ರಾಪ್ತ ಮುಕ್ತಾನಾಂ ಸರ್ವೈಶ್ವರ್ಯ ಶ್ರಿಯಾಸಹ । ಯಥಾಪರ್ಯಂಕ ವಿದ್ಯಂಚ ಕರುಣಾ ವಿಷ್ಟಚೇತಸಾ ॥ ತದ್ಭೋಗ್ಯೋಜಾಯತೇಯಶ್ಚಸೋ "ಗ್ರಜಃ" (೮೯೨) ಪರಿಕೀರ್ತಿತಃ ॥ ಮಹತಾ ಪ್ರಣಿಧಾನೇನ ಹ್ಯತ್ಯಾರ್ಯ ಭವಗರ್ತತಃ । ಪ್ರಾಪಯ್ಯಚ ಮಾತ್ಮಾನಂ ಕೃತಕೃತ್ಯಶ್ಚವಿಜ್ವರಃ ॥ ಪಶ್ಯನ್ನಶೋಚ್ಯಮೇನಂಯು "ಅನಿರ್ವಿಣ್ಣ" (೮೯೩) ಸ್ಸಈರಿತಃ ॥ ಸರ್ವಕಾಲಂ ತತ್ಪ್ರಭೃತಿ ಕೃತಪ್ರತಿ ಕೃತಂಚಸಃ। ಮರ್ಷಿತುಂಶೀಲ ಮಸ್ಯೇತಿ 'ಸದಾಮರ್ಷೀ' (೮೯೪) ತಿಕೀರ್ತಿತಃ ॥ ಲೋಕಾನಾಂ ಮುಕ್ತಭೋಗ್ಯಾನಾಂ "ಲೋಕಾಧಿಷ್ಠಾನಂ । (೮೯೫) ಆಶ್ರಯಃ ॥ ತತ್ಸದಾಸರ್ವಥಾಸರ್ವೈ ರ್ಬುಭುಜ್ಯಮಾನೋಪ್ಯ ಪೂರ್ವವತ್ ॥ ಸ್ಮಯನೀಯೋ 'ಽದ್ಭುತಃ' (೮೯೬) ಪ್ರೋಕ್ತಃ" ಎಂಬಂತೆ ವಿವೃತಿಯನ್ನು ಕಾಣಬೇಕು.

ಮೂ॥ ಸನಾತ್ಸನಾತನತಮಃ ಕಪಿಲಃ ಕಪಿರವ್ಯಯಃ । ಸ್ವಸ್ತಿದ ಸ್ಸ್ವಸ್ತಿಕೃ ತ್ಸ್ವಸ್ತಿ ಸ್ವಸ್ತಿಭು ಕ್ಸ್ವಸ್ತಿದಕ್ಷಿಣಃ ॥೯೬॥

## (೮೯೭ನೇ ನಾಮವು) ಸನಾತ್,

### ಓಮ್॥ ಸನಾತೇನಮಃ.

(ಶಂ॥ ಭಾ) ಕಾಲರೂಪನು. (ವಿ॥ ಭಾ) ಈ ರೀತಿಯಾಗಿ ಅವರಿಂದ ಅನುಭವಿಸಲ್ಪಡುವಂತವನು ॥೮೯೭॥

## (೮೯೮ನೇ ನಾಮವು) ಸನಾತನತಮಃ,

### ಓಮ್॥ ಸನಾತನತಮಾಯನಮಃ.

(ಶಂ॥ ಭಾ) ಸರ್ವಕಾರಣನಾಗಿರುವುದರಿಂದ ಸನಾತನರಾದ ಬ್ರಹ್ಮಾದಿಗಳಿಗೂ ಕೂಡ ಸನಾತನನಾದ ಕಾರಣದಿಂದ 'ಸನಾತನತಮಃ' ಎನ್ನಲ್ಪಡುವನು. (ವಿ॥ ಭಾ) ಸಾರ್ವಕಾಲಿಕನಾದ್ದರೂ ಆಗತಾನೆ ಉಂಟಾದವನಂತೆ ಸದಾ ಭೋಗ್ಯಭೂತನಾಗಿರುವಂತವನು. ॥೮೯೮॥

## (೮೯೯ನೇ ನಾಮವು) ಕಪಿಲಃ,

### ಓಮ್॥ ಕಪಿಲಾಯನಮಃ.

(ಶಂ॥ ಭಾ) ಪಿಂಗಳವರ್ಣವುಳ್ಳ ಬಡಬಾನಲ ಸ್ವರೂಪನು. (ವಿ॥ ಭಾ) ಇಂತವನು ಯಾವರೂಪವನೆಂದರೆ:—ಮಿಂಚುಗಳ ಸಮೂಹ ಮಧ್ಯೆದಲ್ಲಿ ನೀಲಮೇಘದಂತೆ ಪ್ರಕಾಶಿಸುವಂತಹ ರೂಪವುಳ್ಳವನು (ಮ) ಕಪಿಲಮಹರ್ಷಿ ಸ್ವರೂಪಿಯು ೮೯೯॥

## (೯೦೦ನೇ ನಾಮವು) ಕಪಿರವ್ಯಯಃ,

### ಓಮ್॥ ಕಪಯೇಽವ್ಯಯಾಯನಮಃ

(ವಿ॥ ಭಾ) ತಾನೂ ಅಕ್ಷಯವಾದ ಆನಂದವನ್ನು ಅನುಭವಿಸುವಂತವನು, (ಶಂ॥ ಮ) ಕಪಿಃ–ತನ್ನ ಕಿರಣಗಳಿಂದ ಜಲವನ್ನು ಪಾನಮಾಡುವ ಸೂರ್ಯರೂಪನು, ಅಥವಾ ಕಪಿ ಎಂದರೆ ಹಂದಿಯ ರೂಪವನ್ನು ಧರಿಸಿದವನು. ಅವ್ಯಯಃ–ಪ್ರಲಯಕಾಲದಲ್ಲಿ ಪ್ರಪಂಚವೆಲ್ಲವನ್ನೂ ತನ್ನಲ್ಲಿ

ಲಯಿಸಿಕೊಳ್ಳುವಂತವನು. (ಮ) ಈ ಯೆರಡೂ ವ್ಯಸ್ತವಾದ ಏಕನಾಮ ವೆಂದು ಕೆಲವರೆನ್ನುವರು.

ಈ ರೀತಿಯಾಗಿ ಸರ್ವಾಭಿಮತವಾದ ನವಮಶತಕವು ಸಮಾಪ್ತವಾಯಿತು.

ಶ್ರೀಪರಾಶರ ಭಟ್ಟಾರಕಾದ್ಯಸ್ಮದ್ಗುರುಭ್ಯೋನಮಃ

---

## (೯೦೧ನೇ ನಾಮವು) ಸ್ವಸ್ತಿದಃ,

### ಓಮ್॥ ಸ್ವಸ್ತಿದಾಯನಮಃ.

(ಶಂ॥ ವಿ॥ ಮ) ಈ ರೀತಿಯಾಗಿ ಮಹತ್ತಾದ ಮಂಗಳವನ್ನು ಕೊಡುವಂತವನು.

## (೯೦೨ನೇ ನಾಮವು) ಸ್ವಸ್ತಿಕೃತ್,

### ಓಮ್॥ ಸ್ವಸ್ತಿಕೃತೇನಮಃ.

(ಶಂ॥ ಮ) ಮಂಗಳವನ್ನು ಮಾಡತಕ್ಕವನು. (ವಿ॥ ಭಾ) ತನ್ನ ಕಲ್ಯಾಣಗುಣಗಳಿಂದ ತನ್ನ ಭೋಗಕ್ಕೆ ಕ್ಷೇಮವನ್ನುಂಟುಮಾಡಿಕೊಳ್ಳುವಂತವನು. ॥೯೦೨॥

## (೯೦೩ನೇ ನಾಮವು) ಸ್ವಸ್ತಿ,

### ಓಮ್॥ ಸ್ವಸ್ತಿನೇನಮಃ

(ವಿ॥ ಭಾ) ತಾನೇ ಮಹತ್ತಾದ ಮಂಗಳ ಸ್ವರೂಪನು. ॥೯೦೩॥

## (೯೦೪ನೇ ನಾಮವು) ಸ್ವಸ್ತಿಭುಕ್,

### ಓಮ್॥ ಸ್ವಸ್ತಿಭುಜೇನಮಃ.

(ಶಂ॥ ಭಾ) ಹಿಂದಿನ ನಾಮದಲ್ಲಿ ಹೇಳಲ್ಪಟ್ಟ ಪರಮಾನಂದ ಲಕ್ಷಣವುಳ್ಳ ಶ್ರೇಯವಾದ ಯಾವಮಂಗಳಸ್ವರೂಪವುಂಟೋ ಅದನ್ನು ಅನುಭ

ವಿಸುವಂತವನು. ಅಥವಾ ಭಕ್ತರ ಮಂಗಳವನ್ನು ಅನುಭವಿಸುವಂತವನು. (ವಿ॥ ಭಾ) ಇಂತಹ ಮಂಗಳಗಳನ್ನೆಲ್ಲಾ ಪರಿಪಾಲಿಸುವಂತವನು. ॥೯೦೪॥

(೯೦೫ನೇ ನಾಮವು) ಸ್ವಸ್ತಿದಕ್ಷಿಣಃ,
ಓಮ್॥ ಸ್ವಸ್ತಿದಕ್ಷಿಣಾಯನಮಃ.

(ಶಂ॥ ಭಾ) ಮಂಗಳಸ್ವರೂಪನಾಗಿ ವೃದ್ಧಿಹೊಂದುವಂತವನು. ಅಥವಾ ಮಂಗಳವನ್ನುಂಟುಮಾಡುವುದಕ್ಕೆ ಸಮರ್ಥನು. (ಯದ್ವಾ) (ಶಂ॥ಮ) ದಕ್ಷಿಣಶಬ್ದವು ಶೀಘ್ರವಾಗಿ ಫಲವನ್ನು ಕೊಡುವಂತವನಲ್ಲಿ ವರ್ತಿಸುವುದು. ಶೀಘ್ರದಲ್ಲಿ ಮಂಗಳಗಳನ್ನು ಕೊಡುವಂತವನೆಂದರ್ಥವು. ಇದಕ್ಕೆ

"ಸ್ಮೃತೇಸಕಲಕಲ್ಯಾಣ ಭಾಜನಂ ಯತ್ರಜಾಯತೆ ।
ಪುರುಷಸ್ತಮಜಂನಿತ್ಯಂ ವ್ರಜಾಮಿ ಶರಣಂಹರಿಂ ॥
ಸ್ಮರಣಾದೇವಕೃಷ್ಣಸ್ಯ ಪಾಪಸಂಘಾತಪಂಜರಂ ।
ಶತಧಾಭೇದಮಾಯಾತಿ ಗಿರಿರ್ವಜ್ರಹತೋಯಥಾ" ॥

ಇತ್ಯಾದಿ ವಚನಗಳು ಪ್ರತಿಪಾದಕವು. (ವಿ॥ ಭಾ) ತನ್ನ ಕೈಂಕರ್ಯಕ್ಕೆ ಯೋಗ್ಯವಾದ ದಿವ್ಯ ಶರೀರ ದಿವ್ಯಶಕ್ತಿಯೇ ಮೊದಲಾದ ಮಂಗಳಗಳನ್ನು, ತನ್ನ ದಿವ್ಯಾತ್ಮ ಸ್ವರೂಪವನ್ನು ಕೊಡುವುದೆಂಬ ಮಹಾ ಯಾಗಕ್ಕೆ ಋತ್ವಿಕ್ಕುಗಳಾಗಿರುವ ನಿತ್ಯಸೂರಿಗಳಿಗೆ ದಕ್ಷಿಣೆಯಾಗಿ ಕೊಡುವಂತವನು. ॥೯೦೫॥

ಇಲ್ಲಿ ಪ್ರಕೃತಗಳಾದ ನಾಮಗಳಿಗೆ "ತೇಷಾಂಸಂಭಜನಾ" ತ್ಸನಾತ್।" (೮೯೭) ನಿತ್ಯನೂತನಭೋಗ್ಯತ್ವಾ "ತ್ಸನಾತನತಮಃ" (೮೯೮) ಸ್ಮೃತಃ ॥ ವಿದ್ಯುನ್ಮಂಡಲಮಧ್ಯಸ್ಥ ನೀಲಮೇಘವದುಜ್ವಲಃ । "ಕಪಿಲ" (೮೯೯) ಸ್ಸಸಮಾಖ್ಯಾತ ಸ್ಸಸ್ತುವರ್ಣೋ ಮಹಾಮನುಃ ॥ ಅನಶ್ವರ ಸುಖಂಪಾತಿ ಸಉಕ್ತಃ "ಕಪಿರವ್ಯಯಃ" ॥ (೯೦೦) ಭಕ್ತೇಭ್ಯೋ ಮಂಗಲಂಸ್ವಸ್ತಿ ತದ್ದಾನಾ "ತ್ಸ್ವಸ್ತಿದಃ" (೯೦೧) ಸ್ಮೃತಃ । ಸ್ವಸ್ತಿಸ್ವಭೋಗಾ ಶಿಷಂಯಃಕರೋತಿ "ಸ್ವಸ್ತಿಕೃ" (೯೦೨ ಚ್ಚಸಃ । ಮಹಾಮಂಗಲರೂಪತ್ವಾ ತ್ಸ್ವಯಂ "ಸ್ವಸ್ತೀ" (೯೦೩ ತಿಕಥ್ಯತೇ । ಪಾಲ

ನಾಮ್ನಂಗಲಸೆಸ್ಯೈವ “ ಸ್ವಸ್ತಿಭುಕ್ ” ( ೯೦೪ ) ಚೇತಿಗಮ್ಯತೇ || ಶಕಾ್ಯದ್ಯಾಪ್ರಕೃತಿಃ ಸ್ವಸ್ತಿಸ್ವಾತ್ಮದಾನಂಚ ದಕ್ಷಿಣಾ | ಆತ್ಮಾರ್ಪಣಾಖ್ಯಯಾಗೇತು ಯಸ್ಯಾಸ್ತಿ “ ಸ್ವಸ್ತಿದಕ್ಷಿಣಃ ” (೯೦೫) || ಎಂಬೀರೀತಿಯಿಂದ ವಿವೃತಿಯನ್ನು ಕಾಣಬೇಕು.

ಮೂ|| ಅರೌದ್ರಃ ಕುಂಡಲೀ ಚಕ್ರೀ ವಿಕ್ರಮ್ಯೂರ್ಜಿತಶಾಸನಃ| ಶಬ್ದಾತಿಗ ಶ್ಶಬ್ದಸಹ ಶ್ಶಿಶಿರ ಶ್ಶರ್ವರೀಕರಃ ||೯೭||

## (೯೦೬ನೇ ನಾಮವು) ಅರೌದ್ರಃ,

### ಓಮ್|| ಅರೌದ್ರಾಯನಮಃ.

(ಶಂ|| ಭಾ) ಕರ್ಮ ರಾಗ ಕೋಪಗಳು ರೌದ್ರಗಳು, ಈ ಮೂರು ರೌದ್ರಗಳಿಲ್ಲದವನು. ಹೊಂದಲ್ಪಟ್ಟ ಸರ್ವಕಾಮನಾದ ಕಾರಣ ರಾಗ ದ್ವೇಷಾದಿಗಳಿಲ್ಲದವನು “ಅರೌದ್ರಃ” ಎನ್ನಲ್ಪಡುವನೆಂದರ್ಥವು. (ಮ) ಶಾಂತರೂಪನು. (ವಿ|| ಭಾ) ಪರಮೈಶ್ವರ್ಯ ವಿರುವಾಗಲೂ ಗುಣಗಳಿಂದ ಅತ್ಯಂತ ಶೀತಲ ಸ್ವಭಾವವುಳ್ಳವನಾದಕಾರಣ ಉಗ್ರನಾಗದವನು.||೯೦೬||

## (೯೦೭ನೇ ನಾಮವು) ಕುಂಡಲೀ,

### ಓಮ್|| ಕುಂಡಲಿನೇನಮಃ.

(ಶಂ|| ಭಾ) ಶೇಷರೂಪಿಯು. (ಮ) ಕುಂಡಲವೆಂಬ ಭೂಷಣವುಳ್ಳವನು. (ವಿ|| ಭಾ) ಪಾರಮೈಶ್ವರ್ಯಕ್ಕನುಸಾರವಾದ ಕುಂಡಲಗಳೇ ಮೊದಲಾದ ದಿವ್ಯ ಭೂಷಣಗಳುಳ್ಳವನು. ||೯೦೭||

## (೯೦೮ನೇ ನಾಮವು) ಚಕ್ರೀ,

### ಓಮ್|| ಚಕ್ರಿಣೇನಮಃ.

(ಶಂ|| ಮ|| ವಿ) "ಚಲಸ್ವರೂಪಮತ್ಯಂತ ಜವೇನಾಂತರಿತಾನಿಲಂ | ಚಕ್ರಸ್ವರೂಪಂತು ಮನೋಧತ್ತೇ ವಿಷ್ಣುಃಕರೇಸ್ಥಿತಂ" (ಶ್ರೀವಿಷ್ಣು ಪು|| ೧|| ೨೨|| ೭೧) (ಚಂಚಲಸ್ವರೂಪವು ವಾಯುವೇಗಕ್ಕಿಂತಲೂ ಅಧಿಕವಾದ ವೇಗವುಳ್ಳದ್ದೂ ಆದ ಚಕ್ರಸ್ವರೂಪವನ್ನಾಗಿ ಮನಸ್ತತ್ವವನ್ನು ಶ್ರೀವಿಷ್ಣುವು ತನ್ನ ಕೈಯಲ್ಲಿ ಹಿಡಿದಿರುವನೆಂಬಂತೆ) ತನ್ನ ಅಂತಸ್ಸಿಗೆ ಅನುಸಾರವಾಗಿ ಚಕ್ರವನ್ನು ಹಿಡಿಡವನು. ||೯೦೮||

## (೯೦೯ನೇ ನಾಮವು) ವಿಕ್ರಮೀ,

## ಓಮ್|| ವಿಕ್ರಮಿಣೇನಮಃ.

(ಶಂ|| ಭಾ)ಲೋಕೋತ್ತರವಾದ ಶೌರ್ಯವೂ (ತ್ರಿವಿಕ್ರಮಾವತಾರ ಕಾಲಿಕವಾದ) ಪಾದವಿಕ್ಷೇಪವೂ ವುಳ್ಳವನು. (ವಿ|| ಭಾ) ತನ್ನ ಗಾಂಭೀರ್ಯಾನುಸಾರವಾದ ವಿಲಾಸವುಳ್ಳವನು. ||೯೦೯||

## (೯೧೦ನೇ ನಾಮವು) ಊರ್ಜಿತಶಾಸನಃ,

## ಓಮ್|| ಊರ್ಜಿತಶಾಸನಾಯನಮಃ.

(ಶಂ|| ಭಾ) "ಶ್ರುತಿಸ್ಮೃತೀಮಮೈವಾಜ್ಞಾ ಯಸ್ತಾಮುಲ್ಲಂಘ್ಯವರ್ತತೇ | ಆಜ್ಞಾಚ್ಛೇದೀ ಮಮದ್ರೋಹೀ ಮದ್ಭಕ್ತೋಪಿನವೈಷ್ಣವಃ" ಎಂಬ ಭಗವದ್ವಚನಾನುಸಾರವಾಗಿ ತನ್ನ ಆಜ್ಞಾರೂಪವಾದ ದಾಟಲಶಕ್ಯವಾಗಿರುವ ಶ್ರುತಿಸ್ಮೃತಿ ರೂಪವಾದ ಅಲಂಘ್ಯವಾದ ಆಜ್ಞೆಯುಳ್ಳವನು. (ವಿ|| ಭಾ) ಬ್ರಹ್ಮೇಂದ್ರ ರುದ್ರಾದಿಗಳಿಗೂ ಕೂಡ ದಾಟಲಶಕ್ಯವಾದ ಆಜ್ಞಾಚಕ್ರವುಳ್ಳವನು. ||೯೧೦||

## (೯೧೧ನೇ ನಾಮವು) ಶಬ್ದಾತಿಗಃ,

## ಓಮ್|| ಶಬ್ದಾತಿಗಾಯನಮಃ.

(ಶಂ|| ಭಾ) ಶಬ್ದಪ್ರವೃತ್ತಿಗೆ ಕಾರಣಗಳಾದ ಜಾತ್ಯಾದಿಗಳುಂಟಾಗಲಾರವಾದುದರಿಂದ ಶಬ್ದದಿಂದ ಹೇಳಲಶಕ್ಯನು. (ವಿ|| ಭಾ) ಅನಂತಗ

ಳಾದ ನಾಲಿಗೆಗಳುಳ್ಳ ಆದಿಶೇಷನಿಂದಲೂ ಅನಂತಶಾಖೆಗಳುಳ್ಳ ವೇದಗಳಿಂದಲೂ ಸಾಕ್ಷಾತ್ಸರಸ್ವತಿಯಿಂದಲೂ ಕೂಡ ಇವನ ಮಹಿಮೆಯು ಇಷ್ಟೆಂದು ವರ್ಣಿಸಲಸಾಧ್ಯವಾಗಿರುವುದರಿಂದ ' ಶಬ್ದಾತಿಗಃ.' ||೯೧೧||

## (೯೧೨ನೇ ನಾಮವು) ಶಬ್ದಸಹಃ,

## ಓಮ್|| ಶಬ್ದಸಹಾಯ ನಮಃ.

(ಶಂ|| ಮ) ಆದರೂ " ಸರ್ವೇವೇದಾಯತ್ಪದಮಾಮನನ್ತಿ " (ಕಠೊ|| ೨|| ೧೫) ಎಂಬಂತೆ ಮುಖ್ಯ ವೃತ್ತಿಯಿಂದ ಸರ್ವವೇದ ಪ್ರತಿಪಾದ್ಯನು. (ವಿ||ಭಾ) ಇನ್ನು ಮುಂದೆ ಗಜೇಂದ್ರಮೋಕ್ಷವನ್ನು ಕುರಿತು ಬೋಧಿಸುವುವು ಶಬ್ದಸಹಃ-ಸ್ಪಷ್ಟವಾದ ಶಬ್ದೋಚ್ಚಾರಣಕ್ಕೂಕೂಡ ಯೋಗ್ಯತೆಯಿಲ್ಲದ ತಿರ್ಯಗ್ಜಾತಿಯಲ್ಲಿ ಹುಟ್ಟಿದವರು ಕೂಡ ಆರ್ತಿಯೊಡನೆ ಕೂಗಿಕೊಂಡರೆ ಅಂತಹ ಶಬ್ದವನ್ನು ಅತಿಭಾರದಂತೆ ಸಹಿಸುವಂತವನು. ||೯೧೨||

## (೯೧೩ನೇ ನಾಮವು) ಶಿಶಿರಃ,

## ಓಮ್|| ಶಿಶಿರಾಯ ನಮಃ.

(ಶಂ|| ಭಾ) ಸಂಸಾರದಲ್ಲಿ ತಾಪತ್ರಯಗಳಿಂದ ಬಾಧೆಪಡುತಲಿರುವಂತವರಿಗೆ ವಿಶ್ರಮಸ್ಥಾನನು. (ವಿ|| ಭಾ) ಅಂತಹ ಗಜೇಂದ್ರನ ಆರ್ತಶಬ್ದವನ್ನು ಕೇಳಿದಾಗಲೆ ದಯಾರಸದಿಂದ ನೆನೆಯಲ್ಪಟ್ಟ ಮನಸ್ಸುಳ್ಳವನಾಗಿ ಅತಿವೇಗದಿಂದ ಓಡಿಬಂದವನು (ಮ) ಅಜ್ಞಾನಿಗಳಲ್ಲಿ ದಯಾರಸವುಳ್ಳವನು. ||೯೧೩||

## (೯೧೪ನೇ ನಾಮವು) ಶರ್ವರೀಕರಃ,

## ಓಮ್|| ಶರ್ವರೀಕರಾಯ ನಮಃ.

(ಶಂ||ಭಾ) ಸಂಸಾರಿಗಳಿಗೆ ಅಂತಹ ಜ್ಞಾನವನ್ನು ರಾತ್ರಿಯಂತೆ ಅಪ್ರಕಾಶವನ್ನಾಗಿಯೂ, ಜ್ಞಾನಿಗಳಿಗೆ ಸಂಸಾರವನ್ನು ರಾತ್ರಿಯಂತೆ ಅಪ್ರಕಾಶವನ್ನಾಗಿಯೂ ಮಾಡುವಂತವನು, ಇದಕ್ಕೆ ಗೀತಾ ೨ನೇ ಅಧ್ಯಾಯದಲ್ಲಿ

“ಯಾನಿಶಾ ಸರ್ವಭೂತಾನಾಂ ತಸ್ಯಾಂಜಾಗರ್ತಿಸಂಯಮೀ |
ಯಸ್ಯಾಂಜಾಗ್ರತಿಭೂತಾನಿ ಸಾನಿಶಾಪಶ್ಯತೋಮುನೇಃ ”

(೬೯)ನೇ ಶ್ಲೋಕವು ಪ್ರಮಾಣವಾಗಿರುವುದು. (ಮ) ಚಂದ್ರನಂತೆ ತಾಪಹರನು. (ವಿ|| ಭಾ) ಶತ್ರುಹಿಂಸೆಯನ್ನು ಮಾಡುವುದರಲ್ಲಿ ಸಮರ್ಥಗಳಾದ ಪಂಚಾಯುಧಗಳನ್ನು ಧರಿಸಿದವನು. ||೯೧೪||

ಈ ೯೭ನೇ ಶ್ಲೋಕದಲ್ಲಿ ಪ್ರತಿಪಾದ್ಯಗಳಾದ (೯) ನಾಮಗಳಿಗೂ “ ಸರ್ವೈಶ್ವರ್ಯೈಃಪಿಸುಗುಣಶ್ಶೀಲತೋ “ ರೌದ್ರ ” (೯೦೬) ಉಚ್ಯತೇ| ದಿವ್ಯಭೂಷಣವಾನ್ಯೋಸೌ “ ಕುಂಡಲೀ ” (೯೦೭) ತಿಪ್ರಕಥ್ಯತೇ || ನಿತ್ಯದಿವ್ಯಾಯುಧ “ ಶ್ಚಕ್ರೀ ” (೯೦೮) ಸ್ಯಾದ್ವಿಲಾಸೀತು “ ವಿಕ್ರಮೀ ” (೯೦೯) | ಬ್ರಹ್ಮಾದ್ಯಲಂಘ್ಯಸ್ವಾಜ್ಞೋಯಸ್ಸಸ್ಯಾ “ ದೂರ್ಜಿತಶಾಸನಃ ” || ಅನಂತಶಾಖ್ಯೈ ರಾಮ್ನಾಯ್ಯೈ ರ್ವಾಗ್ದೇವ್ಯಾಽನನ್ತಭೋಗಿನಾ | ವಕ್ತುಂಶ್ಯಕ್ಯಮಹಿಮಾಯಸ್ಯ “ ಶಬ್ದಾತಿಗೋ ” (೯೧೦) ಸ್ತನಃ || ಅತಿಭಾರಮಿವಾಸ್ಪಷ್ಟಂ ತಿರಶ್ಚಾಂ ಶಬ್ದಮಾರ್ತಿಜಂ | ಸಹತೇಯ “ ಶ್ಶಬ್ದಸಹೊ ” (೯೧೧) ವಸ್ವರ್ಣೋ ಮನುರುತ್ತಮಃ || ಗಜೇಂದ್ರಪಾಲನಾರ್ಥಂಯ “ ಶ್ಶಿಶಿರ ” (೯೧೨) ಸ್ತ್ವರಯಾಗತಃ | ಉಚ್ಯತೇಶರ್ವರೀಶಬ್ದಾ ದ್ಧಿಂಸಾಪರವಿದಾರಿಣೀ || ಪಂಚಾಯುಧೀ ಕರೇಚಾಸ್ಯೇ ತ್ಯದಿತ “ ಶ್ಶರ್ವರೀಕರಃ ” (೯೧೪) ಎಂಬಂತೆ ವಿವೃತಿಯನ್ನು ಕಾಣಬೇಕು.

ಮೂ|| ಅಕ್ರೂರಃ ಪೇಶಲೋ ದಕ್ಷೋ ದಕ್ಷಿಣಃ ಕ್ಷ
ಮಿಣಾಂವರಃ | ವಿದ್ವತ್ತಮೋ ವೀತಭಯಃ ಪು
ಣ್ಯಶ್ರವಣಕೀರ್ತನಃ ||೯೮||

(೯೧೫ನೇ ನಾಮವು) ಅಕ್ರೂರಃ,

ಓಮ್|| ಅಕ್ರೂರಾಯನಮಃ.

(ಶಂ|| ಭಾ) ಅಧಿಕವಾದ ಕೋಪದಿಂದುಂಟಾದ ಮನೋಧರ್ಮವೊ ಅಭಿನಿವೇಶದಿಂದ ಕೂಡಿದ ಆಂತರ ಸಂತಾಪವೊ ಕ್ರೌರ್ಯವೆನ್ನಲ್ಪಡು

ವುದು ; ಇವನು ಅವಾಪ್ತ ಸಮಸ್ತ ಕಾಮನಾಗಿರುವುದರಿಂದಲೂ ಕಾಮ ರಾಹಿತ್ಯದಿಂದ ಕ್ರೋಧವಿಲ್ಲದವನಾಗಿರುವುದರಿಂದಲೂ ಅಂತಹ ಕ್ರೌರ್ಯವಿಲ್ಲದವನು. (ವಿ॥ ಭಾ) ಗಜೇಂದ್ರನನ್ನು ಬಿಡಿಸುವುದಕ್ಕಾಗಿ ಆಯುಧಗಳು ತನ್ನ ಕೈಯ್ಯಲ್ಲಿ ಸಿದ್ಧವಾಗಿದ್ದರೂ ಅವಸರದಿಂದ ಮೊಸಳೆಯನ್ನು ಕೂಡ ಛೇದಿಸದವನು. ಇವನು ಕ್ರೌರ್ಯವಿಲ್ಲದವನಾದಕಾರಣದಿಂದಲೆ ಬಂದ ತತ್ಕ್ಷಣವೇ ಮೊಸಳೆಯು ಕುತ್ತಿಗೆಯನ್ನು ಕತ್ತರಿಸದೆ ನೀರಿನಿಂದ ಮೇಲಕ್ಕೆ ಎತ್ತಿನೋಡಿ, ಅನಂತರವೂ ಬಿಡದಪಕ್ಷದಲ್ಲಿ ಕತ್ತರಿಸೋಣವೆಂದು ಯೋಚಿಸಿ ತನ್ನಲ್ಲಿ ಕ್ರೌರ್ಯ ರಾಹಿತ್ಯವನ್ನೇ ಪ್ರಕಟಿಸಿರುವಂತೆ " ಗ್ರಾಹಗ್ರಸ್ತಂ ಗಜೇಂದ್ರಂಚ ತಂಗ್ರಾಹಂಚ ಜಲಾಶಯಾತ್ । ಉಜ್ಜಹಾರಾ ಪ್ರಮೇಯಾತ್ಮಾ ತರಸಾ ಮಧುಸೂದನಃ " ಎಂಬೀ ಪುರಾಣ ವಚನವು ಬೋಧಿಸುವುದು. ॥೯೧೫॥

## (೯೧೬ನೇ ನಾಮವು) ಪೇಶಲಃ,

### ಓಮ್॥ ಪೇಶಲಾಯನಮಃ

(ಶಂ॥ ಭಾ) ಮನೋವಾಕ್ಕಾಯಗಳಿಂದಲೂ ಶೋಭನನಾಗಿರುವುದರಿಂದ " ಪೇಶಲಃ " ಎನ್ನಲ್ಪಡುವನು. (ವಿ॥ ಭಾ) ಗಜೇಂದ್ರ ರಕ್ಷಣಾರ್ಥವಾಗಿ ಅತಿವೇಗದಿಂದ ಓಡಿಬರುತಲಿರುವಾಗ ವೈಜಯಂತೀಮಾಲಾ, ಆಭರಣ, ಪೀತಾಂಬರಾದಿಗಳು ವ್ಯಾಕುಲಿತಗಳಾದರೂ ಅತಿಮನೋಹರವಾಗಿ ಕಾಣಲ್ಪಡುವಂತವನು. ॥೯೧೬॥

## (೯೧೭ನೇ ನಾಮವು) ದಕ್ಷಃ,

### ಓಮ್॥ ದಕ್ಷಾಯನಮಃ.

(ಶಂ॥ ಭಾ) ಅತ್ಯಂತ ಪ್ರವೃದ್ಧನೂ ಶಕ್ತನೂ ಶೀಘ್ರಕಾರಿಯೂ ಆದವನು. (ಮ) ಸಮರ್ಥನು. (ವಿ॥ ಭಾ) ಬೇಗನೆ ಓಡಿಬರುವಂತವನು. ದಕ್ಷವೃದ್ಧೌಶೀಘ್ರಾರ್ಥೇಚ ॥೯೧೭॥

## (೯೧೮ನೇ ನಾಮವು) ದಕ್ಷಿಣಃ,

### ಓಮ್॥ ದಕ್ಷಿಣಾಯನಮಃ.

(ಶಂ|| ಭಾ) ಈ ನಾಮಕ್ಕೂ ದಕ್ಷಶಬ್ದದಂತೆಯೆ ಅರ್ಥವು, ಶಬ್ದ ಭೇದದಿಂದ ಪುನರುಕ್ತಿ ದೋಷವಿಲ್ಲವು. ಅಥವಾ ಹೋಗುವಂತವನು ಹೊಡಿಯುವಂತವನು. 'ದಕ್ಷಗತಿಹಿಂಸನಯೋಃ' ಇತಿಧಾತುಃ. (ಮ). ಸರ್ವತ್ರ ಸಮರ್ಥನು (ವಿ|| ಭಾ) ತಾನು ಈ ರೀತಿಯಾಗಿ ಓಡಿಬಂದರೂ 'ಗಜೇಂದ್ರನಿಗೆ ನನ್ನಿಂದ ಯೇನು ಪ್ರಯೋಜನವು. ಸಮಯಕ್ಕೊದಗದೆ ದೂರಗತನಾದ ನನ್ನನ್ನು ನಿಂದಿಸಬೇಕೆಂ' ಬದಾಗಿ ಕೆಲವು ಸೂಕ್ತಿಗಳನ್ನು ಹೇಳಿಕೊಂಡು ಗಜೇಂದ್ರನಿಗೆ ಅನುಕೂಲವಾಗಿ ವರ್ತಿಸುವಂತವನು ||೯೧೮||

## (೯೧೯ನೇ ನಾಮವು) ಕ್ಷಮಿಣಾಂವರಃ,

## ಓಮ್|| ಕ್ಷಮಿಣಾಂವರಾಯನಮಃ.

(ಶಂ|| ಭಾ) ಕ್ಷಮಾಗುಣವುಳ್ಳ ಯೋಗಿಗಳಿಗಿಂತಲೂ ಭಾರವನ್ನು ವಹಿಸುವ ಪೃಥಿವ್ಯಾದಿಗಳಿಗಿಂತಲೂ ಶ್ರೇಷ್ಠನು, ಸಮಸ್ತವಾದ ಬ್ರಹ್ಮಾಂಡವನ್ನು ವಹಿಸಿದರೂ ಭೂಮಿಯಂತೆ ಪೀಡಿತನಾಗುವುದಿಲ್ಲವಾದುದರಿಂದ ಅದಕ್ಕಿಂತಲೂ ಶ್ರೇಷ್ಠನು. (ಅಥವಾ) ಕ್ಷಮಿಣಃ-ಶಕ್ತರು, ಈ ಪರಮಾತ್ಮನೋ ಸರ್ವಶಕ್ತಿಯುಳ್ಳವನಾದಕಾರಣ ಸರ್ವ ವ್ಯಾಪಾರಗಳನ್ನು ಮಾಡುವುದಕ್ಕೆ ಸಮರ್ಥನಾದಕಾರಣ "ಕ್ಷಮಿಣಾಂವರಃ' ಎನ್ನಲ್ಪಡುವನು. (ವಿ|| ಭಾ) ಗಜೇಂದ್ರನನ್ನು ಕಂಡು ಮೇಲೆ ಪ್ರಥಚಿತ್ತನಾಗಿ ತನ್ನ ಮನೋ ವ್ಯಾಕುಲವನ್ನು ತೀರಿಸಿಕೊಳ್ಳುವಂತವನಾದಕಾರಣ ಕ್ಷಮಾಗುಣವುಳ್ಳವರಲ್ಲಿ ಶ್ರೇಷ್ಠನು. ||೯೧೯||

## (೯೨೦ನೇ ನಾಮವು) ವಿದ್ವತ್ತಮಃ,

## ಓಮ್|| ವಿದ್ವತ್ತಮಾಯನಮಃ.

(ಶಂ|| ಭಾ) ಸರ್ವಕಾಲದಲ್ಲಿಯೂ ಸರ್ವಸಾಕ್ಷಾತ್ಕಾರ ಯೋಗ್ಯವಾದ ಜ್ಞಾನವುಳ್ಳವನು. ಇತರರಿಗೆ ಇಂತಹ ಸರ್ವಸಾಕ್ಷಾತ್ಕಾರಶಕ್ತಿಯು ಇಲ್ಲವು. (ವಿ|| ಭಾ) "ಏವಮುಕ್ತ್ವಾ ಕುರುಶ್ರೇಷ್ಠ ಗಜೇದ್ರಂ ಮಧುಸೂದನಃ | ಸ್ಪರ್ಶಯಾಮಾಸ ಹಸ್ತೇನ" ಎಂಬಂತೆ ಭಕ್ತನಾದ

ಗಜೇಂದ್ರನಿಗೆ ಮಾಡತಕ್ಕ ಅನುಕೂಲ ವ್ಯಾಪಾರದ ಸರ್ವಾಂಶವನ್ನು ತಿಳಿದವನು. ||೯೨೦||

## (೯೨೧ನೇ ನಾಮವು) ವೀತಭಯಃ,

## ಓಮ್|| ವೀತಭಯಾಯನಮಃ.

(ಶಂ|| ಭಾ) ಸಂಸಾರಿಕ ಭಯವಿಲ್ಲದವನು. ಅಥವಾ ಸಂಸಾರ ರೂಪವಾದ ಭಯವಿಲ್ಲದವನು. ನಿತ್ಯಮುಕ್ತನಾದಕಾರಣ 'ವೀತಭಯಃ' ಎಂತಲೂ ಹೇಳಬಹುದು (ವಿ|| ಭಾ) ತಾನು ಗಜೇಂದ್ರನ ಸಮೀಪಕ್ಕೆ ದಯಮಾಡುವಾಗ ಉಂಟಾದ ಶಬ್ದವನ್ನು ಕೇಳಿದಮಾತ್ರದಲ್ಲಿಯೆ ಗಜೇಂದ್ರನ ಭಯವನ್ನು ತೀರಿಸಿದವನು. ||೯೨೧||

## (೯೨೨ನೇ ನಾಮವು) ಪುಣ್ಯಶ್ರವಣಕೀರ್ತನಃ,

## ಓಮ್|| ಪುಣ್ಯಶ್ರವಣಕೀರ್ತನಾಯನಮಃ.

(ವಿ|| ಭಾ) ಪಾವನಗಳಾದ ಶ್ರವಣ ಕೀರ್ತನಗಳುಳ್ಳವನು. "ಯ ಇದಂಶೃಣುಯಾನ್ನಿತ್ಯಂ ಯಶ್ಚಾಪಿ ಪರಿಕೀರ್ತಯೇತ್ | ನಾಶುಭಂಪ್ರಾಪ್ನುಯಾತ್ಕಿಂಚಿತ್ಸೋ ಮುತ್ರೇಹಚಮಾನವಃ" ಎಂಬದಾಗಿ ಇಲ್ಲಿಯೇ ಮುಂದೆ ಹೇಳುವರಷ್ಟೆ. (ವಿ|| ಭಾ) ಈ ಗಜೇಂದ್ರಮೋಕ್ಷಣ ವೃತ್ತಾಂತವನ್ನು ಶ್ರವಣಮಾಡಿದರೂ ಬಾಯಿಯಲ್ಲಿ ಕೀರ್ತನಮಾಡಿದರೂ ಅಂತವರನ್ನು ಪಾವನರನ್ನಾಗಿ ಮಾಡುವಂತವನು. "ಶ್ರುತೇನಹಿ ಕುರುಶ್ರೇಷ್ಠ ಸ್ಮೃತೇನ ಕಥಿತೇನವಾ | ಗಜೇಂದ್ರಮೋಕ್ಷಣೇನೈವ ಸದ್ಯಃಪಾಪಾತ್ಪ್ರಮುಚ್ಯತೇ" ಎಂಬ ಪ್ರಮಾಣವು ಇದಕ್ಕೆ ಪ್ರತಿಪಾದಕವು. ||೯೨೨||

ಇಲ್ಲಿ ಪ್ರಕೃತಗಳಾದ ನಾಮಗಳಿಗೆ "ಯೋಸಾಧ್ಯೃತಾಯುಧ್ಯೈರಾಹಂ "ಅಕ್ರೂರೋ" (೯೧೫) ಮಂಕ್ಷ್ವಕೃತ್ಯವಾನ್ | ತ್ವರಾತಿಶಯಾತಸ್ತ್ರಸ್ತ ಸ್ರಗ್ಭೂಷಾಂ ಬರಸುಂದರಃ || ಗಜೇಂದ್ರರಕ್ಷಾ ಸಮಯೆ ಯೋಸಾಸ್ಯ "ಪೇಶಲಃ" (೯೧೬) ಸ್ಮೃತಃ "ದಕ್ಷೋ" (೯೧೭) ಯೋದ್ರುತಮಾಗಂತಾ ರಕ್ಷಣಾಯಸಉಚ್ಯತೇ || ಗಜೇಂದ್ರಸ್ಯ ಪ್ರಸನ್ನಸ್ಯ

ಯಃ ಪ್ರೀತೋ 'ದಕ್ಷಿಣ' (೯೧೪) ಸ್ಸ್ಯಾತ್ಸಃ। ಗಜೇಂದ್ರದರ್ಶನೇನಾಸಾ ಧೃತಾತ್ಮಾ "ಕ್ಷಮಿಣಾಂವರಃ" (೯೧೯) ಗಜೇಂದ್ರಾರ್ತಿ ಚಿಕಿತ್ಸಾಯಾಂ ವಿದ್ವಾನ್ "ವಿದ್ವತ್ತಮೋ" (೯೨೦) ಭವೇತ್ ॥ ವೀತಂಭಯಂ ಗಜೇಂದ್ರಸ್ಯ ಯಸ್ಮಾತ್ "ವೀತಭಯ" ಶ್ಚ (೯೨೧) ಸಃ। ಗಜೇಂದ್ರ ಮೋಕ್ಷಣಂಶ್ರುತ್ವಾ ಸದ್ಯಃಪಾಪಾತ್ಪ್ರಮುಚ್ಯತೇ ॥ ಯಸ್ಮಾತ್ತತ್ಕೀರ್ತನಂಪುಣ್ಯಂ ಶ್ರವಣಂಚೇತಿಸಸ್ಮೃತಃ। ದ್ವಾದಶಾರ್ಣೋ ಮನುಶ್ರೇಷ್ಠಃ "ಪುಣ್ಯಶ್ರವಣಕೀರ್ತನಃ" (೯೨೨) ಎಂಬಂತೆ ವಿವೃತಿಯನ್ನು ಕಾಣಬೇಕು.

ಮೂ॥ ಉತ್ತಾರಣೋ ದುಷ್ಕೃತಿಹಾ ಪುಣ್ಯೋ ದುಸ್ಸ್ವಪ್ನನಾಶನಃ । ವೀರಹಾ ರಕ್ಷಣ ಸ್ಸಂತೋ ಜೀವನಂ ಪರ್ಯವಸ್ಥಿತಃ ॥೯೯॥

(೯೨೩ನೇ ನಾಮವು) ಉತ್ತಾರಣಃ,

ಓಮ್॥ ಉತ್ತಾರಣಾಯನಮಃ.

(ಶಂ॥ ಮ) ಸಂಸಾರಸಾಗರದಿಂದ ಉತ್ತಾರಕನು. (ವಿ॥ ಭಾ) ಸರಸ್ಸಿನಿಂದ ಗ್ರಾಹ ಗಜೇಂದ್ರರಿಗೆ ಉತ್ತಾರಕನು. ॥೯೨೩॥

(೯೨೪ನೇ ನಾಮವು) ದುಷ್ಕೃತಿಹಾ,

ಓಮ್॥ ದುಷ್ಕೃತಿಘ್ನೇನಮಃ.

(ಶಂ॥ ಮ) ಪಾಪವನ್ನಾದರೂ ಅಥವಾ ಪಾಪಿಗಳನ್ನಾದರೂ ನಾಶಪಡಿಸುವಂತವನು. (ವಿ॥ ಭಾ) ಬಳಿಕ ದುಷ್ಟನಾದ ಗ್ರಾಹವನ್ನು ಚಕ್ರದಿಂದ ಛೇದಿಸಿ ಅವನಿಗೆ ಪೂರ್ವಜನ್ಮದಲ್ಲುಂಟಾದ ಭಾಗವತಾಪಚಾರವನ್ನು ಬಿಡಿಸಿದವನು. ॥೯೨೪॥

(೯೨೫ನೇ ನಾಮವು) ಪುಣ್ಯಃ,

ಓಮ್॥ ಪುಣ್ಯಾಯನಮಃ.

(ಶಂ|| ಭಾ) ಶ್ರವಣ ಕೀರ್ತನಗಳನ್ನು ಮಾಡತಕ್ಕವರಿಗೆ ಪಾವನತ್ವವನ್ನುಂಟುಮಾಡತಕ್ಕವನು. ಅಥವಾ ಶ್ರುತಿಸ್ಮೃತ್ಯಾದಿ ರೂಪಗಳಾದ ತನ್ನ ವಾಕ್ಯಗಳಿಂದ ಪುಣ್ಯವಾದದ್ದನ್ನೇ ಬೋಧಿಸುವಂತವನು. (ವಿ|| ಭಾ) ಇಂತಹ ಗಜೇಂದ್ರನನ್ನು ರಕ್ಷಿಸಿದ ಕೀರ್ತಿಯಿಂದ ನಮ್ಮಂತವರನ್ನು ಕೂಡ ಪಾವರನ್ನಾಗಿ ಮಾಡುವಂತವನು. ||೯೨೮||

## (೯೨೯ನೇ ನಾಮವು) ದುಸ್ಸ್ವಪ್ನನಾಶನಃ,

## ಓಮ್|| ದುಸ್ಸ್ವಪ್ನನಾಶನಾಯನಮಃ.

(ಶಂ|| ಭಾ) ಮುಂದೇ ಬರುವ ಅನರ್ಥಗಳನ್ನು ಸೂಚಿಸುವ ದುಸ್ಸ್ವಪ್ನಗಳನ್ನು ನಾಶಪಡಿಸುವಂತವನು. (ಮ) ಧ್ಯಾನಕೀರ್ತನಪೂಜಾಪರರಾದ ಭಾಗವತರ ದುಸ್ಸ್ವಪ್ನಗಳಿಗೆ ನಾಶಕನು. (ವಿ|| ಭಾ) ಇಂತವನು ತಾನೇ ಯಾರೆಂದರೆ :—ದುಸ್ಸ್ವಪ್ನನಾಶನಃ—ಗಜೇಂದ್ರಮೋಕ್ಷಣ ಕಥೆಯನ್ನು ಶ್ರವಣಮಾಡುವಂತವರ ದುಸ್ವಪ್ನಗಳನ್ನು ಪರಿಹರಿಸುವಂತವನು. ||೯೨೯||

## (೯೩೦ನೇ ನಾಮವು) ವೀರಹಾ,

## ಓಮ್|| ವೀರಘ್ನೇನಮಃ.

(ಶಂ|| ಮ) ಸಂಸಾರಿಗಳಿಗುಂಟಾಗುವ ನಾನಾವಿಧ ಗತಿಗಳನ್ನು ಅವರಿಗೆ ಮುಕ್ತಿಯನ್ನು ಕೊಡುವುದರಿಂದ ನಾಶಪಡಿಸುವಂತವನು. ಅಥವಾ (ಮ) ವೀರರಾದ ಅರ್ಜುನಾದಿಗಳನ್ನು ಕುರಿತು ಸಾರಥ್ಯ ದೂತ್ಯಾದಿಗಳನ್ನು ಮಾಡುವುದಕ್ಕಾಗಿ ಹೋಗುವಂತವನು. (ವಿ|| ಭಾ) ಗಜೇಂದ್ರನನ್ನು ಬಾಧಿಸಿದ ವೀರನಾದ ಮೊಸಳೆಯನ್ನು ನಾಶಪಡಿಸಿದವನು. "ಮೋಕ್ಷಯಾಮಾಸನಾಗೇಂದ್ರಂ ಪಾಶೇಭ್ಯಶ್ಯರಣಾಗತಂ" ಎಂಬೀ ಪ್ರಮಾಣವನ್ನು ನೋಡಿ. (ವಿ|| ಧ|| ೬೯) ||೯೩೦||

## (೯೩೧ನೇ ನಾಮವು) ರಕ್ಷಣಃ,

## ಓಮ್|| ರಕ್ಷಣಾಯನಮಃ.

(ಶಂ ಮ) ಸತ್ವಗುಣವನ್ನಾಶ್ರಯಿಸಿ ತ್ರಿಲೋಕವನ್ನು ರಕ್ಷಿಸುವಂತವನು. (ವಿ॥ ಭಾ) ಈ ರೀತಿಯಾಗಿ ತನ್ನಿಂದ ಬಿಡಿಸಲ್ಪಟ್ಟ ಗಜೇಂದ್ರನನ್ನು ಸ್ಪರ್ಶನ ಆಲಿಂಗನ ಸಮಾಧಾನಪಡಿಸುವಿಕೆಯುಂಬ ವ್ಯಾಪಾರಗಳಿಂದ ಕಾಪಾಡಿದವನು. ॥೯೨೮॥

## (೯೨೯ನೇ ನಾಮವು) ಸನ್ತಃ,

### ಓಮ್॥ ಸನ್ತಾಯನಮಃ.

(ಶಂ॥ ಮ) ಓಮ್, ಸದ್ಭ್ಯೋನಮಃ ಸನ್ಮಾರ್ಗದಲ್ಲಿರತಕ್ಕವರು ಸಂತಃ, ವಿದ್ಯಾವಿನಯಾದಿ ವೃದ್ಧಿಯನ್ನು ಮಾಡಲಪೇಕ್ಷಿಸಿ ಅಂತಹ ಸತ್ಪುರುಷರ ರೂಪದಲ್ಲಿರುವಂತವನು. ಅಥವಾ ಅವರಿಗೆ ಇಷ್ಟವನ್ನುಂಟುಮಾಡತಕ್ಕವನು. ॥೯೨೯॥

## (೯೩೦ನೇ ನಾಮವು) ಜೀವನಃ,

### ಓಮ್॥ ಜೀವನಾಯನಮಃ.

(ಶಂ॥ ಮ) ಸಕಲ ಪ್ರಜೆಗಳನ್ನು ಪ್ರಾಣರೂಪದಿಂದ ಜೀವಿಸುವಂತೆ ಮಾಡುವಂತವನು. (ವಿ॥ ಭಾ) ತನ್ನ ಕೈಯ್ಯಿಂದ ಕೊಲ್ಲಲ್ಪಟ್ಟಿರುವ ಕಾರಣ ಅಂತಹ ಮೊಸಳೆಯನ್ನು ಕೂಡ ಗಂಧರ್ವನನ್ನಾಗಿ ಜೀವಿಸುವಂತೆ ಮಾಡುವಂತವನು. " ಸಹಿದೇವಲ ಶಾಪೇನ ಹೂಹೂಗಂಧರ್ವ ಸತ್ತಮಃ । ಗ್ರಾಹತ್ವಮಗಮ ತ್ಕೃಷ್ಣಾ ದ್ವಧಂ ಪ್ರಾಪ್ಯ ದಿವಂಗತಃ " (ವಿ॥ ಧ॥ ೬೯) ಎಂಬೀ ಪ್ರಮಾಣವನ್ನು ನೋಡಿ. ॥೯೩೦॥

## (೯೩೧ನೇ ನಾಮವು) ಪರ್ಯವಸ್ಥಿತಃ,

### ಓಮ್॥ ಪರ್ಯವಸ್ಥಿತಾಯನಮಃ.

(ಶಂ॥ ಮ) ಸರ್ವ ಪ್ರಪಂಚವನ್ನು ವ್ಯಾಪಿಸಿರುವಂತವನು. (ವಿ॥ಭಾ) ವಾತ್ಸಲ್ಯಾತಿಶಯದಿಂದ ಗಜೇಂದ್ರನ ಸುತ್ತುಮುತ್ತಲೂ ಸುತ್ತಿಕೊಂಡು ಬರುವಂತವನು. ॥೯೩೧॥

ಈ ೯೯ನೇ ಶ್ಲೋಕದಲ್ಲಿ ಪ್ರಕೃತಗಳಾದ (೯) ನಾಮಗಳಿಗೆ " ಸರ ಸಸ್ತಂತಾರಿತವಾನಿ " ತ್ಯುತ್ತರಣ " (೯೦೩) ಈರಿತಃ । ಗ್ರಾಹಂವಿದಾ

ರಯಾಮಾಸ ಯಸ್ಮಾತ್ "ದುಷ್ಕೃತಿಹಾ" (೯೨೪) ಚಸಃ ॥ ಕೀರ್ತ್ಯಾತ್ಸ್ಮರಣಾದೀನಪಿಯೋ ಗಜೇಂದ್ರತ್ರಾಣರೂಪಯಾ । "ಪುಣ್ಯ" (೯೨೫) ಸ್ಸುಕೃತ್ಯಾತ್ಪುನಾತೀತಿ ಷಡರ್ಣಃ ಪಾವನತ್ವದಃ ॥ ಗಜೇಂದ್ರಮೋಕ್ಷಣಾಧ್ಯಾಯ ಜಪಾ ದ್ದುಸ್ಸ್ವಪ್ನಜಂ ಫಲಂ । ನಾಶಯತ್ಯಂಜಸಾಯೋ ಸಾವಿತಿ "ದುಸ್ಸ್ವಪ್ನನಾಶನಃ" (೯೨೬) ವೀರಂ ತದ್ಬಾಧಕಂ ವೃತ್ರಂ ಹತವಾನ್ಯಸ್ಸ "ವೀರಹಾ" (೯೨೭) ಸ್ಪರ್ಶಸಂಶ್ಲೇಷಣಾದ್ಯೈಶ್ಚ ತಂ ರಕ್ಷತೀತಿ ಸ "ರಕ್ಷಣಃ" (೯೨೮) ಯಸ್ಸ್ವಾಶ್ರಿತಾನ್ಸಂತನೋತಿ ಸ "ಸನ್ತ" (೯೨೯) ಇತಿ ಕಥ್ಯತೇ । ತೇಷಾಮಸ್ತೀತಿವಾ 'ಸಂತೋ' ವಚನವ್ಯತ್ಯಯಸ್ಸ್ಮೃತಃ ॥ ತೇಷಾಮಿಷ್ಟಂದತ್ತವಾನ್ವಾಸನೋ ತೇಸ್ಸಂತ ಉಚ್ಯತೆ। ಸ್ವಹಸ್ತೇನ ಹತಂಗ್ರಾಹಂ ಗಂಧರ್ವತ್ವೇನ ಜೀವಯನ್॥ಪೂರ್ವಶಾಪಂ ನಿರಸ್ಯಾದಯಸ್ತುಷ್ಟೇತಿಸ "ಜೀವನಃ" (೯೩೦) ವಾತ್ಸಲ್ಯಾದ್ಯೋ ಗಜೇಂದ್ರಂತು ಪರಿತೋ ವಸನಾಚ್ಚ್ಯಸಃ । "ಪರ್ಯವಸ್ಥಿತ" (೯೩೧) ಆಖ್ಯಾತೋ ನವಾರ್ಣೋಹ್ಯಮಿತ ಪ್ರಪಃ" ಎಂಬೀ ರೀತಿಯಿಂದ ವಿವೃತಿಯನ್ನು ಕಾಣಬೇಕು.

ಮೂ॥ ಅನಂತರೂಪೋ ಽನಂತಶ್ರೀ ರ್ಜಿತಮನ್ಯು
ರ್ಭಯಾಪಹಃ । ಚತುರಶ್ರೋ ಗಭೀರಾತ್ಮಾ ವಿ
ದಿಶೋ ವ್ಯಾದಿಶೋದಿಶಃ ॥೧೦೦॥

(೯೩೨ನೇ ನಾಮವು) ಅನಂತರೂಪಃ,

ಓಮ್॥ ಅನಂತರೂಪಾಯನಮಃ.

(ಶಂ॥ ಭಾ) ಸಮಸ್ತವಾದ ಪ್ರಪಂಚಾದ್ಯನಂತಗಳಾದ ರೂಪಗಳುಳ್ಳವನು. (ವಿ॥ ಭಾ) ಈ ರೀತಿಯಿಂದ ತತ್ಕ್ಷಣದಲ್ಲಿ ಸ್ವೀಕರಿಸಲರ್ಹವಾದ ಅನೇಕ ದಿವ್ಯರೂಪಗಳುಳ್ಳವನು. ॥೯೩೨॥

(೯೩೩ನೇ ನಾಮವು) ಅನಂತಶ್ರೀಃ,

ಓಮ್॥ ಅನಂತಶ್ರಿಯೇನಮಃ.

(ಶಂ॥ ಭಾ) ಅಪಾರವಾದ ಶಕ್ತಿ ಸಂಪತ್ತುಳ್ಳವನು. (ವಿ॥ ಭಾ) ಅಂತಹ ಭಕ್ತರಿಗೆ ಕೊಡಲು ಯೋಗ್ಯವಾದ ಅನಂತವಾದ ಐಶ್ವರ್ಯವುಳ್ಳವನು. ॥೯೩೩॥

(೯೩೪ನೇ ನಾಮವು) ಜಿತಮನ್ಯುಃ,
ಓಮ್॥ ಜಿತಮನ್ಯವೇನಮಃ.

(ಶಂ॥ ಮ) ಕೋಪವನ್ನು ಜಯಿಸಿದವನು. (ವಿ॥ ಭಾ) ಶರಣಾಗತನಾದ ಗಜೇಂದ್ರನಿಗೆ ಶತ್ರುವಾದ ನೀರುಹುಳದಲ್ಲುಂಟಾದ ಕೋಪವನ್ನು ಬಳಿಕ ಜಯಿಸಿದವನು. ॥೯೩೪॥

(೯೩೫ನೇ ನಾಮವು) ಭಯಾಪಹಃ,
ಓಮ್॥ ಭಯಾಪಹಾಯನಮಃ.

(ಶಂ॥ ಮ) ಭಕ್ತರಿಗುಂಟಾಗಿರುವ ಸಂಸಾರ ಭಯ ನಿವರ್ತಕನು. (ವಿ॥ಭಾ) ಇಂತಹ ವಾತ್ಸಲ್ಯವುಳ್ಳವನಾದಕಾರಣ ನಮ್ಮಂತವರಿಗೂ ಕೂಡ 'ನಮ್ಮನ್ನು ಕಾಯುವನಾರ್ಧನಿಲ್ಲ' ವೆಂಬ ಭಯವನ್ನು ಪರಿಹರಿಸುವಂತವನು. ॥೯೩೫॥

(೯೩೬ನೇ ನಾಮವು) ಚತುರಶ್ರಃ,
ಓಮ್॥ ಚತುರಶ್ರಾಯನಮಃ.

(ಶಂ॥ ಮ) ಪುರುಷರಿಗೆ ಚಮತ್ಕಾರದೊಡನೆ ಕರ್ಮಾನುಗುಣವಾದ ಫಲವನ್ನು ಕೊಡುವಂತವನು. (ವಿ॥ ಭಾ) ತನ್ನ ಮಹಿಮೆಗೆ ಅನುರೂಪವಾಗಿ ಕೂಗಿಕೊಂಡ ಗಜೇಂದ್ರನಬಳಿಗೆ ದಿವ್ಯಭೂಷಣಮಾಲ್ಯ ವಸ್ತ್ರಾದಿಗಳು ವ್ಯತ್ಯಸ್ತಗಳಾಗುವಂತೆ ಓಡಿಬಂದವನಾಗಿದ್ದರೂ ಅತ್ಯಲ್ಪವಾದ ಒಂದು ನೀರು ಹುಳದಮೇಲೆ ಕೋಪಿಸಿಕೊಂಡವನಾಗಿದ್ದರೂ ಮಾಡತಕ್ಕ ಕೆಲಸವನ್ನು ಯೋಗ್ಯವಾಗಿರುವಂತೆ ಮಾಡಿದವನು. ಆಶ್ರಿತವಿಷಯದಲ್ಲಿರುವ ರಕ್ಷಣ ತ್ವರೆಯೂ, ಇವರ ವಿರೋಧಿಗಳಲ್ಲಿ ಅಧಿಕಕೋಪವೂ ಯುಕ್ತವಷ್ಟೆ. ॥೯೩೬॥

## (೯೩೭ನೇ ನಾಮವು) ಗಭೀರಾತ್ಮಾ,

### ಓಮ್‖ ಗಭೀರಾತ್ಮನೇನಮಃ.

(ಶಂ‖ ಭಾ) ಇಷ್ಟೆಂದು ವರ್ಣಿಸಲಸಾಧ್ಯವಾದ ಸ್ವರೂಪವು ಮತ್ತು ಚಿತ್ತ ವುಳ್ಳವನು. (ವಿ‖ ಭಾ) ಈ ರೀತಿಯಾಗಿ ಗಜೇಂದ್ರನಂತೆ ಶರಣಾಗತರಿಂದಲ್ಲದೆ ಬ್ರಹ್ಮಾದಿಗಳಿಂದಲೂ ಕೂಡ ಚಲಿಸಲಶಕ್ಯವಾದ ಗಂಭೀರ ಸ್ವಭಾವವುಳ್ಳವನು. ‖೯೩೭‖

## (೯೩೮ನೇ ನಾಮವು) ವಿದಿಶಃ,

### ಓಮ್‖ ವಿದಿಶಾಯನಮಃ.

(ಶಂ‖ ಮ) ತನ್ನನ್ನಾರಾಧಿಸುವ ಆಯಾ ಅಧಿಕಾರಿಗಳಿಗೆ ನಾನಾ ವಿಧ ಫಲಗಳನ್ನು ಕೊಡುವಂತವನು (ವಿ‖ ಭಾ) ಅತಿವಿನಯದೊಡನೆ ಗದ್ಗದ ಧ್ವನಿಯಿಂದ ಸ್ತುತಿಮಾಡುತಲಿರುವ ಬ್ರಹ್ಮಾದಿ ವಾಕ್ಯಗಳಿಗೂ ಅಗೋಚರನಾಗಿರುವಂತನು ‖೯೩೮‖

## (೯೩೯ನೇ ನಾಮವು) ವ್ಯಾದಿಶಃ,

### ಓಮ್‖ ವ್ಯಾದಿಶಾಯನಮಃ.

(ಶಂ‖ ಮ) ಇಂದ್ರಾದಿ ದಿಕ್ಪಾಲಕರಿಗೆ ನಾನಾವಿಧವಾಗಿ ಆಜ್ಞಾಪಿಸುವಂತವನು. (ವಿ‖ ಭಾ) ಅವರುಗಳಿಗೆ ಇಷ್ಟವಾದ ಆಯಾ ಬ್ರಹ್ಮಾದಿ ಪದವಿಯನ್ನು ಕೊಡುವಂತವನು ‖೯೩೯‖

## (೯೪೦ನೇ ನಾಮವು) ದಿಶಃ,

### ಓಮ್‖ ದಿಶಾಯನಮಃ.

(ಶಂ‖ ಮ) ವೇದಸ್ವರೂಪನಾಗಿ ಸಮಸ್ತ ಕರ್ಮ ಫಲವನ್ನು ಕೊಡುವಂತವನು (ವಿ‖ ಭಾ) ಅಂತಹ ಬ್ರಹ್ಮಾದಿಗಳನ್ನು ಗಜೇಂದ್ರನಂತೆ ಅಂತರಂಗರನ್ನಾಗಿ ಮಾಡಿಕೊಳ್ಳಲೆ ಆಜ್ಞಾಪಿಸುವಂತವನಾಗಿಯೂ ಇರುವಂತವನು. ‖೯೪೦‖

ಈ (೧೦೦)ನೇ ಶ್ಲೋಕದಲ್ಲಿರುವ (೯) ನಾಮಗಳಿಗೂ "ಅನಂತ ರೂಪ" (೯೩೦) ಸ್ಸುರ್ಯ್ಯಾದ್ವ್ಯೈಯಸ್ಯಾ ಸಂಖ್ಯೇಯ ವಿಗ್ರಹಾಃ| ದೇಯಾ ಸ್ಸ್ವವಾಪ್ತಿಪರ್ಯಂತಾ ಶ್ರಿಯೋಽನನ್ತಸ್ಯನಿತ್ಯಶಃ || ಪ್ರಸನ್ನೇಭ್ಯೋ ಯಸ್ಯಸಂತಿಸೊ "ನಂತಶ್ರೀ" (೯೩೩) ರಿತಿಸ್ಮೃತಃ | ಗಜೇಂದ್ರದ್ವೇ ಷಿಣೋಯೇಚ ಕೀಟಾದ್ಯಾಜಲವಾಸಿನಃ | ಯಸ್ತೇಷುಮನ್ಯುಂಜಿತವಾ ಜ್ "ಜಿತಮನ್ಯುಃ" (೯೩೪) ಸಕಥ್ಯತೇ || ಅನಾಥಶ್ವ ಭಯಂಹಂತಿ ವಾ ತ್ಸಲ್ಯೇನೈವಪಾದೃಶಾಂ | "ಭಯಾಪಹಃ" (೯೩೫) ಸಮಾಖ್ಯಾತೊ ವಸ್ವಾರ್ಣ್ಣೋ ಮನುರುತ್ತಮಃ || ಸಮವೇತಕಾರೀಯಸ್ಸ್ಯಾದ್ವೈ "ಚತು ರಶ್ರ" (೯೩೬) ಸ್ಸಕೀರ್ತಿತಃ | ಧಾತ್ರಾದೀನಾ ಮಪ್ರಧೃಷ್ಯಂಗಾಂ ಭೀರ್ಯಂ ಯಸ್ಯವಿದ್ಯತೇ | "ಗಭೀರಾತ್ಮಾ" (೯೩೭) ಸವಿಜ್ಞೇಯೋ ವಸ್ವರ್ಣ್ಣೋ ಮನುರುತ್ತಮಃ | ವಿನಯಾದ್ದದ್ದದಸ್ತೋತ್ರ ಧಾತ್ರಾದೀ ನಾಂ ವಿಶೇಷತಃ || ದೂರೇಽಸ್ಯವಿವಿಧಾದೇಶಾ "ವಿದಿಶ" (೯೩೮) ಸ್ಸತು ಕೀರ್ತಿತಃ | ಬ್ರಹ್ಮಾದೀನಾಂ ತತ್ತಸ್ಸ್ಥಾನ ಸರ್ಜನಾ "ದ್ವ್ಯಾದಿಶ" (೯೩೯) ಶ್ಚಸಃ|| ಧಾತ್ರಾದೀ ಸರ್ವಕೃತ್ಯೇಷು ಹ್ಯಾಜ್ಞಾಪಯತಿ ಯಸ್ಸ ದಾ | "ದಿಶ" (೯೪೦) ಸ್ಸತುಸಮಾಖ್ಯಾತ ಷ್ಷಡರ್ಣ್ಣೋ ಮನುರುತ್ತ ಮಃ || " ಎಂಬಂತೆ ವಿವೃತಿಯನ್ನು ಕಾಣಬಹುದು.

ಮೂ|| ಅನಾದಿ ರ್ಭೂರ್ಭುವೋ ಲಕ್ಷ್ಮೀ ಸ್ಸುವೀ
ರೋ ರುಚಿರಾಂಗದಃ | ಜನನೋ ಜನಜನ್ಮಾದಿ
ರ್ಭೀಮೋ ಭೀಮಪರಾಕ್ರಮಃ ||೧೦೧||

(೯೪೧ನೇ ನಾಮವು) ಅನಾದಿಃ,

ಓಮ್|| ಅನಾದಯೇನಮಃ.

(ಶಂ|| ಮ) ತಾನೇ ಸರ್ವಕಾರಣನಾದ ಕಾರಣ ತನಿಗೆ ಬೇರೊಂದು ಕಾರಣ ವಸ್ತುವಿಲ್ಲದವನು. (ವಿ|| ಭಾ) ಈ ರೀತಿಯಾಗಿ ತಿರ್ಯಗ್ಜಾತಿ ಯಲ್ಲಿ ಹುಟ್ಟಿದ ಭಕ್ತರಿಗೆ ವಶಪಟ್ಟಿರುವಂತವನು ಬ್ರಹ್ಮಾದಿಗಳಿಗೆ ಅಲ್ಪವಾದ ಫಲವನ್ನು ಕೊಡುವುದಕ್ಕೆ ಕಾರಣವೇನೆಂದರೆ:—ಅನಾದಿಃ—

ಅವರು ಅನ್ಯಪರವಾಗಿ ಇವನನ್ನು ಸ್ವಾಮಿಯಾಗಿ ಸ್ವೀಕರಿಸದ ಕಾರಣ ದಿಂದ ಅವರಿಗೆ ಅಲ್ಪ ಫಲವನ್ನು ಕೊಡುವನು. ||೯೪೧||

(೯೪೨ನೇ ನಾಮವು) ಭೂರ್ಭುವಃ,

ಓಮ್|| ಭುವೋಭುವೇನಮಃ.

(ಶಂ|| ಭಾ) ಸಕಲ ಭೂತಗಳಿಗೂ ಆಧಾರವಾದದ್ದು ಭೂಃ ಎನ್ನಲ್ಪಡುವುದು. ಸರ್ವಾಶ್ರಯನಾದಕಾರಣ ಪ್ರಸಿದ್ಧವಾದ ಭೂಮಿಗೂ ಕೂಡ ಆಧಾರವಾಗಿರುವಂತವನು. (ಮ) ಭೋಃ-ಭುವೇನಮಃ ಸಮಸ್ತವೂ ಇವನಿಂದುಂಟಾಗುವುದು. (ವಿ|| ಭಾ) ಅವನ ದಾಸ್ಯವನ್ನು ಅಪೇಕ್ಷಿಸುವುದರಿಂದ ಆತ್ಮಲಾಭವನ್ನು ಹೊಂದದವರಿಗೆ ಸ್ಥಾನಭೂತನಾಗಿರುವಂತವನು. ||೯೪೨||

(೯೪೩ನೇ ನಾಮವು) ಲಕ್ಷ್ಮೀಃ,

ಓಮ್|| ಲಕ್ಷ್ಮ್ಯೇನಮಃ.

(ಶಂ|| ಭಾ) ಭೂಮಿಗೆ ಆಧಾರಭೂತನು ಮಾತ್ರವಲ್ಲದೇ ಶೋಭಾರೂಪನಾಗಿಯೂ ಇರುವಂತವನು. (ಅಥವಾ) ಭೂರ್ಭುವೋಲಕ್ಷ್ಮೀಃ ಏಕನಾಮವು. ಭೂಲೋಕ ಭುವರ್ಲೋಕಗಳಿಗೆ ಆತ್ಮವಿದ್ಯಾರೂಪನು. ಅಥವಾ ಭೂಮ್ಯಂತರಿಕ್ಷಗಳಲ್ಲಿ ಪ್ರಶಂಸಿಸಲ್ಪಟ್ಟ ಶುಭಾಕಾರನಾಗಿರುವಂತವನು. (ವಿ|| ಭಾ) ಈ ರೀತಿಯಾಗಿ ಅವರಿಗೆ ಸರ್ವ ಸಂಪದಾಶ್ರಯನಾಗಿರುವಂತವನು. (ಮ) ಭುವೋಲಕ್ಷ್ಮೀಃ ಎಂಬದಾಗಿ ವ್ಯಸ್ತವಾದ ಏಕನಾಮವು. ಭೂಮಿಗೆ ಸಂಪದಾಶ್ರಯನು. ||೯೪೩||

(೯೪೪ನೇ ನಾಮವು) ಸುವೀರಃ,

ಓಮ್|| ಸುವೀರಾಯನಮಃ.

(ಶಂ|| ಭಾ) ಮಂಗಳಕರಗಳೂ ವಿವಿಧಗಳೂ ಆದ ಗತಿಗಳುಳ್ಳವನು. ಅಥವಾ ಶುಭಕರಗಳಾದ ನಾನಾವಿಧ ಪ್ರೇರಣೆಗಳುಳ್ಳವನು. (ವಿ||ಭಾ) ಅವರಿಗೆ ಕ್ಷೀಣಗತಿ ಯುಂಟಾಗದಂತೆ ಕಾಯುವುದಕ್ಕೆ ಸಮರ್ಥನು. ||೯

## (೯೪೫ನೇ ನಾಮವು) ರುಚಿರಾಂಗದಃ,

### ಓಮ್|| ರುಚಿರಾಂಗದಾಯನಮಃ

(ಶಂ|| ಭಾ) ಮನೋಹರಗಳಾದ ಭುಜಕೀರ್ತಿ ಎಂಬ ಆಭರಣಗಳುಳ್ಳವನು. (ವಿ|| ಭಾ) ಅವರಿಗೆ ಅನುಭವಯೋಗ್ಯವೂ ಅತಿ ಮನೋಹರವೂ ಆದ ತನ್ನ ದಿವ್ಯಮಂಗಳ ವಿಗ್ರಹವನ್ನು ತರುವಂತನು. ||೯೪೫||

## (೯೪೬ನೇ ನಾಮವು) ಜನನಃ,

### ಓಮ್|| ಜನನಾಯನಮಃ.

(ಶಂ|| ಮ) ಜಂತುಗಳನ್ನು ಸೃಷ್ಟಿಸುವಂತವನು. (ವಿ|| ಭಾ) ಇನ್ನು ಮುಂದೆ ಪರಮಾತ್ಮನ ಸರ್ವ ವ್ಯಾಪಾರಗಳಿಗೂ ಪ್ರಯೋಜನವು ವರ್ಣಿಸಲ್ಪಡುವುದು. ಭಗವದನುಭವ ಯೋಗ್ಯವಾದ ಇಂದ್ರಿಯಗಳಿಂದ ಕೂಡಿದವರನ್ನೂ ಮತ್ತು ಅನ್ಯರನ್ನೂ ಸೃಷ್ಟಿಸುವಂತವನು. ||೯೪೬||

## (೯೪೭ನೇ ನಾಮವು) ಜನಜನ್ಮಾದಿಃ,

### ಓಮ್|| ಜನಜನ್ಮಾದಯೇನಮಃ.

(ಶಂ|| ಭಾ) ಉತ್ಪತ್ತಿಯುಳ್ಳ ಜಂತುಗಳ ಸೃಷ್ಟಿಗೆ ಮೂಲಕಾರಣನು. (ವಿ|| ಭಾ) ಅಂತಹ ಜನಗಳ ಹುಟ್ಟುವಿಕೆಗೆ ಫಲಭೂತನು. ||೯೪೭||

## (೯೪೮ನೇ ನಾಮವು) ಭೀಮಃ,

### ಓಮ್|| ಭೀಮಪರಾಕ್ರಮಃ.

(ವಿ|| ಭಾ) ಅಂತಹ ಮಹದನುಗ್ರಹಕ್ಕೆ ಪಾತ್ರರಾಗದವರಿಗೆ ನರಕಾದಿಗಳನ್ನು ಕೊಡುವುದರಿಂದ (ಶಂ|| ವಿ|| ಮ) ಭಯಂಕರನು. ||೯೪೮||

## (೯೪೯ನೇ ನಾಮವು) ಭೀಮಪರಾಕ್ರಮಃ,

### ಓಮ್|| ಭೀಮಪರಾಕ್ರಮಾಯನಮಃ.

(ವಿ|| ಶಂ) ಲೋಕ ಕಂಟಕರಾದ ಹಿರಣ್ಯಾದಿಗಳ ವಿಷಯದಲ್ಲಿ ಭಯಂಕರವಾದ ಪರಾಕ್ರಮವುಳ್ಳವನು. ||೯೪೯||

ಈ ರೀತಿಯಾಗಿ (೧೦೧)ನೇ ಶ್ಲೋಕದಲ್ಲಿರುವ ೯ ನಾಮಗಳಗೂ "ದೇವತಾಂತರ ಭಕ್ತೈರ್ಯಃ ಕುತ್ಸಿತೈಶ್ಚಾಪಿ ಸರ್ವದಾ | ನಾದೀಯತೇ ಸ್ವಾಭಿಮತಂ "ಅನಾದಿಃ" (೯೪೧) ಪರಿಕೀರ್ತಿತಃ || ತತ್ಥ್ಯಸ್ಯದಾಸ್ಯ ಜ್ಞಾನೇನ ಹ್ಯಾತ್ಮಲಾಭವತಃ ಫಲಂ | ಭವತಿ ಸ್ವಯಮೇವೇತಿ "ಭೂರ್ಭುವ" (೯೪೨) ಸ್ಸಚ ಕಥ್ಯತೇ || ಆತ್ಮಲಾಭವತಾಂ ಸರ್ವ ಸಂಪ "ಲ್ಲಕ್ಷ್ಮೀಃ" (೯೪೩) ಸಯುತ್ಮಸ್ಮೃತಃ | ತೇಷಾಂ ಯೋವಿನಿಪಾತಸ್ಯ ಪ್ರತೀಕಾರಂ ಕರೋತಿಸಃ|| "ಸುವೀರ" (೯೪೪) ಇತಿ ವಿಖ್ಯಾತ ಸ್ಸಪಾತ್ರೋ ಮನುರುತ್ತಮಃ ||. ಪ್ರಪನ್ನೇಭ್ಯ ಸ್ಸ್ವಾನುಭವಯೋಗ್ಯಮಂಗಂ ಮನೋಹರಂ | ಅಪ್ರಾಕೃತಂ ಸದಾದತ್ತೇ ಯೋಸಾಸ್ಯ "ರುಚಿರಾಂಗದಃ" || (೯೪೫) ಅಥೋಚ್ಯತೇತ್ರ ಭಗವದ್ವ್ಯಾಪಾರಾಣಾಂ ಪ್ರಯೋಜನಂ | "ಜನನೋ-ಜನ ಜನ್ಮಾದಿ" (೯೪೬-೭) ರ್ನ್ನಪಾರ್ರ್ಯೋ ಜನ್ಮನಾಶಕಃ || ಏವಂ ವಿಧಾನುಗ್ರಹಸ್ಯ ವಿಮುಖಾನಾಂ ನಿರಂತರಂ | ಗರ್ಭಜನ್ಮಾದಿ ಹೇತುತ್ವಾ "ದ್ಭೀಮ" (೯೪೮) ಇತ್ಯುಚ್ಯತೆ ಬುಧೈಃ || ಲೋಕಾಹಿತೇಷು ನಿತರಾಂ ಹಿರಣ್ಯಾದಿಷು ಸರ್ವದಾ | ಭೀಮಃ ಪರಾಕ್ರಮೋ ಯಸ್ಯ ಸಸ್ಯಾ "ದ್ಭೀಮಪರಾಕ್ರಮಃ" (೯೪೯) ಎಂಬಂತೆ ವಿವೃತಿಯನ್ನು ಕಾಣಬಹುದು.

ಮೂ|| ಆಧಾರನಿಲಯೋ ಧಾತಾ ಪುಷ್ಪಹಾಸಃ

ಪ್ರಜಾಗರಃ | ಊರ್ಧ್ವಗ ಸ್ಸತ್ಪಥಾ ಚಾರಃ ಪ್ರಾಣದಃ ಪ್ರಣವಃ ಪಣಃ ||೧೦೨||

(೯೫೦ನೇ ನಾಮವು) ಆಧಾರನಿಲಯಃ,

ಓಮ್|| ಆಧಾರನಿಲಯಾಯನಮಃ.

(ಶಂ|| ಭಾ) ಲೋಕಾಧಾರಭೂತಗಳಾದ ಪೃಥಿವ್ಯಾದಿ ಪಂಚಭೂತಗಳಿಗೂ ಆಧಾರನು. (ವಿ|| ಭಾ) ಧಾರ್ಮಿಕರಾಗಿರುವುದರಿಂದ ಪ್ರಪಂಚಕ್ಕೆ

ಲ್ಲವೂ ಆಧಾರಭೂತರಾಗಿರುವ ಪ್ರಹ್ಲಾದ ವಿಭೀಷಣ ಪಾಂಡವಾದಿಗಳಿಗೆ ಸ್ಥಾನಭೂತನಾಗಿರುವಂತವನು. (ಮ) ಆಧಾರಭೂತನಾದ ಮೂಲ ರೂಪಿಯಾಗಿರುವ ಶ್ರೀಮನ್ನಾರಾಯಣನಲ್ಲಿ ಸರ್ವ ಪ್ರಪಂಚವೂ ಪ್ರಳಯದಲ್ಲಿ ಲಯಿಸುವುದರಿಂದ "ಆಧಾರ ನಿಲಯಃ" ಎನ್ನಲ್ಪಡುವನು. ॥೯೫೦॥

## (೯೫೧ನೇ ನಾಮವು) ಧಾತಾ,
## ಓಮ್॥ ಧಾತ್ರೇನಮಃ.

(ಶಂ॥ ಮ) ಅಧಾತಾ–ತಾನೇ ಸರ್ವಕಾರಣನಾಗಿರುವುದರಿಂದ ತನಿಗೆ ಬೇರೊಂದು ಕಾರಣ ವಿಲ್ಲದವನು. (ಅಥವಾ) ಸಂಹಾರ ಸಮಯದಲ್ಲಿ ಸರ್ವ ಪ್ರಜೆಗಳನ್ನು ಪಾನಮಾಡುವಂತವನು. (ವಿ॥ ಭಾ) ಇವನೂ ಧರ್ಮಾನುಷ್ಠಾನಕ್ಕಾಗಿ ಆಚಾರ್ಯ ಪದವನ್ನು ನಿರ್ವಹಿಸುವಂತವನು. ಎಂದರೆ ಲೋಕಸಂಗ್ರಹಾರ್ಥವಾಗಿ ತಾನು ಧರ್ಮಗಳನ್ನು ಅನುಷ್ಠಿಸಿ ಅನ್ಯರನ್ನು ಕೂಡ ಆ ಮಾರ್ಗದಲ್ಲಿ ಪ್ರತಿಷ್ಠಿಸುವಂತವನೆಂದರ್ಥವು. ॥೯೫೧॥

## (೯೫೨ನೇ ನಾಮವು) ಪುಷ್ಪಹಾಸಃ,
## ಓಮ್॥ ಪುಷ್ಪಹಾಸಾಯನಮಃ.

( ಶಂ॥ ಭಾ ) ಮುಕುಳಾಕಾರವಾಗಿರುವ ಪುಷ್ಪಗಳ ವಿಕಾಸದಂತೆ ಇರುವ ಪ್ರಪಂಚ ರೂಪವಾದ ವಿಕಾಸವುಳ್ಳವನು. (ವಿ॥ ಭಾ) ಈ ರೀತಿಯಾಗಿ ಭಗವದನುಭವ ಯೋಗ್ಯವಾದ ಸಿದ್ಧಿಯನ್ನು ಹೊಂದಿದವರಿಗೆ ಸಾಯಂಕಾಲ ವೇಳೆಯಲ್ಲಿ ಅರಳುವ ಪುಷ್ಪದಂತೆ ತನ್ನ ಭೋಗ್ಯಾತಿಶಯವನ್ನು ಕೊಡುವಂತವನು. ॥೯೫೨॥

## (೯೫೩ನೇ ನಾಮವು) ಪ್ರಜಾಗರಃ,
## ಓಮ್॥ ಪ್ರಜಾಗರಾಯನಮಃ.

(ಶಂ॥ ಮ) ಸರ್ವಕಾಲಗಳಲ್ಲಿಯೂ ಅತ್ಯಂತ ಜಾಗರೂಕನಾಗಿರುವಂತವನು. (ವಿ॥ ಭಾ) ಕೃಷಿಪರನಾದವನು ಪೈರುಗಳನ್ನು ಕಾಯುವಂತೆ ಭಕ್ತರನ್ನು ರಾತ್ರಿಹಗಲು ಜಾಗರೂಕನಾಗಿ ಕಾಯುವಂತವನು. ॥೯೫೩॥

## (೯೫೪ನೇ ನಾಮವು) ಊರ್ಧ್ವಗಃ,
### ಓಮ್|| ಊರ್ಧ್ವಗಾಯನಮಃ.

ಭಾ) ಸರ್ವರಿಗಿಂತಲೂ ಉಪರಿಭಾಗದಲ್ಲಿರುವಂತವನು. (ವು) ಸರ್ವೋನ್ನತವಾದ ವೈಕುಂಠದಲ್ಲಿರುವಂತವನು. ಇವನು ಸರ್ವಗತನಾಗಿದ್ದರೂ ಶ್ರೀವೈಕುಂಠದಲ್ಲಿ ವಿಶೇಷಾಭಿವ್ಯಕ್ತಿಯನ್ನುಂಟುಮಾಡುವುದರಿಂದ ಇಲ್ಲಿ ಈ ರೀತಿಯಾಗಿ ಹೇಳಿರುವರು. (ವಿ| ಭಾ) ಏತಕ್ಕೋಸ್ಕರವಾಗಿ ಇವನು ಜಾಗರೂಕನಾಗಿರಬೇಕೆಂದರೆ:–ಸ್ವಭಾವದಿಂದಲೇ ಸರ್ವೋನ್ನತವಾದ ಸ್ವಭಾವವುಳ್ಳವನು. ||೯೫೪||

## (೯೫೫ನೇ ನಾಮವು) ಸತ್ಪಥಾಚಾರಃ,
### ಓಮ್|| ಸತ್ಪಥಾಚಾರಾಯನಮಃ.

(ಶಂ|| ಮ) ಸತ್ಪುರುಷರ ಆಚರಣೆಯಲ್ಲಿರುವಂತವನು. ಎಂದರೆ :– ಸತ್ಪುರುಷರು ಆಚರಿಸುವ ಕರ್ಮಗಳನ್ನಾಚರಿಸುವಂತವನೆಂದರ್ಥವು. (ವಿ|| ಭಾ) ಈ ರೀತಿಯಾಗಿ ತಾನು ಉನ್ನತಸ್ವಭಾವನಾಗಿರುವದಕ್ಕೆ ಫಲಭೂತವಾಗಿ ಅವರನ್ನು ಸ್ವಭಾವಸಿದ್ಧವಾದ ತನ್ನ ದಾಸ್ಯದಲ್ಲಿ ಪ್ರವೇಶಿಸುವಂತೆ ಮಾಡುವಂತವನು. ||೯೫೫||

## (೯೫೬ನೇ ನಾಮವು) ಪ್ರಾಣದಃ,
### ಓಮ್|| ಪ್ರಾಣದಾಯನಮಃ.

(ಶಂ|| ಭಾ) ಮರಣವನ್ನು ಹೊಂದಿದ ಪರೀಕ್ಷಿದಾದಿಗಳನ್ನು ಜೀವಿಸುವಂತೆ ಮಾಡಿದವನು. (ಮ) ಸರ್ವಪ್ರಾಣಿಗಳನ್ನು ಚೇಷ್ಟಿಸುವಂತೆ ಮಾಡುವಂತವನು. ಅಥವಾ ಬಲವನ್ನು ಕೊಡುವಂತವನು. (ವಿ|ಭಾ) ಶಬ್ದಾದಿ ಕ್ಷುದ್ರವಿಷಯಗಳಿಂದ ಮೂರ್ಛಿತರಾದ ಪ್ರಾಣಿಗಳಿಗೆ ಆತ್ಮೋಜ್ಜೀವನವನ್ನು ತರುವಂತವನು. ||೯೫೬||

## (೯೫೭ನೇ ನಾಮವು) ಪ್ರಣವಃ,
### ಓಮ್|| ಪ್ರಣವಾಯನಮಃ.

(ಶಂ॥ ಭಾ) ಪರಮಾತ್ಮವಾಚಕವಾದ ಓಂಕಾರವು ಪ್ರಣವವೆನ್ನಲ್ಪಡುವುದು. ಆ ಅಕ್ಷರದೊಡನೆ ಅಭೇದವಾಗಿ ಸೇವಿಸಲ್ಪಡುವಂತವನು. (ವಿ॥ ಭಾ) ಪ್ರಣವಾಕ್ಷರದಿಂದ ತನಿಗೂ ಚೇತನರಿಗೂ ಉಂಟಾಗಿರುವ ಸ್ವಸ್ವಾಮಿಭಾವ ಸಂಬಂಧವನ್ನು ಅವರಿಗೆ ಬೋಧಿಸಿ "ಮಾಂನಮಸ್ಕುರು" ಎಂಬದಾಗಿ ತನ್ನ ಚರಣಾರವಿಂದಗಳಲ್ಲಿ ಅವರನ್ನು ಬಗ್ಗುವಂತೆ ಮಾಡುವಂತವನು (ಮ) ಸರ್ವವೇದಸ್ತುತ್ಯನು. ‖೯೫೭‖

## (೯೫೮ನೇ ನಾಮವು) ಪಣಃ,

### ಓಮ್॥ ಪಣಾಯನಮಃ.

(ಶಂ॥ ಮ) ವ್ಯವಹಾರವನ್ನು ಅತಿಕ್ರಮಿಸಿದವನಾದರೂ ವ್ಯವಹಾರವನ್ನು ಮಾಡುವಂತವನು. ಅದವಾ ಪಾವನಗಳಾದ ಸರ್ವ ಕರ್ಮಗಳನ್ನು ಫಲಗಳೊಡನೆ ಸಂಗ್ರಹಿಸಿ ಅಧಿಕಾರಿಗಳಿಗೆ ಕೊಡುವಂತವನು (ವಿ॥ ಭಾ) ಈ ಪ್ರಕಾರವಾಗಿ ತನ್ನ ಸ್ವಾಮಿತ್ವಕ್ಕೂ ಅವರ ಸ್ವಭಾವಕ್ಕೂ ತಕ್ಕಂತೆ ವ್ಯವಹರಿಸುವಂತವನು. ‖೯೫೮‖

ಈ ಪ್ರಕಾರವಾಗಿ (೧೦೨)ನೇ ಶ್ಲೋಕದಲ್ಲಿ "ಧಾರ್ಮಿಕಾ ಜಗದಾಧಾರಾ ಪ್ರಹ್ಲಾದಾದ್ಯಾ ವಿಶೇಷತಃ। ತೇಷಾಂತು ನಿಲಯಸ್ಸ್ಥಾನಂ "ಆಧಾರನಿಲಯ" ಶ್ಚ (೯೫೦) ಸಃ ॥ ಸ್ವಯಂಚಧರ್ಮಾ ಚಾರತ್ವಾ "ದ್ಧಾತೇ" (೯೫೧) ತಿಪರಿಕೀರ್ತ್ಯತೇ। ಸ್ವಾತ್ಮಾನುಭವಶಕ್ತೇನಾಂ ಸಾಯಂ ಪುಷ್ಪ ವದಸ್ಯವೈ। ಹಾಸೋಸ್ತಿಭೋಗ್ಯತೋಲ್ಲಾಸಃ "ಪುಷ್ಪಹಾಸ" (೯೫೨) ಇತಿಸ್ಮೃತಃ ॥ ರಾತ್ರಿಂದಿವಂ ಪ್ರಜಾಗರ್ತಿಸಸ್ಯೇಷ್ವೇವ ಕೃಷೀವಲಃ। ಭಕ್ತೇಷುಸಿತರಾಂಯೋಸೌ "ಪ್ರಜಾಗರ" (೯೫೩) ಇಹೋಚ್ಯತೇ ॥ ಯೋಸೌಸ್ವಭಾವತಸ್ತುಂಗ "ಊರ್ಧ್ವಗಃ" (೯೫೪) ಪರಿಕೀರ್ತಿತಃ। "ಸತ್ಪಥಾಚಾರ" (೯೫೫) ಇತ್ಯುಕ್ತಸನ್ಮಾರ್ಗೇತಪ್ರವರ್ತನಾತ್ ॥ ಕಾನ್ತಾದಿ ವಿಷಯವ್ಯಾಪ್ತ್ಯಾ ನಷ್ಟಾತ್ಮಭ್ಯಃ ಕೃಪಾವಶಾತ್। ಸದಾತ್ಮೋಜ್ಜೀವನಂಯೋಸೌ ದದಾತಿ "ಪ್ರಾಣದಃ" (೯೫೬) ಸ್ಮೃತಃ ॥ ಆತ್ಮೋಜ್ಜೀವನಸಂಬಂಧ ಮುದ್ಬೋಧ್ಯ ಪ್ರಣವೇನವೈ। ಪಾದಾರವಿಂದಯೋಸ್ಸ್ವೈಃ ಪ್ರಣಾಮಯತಿನಿತ್ಯಶಃ ॥ "ಪ್ರಣವ" (೯೫೭)

(ಶಂ॥ ಭಾ) ಒಬ್ಬನಾದ ಆತ್ಮನು. ಎಂದರೆ :—(ವಿ॥ ಭಾ) ಚೇತನಾಚೇತನ ವರ್ಗಗಳಿಗೆಲ್ಲಾ ತಾನೊಬ್ಬನೆ ಶೇಷಿಯೂ ಭೋಕ್ತೃವಾಗಿಯೂ ಅಭಿಮಾನಿಯಾಗಿಯೂ ಇರುವಂತವನು. ॥೯೬೫॥

(೯೬೬ನೇ ನಾಮವು) ಜನ್ಮಮೃತ್ಯುಜರಾತಿಗಃ,

ಓಮ್॥ ಜನ್ಮಮೃತ್ಯುಜರಾತಿಗಾಯನಮಃ.

(ಶಂ॥ ಭಾ) ಹುಟ್ಟುವುದು ಸಾಯುವುದು ವೃದ್ಧಿಹೊಂದುವುದು ಕ್ಷಯಿಸುವುದೆಂಬಿದೇ ಮೊದಲಾದ ಷಡ್ಭಾವ ವಿಕಾರಕ್ಕೆ ಮೀರಿದವನು. (ವಿ॥ ಭಾ) ಹೀಗಿದ್ದರೂ ತನ್ನಿಂದ ವ್ಯಾಪಿಸಲ್ಪಟ್ಟ ಚೇತನಾಚೇತನಗಳ ಧರ್ಮಗಳಾದ ಉತ್ಪತ್ತಿ ವಿನಾಶಾದಿಗಳಿಗೆ ಮೀರಿದವನು ॥೯೬೬॥

ಇಲ್ಲಿ ಪ್ರಕೃತಗಳಾದ ನಾಮಗಳಿಗೆ "ಪರಮಾರ್ಥತ್ರಯೀಸಾರ ಪ್ರತ್ಯಾಯಕತಯಾ ಸ್ವಯಂ। "ಪ್ರಮಾಣ" (೯೫೯) ಮಿತಿವಿಖ್ಯಾತಸ್ಸಪ್ತರ್ಷಿರ್ಮನುರುತ್ತಮಃ ॥ ಯಸ್ಮಿನ್ನಿತ್ಯಂ ಪ್ರತೀಯಂತೇ ಪ್ರಾಣಾಜೀವಾ ಸ್ಸದಾಗ್ರಜೇ। ಶಕುಂತಾ ಇವನೀಡೇಽಪಿಸ "ಪ್ರಾಣನಿಲಯಃ" (೯೬೦) ಸ್ಮೃತಃ॥ ತಾನ್ಮಾತೃವದ್ಧಾರಯತಿ "ಪ್ರಾಣಧೃತ್" (೯೬೧) ಸಸ್ಮೃತೋಽಬುಧೈಃ। ಜೀವಯತ್ಯನ್ನವಜ್ಜೀವಾನ್ಸಉಕ್ತಃ "ಪ್ರಾಣಜೀವನಃ" (೯೬೨)॥ ಸಾರಾಂಶಭೂತೋ ಜಗತೋ ಯೋಽಸೌ "ತತ್ವ" (೯೬೩) ಮಿತಿಸ್ಮೃತಃ। ವೇತ್ತಿಯಸ್ಸ್ವಾತ್ಮನಸ್ತತ್ವಂ "ತತ್ವವಿತ್" (೯೬೪) ಸಚಕಥ್ಯತೇ ॥ ಶೇಷೀಭೋಕ್ತಾಽಭಿಮಾನೀಚ ಏಕಶ್ಚಿದಚಿತೋಽಸ್ತಯಃ। "ಏಕಾತ್ಮಾ" (೯೬೫) ಇತಿಸಪ್ರೋಕ್ತಸ್ಸರ್ವಪ್ರಾಣಪ್ರದೋಮನುಃ॥ ಚಿದಚಿದ್ಧರ್ಮಹೀನೋಽಯೋ "ಜನ್ಮಮೃತ್ಯು ಜರಾತಿಗಃ" (೯೬೬) ಎಂಬಂತೆ ವಿವೃತಿಯನ್ನು ಕಾಣಬೇಕು.

ಮೂ॥ ಭೂರ್ಭುವಃ ಸ್ವಸ್ತರು ಸ್ತಾರ ಸ್ಸವಿತಾ
ಪ್ರಪಿತಾಮಹಃ। ಯಜ್ಞೋ ಯಜ್ಞಪತಿ ರ್ಯ
ಜ್ವಾ ಯಜ್ಞಾಂಗೋ ಯಜ್ಞವಾಹನಃ ॥೧೦೪॥

(೯೬೭ನೇ ನಾಮವು) ಭೂರ್ಭುವಸ್ಸ್ವಸ್ತರುಃ,

ಓಮ್॥ ಭೂರ್ಭುವಸ್ಸ್ವಸ್ತರವೇನಮಃ.

(ಶಂ॥ ಭಾ) "ಅಗ್ನೌ ಪ್ರಾಸ್ತಾಹುತಿಸ್ಸಮ್ಯ ಗಾದಿತ್ಯಮುಪತಿಷ್ಠತೇ | ಆದಿತ್ಯಾಜ್ಜಾಯತೇವೃಷ್ಟಿ ರ್ವೃಷ್ಟೇರನ್ನಂತತಃ ಪ್ರಜಾಃ" (೩॥೭೬)ಎಂಬೀ ಮನುವಚನದಂತೆ ಭೂರ್ಭುವಸ್ಸ್ವರ್ಲೋಕಗಳು ಮೂರೂ ಶುಕ್ರವೆನ್ನಲ್ಪಡುವುವೆಂದು ಬಹ್ವೃಚರು ಹೇಳುವರು. ಅವರು ಹೋಮಾದಿಗಳಿಂದ ಮೂರುಲೋಕಗಳನ್ನು ದಾಟುವರು ಆದುದರಿಂದ ಅವರಿಗೆ ತಾರಕನಾದವನು ಈ ನಾಮದಿಂದ ಹೇಳಲ್ಪಡುವನು. ಅಥವಾ ಭೂರ್ಭುವಸ್ಸುವಃ ಎಂಬ ನಾಮದಿಂದ ಲೋಕತ್ರಯಾತ್ಮಕವಾದ ಸಂಸಾರವೃಕ್ಷವು ಹೇಳಲ್ಪಡುವದು. ಇಂತಹ ಲೋಕತ್ರಯಗಳನ್ನು ವೃಕ್ಷದಂತೆ ವ್ಯಾಪಿಸಿರುವಂತವನು. (ಮ) ಈ ಲೋಕತ್ರಯಗಳಿಗೆ ಕಾರಣನು (ವಿ॥ ಭಾ) ಮಾರ್ಗಸ್ಥಗಳಾದ ಪಕ್ಷಿಗಳಿಗೆ ಆಶ್ರಯಭೂತವಾದ ಮಹಾ ಪಾರಿಜಾತ ವೃಕ್ಷದಂತೆ ಲೋಕತ್ರಯವರ್ತಿಗಳಾದ ಪ್ರಾಣಿಕೋಟಿಗಳಿಗೆ ಆಶ್ರಯಭೂತನು. ॥೯೬೭॥

## (೯೬೮ನೇ ನಾಮವು) ತಾರಃ,
## ಓಮ್॥ ತಾರಾಯನಮಃ.

(ಶಂ॥ ವಿ॥ ಮ) ಅವರುಗಳಿಗೆ ಸಂಸಾರತಾರಕನು ಅಥವಾ (ಶಂ॥ ಮ) ಪ್ರಣವಾಕ್ಷರಸ್ವರೂಪನು. ॥೯೬೮॥

## (೯೬೯ನೇ ನಾಮವು) ಸವಿತಾ,
## ಓಮ್॥ ಸವಿತ್ರೇನಮಃ.

(ಶಂ॥ ವಿ॥ ಮ) ಸರ್ವಲೋಕಕ್ಕೂ ತಂದೆಯಾದವನು. (ಮ) ಸಪಿತಾ ಎಂದು ಪಾಠವಿರುವದಾಗಿ ತೋರುತ್ತದೆ. ॥೯೬೯॥

## (೯೭೦ನೇ ನಾಮವು) ಪ್ರಪಿತಾಮಹಃ,
## ಓಮ್॥ ಪ್ರಪಿತಾಮಹಾಯನಮಃ.

(ಶಂ॥ ವಿ॥ ಮ) ಸರ್ವರಿಗೂ ಪಿತಾಮಹನಾದ ಚತುರ್ಮುಖಬ್ರಹ್ಮನಿಗೂ ತಂದೆಯಾದವನು ॥೯೭೦॥

## (೯೭೧ನೇ ನಾಮವು) ಯಜ್ಞಃ,

ಓಮ್॥ ಯಜ್ಞಾಯನಮಃ.

(ಶಂ॥ ಮ) ಯಜ್ಞಸ್ವರೂಪನು. (ವಿ॥ ಭಾ) ತನ್ನನ್ನಾರಾಧಿಸು ವಿಕೆ ಎಂಬ ಸಮೃದ್ಧಿ ಇಲ್ಲದವರು ಅಂತಹ ಆರಾಧನರೂಪವಾದ ಸಂಪತ್ತ ನ್ನು ಕೋರಿದರೆ ಅವರುಗಳಿಗೆ ಜಪಯಜ್ಞವೆಂಬ ಆರಾಧನಾರೂಪವಾಗಿರು ವಂತವನು ॥೯೭೧॥

## (೯೭೨ನೇ ನಾಮವು) ಯಜ್ಞಪತಿಃ,

ಓಮ್॥ ಯಜ್ಞಪತಯೇನಮಃ.

(ಶಂ॥ ಮ) ಯಜ್ಞರಕ್ಷಕನು ಅಥವಾ (ಮ) ಯಜ್ಞಗಳಿಗೆ ಸ್ವಾ ಮಿಯು. (ವಿ॥ ಬಾ) ತನ್ನ ಆರಾಧನಕ್ಕೆ ಫಲಪ್ರದನಾಗಿರುವುದರಿಂದ ಪ ತಿಯಾದವನು ॥೯೭೨॥

## (೯೭೩ನೇ ನಾಮವು) ಯಜ್ವಾ,

ಓಮ್॥ ಯಜ್ವನೇನಮಃ.

(ವಿ॥ ಭಾ) ತನ್ನ ಆರಾಧನರೂಪವಾದ ಯಜ್ಞವನ್ನು ಅನುಷ್ಠಿ ಸಲು ಶಕ್ತಿ ಇಲ್ಲದವರಿಗೆ ಬದಲಾಗಿ ತಾನೇ ಅನುಷ್ಠಿಸುವುದರಿಂದ (ಶಂ॥ ಮ॥ ವಿ) ಯಜಮಾನರೂಪನಾಗಿ ಇರುವಂತವನು. ॥೯೭೩॥

## (೯೭೪ನೇ ನಾಮವು) ಯಜ್ಞಾಂಗಃ,

ಓಮ್॥ ಯಜ್ಞಾಂಗಾಯನಮಃ.

(ವಿ॥ ಭಾ) ಶಕ್ತಿಯುಳ್ಳವರನುಷ್ಠಿಸುವ ಯಜ್ಞವನ್ನು ಕೂಡ ತ ನಿಗೆ ಶೇಷಭೂತವಾಗಿ ಮಾಡಿಕೊಳ್ಳುವಂತವನು (ಶಂ॥ಮ)ಯಜ್ಞಗಳನ್ನೇ ಅವಯವವಾಗಿವುಳ್ಳ ವರಾಹಮೂರ್ತಿಯು. ಇಲ್ಲಿ "ವೇದಪಾದೋಯೂ ಪದಂಷ್ಟ್ರಃ" ಇತ್ಯಾದಿ ಭಾಷ್ಯೋದಾಹೃತವಾದ ಹರಿವಂಶ ಪ್ರಮಾಣಗ ಳನ್ನರಿಯಬೇಕು. ॥೯೭೪॥

(೯೭೫ನೇ ನಾಮವು) ಯಜ್ಞವಾಹನಃ,
ಓಮ್॥ ಯಜ್ಞವಾಹನಾಯನಮಃ.

(ವಿ॥ ಭಾ) ಅವರುಗಳಿಗೆ ಭಕ್ತಿಶ್ರದ್ಧಾದಿಗಳನ್ನು ಕೊಟ್ಟು ಯಜ್ಞಗಳನ್ನು ನಡಿಸುವಂತವನು. (ಶಂ॥ ಭಾ) ಫಲಕ್ಕೆ ಕಾರಣಭೂತವಾದ ಯಜ್ಞವನ್ನು ವಹಿಸುವಂತವನು. ॥೯೭೫॥

ಇಲ್ಲಿ ಪ್ರಕೃತಗಳಾದ ನಾಮಗಳಿಗೆ "ಭೂತಾದಿಭಿರ್ಲಕ್ಷಿತಾನಾಂ ಜೀವಾನಾಂ ಯಸ್ಸಮಾಶ್ರಯಃ। "ಭೂರ್ಭುವಸ್ಸ್ವಸ್ತರು" (೯೬೭) ಸ್ಸರ್ವ್ಯೈದ್ಧಶಾರ್ಣಸ್ಸರ್ವದೋಮನುಃ ॥ ಸಂಸಾರ ಕಾರಣಾತ್ತೇಷಾಂ "ತಾರಃ" (೯೬೮) ಸ್ಸ್ಯಾತ್ಪ್ರಾಣಿನಾಂ ಸದಾ। ಸಾಕ್ಷಾಜ್ಜನಯಿತಾಯೋಸೌ ಸರ್ವಸ್ಯ "ಸವಿತಾ" (೯೬೯) ಸ್ಮೃತಃ॥ ಪಿತಾಮಹಸ್ಯ ಜನಕಃ "ಪ್ರಪಿತಾಮಹ" (೯೭೦) ಉಚ್ಯತೇ। ಜಪಯಜ್ಞಸ್ವರೂಪತ್ವಾ "ದ್ಯಜ್ಞ" (೯೭೧) ಇತ್ಯುಚ್ಯತೇ ಬುಧೈಃ॥ ಯಜ್ಞಸ್ಯ ಫಲದೋ ಯಸ್ಮಾತ್ತಸ್ಮಾ "ದ್ಯಜ್ಞಪತಿಃ" (೯೭೨) ಸ್ಮೃತಃ। ಅಶಕ್ತಾಂಸ್ತು ಸ್ವಯಂ ಯಷ್ಟೃತಂ "ಯಜ್ವೇ" (೯೭೩) ತಿ ಪ್ರಚಕ್ಷತೇ॥ ಶೇಷಶ್ಯಕ್ತ್ಯ ಕೃತೋ ಯಜ್ಞೋ ಯಸ್ಯ "ಯಜ್ಞಾಂಗ" (೯೭೪) ಉಚ್ಯತೇ॥ ತೇಷಾಂ ಶ್ರದ್ಧಾಧಿಕಾರಾದಿ ದಾನಾತ್ಸ್ಯಾ "ದ್ಯಜ್ಞವಾಹನಃ" (೯೭೫) ಎಂಬಂತೆ ವಿವೃತಿಯನ್ನು ಕಾಣಬೇಕು.

ಮೂ॥ ಯಜ್ಞಭೃ ದ್ಯಜ್ಞಕೃ ದ್ಯಜ್ಞೀ ಯಜ್ಞ
ಭು ಗ್ಯಜ್ಞಸಾಧನಃ । ಯಜ್ಞಾಂತಕೃ ದ್ಯಜ್ಞ
ಗುಹ್ಯ ಮನ್ನ ಮನ್ನಾದಏವಚ ॥೧೦೫॥

(೯೭೬ನೇ ನಾಮವು) ಯಜ್ಞಭೃತ್,
ಓಮ್॥ ಯಜ್ಞಭೃತೇನಮಃ

(ವಿ॥ ಭಾ) ಅವರನುಷ್ಠಿಸುವ ಯಜ್ಞಗಳಲ್ಲಿ ಲೋಪವುಂಟಾದರೆ ತನ್ನನ್ನು ಸ್ಮರಿಸುವುದರಿಂದಲೂ ತನಿಗೆ ಪೂರ್ಣಾಹುತಿಯನ್ನು ಕೊಡುವು

ದರಿಂದಲೂ ಅದನ್ನು ಶುಂಗವಾಗಿ ನೆರವೇರಿಸುವಂತವನು. " ಪ್ರಮಾದಾ ತ್ಕುರ್ವತಾಂ ಕರ್ಮ ಪ್ರಚ್ಯವೇತಾಧ್ವರೇಷುಯತ್ | ಸ್ಮರಣಾದೇವತದ್ವಿ ಷ್ಣೋ ಸ್ಸಂಪೂರ್ಣಂಸ್ಯಾದಿತಿಶ್ರುತಿಃ" ಎಂಬೀಪ್ರಮಾಣವನ್ನರಿಯಬೇಕು. (ಶಂ|| ಮ) ಯಜ್ಞವನ್ನು ಭರಿಸುವಂತವನು. ಅಥವಾ ರಕ್ಷಿಸುವಂ ತವನು. ||೯೭೬||

## (೯೭೭ನೇ ನಾಮವು) ಯಜ್ಞಕೃತ್,
## ಓಮ್|| ಯಜ್ಞಕೃತೇನಮಃ.

(ವಿ|| ಭಾ) ಲೋಕಹಿತಾರ್ಥವಾಗಿ ಮೊದಲು ಯಜ್ಞವನ್ನು ಸೃ ಷ್ಟಿಸಿದವನು. (ಶಂ|| ಭಾ) ಪ್ರಪಂಚದ ಆದಿಯಲ್ಲಿಯೂ ಕಡೆಯಲ್ಲಿಯೂ ಯಜ್ಞವನ್ನು ಮಾಡುವಂತವನು. ಅಥವಾ ಛೇದಿಸುವಂತವನು. ||೯೭೭||

## (೯೭೮ನೇ ನಾಮವು) ಯಜ್ಞೀ,
## ಓಮ್|| ಯಜ್ಞಿನೇನಮಃ.

(ಶಂ|| ವಿ) ಭಗವದಾರಾಧನರೂಪಗಳಾದ ಯಜ್ಞಗಳಿಗೆ ಶೇಷಿಯು. ಎಂದರೆ ಸ್ವಾಮಿಯು. (ಮ) ಯಜ್ಞವುಳ್ಳವನು. ||೯೭೮||

## (೯೭೯ನೇ ನಾಮವು) ಯಜ್ಞಭುಕ್,
## ಓಮ್|| ಯಜ್ಞಭುಜೇನಮಃ.

(ಶಂ|| ಮ|| ವಿ) ಅಂತಹ ಯಜ್ಞಗಳನ್ನು ಭುಜಿಸುವಂತವನು. ಅಥ ವಾ ಪರಿಪಾಲನ ಮಾಡುವಂತವನು. ||೯೭೯||

## (೯೮೦ನೇ ನಾಮವು) ಯಜ್ಞಸಾಧನಃ,
## ಓಮ್|| ಯಜ್ಞಸಾಧನಾಯನಮಃ.

(ಶಂ|| ಭಾ) ಭಗವತ್ಪ್ರಾಪ್ತಿರೂಪವಾದ ಫಲದಿಂದ ಯಜ್ಞವನ್ನು ಸಾಧಿಸುವಂತವನು. (ವಿ|| ಭಾ) ಜ್ಞಾನವನ್ನುಂಟುಮಾಡುವುದರಿಂದ ತ

ನ್ನ ಪ್ರಾಪ್ತಿಯನ್ನು ಕೊಡುವುದರಿಂದ ತನ್ನ ಪ್ರಾಪ್ತಿಪರ್ಯಂತವಾಗಿ ಯಜ್ಞವನ್ನು ಸಾಧಿಸುವಂತವನು. ||೯೮೦||

## (೯೮೧ನೇ ನಾಮವು) ಯಜ್ಞಾಂತಕೃತ್,

## ಓಮ್|| ಯಜ್ಞಾಂತಕೃತೇನಮಃ.

(ವಿ|| ಭಾ) ಯಜ್ಞಾನುಷ್ಠಾನವು ತನ್ನ ತತ್ವವನ್ನು ತಿಳಿಯುವುದಕ್ಕೆಂಬ ಸಿದ್ಧಾಂತವನ್ನು ಮಾಡಿದವನು. (ಶಂ|| ಭಾ) ಯಜ್ಞಫಲವನ್ನು ಉಂಟುಮಾಡುವಂತವನು. ಅಥವಾ ಪೂರ್ಣಾಹುತಿ ಎಂಬ ವೈಷ್ಣವೀ ಋಕ್ಪ್ರಶಂಸನದಿಂದ ಯಜ್ಞಕ್ಕೆ ಸಮಾಪ್ತಿಯನ್ನು ಮಾಡುವಂತವನು. ||೯೮೧||

## (೯೮೨ನೇ ನಾಮವು) ಯಜ್ಞಗುಹ್ಯಂ,

## ಓಮ್|| ಯಜ್ಞಗುಹ್ಯಾಯನಮಃ.

(ಶಂ|| ಭಾ) ಯಜ್ಞಗಳಲ್ಲಿ ರಹಸ್ಯತಮವಾದ ಜ್ಞಾನಯಜ್ಞಸ್ವರೂಪನು. ಅಥವಾ ಫಲಾಭಿಸಂಧಿರಹಿತವಾದ ಯಜ್ಞನು. ಅಭೇದೋಪಚಾರದಿಂದ ಬ್ರಹ್ಮವೇ ಯಜ್ಞಗುಹ್ಯವೆನ್ನಲ್ಪಡುವದು. (ವಿ|| ಭಾ) ತಾನು ಫಲಾಭಿಸಂಧಿ ರಹಿತನಾಗಿದ್ದರೂ ಯಜ್ಞಾದಿಗಳಲ್ಲಿ ಫಲಾಪೇಕ್ಷೆಯುಳ್ಳವನಂತೆ ಪುರೋಡಾಶಾದಿಗಳಾದ ಯಜ್ಞಸಂಬಂಧವಾದ ಹವಿಸ್ಸನ್ನು ಭುಜಿಸಿ ತೃಪ್ತಿಹೊಂದುವದರೊಡನೆ ತೃಪ್ತಿಯನ್ನುಂಟುಮಾಡುವನೆಂಬೀ ಅಂಶವನ್ನು ಯಜ್ಞವಿಧಿಯೇ ಮೊದಲಾದುದ್ದನ್ನು ಅರಿತವರಿಗಲ್ಲದೆ ಇತರರಿಗೆ ತಿಳಿಯದಂತೆ ರಹಸ್ಯವಾಗಿಡುವಂತವನು. ||೯೮೨||

## (೯೮೩ನೇ ನಾಮವು) ಅನ್ನಂ,

## ಓಮ್|| ಅನ್ನಾಯನಮಃ.

(ಶಂ|| ಮ) "ಅದ್ಯತೇತ್ತಿಚ ಭೂತಾನಿ ತಸ್ಮಾದನ್ನಂ ತದುಚ್ಯತೆ" ಎಂಬೀ ತೈತ್ತಿರೀಯ ಶ್ರುತ್ಯನುಸಾರವಾಗಿ ಭೂತಗಳನ್ನು ಭುಜಿಸುವಂತವನು. (ವಿ|| ಭಾ) ಈ ರೀತಿಯಾಗಿ ಪರಮಾತ್ಮನನ್ನು ಅನುಭವಿಸುವಂ

ತಹ ಶಕ್ತಿಯನ್ನು ಪಡೆದವರಿಗೆ ಅನ್ನದಂತೆ ಧಾರಕವಾಗಿರುವಂತವನು. ||೯೯೩||

## (೯೯೪ನೇ ನಾಮವು) ಅನ್ನಾದಃ,

### ಓಮ್|| ಅನ್ನಾದಾಯನಮಃ.

(ವಿ|| ಭಾ) ಅವರುಗಳನ್ನು ಕೂಡ ಹಾಗೆಯೇ ಭುಜಿಸುವಂತವನು. (ಶಂ|| ಭಾ) ಅನ್ನವನ್ನು ಭುಜಿಸುವಂತವನು 'ಅನ್ನಾದಃ' ಎನ್ನಲ್ಪಡುವನು. ಮತ್ತು ಸರ್ವ ಪ್ರಪಂಚವೂ ಅನ್ನಾದರೂಪದೊಡನೆ ಅಗ್ನೀಷೋಮಾತ್ಮಕವೆಂಬ ಅಂಶವನ್ನು ಬೋಧಿಸುವದಕ್ಕಾಗಿ 'ಏವಚ' ಎಂದು ಹೇಳಿರುವರು |೯೯೪||

ಇಲ್ಲಿ ಪ್ರಕೃತಗಳಾದ ನಾಮಗಳಿಗೆ "ಪೂರ್ಣಾಹುತಿ ಸ್ವಸ್ಮೃತಿಭ್ಯಾಂ ವಿಫಲಾಯಜ್ಞಮಪ್ಯತ | ಪುಷ್ಣಾತಿ " ಯಜ್ಞಭೃ " (೯೭೬) ತ್ವಸ್ಯಾತ್ವಪಾಣೋ ಮನುರುತ್ತಮಃ || ಜಗದ್ಧಿತಾಯ ಕೃತವಾನ್ಯಜ್ಞಮಾದೌಸ " ಯಜ್ಞಕೃತ್ " (೯೭೭) | ಯಸ್ಸರ್ವೇಷಾಂತು ಯಜ್ಞಾನಾಂ ಶೇಷೀ " ಯಜ್ಞೀ " (೯೭೮) ತಿ ಕಥ್ಯತೆ || ಭುಂಕ್ತೇತಾನ್ಯಾಭೋಜಯತಿ " ಯಜ್ಞಭುಕ್ " (೯೭೯) ಸಚಕಥ್ಯತೆ | ಜ್ಞಾನದ್ವಾರಾ ಸಿದ್ಧ್ಯುಪಾಯೋಯ ಸ್ಸಸ್ಯಾ " ದ್ವಜ್ಞಸಾಧನಃ " (೯೮೦) || ಸಮಾಪ್ತಿಂಚೈವ ಯಜ್ಞಾನಾಂ ಸ್ವತತ್ವ ಜ್ಞಾನತಃಕ್ಷಣಾತ್ | ನಿರಪೇಕ್ಷಂ ಯಃಕರೋತಿ ಸ " ಯಜ್ಞಾಂತಕೃ ", (೯೮೧) ದುಚ್ಯತೆ || ಯಸ್ತರ್ಪಯತಿಯಜ್ಞೇಷು ನಿತ್ಯತೃಪ್ತೋಪ್ಯ ತೃಪ್ತವತ್ | ಪುರೋಡಾಶಾದಿಕಂಭುಕ್ತ್ವಾ ವಿ ತೃಪ್ಯನ್ನ್ಯಾನ್ವಿಶೇಷತಃ || ತದ್ಯಜ್ಞವಿಧಿಗತ್ಯಾದಿ ವಿದವಿವವಿದಂತಿಹಿ | ನಸ್ಥೂಲಬುದ್ಧ ಯಸ್ತಸ್ಮಾ " ದ್ಯಜ್ಞಗುಹ್ಯ " (೯೮೨) ಮಿತಿಸ್ಮೃತಃ || ಏವಂ ನಿಷ್ಪಾದಿತಾನಂತ ಭೋಕ್ತೃಶಕ್ತಿ ಸಮುಸ್ವಿಕೈಃ | ಭುಜ್ಯತೇಯ ಸ್ಸದಾಕಾಲಂ ಸೋ " ಽನ್ನ " (೯೯೩) ಮಿತ್ಯುಚ್ಯತೇ ಬುಧೈಃ|| ಯಆದ್ಯತ್ತೇ ತಥಾಭುಂಕ್ತೇ ಸ್ವಯಂಸೋ " ನ್ನಾದ " (೯೯೪) ಈರಿತಃ || " ಎಂಬಂತೆ ವಿವೃತಿಯನ್ನು ಕಾಣಬೇಕು

ಮೂ|| ಆತ್ಮಯೋನಿ ಸ್ಸ್ವಯಂಜಾತೊ ವೈಖಾನ
ಸ್ಸಾಮಗಾಯನಃ | ದೇವಕೀನಂದನ ಸ್ಸ್ರಷ್ಟಾ
ಕ್ಷಿತೀಶಃ ಪಾಪನಾಶನಃ ||೧೦೬||

## (೯೮೫ನೇ ನಾಮವು) ಆತ್ಮಯೋನಿಃ,
### ಓಮ್|| ಆತ್ಮಯೋನಯೇನಮಃ.

(ಶಂ|| ಭಾ) ಆತ್ಮಯೋನಿ ಎಂದರೆ ;—ಉಪಾದಾನಕಾರಣವು. (ವಿ|| ಭಾ) ಹಾಲಿನೊಡನೆ ಸಕ್ಕರೆಯನ್ನು ಸೇರಿಸಿದಂತೆ ಭೋಕ್ತಾ (ಜೀವರು) ಗಳನ್ನು ತನ್ನೊಡನೆ ಸೇರಿಸಿಕೊಳ್ಳುವಂತವನು. (ಮ) ಕಾರಣಾಂತರವಿಲ್ಲದನು. ||೯೮೫||

## (೯೮೬ನೇ ನಾಮವು) ಸ್ವಯಂಜಾತಃ,
### ಓಮ್|| ಸ್ವಯಂಜಾತಾಯನಮಃ.

(ಶಂ|| ವಿ|| ಮ) ಯಾರಿಂದಲೂ ಪ್ರಾರ್ಥಿತನಾಗದೆ ತಾನಾಗಿಯೇ ಹುಟ್ಟಿದವನು. (ಶಂ) ಇದರಿಂದ ನಿಮಿತ್ತಕಾರಣವೂ ಅವನೇ ಎಂದು ಸೂಚಿತವಾಯಿತು. ||೯೮೬||

## (೯೮೭ನೇ ನಾಮವು) ವೈಖಾನಃ,
### ಓಮ್|| ವೈಖಾನಾಯನಮಃ.

(ಶಂ|| ಮ) ಭೂಮಿಯನ್ನು ಅಗದವನು. ವರಾಹಾವತಾರದಲ್ಲಿ ಪಾತಾಳವಾಸಿಯಾದ ಹಿರಣ್ಯಾಕ್ಷನನ್ನು ಸಂಹರಿಸುವುದಕ್ಕಾಗಿ ಭೂಮಿಯನ್ನು ಅಗದವನೆಂದರ್ಥವು. (ವಿ|| ಭಾ) ಅವತರಿಸಿ ಸಂಸಾರದುಃಖವನ್ನು ನಾನಾವಿಧವಾಗಿ ಶಬ್ದಿಸುವಂತೆ ಮಾಡುವಂತವನು. ||೯೮೭||

## (೯೮೮ನೇ ನಾಮವು) ಸಾಮಗಾಯನಃ,
### ಓಮ್|| ಸಾಮಗಾಯನಾಯನಮಃ.

(ವಿ|| ಭಾ) ತನ್ನನ್ನು ಹೊಂದುವುದೆಂಬ ಮಧುಪಾನದಿಂದ "ಹಾವು! ಹಾವು! ಹಾವು" ಎಂಬ ಸಾಮಗಾನವನ್ನು ಮಾಡುತಲಿರುವ ಮುಕ್ತ ಪುರುಷರುಳ್ಳವನು. (ಶಂ|| ಮ) ಸಾಮಗಾನ ಮಾಡುವಂತವನು. ||೯೮೮||

(೯೮೯ನೇ ನಾಮವು) ದೇವಕೀನಂದನಃ,

ಓಮ್|| ದೇವಕೀನಂದನಾಯನಮಃ.

(ವಿ|| ಭಾ) ಇಂತಹ ವೈಭವವುಳ್ಳ ಪರಮಾತ್ಮನು ಯಾರು ? ಎಂದರೆ:—ಪರಾವಸ್ಥೆಯುಳ್ಳ ಪರಮಪುರುಷನಲ್ಲವು, ದೇವಕೀಕುಮಾರನಾದ ಶ್ರೀಕೃಷ್ಣನು. ||೯೮೯||

(೯೯೦ನೇ ನಾಮವು) ಸ್ರಷ್ಟಾ,

ಓಮ್|| ಸ್ರಷ್ಟ್ರೇನಮಃ.

(ವಿ|| ಭಾ) ಪರಾವಸ್ಥೆಯಲ್ಲಿದ್ದುಕೊಂಡು ಸೃಷ್ಟಿಸುವಂತವನೂ ಇವನೇ. (ಶಂ) ಸರ್ವವೂ ತಾನೆ. ಇದಕ್ಕೆ "ಜ್ಯೋತೀಂಷಿ ಶುಕ್ರಾಣಿಚ ಯಾನಿಲೋಕೇ ತ್ರಯೋ ಲೋಕಾಲೋಕ ಪಾಲಾಸ್ತ್ರಯೀಚ| ತ್ರಯೋಗ್ನಯಶ್ಚಾಹುತಯಶ್ಚ ಪಂಚ ಸರ್ವೇದೇವಾ ದೇವಕೀ ಪುತ್ರಏವ" ಎಂಬೀ ಭಾರತ ವಚನವನ್ನು ನೋಡಬೇಕು. ||೯೯೦||

(೯೯೧ನೇ ನಾಮವು) ಕ್ಷಿತೀಶಃ,

ಓಮ್|| ಕ್ಷಿತೀಶಾಯನಮಃ.

(ಶಂ|| ಭಾ) ಭೂಮಿಗೆ ಪ್ರಭುವಾದ ದಾಶರಥಿರಾಮನು. (ವಿ|| ಭಾ) ಸರ್ವೇಶ್ವರನಾಗಿದ್ದರೂ ಅತ್ಯಂತ ಕನಿಕರದಿಂದ ಭೂಭಾರವೇ ಮೊದಲಾದ ಭೂದೇವಿಯ ಕಷ್ಟಗಳನ್ನು ಪರಿಹರಿಸಿದವನು. ||೯೯೧||

(೯೯೨ನೇ ನಾಮವು) ಪಾಪನಾಶನಃ,

ಓಮ್|| ಪಾಪನಾಶನಾಯನಮಃ.

(ಶಂ|| ಭಾ) ಸ್ಮರಣಮಾತ್ರದಿಂದ ಪಾಪವನ್ನು ನಾಶಪಡಿಸುವಂತವನು. ಇದರ ಕ್ರಮವು "ಪಕ್ಷೋಪವಾಸಾದ್ಯತ್ಪಾಪಂ ಪುರುಷಸ್ಯ ಪ್ರಣಶ್ಯತಿ| ಪ್ರಾಣಾಯಾಮ ಶತೇ ನೈವ ತತ್ಪಾಪಂ ನಶ್ಯತೇನೃಣಾಂ || ಪ್ರಾ

ಣಾಯಾಮ ಸಹಸ್ರೇಣ ಯತ್ಪಾಪಂ ನಶ್ಯತೇನೃಣಾಂ | ಕ್ಷಣಮಾತ್ರೇಣ ತತ್ಪಾಪಂ ಹರೇರ್ಧ್ಯಾನಾತ್ಪ್ರಣಶ್ಯತಿ " ಎಂಬದಾಗಿ ವೃದ್ಧಶಾತಾತಪ ಸ್ಮೃತಿಯಲ್ಲಿ ಹೇಳಲ್ಪಟ್ಟಿರುವುದು

(ಇದರ ಅರ್ಥವು :—೧೫ ದಿವಸಗಳಿಗೆ ಒಂದು ಪಕ್ಷವು ಇಂತಹ ಪಕ್ಷೋಪವಾಸದಿಂದ ಮನುಷ್ಯನಿಗೆ ಎಷ್ಟು ಪಾಪಗಳು ವಿನಾಶವನ್ನು ಹೊಂದುವುವೋ ಅಷ್ಟು, ನೂರು ಪ್ರಾಣಾಯಾಮಗಳಿಂದ ನಶಿಸುವುವು. ಹೀಗೆಯೇ ಸಹಸ್ರ ಪ್ರಾಣಾಯಾಮಗಳಿಂದ ಎಷ್ಟು ಪಾಪಗಳು ನಶಿಸುವವೋ ಅಷ್ಟು ಪಾಪಗಳೂ ಕ್ಷಣಮಾತ್ರದಲ್ಲಿ ಮಾಡಲ್ಪಟ್ಟ ಹರಿಧ್ಯಾನದಿಂದ ನಶಿಸುವುದೆಂದರ್ಥವು)

(ವಿ॥ಭಾ)ತಾನು ಮಾಡುವ ಮೊಸರು ಬೆಣ್ಣೆಗಳ ಕಳವು,ರಾಸಕ್ರೀಡೆ, ಮೊದಲಾದ ನಾನಾವಿಧಗಳಾದ ಚೇಷ್ಟೆಗಳನ್ನು ಪ್ರತಿಪಾದಿಸುವ ಕಥಾಮೃತಗಳಿಂದ ತನ್ನ ಭಕ್ತರಿಗುಂಟಾಗಿರುವ ಬಾಹ್ಯಾಭ್ಯಂತರ ಪಾಪಗಳನ್ನು ನಾಶಪಡಿಸುವಂತವನು. ॥೯೯೨॥

ಇಲ್ಲಿ ಪ್ರಕೃತಗಳಾದ ನಾಮಗಳಿಗೆ " ಭೋಕ್ತಾರಮಾತ್ಮನಾನಿತ್ಯಂ ಯೋಯೋಜಯತಿ ಸರ್ವದಾ | " ಆತ್ಮಯೋನಿ " (೯೮೫) ಸ್ವಚೈವೋಕ್ತೋವ ಸ್ವರ್ಣ ಸ್ಸುಖಭೋಗದಃ ॥ ಜಾತೋಯೋಸೌ " ಸ್ವಯಂ ಜಾತಃ " (೯೮೬) ಪ್ರಾರ್ಥನಾದ್ಯನಪೇಕ್ಷಯಾ | ಜನಿತ್ವಾ ಭವದುಃಖಂ ಯೋ ವಿವಿಧಂ ಸ್ವನತಿಸ್ವತಃ ॥ " ವೈಖಾನ " (೯೮೭) ಸ್ಸಚನಿರ್ದಿಷ್ಟ ಸ್ಸಪಾತ್ರೋಽಖಿಲದುಃಖಹಾ | ಸ್ವಪ್ರಾಪ್ತಿ ಮಧುಪಾನೇನ ನಿರತಾ ಸ್ಸಾಮಗೀತಿಷು ॥ ನಿತ್ಯಮುಕ್ತಾಸ್ಸಂತಿಯಸ್ಯ ನಉಕ್ತ " ಸಾಮಗಾಯನಃ"(೯೮೮)|ದೇವಕ್ಯಾಸ್ತನಯತ್ವೇನ ಪರಾವಸ್ಥಃ ಪ್ರಜಜ್ಞಿವಾನ್॥ ವಾತ್ಸಲ್ಯಾದವರೋ ಯೋಸೌ " ದೇವಕೀನಂದನಃ " (೯೮೯) ಸ್ಮೃತಃ| ಪರಾವಸ್ಥಂ ಪ್ರಸನ್ನೋಸೌ "ಸ್ರಷ್ಟಾ"(೯೯೦)ಇತಿಸರ್ಜನಾತ್ಸ್ಮೃತಃ॥ ಭೂಭಾರಕ್ಲೇಶಹಾರೀಯಃ " ಕ್ಷಿತೀಶ " (೯೯೧) ಸ್ಸಚಕಥ್ಯತೇ | ದೇವಕೀತನಯತ್ವೇಪಿ ಪ್ರಸನ್ನಾನಾಂ ವಿಶೇಷತಃ ॥ ಬಾಹ್ಯಾಂತಶ್ಶತ್ರುಸಂಹಾರೀ ಯಸ್ಸಸ್ಯಾ " ಪಾಪನಾಶನಃ " (೯೯೨) ॥ " ಎಂಬಂತೆ ವಿವೃತಿಯನ್ನು ಕಾಣಬಹುದು.

ಮೂ॥ ಶಂಖಭೃನ್ನಂದಕೀ ಚಕ್ರೀ ಶಾರ್ಙ್ಗಧನ್ವಾ
ಗದಾಧರಃ॥ ರಥಾಂಗಪಾಣಿ ರಕ್ಷೋಭ್ಯ ಸ್ಸರ್ವಪ್ರ
ಹರಣಾಯುಧಃ ॥೧೦೭॥

## (೯೯೩ನೇ ನಾಮವು) ಶಂಖಭೃತ್,
## ಓಮ್॥ ಶಂಖಭೃತೇನಮಃ.

(ಶಂ॥ ಭಾ) ಭೂತಾದಿಯಾದ ಅಹಂಕಾರಾತ್ಮಕವಾದ ಪಾಂಚಜನ್ಯವೆಂಬ ಶಂಖವನ್ನು ಧರಿಸಿದವನು. (ವಿ॥ ಭಾ) ಅವತಾರದಲ್ಲಿ ತನ್ನ ಪಾರಮೈಶ್ವರ್ಯಸೂಚಕವಾದ ದಿವ್ಯಾಯುಧಗಳನ್ನು ಧರಿಸುವುದರಿಂದ ;—ಶಂಖಭೃತ್—ತನ್ನ ತುಟಿ ಎಂಬ ಪ್ರವಾಳಾಮೃತದಿಂದ ಪಾಂಚಜನ್ಯವನ್ನು ಶಬ್ದಿಸುವಂತೆ ಮಾಡುವಂತವನು. ॥೯೯೩॥

## (೯೯೪ನೇ ನಾಮವು) ನನ್ದಕೀ,
## ಓಮ್॥ ನಂದಕಿನೇನಮಃ.

(ಶಂ॥ ಭಾ) ವಿದ್ಯಾಮಯುವಾದ ನಂದಕವೆನ್ನಲ್ಪಡುವ ಖಡ್ಗವನ್ನು ಅಥವಾ (ಮ) ಮಣಿಯನ್ನು ಧರಿಸಿದವನು. (ವಿ॥ ಭಾ) ಇದು ನನ್ನನ್ನು ಸಂತೋಷಪಡಿಸುವುದೆಂದು ಪರಮಪುರುಷನಿಂದಲೂ ಕೂಡ ಪ್ರಾರ್ಥಿಸಲ್ಪಡುವ ನಂದಕವೆಂಬ ಖಡ್ಗವುಳ್ಳವನು. ॥೯೯೪॥

## (೯೯೫ನೇ ನಾಮವು) ಚಕ್ರೀ,
## ಓಮ್॥ ಚಕ್ರಿಣೇನಮಃ.

(ಶಂ॥ ಭಾ) ಮನಸ್ತತ್ವಾತ್ಮಕವಾದ ಸುದರ್ಶನವೆಂಬ ಚಕ್ರವುಳ್ಳವನು. ಅಥವಾ ಸಂಸಾರ ಚಕ್ರಪ್ರವರ್ತಕನು. (ವಿ॥ ಭಾ) ಸರ್ವಕಾಲದಲ್ಲಿಯೂ ನೋಡುವುದಕ್ಕೆ ಪ್ರಿಯುವಾದದ್ಭುತಮ್ಮ ಪರಿಜನಗಳಾದ ದೇವತೆಗಳಿಗೆ ವಿರೋಧಿಗಳಾಗಿ ಬರುವ ಅಸುರರಾಕ್ಷಸರ ರಕ್ತದಿಂದ ಕಲ್ಮಷವುಳ್ಳ ಜ್ವಾಲಾಯುಕ್ತವೂ ಆದ ಚಕ್ರವನ್ನು ನಿತ್ಯವಾಗಿ ಹಿಡಿದವನು. ॥೯೯೫॥

## (೯೯೬ನೇ ನಾಮವು) ಶಾರ್ಙ್ಗಧನ್ವಾ,

### ಓಮ್॥ ಶಾರ್ಙ್ಗಧನ್ವನೇನಮಃ.

(ವಿ॥ ಶಂ॥ ಮ) ಆರೋಪಿಸಲ್ಪಟ್ಟ ಹಗ್ಗವುಳ್ಳ ಟಂಕಾರಧ್ವನಿಯಿಂದಲೂ ಬಾಣವರ್ಷಗಳಿಂದಲೂ ಶತ್ರುಸಂಹಾರಕವಾದ ಇಂದ್ರಿಯಾದಿಯಾಗಿರುವ ಅಹಂಕಾರಾತ್ಮಕವಾದ ಶಾಂರ್ಙ್ಗವೆಂಬ ಧನುಸ್ಸುಳ್ಳವನು. ॥೯೯೬॥

## (೯೯೭ನೇ ನಾಮವು) ಗದಾಧರಃ,

### ಓಮ್॥ ಗದಾಧರಾಯನಮಃ.

(ವಿ॥ ಭಾ) ಸುತ್ತುಮುತ್ತಲೂ ಸುತ್ತುವಾಗ ಪ್ರಳಯಾಗ್ನಿಯಂತೆ ಎಲ್ಲೆಲ್ಲಿಯೂ ಅಗ್ನಿಖಂಡವನ್ನು ಎಸೆಯುವುದರಿಂದ ಶತ್ರುಸಂಹಾರಕವಾಗಿರುವುದರಿಂದ ನಿತ್ಯವಾಗಿ ತನಿಗೆ ಸಂತೋಷವನ್ನು ಕೊಡುವ (ಶಂ) ಬುದ್ಧಿತತ್ವಾತ್ಮಕವಾದ ಕೌಮೋದಕೀ ಎಂಬ ಗದೆಯನ್ನು ಧರಿಸಿದವನು. ॥೯೯೭॥

## (೯೯೮ನೇ ನಾಮವು) ರಥಾಂಗಪಾಣಿಃ,

### ಓಮ್॥ ರಥಾಂಗಪಾಣಯೇನಮಃ.

(ಶಂ॥ ವಿ॥ ಮ) ಚಕ್ರಪಾಣಿಯು (ವಿ॥ ಭಾ) ಹಿಂದೆ ಚಕ್ರೀ ಎನ್ನುವಾಗ ಸ್ವಸ್ವಾಮಿ ಸಂಬಂಧವನ್ನು ಹೇಳಿದರು. ಇಲ್ಲಿ ಅಂತಹ ಚಕ್ರವು ಯಾವಾಗಲೂ ಪರಮ ಪುರುಷನ ಕೈಯ್ಯಲ್ಲಿ ಪ್ರಕಾಶಿಸುವ ಪ್ರಕಾರವು ಹೇಳಲ್ಪಡುವುದರಿಂದ ಪುನರುಕ್ತಿದೋಷವಿಲ್ಲವು. ॥೯೯೮॥

## (೯೯೯ನೇ ನಾಮವು) ಅಕ್ಷೋಭ್ಯಃ,

### ಓಮ್ ॥ ಅಕ್ಷೋಭ್ಯಾಯನಮಃ

(ಶಂ॥ ಭಾ) ಚಕ್ರಪಾಣಿಯಾಗಿರುವುದರಿಂದಲೇ ಯಾರಿಂದಲೂ ತಿರಸ್ಕರಿಸಲ್ಪಡದವನು. (ವಿ॥ ಭಾ) ಶರಣಾಗತರಿಗೆ ಅಭಯಪ್ರದಾನ ಮಾ

ಗುವುದರಲ್ಲುಂಟಾದ ಉತ್ಸಾಹವನ್ನು ತನ್ನ ಮಹಿಮೆಯಿಂದಲೂ ಕೂಡ ವ್ಯಾಕುಲಪಡಿಸದವನು. ‖೯೯೯‖

## (೧೦೦೦ನೇ ನಾಮವು) ಸರ್ವಪ್ರಹರಣಾಯುಧಃ, ಓಮ್‖ ಸರ್ವಪ್ರಹರಣಾಯುಧಾಯ ನಮಃ.

(ಶಂ‖ ಭಾ) ಇಂತಹ ಪರಮಾತ್ಮನಿಗೆ ಚಕ್ರಾಯುಧ ಮಾತ್ರವೇ ಇರುವುದಿಲ್ಲವು ; ಕಿಂತು ಸಮಸ್ತಗಳಾದ ಶತ್ರು ಸಂಹಾರಕಗಳಾಗಿರುವ ಆಯುಧಗಳಿರುವುವು. ಮತ್ತು (ನೃಸಿಂಹಾದ್ಯವತಾರಗಳಲ್ಲಿ) ನಖಾದಿ ಗಳು ಕೂಡ ಇವನಿಗೆ ಆಯುಧಗಳಾಗಿದ್ದವು. ಕಡೆಯಲ್ಲಿ 'ಸರ್ವಪ್ರ ಹರಣಾಯುಧಃ' ಎಂಬ ವಚನವು "ಏಷಸರ್ವೇಶ್ವರಃ" ಎಂಬ ಶ್ರುತಿ ಪ್ರಮಾಣಾನುಸಾರವಾಗಿ ಸತ್ಯಸಂಕಲ್ಪನಾಗಿರುವುದರಿಂದ ಸರ್ವೇಶ್ವರ ತ್ವವನ್ನು ತೋರಿಸುವುದು.(ವಿ‖ ಭಾ) ಈ ರೀತಿಯಾಗಿ ತನ್ನನ್ನಾಶ್ರಯಿಸಿ ನಂಬಿಕೊಂಡಿರುವಂತವರ ಸರ್ವಾನಿಷ್ಟಗಳನ್ನು ಸಮೂಲವಾಗಿ ನಾಶಪಡಿ ಸುವಂತವುಗಳೂ ಸಂಖ್ಯಾತೀತಗಳೂ ಅಪಾರವಾದ ಸಾಮರ್ಥ್ಯವುಳ್ಳವು ಗಳೂ ತನಿಗೆ ತಕ್ಕವುಗಳೂ ಅಪರಿಚ್ಛೇದ್ಯಗಳೂ ಇವು ಆಭರಣಗಳೋ ಎಂಬದಾಗಿ ಸಂದೇಹಿಸತಕ್ಕವುಗಳೂ ಯಾವಾಗಲೂ ಯೆಲ್ಲೆಲ್ಲಿಯೂ ಸರ್ವ ವಿಧದಲ್ಲಿಯೂ ಸಮಾಶ್ರಿತರನ್ನು ಸಂರಕ್ಷಿಸುವುದೆಂಬ ದೀರ್ಘವಾದ ಸತ್ರ ಯಾಗದಲ್ಲಿ ದೀಕ್ಷಿತಗಳೂ ಸರ್ವೈಶ್ವರ್ಯ ಪರ್ವತಾದಿಗಳ ಸರ್ವಭಾರ ನಿರ್ವಾ ಹಕಗಳೂ ಆದ ಇತರ ದಿವ್ಯಾಯುಧಗಳುಳ್ಳವನು.

ಈ (೧೦೭)ನೇ ಶ್ಲೋಕದಲ್ಲಿ ಪ್ರತಿಪಾದ್ಯಗಳಾದ ದಿವ್ಯ ನಾಮಗ ಳಿಗೆ "ಶಂಖಭೃ" (೯೯೩) ತ್ಪರಮೈಶ್ವರ್ಯ ಲಕ್ಷಣಾಯುಧ ಧಾರಣಾತ್| ನಂದ್ಯಾನ್ನಾಮಯಮಿತ್ಯೇವಂ ಪ್ರೋಕ್ಯೇಭಗವತಾಪಿಯಃ ‖ ಸನಂದ ಕೋನಿತ್ಯಯೋಗೀ ಯಸ್ಯಾಸಾ "ನಂದಕೀ" (೯೯೪) ಸ್ಮೃತಃ| ಸರ್ವರ ಕ್ಷೋಚಿಸುರಚ್ಛೇತಾ ನಿತ್ಯಂಚಕ್ರೇಣಯೋಗತಃ| "ಚಕ್ರೀ" (೯೯೫) ತಿಕಥ್ಯತೆ ಸಮ್ಯಗ್ಭುತ್ಪೆರ್ಣ್ಣಶ್ಯತ್ರುನಾಶಕಃ | ಶಾಂರ್ಙ್ಗಾಖ್ಯಂ ಧನುರಸ್ಯೇತಿ "ಶಾಂರ್ಙ್ಗಧನ್ವಾ" (೯೯೬) ಪ್ರಕೀರ್ತಿತಃ ‖ ಕೌಮೋದಕೀ ಧಾರಣಾಚ್ಚ "ಗದಾಧರ" (೯೯೭) ಇತೀರಿತಃ | ಯುಧೋಚಿತಂ ರಥಾಂಗಂಚ ಪಾಣಾ

ಯ ಸ್ಸ್ಯಾಸ್ತ್ರು ನಿತ್ಯಶಃ ‖ " ರಥಾಂಗಪಾಣಿ " (೯೯೪) ರಾಖ್ಯಾತೋನಪಾ ರ್ಕ್ಷ್ಮೋ ಭಯನಾಶಕಃ | ಅಭಯಪ್ರದಾನ ನಿಯಮ ದಾರ್ಢ್ಯಾದಪಿಚ ನಿತ್ಯ ಶಃ ‖ ಅಚಾಲ್ಯ ಸ್ಸ್ವಮಹಿವಾಪಿ " ಅಕ್ಷೋಭ್ಯ " (೯೯೯) ಇತಿಕೀರ್ತಿ ತಃ ‖ ಪಾದಮೂಲಂ ಪ್ರಪನ್ನಾನಾಂ ಭಕ್ತಾನಾಂಚಾಪಿ ನಿತ್ಯಶಃ | ಅಸಂ ಖ್ಯೇಯಾನ್ಯಮರ್ಯಾದ ಸಾಮರ್ಥ್ಯ ನ್ಯಾತ್ಮನಸ್ಸದಾ ‖ ಸರ್ವತ್ರ ಸರ್ವಥಾ ಸರ್ವಪ್ರಕಾರಾಶ್ರಿತರಕ್ಷಣೇ | ದೀಕ್ಷಿತಾ ನ್ಯುಚಿತಾನ್ಯಸ್ಯಾ ನ್ಯನಂತಾನ್ಯಾಯುಧಾನಿಹಿ ‖ ಯಸ್ಯಸಂತಿ ಸದೈವನಿತ್ಯಂ " ಸರ್ವಪ್ರಹರ ಣಾಯುಧಃ " (೧೦೦೦) ದ್ವಾದಶಾರ್ಣ್ಮೋ ಮಹಾಮಂತ್ರ ಸ್ಸರ್ವದುಃಖ ವಿನಾಶಕಃ ‖(ಶ್ಲೋ‖ ಸಂಖ್ಯಾ‖ ೭೪-೨) ಎಂಬಂತೆ ವಿವೃತಿಯನ್ನು ಕಾಣ ಬೇಕು.

ಈ ಪ್ರಕಾರವಾಗಿ ಸರ್ವದೋಷಗಳಿಗೂ ಪ್ರತಿಭಟವಾಗಿ ಉಪಾಧಿ ಸಂಖ್ಯಾ ಅವಧಿಗಳನ್ನು ಅತಿಕ್ರಮಿಸಿದವುಗಳೂ ಅತ್ಯಂತ ಮಂಗಳವೂ ಆಗಿರುವ ಸ್ವರೂಪರೂಪ ಗುಣವಿಭವ ಚೇಷ್ಟಿತಗಳುಳ್ಳವನೂ ಆಪತ್ಸಖ ನೂ ಪ್ರಾರ್ಥಿಸುವಂತವರಿಗೆ ಕಲ್ಪವೃಕ್ಷನೂ ತನ್ನ ಚರಣಾರವಿಂದ ಶರಣಾ ಗತರಿಗೆ ಉಜ್ಜೀವಕನೂ ಶ್ರೀಯಃಪತಿಯೂ ಜ್ಞಾನಶಕ್ತ್ಯಾದಿ ಷಡ್ಗುಣ ಪರಿಪೂರ್ಣನೂ ಆದ ಪುರುಷೋತ್ತಮನನ್ನು ಆಶ್ರಯಿಸಿದವರಿಗೆ ಸಕಲ ಸಂಪತ್ಸಮುದಾಯವೂ ಸಿದ್ಧವು.

(ಶಂ‖ ಮ) ಓಮ್, ನಮೋನಮಃ. ಎಂಬ ನಮಸ್ಕಾರ ಬೋಧಕ ವಾದ ದ್ವಿರಾವೃತ್ತಿಯು ಶಾಸ್ತ್ರ ಪರಿಸಮಾಪ್ತಿಯನ್ನು ತೋರಿಸುವುದು. ಓಂಕಾರವು ಮಂಗಲಾರ್ಥಕವಾಗಿರುವುದು. " ಓಂಕಾರಶ್ಚಾಥ ಶಬ್ದಶ್ಚ ದ್ವಾವೇತೌ ಬ್ರಹ್ಮಣಃಪುರಾ | ಕಂಠಂಭಿತ್ವಾ ವಿನಿರ್ಯಾತೌ ತಸ್ಮಾನ್ಮಾಂ ಗಲಿಕಾವುಭೌ " ಎಂಬದಾಗಿ ಪ್ರಮಾಣವಿರುವದು. ಕಡೆಯಲ್ಲಿ ' ನಮಃ ' ಎಂಬುವುದರಿಂದ " ಭೂಯಿಷ್ಠಾಂತೇನಮ ಉಕ್ತಿಂವಿಧೇಮ " (ತೈ‖ಸಂ‖ ೧‖ ೧‖ ೧೪) ಎಂಬಂತೆ ಕಿಂಕರಕೃತ್ಯವನ್ನು ಮಾಡಿದಂತೆ ತಿಳಿಯ ಬೇಕು. ಮತ್ತು " ಧನ್ಯಂತದೇವಲಗ್ನಂ ತನ್ನಕ್ಷತ್ರಂ ತದೇವಪುಣ್ಯಮ

ಹಃ| ಕರಣಸ್ಯಚಸಾಸಿದ್ಧಿರ್ಯತ್ರಹರಿಃ ಪ್ರಾಙ್ನಮಸ್ಕ್ರಿಯತೇ ” ಏಕೋಪಿಕೃಷ್ಣೇಸುಕೃತಃ ಪ್ರಣಾಮಃ ॥ ಅತಸೀಪುಷ್ಪಸಂಕಾಶಂ ॥ ಲೋಕತ್ರಯಾಧಿಪತಿ ಮಪ್ರತಿಮಪ್ರಭಾವಂ ” ಇತ್ಯಾದಿ ವಾಕ್ಯಗಳನ್ನನುಸರಿಸಿ ಕಡೆಯಲ್ಲಿಯೂ ನಮಸ್ಕಾರವು ಶಿಷ್ಟಾಚಾರ ಪ್ರಾಪ್ತವೆಂಬದಾಗಿ ತಿಳಿಯಬೇಕು.

ಇತಿ ಶ್ರೀಪರಾಶರ ಭಟ್ಟಾರಕಾದಿ ವಿರಚಿತವಾದ ಶ್ರೀಸಹಸ್ರನಾಮಭಾಷ್ಯದಲ್ಲಿ
ದಶಮಶತಕವು ಸಮಾಪ್ತವು.



ಶ್ರಿಯೈನಮಃ.

# ಶ್ರೀ ಸಹಸ್ರನಾಮಾಧ್ಯಾಯ ಫಲಶ್ರುತಿಃ.

ಮೂ॥ ಇತೀದಂ ಕೀರ್ತ್ತನೀಯಸ್ಯ ಕೇಶವಸ್ಯ ಮಹಾತ್ಮ
ನಃ । ನಾಮ್ನಾಂ ಸಹಸ್ರಂ ದಿವ್ಯಾನಾ ಮಶೇ
ಷೇಣ ಪ್ರಕೀರ್ತ್ತಿತಂ ॥೧॥

ಟೀ॥ ಇತಿ–ಈ ಪ್ರಕಾರವಾಗಿ, ಕೀರ್ತನೀಯಸ್ಯ–ಸಂಕೀರ್ತನಮಾಡಲ್ಪಟ್ಟ, ಮಹಾತ್ಮನಃ ಕೇಶವಸ್ಯ–ಮಹಾತ್ಮನಾದ ಶ್ರೀ ಕೇಶವನ, ದಿವ್ಯಾನಾಂ ನಾಮ್ನಾಂ–ದಿವ್ಯನಾಮಗಳ, ಇದಂ ಸಹಸ್ರಂ–ಈ ಸಹಸ್ರವು, ಅಶೇಷೇಣ–ಸಂಪೂರ್ಣವಾಗಿ, ಪ್ರಕೀರ್ತಿತಂ–ವಿಶೇಷವಾಗಿ ಕೀರ್ತನಮಾಡಲ್ಪಟ್ಟಿತು.

(ಶಂ॥ ಭಾ) ಈ ರೀತಿಯಾಗಿ ಹೇಳುವುದರಿಂದ ಅಪ್ರಾಕೃತಗಳಾದ ಶ್ರೀ ವಿಷ್ಣುವಿನ ನಾಮಗಳ ಸಂಖ್ಯೆಯು ಬೋಧಿತವಾಯಿತು. (ವಿ॥ ಭಾ) "ಕೀರ್ತನೀಯಸ್ಯ" ಎಂಬುವುದರಿಂದ ಇದು ಮೊದಲು ನೀವು ಭಗವನ್ನಾಮಸಂಕೀರ್ತನವನ್ನು ಮಾಡಬೇಕೆಂತಲೂ, "ಕೇಶವಸ್ಯಮಹಾತ್ಮನಃ" ಎಂಬುವುದರಿಂದ ಅವನ ಕೀರ್ತನವನ್ನು ಮಾಡುವುದಕ್ಕೆ ಕಾರಣವನ್ನು ಹೇಳಿದರೆಂತಲೂ, "ದಿವ್ಯಾನಾಂ" ಎಂಬುವುದರಿಂದ ಇಂತಹ ಕೀರ್ತನವು ಪರಮಪದದಲ್ಲಿಯೂ ಕೂಡ ವ್ಯವಹರಿಸಲ್ಪಡತಕ್ಕದ್ದೆಂತಲೂ "ಅಶೇಷೇಣ" ಎಂಬುವುದರಿಂದ ಇನ್ನು ಮುಂದೆ ನಿಮಗೆ ತಿಳಿಯತಕ್ಕ ಭಾಗವು ಯಾವದೂ ಇಲ್ಲವೆಂತಲೂ ಬೋಧಿತವಾಯಿತೆಂದರಿಯಬೇಕು. (ಮ) ಅಶೇಷೇಣ—ಇದರಿಂದ ಸಹಸ್ರನಾಮಗಳ ಸಂಖ್ಯಾನ್ಯೂನತೆ ಇಲ್ಲನೆಂದಾಯಿತು. ಇಲ್ಲಿನ ದಿವ್ಯಶಬ್ದಕ್ಕೆ ದಿವ್ಯಫಲಸಾಧನತ್ವವೂ ಋಷಿಗಳಿಂದ ವಿಸ್ತಾರವಾಗಿ ಗಾನಮಾಡಲ್ಪಡುವಿಕೆಯೂ ಅರ್ಥವೆಂದರಿಯಬೇಕು. ಇತಿ ಏತಸ್ಯ ಪ್ರಕೀರ್ತಿತಂ ಎಂಬದಾಗಿ ಅನ್ವಯವು. ॥೧॥

(ವಿ॥ ಭಾ) ಅವತಾರಿಕಾ ॥ ಅನಂತರದಲ್ಲಿ ಅಧಿಕಾರಿನಿರ್ಣಯವು ಮಾಡಲ್ಪಡುವುದು.

ಮೂ॥ ಯ ಇದಂ ಶೃಣುಯಾನ್ನಿತ್ಯಂ ಯಶ್ಚಾಪಿ ಪರಿಕೀರ್ತಯೇತ್ । ನಾಶುಭಂ ಪ್ರಾಪ್ನುಯಾತ್ಕಿಂಚಿತ್ಸೋಮುತ್ರೇಹಚ ಮಾನವಃ ॥೧॥

ಟೀ॥ ಇದಂ-ಈ ಸಹಸ್ರನಾಮಸ್ತೋತ್ರವನ್ನು, ಯಃ-ಯಾವನು, ಶೃಣುಯಾತ್-ಕೇಳುವನೋ, ಯಶ್ಚ-ಯಾವನಾದರೆ, ಪರಿಕೀರ್ತಯೇತ್-ವಿಶೇಷವಾಗಿ ಸಂಕೀರ್ತನ ಮಾಡುವನೋ, ಸಮಾನವೋಪಿ-ಅಂತಹ ಮನುಷ್ಯನೂ, ಅಮುತ್ರ-ಪರಲೋಕದಲ್ಲಿಯೂ, ಇಹಚ-ಈ ಲೋಕದಲ್ಲಿಯೂ, ಕಿಂಚಿತ್-ಸ್ವಲ್ಪವೂ, ಅಶುಭಂ-ಅಮಂಗಲವನ್ನು, ನ ಪ್ರಾಪ್ನುಯಾತ್-ಹೊಂದಲಾರನು. ಇದರಿಂದ ಅನಿಷ್ಟನಿವೃತ್ತಿಯು ಹೇಳಲ್ಪಟ್ಟಿತು.

ಮೂ॥ ವೇದಾಂತಗೋಬ್ರಾಹ್ಮಣಸ್ಸ್ಯಾತ್ಕ್ಷತ್ರಿಯೋ ವಿಜಯೀಭವೇತ್ ॥ ವೈಶ್ಯೋ ಧನಸಮೃದ್ಧಸ್ಸ್ಯಾಚ್ಛೂದ್ರಸ್ಸುಖಮವಾಪ್ನುಯಾತ್ ॥೨॥

ಟೀ॥ ಬ್ರಾಹ್ಮಣಃ-ಬ್ರಾಹ್ಮಣ ಜಾತೀಯನು, ವೇದಾಂತಗಃ-ವೇದಾಂತಗಳನ್ನು ತಿಳಿದವನಾಗಿ, ಸ್ಯಾತ್-ಆಗುವನು. ಕ್ಷತ್ರಿಯಃ-ಕ್ಷತ್ರಿಯನು, ವಿಜಯೀ-ಜಯಶೀಲನಾಗಿ, ಭವೇತ್-ಆಗುವನು. ವೈಶ್ಯಃ-ವೈಶ್ಯನು, ಧನಸಮೃದ್ಧಃ-ಧನದಿಂದ ಪೂರ್ಣನಾಗಿ, ಸ್ಯಾತ್-ಆಗುವನು. ಶೂದ್ರಃ-ಶೂದ್ರನು, ಸುಖಂ-ಸುಖವನ್ನು, ಅವಾಪ್ನುಯಾತ್-ಹೊಂದುವನು.

(ಶಂ॥ ಭಾ) ವೇದಾಂತಗಃ—ವೇದಾಂತಗಳನ್ನು ಹೊಂದಿದವನಾಗಿ ಎಂದರೆ—ವೇದಾಂತಗಳ ಕೊನೆಯ ಅರ್ಥವಾದ ಬ್ರಹ್ಮವನ್ನು ಹೊಂದಿದವನೆಂದು ಅರ್ಥವು. ಮತ್ತು "ಕಿಂ ಜಪನ್ಮುಚ್ಯತೇ ಜಂತುರ್ಜನ್ಮ ಸಂಸಾರ ಬಂಧನಾತ್" ಎಂಬದಾಗಿ ಮೊದಲು ಉಪನ್ಯಸ್ತವಾದ ಪ್ರಮಾಣದಿಂದ ಸಾಕ್ಷಾನ್ಮುಕ್ತಿಸಾಧನವು ಜಪಕರ್ಮವೆಂಬ ಸಂದೇಹವುಂಟಾಗಲಾಗಿ ಇದಕ್ಕೆ ಸಾಕ್ಷಾತ್ಸಾಧನತ್ವವಿಲ್ಲವೆಂತಲೂ ಬ್ರಹ್ಮಜ್ಞಾನಕ್ಕೇನೆ ಸಾಕ್ಷಾನ್ಮೋಕ್ಷ

ಸಾಧನತ್ವವೆಂತಲೂ ಬೋಧಿಸುವುದಕ್ಕಾಗಿ "ವೇದಾಂತಗಃ" ಎಂದು ಹೇಳಿದರೆಂದರಿಯಬೇಕು ಮತ್ತು ಕರ್ಮಗಳು ಚಿತ್ತಶುದ್ಧಿದ್ವಾರಾ ಮೋಕ್ಷಸಾಧನಗಳೆಂಬ ಅಂಶವನ್ನು "ಕಷಾಯಪಂಕ್ತಿಃ ಕರ್ಮಾಣಿ" ಇತ್ಯಾದಿ ಸಾಕ್ಷಾದ್ವಾಪಷ್ಯೋದಾಹೃತ ಶ್ರುತಿಸ್ಮೃತಿ ಪ್ರಮಾಣಗಳು ಬೋಧಿಸುವುವು. ಮತ್ತು ಶ್ರಾವಯೇ ಚ್ಚತುರೋವರ್ಣಾನ್ ॥ ಸುಗತಿ ಮಿಯಾ ಚ್ಛ್ರವಣಾಚ್ಚ ಶೂದ್ರಯೋನಿಃ" (ಭಾರತ) ಇತ್ಯಾದಿ ವಚನಗಳಿಂದ ಶೂದ್ರನಿಗೆ ಶ್ರೀ ಸಹಸ್ರನಾಮದ ಶ್ರವಣಾಧಿಕಾರವಲ್ಲದೆ ಪಠನದಲ್ಲಿ ಅಧಿಕಾರವಿಲ್ಲವೆಂದು ಈ ಶ್ಲೋಕತಾತ್ಪರ್ಯಸಂಗ್ರಹವು. (ಮ) ಹಿಂದಿನ ಶ್ಲೋಕದಲ್ಲಿ ಅನಿಷ್ಟನಿವೃತ್ತಿರೂಪವಾದ ಫಲವನ್ನು ಹೇಳಿ ಇದರಿಂದ ಇಷ್ಟಪ್ರಾಪ್ತಿರೂಪವಾದ ಫಲವನ್ನು ಹೇಳುತ್ತಾರೆ. ವೇದಾಂತಗಃ— ವೇದಾಂತಗಳೆಂದರೆ ಉಪನಿಷತ್ತುಗಳು. ಅವರ ಅರ್ಥಪರಿಜ್ಞಾನಕ್ಕಾಗಿ ಹೋಗುವವನೆಂದರ್ಥವು. ಇದರಿಂದ ಜಪವು ಜ್ಞಾನದ್ವಾರಾ ಮುಕ್ತಿಸಾಧನವೆಂದಾಯಿತು. ಬೋಧಾಯನವೃತ್ತಿಯನ್ನನುಸರಿಸಿದವರು ಜ್ಞಾನಕರ್ಮಸಮುಚ್ಚಯದಿಂದ ಮೋಕ್ಷಪ್ರಾಪ್ತಿಯನ್ನಂಗೀಕರಿಸುವರು. ಶ್ರೀ ಸಹಸ್ರನಾಮಪಾಠದಲ್ಲಿ ಸ್ತ್ರೀಶೂದ್ರರಿಗೆ ಅಧಿಕಾರವಿಲ್ಲವೆಂದು (ಶಂ) ಭಾಷ್ಯಕಾರರು ಹೇಳುವರು. "ಶೂದ್ರೋವರ್ಣ ಚತುರ್ಥೋಽಪಿ ವರ್ಣತ್ವಾದ್ಧರ್ಮಮರ್ಹತಿ । ವೇದಮಂತ್ರಸ್ವಧಾಸ್ವಾಹಾ ವಷಟ್ಕಾರಾದಿಭಿ ರ್ವಿನಾ" ಇತ್ಯಾದಿ ವ್ಯಾಸವಚನಗಳಿಂದ ಪೌರಾಣಮಂತ್ರಗಳಿಂದ ಭಗವದಾರಾಧನೆ ವು ಸರ್ವ ವರ್ಣ ಸಾಧಾರಣವಾಗಿರುವುದರಿಂದ ಶ್ರೀ ಸಹಸ್ರನಾಮಪಾಠಾಧಿಕಾರವು ಸ್ತ್ರೀಶೂದ್ರರಿಗುಂಟೆಂದು ಸಿದ್ಧವು. ಭಗವದ್ಗೀತೆಯು ಸಾಕ್ಷಾದ್ಭಗವನ್ಮುಖೋದ್ಗತವಾಗಿರುವುದರಿಂದಲೂ ಶ್ರುತಿಗಳಿಗೆ ಶಬ್ದದಿಂದಲೂ ಅರ್ಥದಿಂದಲೂ ವರ್ಣನವಿರುವುದರಿಂದಲೂ ಗೀತಾಪಾಠಕ್ಕೆ ಮಾತ್ರ ಅಧಿಕಾರವಿಲ್ಲವೆಂದರಿಯಬೇಕು. ॥೩॥

ಮೂ॥ ಧರ್ಮಾರ್ಥೀ ಪ್ರಾಪ್ನುಯಾದ್ಧರ್ಮ ಮರ್ಥಾರ್ಥೀ ಚಾ
ರ್ಥಮಾಪ್ನುಯಾತ್ । ಕಾಮಾನವಾಪ್ನುಯಾ
ತ್ಕಾಮೀ ಪ್ರಜಾರ್ಥೀ ಚಾಪ್ನುಯಾತ್ಪ್ರಜಾಃ ॥೪॥

ಟೀ|| ಧರ್ಮಾರ್ಥೀ – ಧರ್ಮಾಪೇಕ್ಷೆಯುಳ್ಳವನು, ಧರ್ಮಂ – ಧರ್ಮವನ್ನು, ಪ್ರಾಪ್ನುಯಾತ್‌–ಹೊಂದುವನು. ಅರ್ಥಾರ್ಥೀಚ–ಧನಾಪೇಕ್ಷೆಯುಳ್ಳವನೂ, ಅರ್ಥಂ–ಧನವನ್ನು, ಆಪ್ನುಯಾತ್‌–ಹೊಂದುವನು. ಪ್ರಜಾರ್ಥೀಚ–ಸಂತಾನಾಪೇಕ್ಷೆಯುಳ್ಳವನೂ, ಪ್ರಜಾಃ –ಮಕ್ಕಳನ್ನು, ಆಪ್ನುಯಾತ್‌–ಹೊಂದುವನು.

ಮ) ಈ ರೀತಿಯಾಗಿ ನಿಷ್ಕಾಮರಾದ ನಾಲ್ಕುವರ್ಣದವರಿಗುಂಟಾದ ಫಲವನ್ನು ಹಿಂದಿನ ಶ್ಲೋಕದಲ್ಲಿ ಹೇಳಿ ಇದರಲ್ಲಿ ಸಕಾಮರಾದ ನಾಲ್ಕು ವರ್ಣದವರಿಗುಂಟಾಗುವ ಅಸಾಧಾರಣ ಫಲವು ಹೇಳಲ್ಪಟ್ಟಿತೆಂದರಿಯಬೇಕು. (ಶಂ) ಕಾಮಾ್ನ್‌—ಚಕ್ಷುರಾದೀಂದ್ರಿಯಗಳು ಆಯಾ ವಿಷಯದಲ್ಲಿ ಅನುಕೂಲವಾಗಿರುವಿಕೆ ಎಂಬ ಕಾಮಫಲವನ್ನು ಎಂದು ಅರ್ಥವು.

(ವಿ|| ಭಾ) ಅವತಾರಿಕಾ || ಇನ್ನು ಮುಂದೆ ಕೆಲವು ನಿಯಮಗಳೊಡನೆ ಜಪಿಸುವುದೆಂಬ ಸಂಕೀರ್ತನವನ್ನು ಮಾಡುವ ಭಕ್ತನಿಗೆ ಸಕಲೇಷ್ಟಾರ್ಥಗಳೂ ಸಿದ್ಧಿಸುವುದೆಂದೀ ಮೊದಲಾದ ಶ್ಲೋಕಗಳಿಂದ ಹೇಳುತ್ತಾರೆ.

ಮೂ || ಭಕ್ತಿಮಾನ್ಯಸ್ಸದೋತ್ಥಾಯ ಶುಚಿಸ್ತದ್ಗತಮಾನಸಃ । ಸಹಸ್ರಂ ವಾಸುದೇವಸ್ಯನಾಮ್ನಾಮೇತತ್ಪ್ರಕೀರ್ತಯೇತ್

ಟೀ|| ಯಃ–ಯಾವ ಮನುಷ್ಯನು, ಭಕ್ತಿಮಾನ್—ಭಕ್ತಿಯುಳ್ಳವನಾಗಿ, ಸದಾ—ಸರ್ವಕಾಲದಲ್ಲಿಯೂ, ಉತ್ಥಾಯ—ಉದ್ಯುಕ್ತನಾಗಿ, ಶುಚಿಃ–ಪರಿಶುದ್ಧನಾಗಿ, ತದ್ಗತಮಾನಸಃ–ಅವನಲ್ಲಿಡಲ್ಪಟ್ಟ ಮನಸ್ಸಿನೊಡನೆ, ವಾಸುದೇವಸ್ಯ—ಶ್ರೀ ವಾಸುದೇವನ, ಏತನ್ನಾಮ್ನಾಂ ಸಹಸ್ರಂ–ಈ ನಾಮಗಳ ಸಹಸ್ರವನ್ನು, ಪ್ರಕೀರ್ತಯೇತ್‌–ಸಂಕೀರ್ತನವನ್ನು ಮಾಡುವನೋ, ಅವನು ಎಂದು ಅಧ್ಯಾಹಾರಮಾಡಿಕೊಳ್ಳಬೇಕು.

(ಶಂ|| ಭಾ) ಇದೇ ಮೊದಲಾದ ಶ್ಲೋಕದಿಂದ ಭಕ್ತಿಯುಕ್ತನೂ ಶುಚಿಯುಳ್ಳವನೂ ಸರ್ವಕಾಲಗಳಲ್ಲಿಯೂ ಚಿತ್ತೈಕಾಗ್ರ್ಯವುಳ್ಳವನೂ ಶ್ರದ್ಧಾಳುವೂ ಆದ ಅಧಿಕಾರಿಗೆ ಪ್ರಾಪ್ತವಾಗುವ ಫಲವನ್ನು ತೋರಿಸು

ತ್ತಾರೆಂದರಿಯಬೇಕು. (ಮ) "ಅವಶೇನಾಪಿಯನ್ನಾಮ್ನಿ" ಇತ್ಯಾದಿ ವಚನಗಳಿಂದ ಶ್ರದ್ಧಾಭಕ್ತಿರಹಿತವಾದ ಸಂಕೀರ್ತನವು ಸರ್ವಪಾಪಹರ ವೆಂದು ಸಿದ್ಧವಾದರೂ ಅದನ್ನೇ ಶ್ರದ್ಧಾಭಕ್ತಿಯುಕ್ತನಾಗಿ ಮಾಡಿದರೆ ಮಹಾಫಲವುಂಟಾಗುವುದೆಂಬ ಅಭಿಪ್ರಾಯದಿಂದ ಇಲ್ಲಿ ಕೆಲವು ನಿಯಮಗಳನ್ನು ಹೇಳಿರುತ್ತಾರೆ. ಹೀಗೆಯೇ ಸ್ವಲ್ಪಮಾತ್ರವಾದ ನಾಮಸಂಕೀರ್ತನಕ್ಕಿಂತಲೂ ಸದಾ ಮಾಡಲ್ಪಡುವ ನಾಮಸಂಕೀರ್ತನಕ್ಕೆ ಅಧಿಕ ಫಲವೆಂಬ ಅಂಶವನ್ನು ತಿಳಿಯಬೇಕು.

ಮೂ|| ಯಶಃಪ್ರಾಪ್ನೋತಿ ವಿಪುಲಂ ಯಾತಿಪ್ರಾಧಾನ್ಯ
ಮೇವಚ । ಅಚಲಾಂ ಶ್ರಿಯಮಾಪ್ನೋತಿ ಶ್ರೇ
ಯಃಪ್ರಾಪ್ನೋತ್ಯನುತ್ತಮಂ ||೬||

ಟೀ|| ವಿಪುಲಂ-ವಿಸ್ತಾರವಾದ, ಯಶಃ-ಕೀರ್ತಿಯನ್ನು, ಪ್ರಾಪ್ನೋತಿ-ಹೊಂದುತ್ತಾನೆ. ಪ್ರಾಧಾನ್ಯಮೇವಚ-ಮುಖ್ಯವಾದ, ಸ್ವಭಾವವುಳ್ಳವಿಕೆಯನ್ನೂ, ಯಾತಿ-ಹೊಂದುತ್ತಾನೆ. (ಇಲ್ಲಿ 'ಜ್ಞಾತಿ ಪ್ರಾಧಾನ್ಯಂ' ಎಂದು ಕೆಲವು ಪಾಠವು. ಆವಾಗ ಜ್ಞಾತಿಜನರಲ್ಲಿ ಪ್ರಾಧಾನ್ಯವನ್ನು ಹೊಂದುವನೆಂದು ಅರ್ಥವು) ಅಚಲಾಂ-ಚಲಿಸದಂಥಾ, ಶ್ರಿಯಂ-ಸಂಪತ್ತನ್ನೂ, ಆಪ್ನೋತಿ-ಹೊಂದುತ್ತಾನೆ. ಅನುತ್ತಮಂ ಶ್ರೇಯಃ-ಸರ್ವೋತ್ತಮವಾದ ಶ್ರೇಯಸ್ಸೆನ್ನಲ್ಪಡುವ ಮೋಕ್ಷವನ್ನು, ಪ್ರಾಪ್ನೋತಿ-ಹೊಂದುತ್ತಾನೆ.

ಮೂ|| ನ ಭಯಂ ಕ್ವಚಿದಾಪ್ನೋತಿ ವೀರ್ಯಂ ತೇಜಶ್ಚ
ವಿಂದತಿ। ಭವತ್ಯರೋಗೋ ದ್ಯುತಿಮಾನ್ ಬಲ
ರೂಪ ಗುಣಾನ್ವಿತಃ ||೭||

ಟೀ|| ಕ್ವಚಿತ್-ಒಂದುಕಡೆಯಲ್ಲಿಯೂ, ಭಯಂ-ಭಯವನ್ನು, ನಾಪ್ನೋತಿ-ಹೊಂದಲಾರನು (ಮ|| "ನಭಯಂ || ಆರೋಗಃ" ಎಂಬ ಸ್ಥಲದಲ್ಲಿ ಭಯ ರೋಗಗಳ ಪ್ರಾಗಭಾವವಾದರೂ ಅತ್ಯಂತಾಭಾವವಾದರೂ ವಿವಕ್ಷಿತವು) ವೀರ್ಯಂ-ವೀರ್ಯವನ್ನೂ, ತೇಜಶ್ಚ-ತೇಜಸ್ಸನ್ನೂ, ವಿಂದತಿ-ಹೊಂದುತ್ತಾನೆ. ಅರೋಗಃ-ರೋಗರಹಿತನೂ, ದ್ಯುತಿಮಾನ್-ಕಾಂತಿಯುಕ್ತನೂ, ಬಲರೂಪಗುಣಾನ್ವಿತಃ-ಬಲ, ರೂಪ, ಗುಣಗಳಿಂದ ಕೂಡಿದವನೂ, ಭವತಿ-ಆಗುವನು.

ಮೂ॥ ರೋಗಾರ್ತೋ ಮುಚ್ಯತೇ ರೋಗಾ ದ್ಬದ್ಧೋ ಮುಚ್ಯೇತ ಬಂಧನಾತ್। ಭಯಾನ್ಮುಚ್ಯೇತ ಭೀತಸ್ತು ಮುಚ್ಯೇತಾಪನ್ನ ಆಪದಃ

ಟೀ॥ ರೋಗಾರ್ತಃ_ರೋಗಪೀಡಿತನಾದವನು, ರೋಗಾತ್ - ರೋಗದ್ದಶೆಯಿಂದ, ಮುಚ್ಯತೆ - ಬಿಡಲ್ಪಡುವನು ; ಬದ್ಧಃ _ ಬಂಧದಲ್ಲಿ ಸಿಕ್ಕಿದವನು, ಬಂಧನಾತ್ _ ಬಂಧದದಶೆಯಿಂದ, ಮುಚ್ಯತೆ - ಬಿಡಲ್ಪಡುವನು ; ಭೀತಸ್ತು – ಭಯಪಟ್ಟವನೂ, ಭಯಾತ್ - ಭಯದದಶೆಯಿಂದ, ಮುಚ್ಯೇತ—ಬಿಡಲ್ಪಡುವನು ; ಆಪನ್ನಃ _ ಆಪತ್ತುಗಳಿಗೆ ಸಿಕ್ಕಿದವನು, ಆಪದಃ _ ಆಪತ್ತುಗಳ ದಶೆಯಿಂದ, ಮುಚ್ಯೇತ_ಬಿಡಲ್ಪಡುವನು.

(ಮ) ಹಿಂದಿನ ಶ್ಲೋಕದಲ್ಲಿ ರೋಗಾದಿಗಳ ಪ್ರಾಗಭಾವ ಅತ್ಯಂತಾಭಾವವು ವಿವಕ್ಷಿತವಾದರೂ ಈ ಶ್ಲೋಕದಲ್ಲಿ ಪ್ರಾಪ್ತ ರೋಗಾದಿಗಳ ಧ್ವಂಸವು ಹೇಳಲ್ಪಡುವುದೆಂಬ ಭೇದವನ್ನರಿಯಬೇಕು. ॥೪॥

(ವಿ॥ ಭಾ) ಅವತಾರಿಕಾ ॥ ಇನ್ನು ಮುಂದೆ ಭಗವತ್ಪ್ರಾಪ್ತಿಮಾತ್ರವನ್ನೇ ಅಪೇಕ್ಷಿಸುವ ಅನನ್ಯಭಕ್ತನಾದ (ದೇವತಾಂತರಭಕ್ತಿಯನ್ನು ಮಾಡದೆ ಕೇವಲವಾದ ಶ್ರೀ ವಾಸುದೇವ ಭಕ್ತಿಮಾತ್ರನಿಷ್ಠನಾದ) ಪುರುಷನಿಗೆ ಅವನು ಪ್ರಾರ್ಥಿಸದೇ ಇದ್ದರೂ ಅನರ್ಥ ನಿವೃತ್ತಿಯು ತಾನಾಗಿಯೇ ಉಂಟಾಗುವುದೆಂದು ಹೇಳುತ್ತಾರೆ.

ಮೂ॥ ದುರ್ಗಾಣ್ಯತಿತರತ್ಯಾಶು ಪುರುಷಃ ಪುರುಷೋತ್ತಮಂ। ಸ್ತುವನ್ನಾಮಸಹಸ್ರೇಣ ನಿತ್ಯಂ ಭಕ್ತಿಸಮನ್ವಿತಃ ॥೯॥

ಟೀ॥ ಪುರುಷಃ—ಪುರುಷನು, ನಿತ್ಯಂ—ಪ್ರತಿದಿನವೂ, ಭಕ್ತಿಸಮನ್ವಿತಃ—ಭಕ್ತಿಯೊಡನೆ ಕೂಡಿದವನಾಗಿ, ಪುರುಷೋತ್ತಮಂ—ಪುರುಷೋತ್ತಮನಾದ ಶ್ರೀ ವಾಸುದೇವನನ್ನು, ನಾಮಸಹಸ್ರೇಣ_ಸಹಸ್ರನಾಮಗಳಿಂದ, ಸ್ತುವನ್_ಸ್ತುತಿಸುವಂತವನಾದರೆ, ದುರ್ಗಾಣಿ_ಕಷ್ಟಗಳನ್ನು ಅಥವಾ ಸಂಕಟಗಳನ್ನು, ಅತಿತರತಿ_ದಾಟುವನು.

ಅನುದಿನವೂ ಭಕ್ತಿಯೊಡನೆ ಶ್ರೀ ವಾಸುದೇವನನ್ನು ಶ್ರೀಸಹಸ್ರನಾಮಗಳಿಂದ ಸ್ತುತಿಸುವಂತಹ ಅನನ್ಯಚಿತ್ತನಾದ ಭಕ್ತನು ಭಯಂಕರ

ವಾದ ದುರ್ಗಸಂಸಾರಕಾಂತಾರವನ್ನು ದಾಟಿ ಶ್ರೀ ಪರಮಪುರುಷನ ದಿವ್ಯ ಪಾದಾರವಿಂದಗಳನ್ನು ಸೇರಿಸಲ್ಪಡುವನೆಂದರ್ಥವು ॥೯॥

ಮೂ॥ ವಾಸುದೇವಾಶ್ರಯೋ ಮರ್ತ್ಯೋ ವಾಸುದೇವ
ಪರಾಯಣಃ । ಸರ್ವಪಾಪ ವಿಶುದ್ಧಾತ್ಮಾ ಯಾ
ತಿ ಬ್ರಹ್ಮ ಸನಾತನಂ ॥೧೦॥

ಟೀ॥ ಇನ್ನು ಮುಂದೆ ಅಂತವರಿಗುಂಟಾಗುವ ಭಗವತ್ಪ್ರಾಪ್ತಿಯು ಹೇಳಲ್ಪಡುವುದು. ಮರ್ತ್ಯಃ—ಮನುಷ್ಯನು, ವಾಸುದೇವಾಶ್ರಯಃ—ವಾಸುದೇವನನ್ನೇ ಆಶ್ರಯಿಸಿದವನಾಗಿ, (ಮ॥ ವಾಸುದೇವ ಪೂಜೆಯಲ್ಲಾಸಕ್ತನಾಗಿ,) ವಾಸುದೇವ ಪರಾಯಣಃ—ಶ್ರೀವಾಸುದೇವನೇ ಪರಮಗತಿಯೆಂದು ನಂಬಿದವನಾದರೆ, (ಮ) ವಾಸುದೇವೈಕಭಕ್ತನಾಗಿದ್ದರೆ, ಸರ್ವಪಾಪ ವಿಶುದ್ಧಾತ್ಮಾ—ಸಕಲ ಪಾಪಗಳಿಂದ ಬಿಡಲ್ಪಟ್ಟು ಆನುಬರಿಂದಲೇ ಪರಿಶುದ್ಧವಾದ ಸ್ವಭಾವವುಳ್ಳವನಾಗಿ, ಅಥವಾ ಪರಿಶುದ್ಧವಾದ ಆತ್ಮಸ್ವರೂಪವುಳ್ಳವನಾಗಿ, ಸನಾತನಂ—ಶಾಶ್ವತವಾದ, ಬ್ರಹ್ಮ—ಪರಬ್ರಹ್ಮವನ್ನು, ಯಾತಿ—ಹೊಂದುವನು.

(ಮ) ಇಲ್ಲಿ "ಸಕೃತ್ಸ್ಮೃತೋಪಿ ಗೋವಿಂದೋ ನೃಣಾಂ ಜನ್ಮಶತೈಃ ಕೃತಂ । ಪಾಪರಾಶಿಂದ ಹತ್ಯಾಶು ॥ ಸಕೃದುಚ್ಚರಿತಂ ಯೇನಹರಿರಿತ್ಯಕ್ಷರದ್ವಯಂ । ಬದ್ಧಃಪರಿಕರಸ್ತೇನ ಮೋಕ್ಷಾಯ ಗಮನಂಪ್ರತಿ" ಇತ್ಯಾದಿ ವಚನಗಳಲ್ಲಿ ಶ್ರೀವಾಸುದೇವನ ಸ್ಮೃತಿಯೊಂದು ನಾಮಸಂಕೀರ್ತನಕ್ಕೇನೇ ಸಕಲಪಾಪ ಹರತ್ವವು ಹೇಳಿರುವುದರಿಂದ ಸಹಸ್ರನಾಮ ಪಾಠವು ವ್ಯರ್ಥವೆಂದು ಸಂದೇಹಿಸದೆ ಇದು ಶೀಘ್ರಕಾಲದಲ್ಲಿಯೇ ಇದಕ್ಕಿಂತಲೂ ಅಧಿಕವಾದ ಸರ್ವಪಾಪಹರವೆಂದರಿಯಬೇಕು. ಆದರೆ ಸಹಸ್ರನಾಮ ಪಾಠದಿಂದ ಸರ್ವಪಾಪ ಪರಿಹಾರವು ಸಿದ್ಧವಾದಮೇಲೆ ಬಹುದ್ರವ್ಯಸಾಧ್ಯವೂ ಶರೀರಪ್ರಯಾಸಬಾಹುಳ್ಯದಿಂದ ಸಿದ್ಧವಾಗತಕ್ಕದ್ದೂ ಧರ್ಮಶಾಸ್ತ್ರಸಿದ್ಧವೂ ಆದ ಪ್ರಾಯಶ್ಚಿತ್ತ ವಿಧಿಗಳು ವ್ಯರ್ಥಗಳಾಗಲಾರವೊ? "ಪ್ರಾಯಶ್ಚಿತ್ತಾನ್ಯಶೇಷಾಣಿ ತಪಃಕರ್ಮಾತ್ಮಕಾನಿವೈ । ಯಾನಿ ತೇಷಾ ಮಶೇಷಾಣಾಂ ಕೃಷ್ಣಾನುಸ್ಮರಣಂಪರಂ"

ಎಂಬ ವಚನದಲ್ಲಿ ಶ್ರೀಕೃಷ್ಣಾನುಸ್ಮರಣವೇ ಸರ್ವಪಾಪ ಪ್ರಾಯಶ್ಚಿತ್ತವೆಂದು ಪ್ರತಿಪಾದಿಸಲ್ಪಡಲಿಲ್ಲವೋ? ಮತ್ತು ಈ ವಚನದಲ್ಲಿ ಧರ್ಮಶಾಸ್ತ್ರೋಕ್ತವಾದ ಪ್ರಾಯಶ್ಚಿತ್ತಕ್ಕಿಂತಲೂ ಕೃಷ್ಣಾನುಸ್ಮರಣರೂಪವಾದ ಪ್ರಾಯಶ್ಚಿತಕ್ಕೆ ಆಧಿಕ್ಯವರ್ಣನವೂ ಮಾಡಲ್ಪಡಲಿಲ್ಲವೋ? ಆದುದರಿಂದ ಈ ಪರಸ್ಪರ ವಿರೋಧಗಳನ್ನು ಪರ್ಯಾಲೋಚಿಸಿ ನೋಡಿದರೆ ಶ್ರೀ ಸಹಸ್ರನಾಮ ಸಂಕೀರ್ತನವೆಂಬ ಲಘುವಾದ ಪ್ರಾಯಶ್ಚಿತ್ತದಿಂದ ಧರ್ಮ ಶಾಸ್ತ್ರೋಕ್ತ ಪ್ರಾಯಶ್ಚಿತ್ತ ವಿಧಿಗಳನ್ನು ನಾಶಪಡಿಸುವುದಕ್ಕಿಂತಲೂ ಇದರ ಪ್ರಭಾವವರ್ಣನವು ಅರ್ಥವಾದದಲ್ಲಿ ಪರ್ಯವಸಾನವನ್ನು ಹೊಂದಲಾರದೋ? ಎಂದು ಸಂದೇಹಿಸದೇ ಪ್ರಾಯಶ್ಚಿತ್ತವು ಕಾಯಿಕ ಪಾಪಗಳನ್ನೂ ನಾಮಸಂಕೀರ್ತನವು ಮಾನಸಿಕವಾಚಿಕ ಪಾಪಗಳನ್ನೂ ಶೋಧಿಸುವುವೆಂತಲಾದರೂ; (ಅಥವಾ) ಪಾಪಗಳನ್ನು ಸಾಕ್ಷಾತ್ತಾಗಿ ಮಾಡಿದವನಿಗೆ ಧರ್ಮಶಾಸ್ತ್ರೋಕ್ತ ಪ್ರಾಯಶ್ಚಿತ್ತವೆಂತಲೂ ಪಾಪಾನುಷ್ಠಾನವನ್ನು ಸಮ್ಮತಿಸುವವನಿಗೂ ನೋಡುವಂತವನಿಗೂ ಇದು ಪಾಪಶೋಧಕವೆಂತಲಾದರೂ; (ಯದ್ವಾ) "ಕೃತೇಪಾಪೇಽನುತಾಪೋವೈಯಸ್ಯ ಪುಂಸಃ ಪ್ರಜಾಯತೇ | ಪ್ರಾಯಶ್ಚಿತ್ತಂತು ತಸ್ಯೈಕಂ ಹರಿ ಸಂಸ್ಮರಣಂಪರಂ" ಎಂಬೀ ವಚನಾನುಸಾರವಾಗಿ ತಾನು ಮಾಡಿದ ಪಾಪಗಳ ವಿಷಯದಲ್ಲಿ ಅತ್ಯಂತವಾಗಿ ಅನುತಾಪಪಟ್ಟು ಅವಕ್ಕೆ ತಕ್ಕ ಪ್ರಾಯಶ್ಚಿತ್ತವನ್ನು ಅನುಷ್ಠಿಸಲಿಕ್ಕೆ ಆತುರನೂ ಅಶಕ್ತನೂ ವೃದ್ಧನೂ ಇಂದ್ರಿಯಗಳ ಪಾಟವವಿಲ್ಲದವನೂ ಪ್ರಾಯಶ್ಚಿತ್ತಕ್ಕೆ ಬೇಕಾದ ಧನಸಮೃದ್ಧಿ ಹೀನನೂ ಆದವನಿಗೆ ಇದೇ ಸರ್ವಪಾಪ ಪ್ರಾಯಶ್ಚಿತ್ತವೆಂತಲೂ ಇತರನಿಗೆ ಶಾಸ್ತ್ರೋಕ್ತವಾದ ಪ್ರಾಯಶ್ಚಿತ್ತವೆಂತಲೂ ಅಂಗೀಕರಿಸಿದರೆ ಉಭಯಶಾಸ್ತ್ರಗಳಿಗೂ ಆನರ್ಥಕ್ಯ ಶಂಕಾವಕಾಶವಿಲ್ಲ ವಾದುದರಿಂದ ಇದು ಅರ್ಥವಾದವಲ್ಲವೆಂಬು ಸಿದ್ಧವಾಗುತ್ತದೆ ||೧೦||

ಮೂ|| ನ ವಾಸುದೇವ ಭಕ್ತಾನಾ ಮಶುಭಂ ವಿದ್ಯತೇ ಕ್ವಚಿತ್ | ಜನ್ಮಮೃತ್ಯು ಜರಾವ್ಯಾಧಿ ಭಯಂ ನೈವೋಪಜಾಯತೆ ||೧೧||

ಟೀ॥ ವಾಸುದೇವಭಕ್ತಾನಾಂ-ಶ್ರೀವಾಸುದೇವ ಭಕ್ತರಿಗೆ, ಕ್ವಚಿತ್-ಬಂದುಕಡೆಯಲ್ಲಿಯೂ, ಅಶುಭಂ-ಅಮಂಗಲವು, ನವಿದ್ಯತೆ-ಇರುವುದಿಲ್ಲವು, ಜನ್ಮಮೃತ್ಯು ಜರಾ ವ್ಯಾಧಿಭಯಂ-ಹುಟ್ಟುವುದು, ಸಾಯುವುದು, ಮತ್ತು ಇದಕ್ಕೆ ಕಾರಣವಾದ ಮುದಿತನವೂ ವ್ಯಾಧಿಯೂ ಮತ್ತು ಇವುಗಳಿಂದುಂಟಾಗವ ಭಯವೂ, ನೈವೋಪಜಾಯತೆ-ಉಂಟಾಗುವುದೇ ಇಲ್ಲವು ॥೧೧॥

ಮೂ ॥ ಇಮಂಸ್ತವಮಧೀಯಾನ ಶ್ರದ್ಧಾಭಕ್ತಿ ಸಮನ್ವಿತಃ। ಯುಜ್ಯೇತಾ(ತ್ಮಾ)ತ್ಮ ಸುಖಕ್ಷಾಂತಿ ಶ್ರೀ ಧೃತಿಸ್ಮೃತಿ ಕೀರ್ತಿಭಿಃ ॥೧೨॥

ಟೀ॥ ಇದರಿಂದ ನಿಯಮಯುಕ್ತನಾದ ಭಕ್ತನಿಗುಂಟಾಗುವ ಆನುಷಂಗಿಕವಾದ (ಅಕಸ್ಮಾತ್ತಾಗಿ ಪ್ರಾಪ್ತವಾಗುವ) ಫಲವು ಹೇಳಲ್ಪಡುವದು. ಶ್ರದ್ಧಾಭಕ್ತಿಸಮನ್ವಿತಃ-ಶ್ರದ್ಧಾ- (ವಿ॥ಭಾ)ಗೌರವಯುಕ್ತವಾದ ನಾಮಸಂಕೀರ್ತನ ತ್ವರೆಯು,ಭಕ್ತಿಃ-ಪ್ರೀತಿಪೂರ್ವಕವಾದ ಧ್ಯಾನವು, (ಶಂ) ಶ್ರದ್ಧಾ-ಆಸ್ತಿಕ್ಯಬುದ್ಧಿಯು, ಭಕ್ತಿಃ-ಭಜನದಲ್ಲಾಸಕ್ತಿಯು, (ಮ) ಶಾಸ್ತ್ರಗುರುವಚನಗಳಲ್ಲಿರುವ ವಿಶ್ವಾಸವು ಶ್ರದ್ಧಾ, ಪರಮೇಶ್ವರನಲ್ಲಿರುವ ಪ್ರೇಮಾತಿಶಯವು ಭಕ್ತಿಃ, ಶ್ರವಣ ಕೀರ್ತನಾತ್ಮಕವಾದ ನವ ವಿಧ ಭಕ್ತಿಯನ್ನಾದರೂ ಹೇಳಬಹುದು. ಇಂತಹ ಶ್ರದ್ಧಾಭಕ್ತಿಗಳಿಂದ ಕೂಡಿದವನಾಗಿ, ಇಮಂಸ್ತವಂ-ಈ ಸ್ತೋತ್ರವನ್ನು, ಅಧೀಯಾನಃ-ಅಧ್ಯಯನವನ್ನು ಮಾಡುವಂತವನು, ಆತ್ಮಸುಖಕ್ಷಾಂತಿಶ್ರೀಧೃತಿಸ್ಮೃತಿಕೀರ್ತಿಭಿಃ-ಚೇತನನಾದ ತನಿಗುಂಟಾಗುವ ಮುಕ್ತಿಸುಖದಿಂದಲೂ, ಕ್ಷಮಾಸಂಪದ್ಧೈರ್ಯ ಜ್ಞಾಪಕಶಕ್ತಿ ಕೀರ್ತಿಗಳೆಂಬಿವುಗಳಿಂದಲೂ, ಯುಜ್ಯೇತ-ಸೇರುವನು. ಅಥವಾ ಈ ಸಹಸ್ರನಾಮವನ್ನು ಅಧ್ಯಯನಮಾಡುವ, ಆತ್ಮಾ-ಚೇತನನು, ಎಂತಲೂ ೧ ಪಾಠವಿರುವುದಾಗಿ ಹೇಳುವುರು. ॥೧೨॥

(ವಿ॥ ಭಾ) ಅವತಾರಿಕಾ ॥ ಭಗವದ್ಭಕ್ತಿ ಯೆಂಬುವುದು ಮಹತ್ತಾದ ಸುಕೃತಫಲವು, ಆದುದರಿಂದ ಅದುಂಟಾದರೆ ಕ್ರೋಧಲೋಭಾದಿ ದುರ್ಗುಣಗಳೆಲ್ಲವೂ ತಾವಾಗಿಯೇ ನಶಿಸಿಹೋಗುವುವೆನ್ನುತ್ತಾರೆ.

ಮೂ ॥ ನ ಕ್ರೋಧೋ ನಚಮಾತ್ಸರ್ಯಂ ನ ಲೋಭೋ ನಾಶುಭಾಮತಿಃ । ಭವಂತಿ ಕೃತ ಪುಣ್ಯಾನಾಂ ಭಕ್ತಾನಾಂ ಪುರುಷೋತ್ತಮೆ ॥೧೩॥

ಟೀ॥ ಕೃತಪುಣ್ಯಾನಾಂ-ಪುಣ್ಯಕರ್ಮಗಳನ್ನು ಮಾಡಿದವನಾಗಿ, ಆದುದರಿಂದಲೇ; ಪುರುಷೋತ್ತಮೇ ಭಕ್ತಾನಾಂ-ಶ್ರೀ ಪುರುಷೋತ್ತಮನಲ್ಲಿ ಭಕ್ತರಾದವರಿಗೆ, ನಕ್ರೋಧಃ-ಕ್ರೋಧವಿಲ್ಲದೆ ಇರುವಿಕೆಯೂ, ನಲೋಭಃ-ಲೋಭಗುಣವಿಲ್ಲದೇ ಇರುವಿಕೆಯೂ, (ಮ) ಪುರುಷೋತ್ತಮನು ಮತ್ತೊಬ್ಬರಿಗೆ ಪ್ರಸನ್ನನಾಗಬಾರದೆಂಬ ಬುದ್ಧಿರಾಹಿತ್ಯವೂ, ನಾಶುಭಂ-ಅಮಂಗಲವಾದ, ಮತಿಶ್ಚ-ಬುದ್ಧಿಯೂ, ನಭವಂತಿ- ಉಂಟಾಗುವುದಿಲ್ಲವು. ಮಾತ್ಸರ್ಯಂಚ-ದ್ವೇಷವೂ, ನ-ಉಂಟಾಗುವುದಿಲ್ಲವು. ಇಲ್ಲಿ ಕೆಲವರು ಕ್ರೋಧೋನ, ಮಾತ್ಸರ್ಯಂಚನ, ಇತ್ಯಾದಿ ರೀತಿಯಿಂದ, ಅರ್ಥವನ್ನು ಮಾಡುತ್ತಾರೆ, ಆವಾಗ ಭವಂತಿ ಎಂಬ ಕ್ರಿಯಾಪದಕ್ಕೆ ವೈಯರ್ಥ್ಯವುಂಟಾಗುವುದಾಗಿ ತೋರುತ್ತದೆ. (ಮ) ಭಾಷ್ಯದಲ್ಲಿಯೂ ಕ್ರೋಧಾಭಾವಾದಿಗಳುಂಟಾಗುವುವೆಂಬ ಅರ್ಥವನ್ನೇ ಸ್ವೀಕರಿಸಿರುತ್ತಾರೆ.

(ವಿ॥ ೯೦॥ ಮ) ಅವತಾರಿಕಾ॥ ಹಿಂದೆ ಹೇಳಲ್ಪಟ್ಟ ಫಲಗಳೆಲ್ಲವೂ ಅರ್ಥವಾದವೆಂಬದಾಗಿ ನಿರ್ಭಾಗ್ಯರಾದ ಕುತಾರ್ಕಿಕರು ಶಂಕೆಪಡುವರೆಂದು ತಿಳಿದು ಭಗವತ್ಪ್ರಭಾವವನ್ನು ನೋಡಿದರೆ ಅತಿವಾದಾಪವಾದಗಳು ಇದಕ್ಕೆ ಇಲ್ಲವಾದಕಾರಣ ಅಸಂಭಾವ್ಯವಾದದ್ದು ಯಾವದೂ ಇಲ್ಲವಾದುದರಿಂದ ಇದು ಅತಿವಾದವೆಂತಲಾದರೂ ಬೇರೆ ವಿಧದಿಂದಲಾದರೂ ತಿಳಿಯ್ಯಬಾರದೆಂಬ ಅಭಿಪ್ರಾಯವನ್ನು ಮನಸ್ಸಿನಲ್ಲಿಟ್ಟುಕೊಂಡು ಭಗವತ್ಪ್ರಭಾವವನ್ನು ಇದೇ ಮೊದಲಾದ ಶ್ಲೋಕಗಳಿಂದ ಹೇಳುತ್ತಾರೆ.

ಮೂ॥ ದ್ಯೌ ಸ್ಸಚಂದ್ರಾರ್ಕ ನಕ್ಷತ್ರಂ ಖಂ ದಿಶೋ
ಭೂ ರ್ಮಹೋದಧಿಃ। ವಾಸುದೇವಸ್ಯ ವೀರ್ಯೇಣ
ವಿಧೃತಾನಿ ಮಹಾತ್ಮನಃ ॥೧೪॥

ಟೀ॥ ಸಚಂದ್ರಾರ್ಕ ನಕ್ಷತ್ರಂ-ಚಂದ್ರಸೂರ್ಯ ನಕ್ಷತ್ರಗಳಿಂದ ಕೂಡಿರುವ, ದ್ಯೌಃ-ಸ್ವರ್ಗವೂ, ಖಂ-ಆಕಾಶವೂ, ದಿಶಃ-ದಿಕ್ಕುಗಳೂ, ಭೂಃ-ಭೂಮಿಯೂ, ಮಹೋದಧಿಃ-ಮಹತ್ತಾದ ಸಮುದ್ರವೂ, ಮಹಾತ್ಮನಃ-ಮಹಾನುಭಾವನಾದ, ವಾಸುದೇವಸ್ಯ-ಶ್ರೀವಾಸುದೇವನ, ವೀರ್ಯೇಣ-ವೀರ್ಯದಿಂದ, ವಿಧೃತಾನಿ-ಅತ್ಯಂತವಾಗಿ ಧರಿಸಲ್ಪಟ್ಟವುಗಳು ॥೧೪

(ವಿ॥ ಭಾ) ಅವತಾರಿಕಾ॥ ಸಮಸ್ತವೂ ಅವನ ವೀರ್ಯದಿಂದ ಧರಿಸಲ್ಪಟ್ಟಿರುವ ಪ್ರಕಾರವನ್ನು ಹೇಳಿ ಇಲ್ಲಿ ಸಮಸ್ತವೂ ಅವನ ಅಧೀನದಲ್ಲಿರುವ ಪ್ರಕಾರವನ್ನು ಹೇಳುತ್ತಾರೆ.

ಮೂ॥ ಸ ಸುರಾಸುರ ಗಂಧರ್ವಂ ಸ ಯಕ್ಷೋರಗ ರಾಕ್ಷಸಂ । ಜಗದ್ವಶೇ ವರ್ತ್ತತೇದಂ ಕೃಷ್ಣಸ್ಯ ಸ ಚರಾಚರಂ ॥೧೫॥

ಟೀ॥ ಸಸುರಾಸುರ ಗಂಧರ್ವಂ—ದೇವಾಸುರಗಂಧರ್ವರೊಡನೆ ಕೂಡಿರುವ, ಸಯಕ್ಷೋರಗರಾಕ್ಷಸಂ—ಸರ್ವ ಯಕ್ಷರಾಕ್ಷಸರೊಡನೆ ಕೂಡಿರುವದಾದ, ಚರಾಚರ ಮಿದಂಜಗತ್—ಚರಾಚರಾತ್ಮಕವಾದ ಈ ಪ್ರಪಂಚವು, ಕೃಷ್ಣಸ್ಯವಶೇ—ಶ್ರೀಕೃಷ್ಣನ ಅಧೀನದಲ್ಲಿ, ವರ್ತ್ತತೇ—ಇರುವುದು.

(ವಿ॥ ಭಾ) ಅವತಾರಿಕಾ ॥ ಅವನ ಅಧೀನದಲ್ಲಿರುವಿಕೆ ಎಂಬುವುದು ಶರೀರೇಂದ್ರಿಯಾದಿಗಳೆಲ್ಲವೂ ಆತ್ಮಕ್ಕೆ ಹೇಗಾದರೆ ವಶಪಟ್ಟಿರುವುವೊ ಅದರಂತೆಯೇ ಇಲ್ಲಿಯೂ ಎನ್ನುತ್ತಾರೆ.

ಮೂ॥ ಇಂದ್ರಿಯಾಣಿ ಮನೋಬುದ್ಧಿ ಸ್ಸತ್ವಂ ತೇಜೋ ಬಲಂ ಧೃತಿಃ । ವಾಸುದೇವಾತ್ಮಕಾನ್ಯಾಹುಃ ಕ್ಷೇತ್ರಂ ಕ್ಷೇತ್ರಜ್ಞಏವಚ ॥೧೬॥

ಟೀ॥ ಇಂದ್ರಿಯಾಣಿ—ಜ್ಞಾನೇಂದ್ರಿಯ ಕರ್ಮೇಂದ್ರಿಯಗಳೂ, ಮನಃ-ಮನಸ್ಸೂ, ಬುದ್ಧಿಃ—ಬುದ್ಧಿಯೂ, ಸತ್ವಂ—ಸತ್ವಗುಣವೂ, ತೇಜಃ—ತೇಜಸ್ಸೂ, ಬಲಂ—ದೇಹಬಲವೂ, ಕ್ಷೇತ್ರಜ್ಞಏವಚ—ಆತ್ಮವೂ, ವಾಸುದೇವಾತ್ಮಕಾನಿ—ವಾಸುದೇವಾತ್ಮಕವೆಂದು, ಆಹುಃ ಹೇಳುವರು. ॥೧೬॥

(ವಿ॥ ಭಾ) (ಹಿಂದಿನ ಮೂರು ಶ್ಲೋಕಗಳಿಂದ ಪರಮಾತ್ಮನಿಗೂ ಪ್ರಪಂಚಕ್ಕೂ ಆಧಾರತ್ವ ನಿಯಂತೃತ್ವ ಶೇಷಿತ್ವಗಳಿಂದಲೂ ಆಧೇಯತ್ವ ವಿಧೇಯತ್ವ ಶೇಷಿತ್ವಗಳಿಂದಲೂ ಶರೀರಾತ್ಮ ಭಾವ ಸಂಬಂಧವು ನಿರೂಪಿಸಲ್ಪಟ್ಟಿತೆಂದರಿಯಬೇಕು )

(ವಿ॥ ಭಾ) ಅವತಾರಿಕಾ॥ (ಈ ರೀತಿಯಾಗಿ ತತ್ವಶಾಸ್ತ್ರಗಳೆಲ್ಲವೂ ಅವನ ಅಧೀನವೆಂಬದಾಗಿ ಹೇಳಿ ಈಗ ಮಂದಾಧಿಕಾರಿಗಳ ಭಯ ನಿವರ್ತನಕ್ಕಾಗಿ ಅನುಷ್ಠಾನ ಶಾಸ್ತ್ರವೂ ಅವನ ಅಧೀನವೆಂದು ಹೇಳುತ್ತಾರೆ.

ಮಂದಾಧಿಕಾರಿಗಳಿಗೆ ಅನುಷ್ಠಾನ ಶಾಸ್ತ್ರವೆಲ್ಲವೂ ಅಗ್ನೀಂದ್ರಾದಿ ದೇವತಾವಿಷಯದಲ್ಲಿ ಸ್ವಾತಂತ್ರ್ಯದಿಂದ ಪ್ರವರ್ತಿಸಿರುವಂತೆ ತೋರುವುದಲ್ಲದೆ ಸರ್ವಕರ್ಮ ಸಮಾರಾಧ್ಯನಾದ ಶ್ರೀವಾಸುದೇವನನ್ನಾರಾಧಿಸುವುದಕ್ಕಾಗಿ ಯೇರ್ಪಟ್ಟಂತೆ ಗೋಚರವಾಗಲಾರದು. ಅಂತವರನ್ನು ಕುರಿತು ತತ್ವಸ್ಥಿತಿಯನ್ನು ಬೋಧಿಸುವುದಕ್ಕಾಗಿ ಈ ಶ್ಲೋಕವು ಪ್ರವರ್ತಿಸಿರುವಂತೆ ತಾತ್ಪರ್ಯವನ್ನರಿಯಬೇಕು ).

ಮೂ॥ ಸರ್ವಾಗಮಾನಾಮಾಚಾರಃ ಪ್ರಥಮಂ ಪರಿಕಲ್ಪ್ಯತೇ । ಆಚಾರಃ ಪ್ರಭವೋ ಧರ್ಮೋ ಧರ್ಮಸ್ಯ ಪ್ರಭುರಚ್ಯುತಃ ॥೧೭॥

ಟೀ॥ ಸರ್ವಾಗಮಾನಾಂ—ಸರ್ವಶಾಸ್ತ್ರಗಳ ಮಧ್ಯದಲ್ಲಿ, ಆಚಾರಃ—ಸದಾಚಾರವು, ಪ್ರಥಮಃ—ಮೊದಲನೇ ಧರ್ಮವೆಂದು, ಪರಿಕಲ್ಪ್ಯತೇ—ಎಣಿಸಲ್ಪಡುವುದು, ಧರ್ಮಃ-ಧರ್ಮವು, ಆಚಾರಪ್ರಭವಃ—ಸದಾಚಾರದಿಂದುಂಟಾದದ್ದು, ಧರ್ಮಸ್ಯ—ಧರ್ಮಕ್ಕೆ, ಅಚ್ಯುತಃ—ಅಚ್ಯುತನಾದ ಪರಮಾತ್ಮನು, ಪ್ರಭುಃ—ಸ್ವಾಮಿಯಾಗಿರುವನು. (ಕಂ) ಈ ಅವಾನ್ತರ ವಾಕ್ಯದಿಂದ ಸರ್ವವರ್ಣಗಳಲ್ಲಿಯೂ ಆಚಾರವುಳ್ಳವನೇ ಅಧಿಕಾರಿಯೆಂದು ಬೋಧಿತವಾಗುವುದು.

(ವಿ॥ ಭಾ) ಅವತಾರಿಕಾ ॥ ಧರ್ಮಪ್ರವರ್ತಕರೂ ಕೂಡ ಅವನಿಂದಲೆ ಉಂಟಾಗಿರುವರೆನ್ನುತ್ತಾರೆ.

ಮೂ॥ ಋಷಯಃ ಪಿತರೋ ದೇವಾ ಮಹಾಭೂತಾನಿ ಧಾತವಃ । ಜಂಗಮಾಜಂಗಮಂ ಚೇದಂ ಜಗನ್ನಾರಾಯಣೋದ್ಭವಮ್ ॥೧೮॥

ಟೀ॥ ಋಷಯಃ—ಋಷಿಗಳೂ, ಪಿತರಃ—ಪಿತೃಗಳೂ, ದೇವಾಃ—ಇಂದ್ರಾದಿ ದೇವತೆಗಳೂ, ಮಹಾಭೂತಾನಿ—ಪೃಥಿವ್ಯಾದಿ ಮಹಾಭೂತಗಳೂ, ಧಾತವಃ—ಬೆಳ್ಳಿ ಚಿನ್ನ ಮೊದಲಾದ ಧಾತುಗಳೂ, (ಮ) ದೈಹಿಕವಾದ ಮಜ್ಜಾದಿ ಧಾತುಗಳೂ, ಇದಂ ಜಂಗಮಾಜಂಗಮಂ ಜಗತ್—(ಈ ಪ್ರಕಾರದಿಂದಿರುವ) ಜಂಗಮಸ್ಥಾವರ ಪ್ರಪಂಚವೆಲ್ಲವೂ, ನಾರಾ

ಯ ಣಿ ಽದ್ಭವ ೦—ನಾರಾಯಣನಿಂದ ಹುಟ್ಟಿರುವುವು. ಇದರಿಂದ ಶ್ರೀಮನ್ನಾರಾಯಣನಿಗೇನೆ ಸರ್ವಕಾರಣತ್ವವು ಹೇಳಲ್ಪಟ್ಟಿತು. ॥೧೪॥

(ವಿ॥ ಭಾ) ಅವತಾರಿಕಾ॥ ಜ್ಞಾನಕ್ಕೂ ಅವನೇ ಕಾರಣನೆನ್ನುತ್ತಾರೆ.

ಮೂ॥ ಯೋಗಜ್ಞಾನಂ ತಥಾಸಾಂಖ್ಯಂ ವಿದ್ಯಾ ಶ್ಶಿಲ್ಪಾದಿ ಕರ್ಮಚ। ವೇದಾಶ್ಶಾಸ್ತ್ರಾಣಿ ವಿಜ್ಞಾನ ಮೇತತ್ಸರ್ವಂ ಜನಾರ್ದನಾತ್ ॥೧೯॥

ಟೀ॥ ಯೋಗಜ್ಞಾನಂ—ಯೋಗಶಾಸ್ತ್ರವೂ, (ಇಲ್ಲಿ ಸಮಾಧಿಯೋಗವೆಂತಲೂ ಕರ್ಮಯೋಗವೆಂತಲೂ ಯೋಗವು ದ್ವಿವಿಧವು ) (ಮ) ಯೋಗಃ—ಧ್ಯಾನಯೋಗವು ) ತಥಾ—ಹಾಗೆಯೇ, ಸಾಂಖ್ಯಂ—ತತ್ವನಿರ್ಣಯವೂ, ವಿದ್ಯಾಃ—ವ್ಯಾಕರಣಾದಿ ವೇದಾಂಗಗಳಾದ ವಿದ್ಯೆಗಳೂ, ಶಿಲ್ಪಾದಿ—ಶಿಲ್ಪಾದಿಗಳಾದ, ಕರ್ಮಚ—ಕೈಗಾರಿಕೆ ವ್ಯಾಪಾರಗಳೂ, ವೇದಾಃ—ಪ್ರಧಾನಗಳಾದ ವೇದವಿದ್ಯೆಗಳೂ, ಶಾಸ್ತ್ರಾಣಿ—ಸ್ಮೃತೀತಿಹಾಸ ಪುರಾಣಾದಿ ಶಾಸ್ತ್ರಗಳೂ, ಏತತ್ಸರ್ವಂ ವಿಜ್ಞಾನಂ—ಈ ಸರ್ವಶಾಸ್ತ್ರವೂ, (ಮ॥ ವಿಶೇಷವಾದ ಜ್ಞಾನವು ವಿಜ್ಞಾನವು ) ಜನಾರ್ದನಾತ್—ಜನಾರ್ದನನಾದ ಶ್ರೀಕೃಷ್ಣನ ದೆಸೆಯಿಂದ, (ಭವಂತಿ—ಉಂಟಾಗುವುವು ) ॥೧೯॥

(ವಿ॥ ಭಾ) ಅವತಾರಿಕಾ॥ ಇಂತಹ ಮಹಾವಿಭೂತಿ ವೈಚಿತ್ರ್ಯದಿಂದ ಪರಮಪುರುಷನ ಮಹಾ ನಿರ್ವಾಹವು ಹೇಳಲ್ಪಡುವುದು.

ಮೂ॥ ಏಕೋವಿಷ್ಣು ರ್ಮಹದ್ಭೂತಂ ಪೃಥಗ್ಭೂತಾನ್ಯನೇಕಶಃ । ತ್ರಿನ್ಲೋಕಾನ್ವ್ಯಾಪ್ಯ ಭೂತಾತ್ಮಾ ಭುಙ್ಕ್ತೇ ವಿಶ್ವಭು ಗವ್ಯಯಃ ॥೨೦॥

ಟೀ॥ ವಿಷ್ಣುಃ—ವಿಷ್ಣುಶಬ್ದವಾಚ್ಯನಾದ ಶ್ರೀ ವಾಸುದೇವನು, ಏಕಃ—ಒಬ್ಬನೇ, ಅನೇಕಶಃ—ಅನೇಕಪ್ರಕಾರವಾಗಿ, ಪೃಥಕ್—ಸ್ವರೂಪಪ್ರಕಾರ ಪರಿಣಾಮಪ್ರಯೋಜನ ಭೇದದಿಂದ ಭಿನ್ನಪಟ್ಟಿರುವ, ಭೂತಾನಿ, ಮಹಾಭೂತಗಳನ್ನೂ, ತ್ರೀನ್‌ಲೋಕಾನ್—ಬದ್ಧ

ಮುಕ್ತನಿತ್ಯಗ [illegible] ಧಚೇತನರನ್ನೂ, ವ್ಯಾಪ್ಯ-ವ್ಯಾಪಿಸಿ, ಭೂತಾತ್ಮಾ-ಅಂತಹ ಭೂತಗಳಿಗೆ ನಿಯಾಮ [illegible] ವ್ಯಾದಿಗಳಿಂದ ಆತ್ಮನೂ, ವಿಶ್ವಭುಕ್-ಸರ್ವಪ್ರಕಾರದಿಂದಲೂ ರಕ್ಷಕನೂ, ಅವ್ [illegible] ರೂ, ವ್ಯಾಪ್ಯಗತವಾದ ದೋಷಗಳ ಸಂಬಂಧಶೂನ್ಯನೂ, ಆದರೂ ವಿಕಾರರಹಿತನೂ ಆಗಿ, ಮಹದ್ಭೂತಂ—ಪುನಶ್ಚ ಶ್ರೇಷ್ಠವಾದ ತನ್ನ ಮಹಾವಿಭೂತಿಯಿಂದ ವಾಙ್ಮನಸ್ಸುಗಳಿಗೆ ಅಗೋಚರನಾಗಿ ಮಹಾನಾಗಿದ್ದುಕೊಂಡು, ಭುಂಕ್ತೇ-ಲೀಲಾಭೋಗರಸವನ್ನು ಅನುಭವಿಸುವನು. (ಮ) ಮಹದ್ಭೂತಂ « ಮಹತೋ ಭೂತಸ್ಯ" ಎಂಬ ಶ್ರುತಿಯಿಂದ ವಿಷ್ಣುವೇ ಮಹದ್ಭೂತವೆನ್ನಲ್ಪಡುವನು, ಪೃಥಗ್ಭೂತಾನಿ—ಅವನಿಗಿಂತಲೂ ಭಿನ್ನಪಟ್ಟ ಜೀವರನ್ನೂ, ಭೂತಾತ್ಮಾ-ಸರ್ವಭೂತಗಳನ್ನೂ ವ್ಯಾಪಿಸಿಕೊಂಡಿರುವ ಆತ್ಮನಾಗಿ.

(ಶಂ|| ಭಾ) ಒಬ್ಬನಾದ ವಿಷ್ಣುವು ಮಹಾಭೂತವು. ಪ್ರತ್ಯೇಕಗಳಾದ ಭೂತಗಳನೇಕಗಳು. ಭೂತಾತ್ಮನಾದ ನಾರಾಯಣನು ಮೂರುಲೋಕಗಳನ್ನು ವ್ಯಾಪಿಸಿ ಪರಿಪಾಲಿಸುವನೆಂದು ತಾತ್ಪರ್ಯವು. ||೨೦||

(ವಿ|| ಭಾ) ಅವತಾರಿಕಾ|| ಅಪಾರಮಹಿಮಾಶಾಲಿಯಾದ ಪರಮಪುರುಷನು ಈ ಸ್ತೋತ್ರಕ್ಕೆ ವಿಷಯನು; ಅವನನ್ನು ಆಕ್ರಮಿಸುವಂತಹ ಜ್ಞಾನವೂ ವಾಕ್ಕು ಎಂಬಿವುಗಳ ವೈಭವವುಳ್ಳ ಭಗವದ್ವ್ಯಾಸರು ಇದಕ್ಕೆ ಸ್ತೋತಾ ಆಗಿರುವರು. (ಸ್ತೋತಾ – ಸ್ತುತಿಮಾಡತಕ್ಕವನು,) ಈ ಇಬ್ಬರ ಮಹಿಮೆಯಿಂದ ಸೇರಿರುವುದು ಈ ಸ್ತೋತ್ರರತ್ನವು. ಇದರಿಂದ ನಾಶಪಡಿಸಲ್ಪಡುವ ಮಹಾ ದಾರಿದ್ರ್ಯವುಳ್ಳ ಈ ಪ್ರಪಂಚವೆಲ್ಲವೂ ಈ ಸ್ತೋತ್ರಕ್ಕೆ ಅಧಿಕಾರಿಯಾಗಬಹುದು. ಆದುದರಿಂದ ಯಾರೇ ಆಗಲಿ, ಶ್ರೇಷ್ಠವೋ ಅಥವಾ ಸಾಮಾನ್ಯವೋ ಆದ ಶ್ರೇಯಸ್ಸನ್ನಪೇಕ್ಷಿಸಿದ ಚೇತನನು ಇದನ್ನು ಶಂಕಾರಹಿತನಾಗಿ ಸೇವಿಸಬಹುದೆನ್ನುತ್ತಾರೆ.

ಮೂ|| ಇಮಂ ಸ್ತವಂ ಭಗವತೋ ವಿಷ್ಣೋರ್ವ್ಯಾಸೇ
ನ ಕೀರ್ತಿತಂ। ಪಠೇದ್ಯ ಇಚ್ಛೇತ್ಪುರುಷಃ ಶ್ರೇ
ಯಃ ಪ್ರಾಪ್ತುಂ ಸುಖಾನಿ ಚ ||೨೧||

ಮೂ|| ಯಃ-ಯಾವ, ಪುರುಷಃ—ಪುರುಷನು, ಶ್ರೇಯಃ-ಮೋಕ್ಷವನ್ನೂ, ಸುಖಾನಿ ಚ-ಈ ಲೋಕ ಸುಖಗಳನ್ನೂ, ಪ್ರಾಪ್ತುಂ—ಹೊಂದುವುದಕ್ಕಾಗಿ, ಇಚ್ಛೇತ್ [illegible] ಚ್ಛಿಸು

ವನೊ, (ಸಃ—ಅವನು,) ವ್ಯಾಸೇನಕೀರ್ತಿತಂ–ಶ್ರೀವೇದವ್ಯಾಸರಿಂದ ... ರ್ತನಮಾಡಲ್ಪಟ್ಟ; ಭಗವತಃ–ಜ್ಞಾನಶಕ್ತ್ಯಾದಿ ಷಡ್ಗುಣ ಪರಿಪೂರ್ಣನಾದ, ವಿಷ್ಣೋ ... ವ್ಯಾಪಿಯಾದ ಶ್ರೀವಾಸುದೇವನ, ಇಮಂಸ್ತವಂ–ಈ ಸ್ತೋತ್ರರತ್ನವನ್ನು, ಕ ... ಬೇಕು. ‖೧೧‖

( ವಿ‖ ಭಾ ) ಅವತಾರಿಕಾ‖ ಈ ಪ್ರಕಾರವ ... ವಭಾವದಿಂದಲೆ ಸಕಲ ಕಲ್ಯಾಣ ಗುಣಗಳಿಗೂ ವಾಸಸ್ಥಾನನೂ, ಪ್ರಪನ್ನ ಜನರಿಗೆ ಪಾರಿಜಾತದಂತೆ ಇರುವಂತವನೂ ಪುಂಡರೀಕಾಕ್ಷನೂ ಆದ ಶ್ರಿಯಃಪತಿ ಶ್ರೀಮತ್ಪುರುಷೋತ್ತಮನನ್ನು ಸೇವಿಸುವಂತವರಿಗೆ ಅವನೇ ಸರ್ವ ಸಂಪದೂ ಪ್ರಸನಾಗಿರುವುದರಿಂದ ಸತ್ಪುರುಷರಿಗೆ ಪ್ರಾಪ್ತವಾಗುವ ಸಂಪತ್ತುಗಳು ವಾಚಾಮ ಗೋಚರಗಳಾಗಿರುವುವು. ಆದ ಮೇಲೆ ಪುನಶ್ಚ ಸಂಸಾರದಲ್ಲಿ ಬಿದ್ದು ಶ್ರಮಪಡುವುದು ಏತಕ್ಕೆ? ಎಂಬದಾಗಿ ಸ್ತೋತ್ರವನ್ನು ಪೂರ್ತಿಮಾಡುವರು.

ಮೂ‖ ವಿಶ್ವೇಶ್ವರ ಮಜಂ ದೇವಂ ಜಗತಃ ಪ್ರಭು ಮವ್ಯಯಂ । ಭಜಂತಿಯೇ ಪುಷ್ಕರಾಕ್ಷಂ ನತೇ ಯಾಂತಿ ಪರಾಭವಂ ‖೨೨‖

(ಶಂ‖ ಭಾ) "ಪ್ರಮಾದಾತ್ಕುರ್ವತಾಂ ಕರ್ಮ ಪ್ರಚ್ಯವೇತಾಧ್ವರೇಷು ಯತ್ । ಸ್ಮರಣಾ ದೇವತ ದ್ವಿಷ್ಣೋಃ ಸ್ಸಂಪೂರ್ಣಂಸ್ಯಾ ದಿತಿ ಸ್ಮೃತಿಃ ‖ ಆದರೇಣ ಯಥಾಸ್ತೌತಿ ಧನವಂತಂ ಧನೇಚ್ಛಯಾ। ತಥಾಚೇದ್ವಿಶ್ವಕರ್ತಾರಂ ಕೋನ ಮುಚ್ಯೇತ ಬಂಧನಾತ್ ‖ ಎಂಬೀ ವ್ಯಾಸ ವಚನಾನುಸಾರವಾಗಿ ವಿಶ್ವೇಶ್ವರೋಪಾಸನದಿಂದಲೇ ಸ್ತುತಿಸುವಂತಹ ಸರ್ವರೂ ಧನ್ಯರೂ ಕೃತಾರ್ಥರೂ ಕೃತಕೃತ್ಯರೂ ಆಗುವರು. (ವು) ಕಡೆಯಲ್ಲಿ ವಿಶ್ವೇಶ್ವರನಾದ ಶ್ರೀವಾಸುದೇವನ ಸ್ಮರಣರೂಪವಾದ ಮಂಗಳವು ಆಚರಿಸಲ್ಪಟ್ಟಿತು. ಮತ್ತು ಉಪಕ್ರಮೋಪ ಸಂಹಾರ ಸ್ಥಲಗಳಲ್ಲಿರುವ ಫಲವಾದಗಳೊಡನೆ ಕೂಡಿದ ಸಹಸ್ರನಾಮ ಪಠನವು ಅತ್ಯಂತ ಫಲಪ್ರದವೆಂದು ತಿಳಿಯಬೇಕು. ಇದಕ್ಕೆ " ಆದರೇಣ + ಬಂಧನಾತ್ " ಇತ್ಯಾದಿ ವ್ಯಾಸ ವಚನವೇ ಪ್ರಮಾಣವಾಗಿರುವುದು.

(ಶಂ) ಸಹಸ್ರನಾಮ ಸಂಬಂಧಿ ವ್ಯಾಖ್ಯಾ ಸರ್ವಸುಖಾವಹಾ ।
ಶ್ರುತಿ ಸ್ಮೃತಿ ನ್ಯಾಯ ಮೂಲಾ ರಚಿತಾ ಹರಿಪಾದಯೋಃ ‖

ಈ ರೀತಿಯಾಗಿ ಶ್ರೀಮಚ್ಛಂಕರ ಭಗವತ್ಪಾದಾಚಾರ್ಯ ವಿರಚಿತವಾದ
ಸಹಸ್ರನಾಮ ಭಾಷ್ಯಾರ್ಥ ಸಂಗ್ರಹವು:

ಮೂ॥ ನತೇಯಾನ್ತಿ ಪರಾಭವಮೋಮ್ ಸಮಃ

ಇತಿ ಶ್ರೀಮಹಾಭಾರತೇ ಶತ ಸಹಸ್ರ ಸಂಹಿತಾಯಾಂ ವೈಯಾಸಿಕ್ಯಾಂ
ಆನುಶಾಸನಿಕೇ ಪರ್ವಣಿ ದಾನ ಧರ್ಮ ಪ್ರಕರಣಸ್ಥೋ
ಭೀಷ್ಮ ಯುಧಿಷ್ಠಿರ ಸಂವಾದ ರೂಪಃ
ಏಕೋನ ಪಂಚಾಶದಧಿಕ
ಶತತಮ (೧೪೯) ಶ್ರೀವಿಷ್ಣೋಸ್ಸಹಸ್ರನಾಮ ಸ್ತೋತ್ರಾಧ್ಯಾಯಃ
ಸ್ಸಮಾಪ್ತಃ.

---

ಟೀ॥ ವಿಶ್ವೇಶ್ವರಂ–ಜಗದೀಶ್ವರನೂ, ಅಜಂ–ಕರ್ಮಸಂಬಂಧವಾದ ಉತ್ಪತ್ತಿರಹಿತನೂ, ದೇವಂ–ಸ್ವಯಂಪ್ರಕಾಶನೂ, ಅಥವಾ ಜಗದ್ವ್ಯಾಪಾರರೂಪವಾದ ಕ್ರೀಡಾಸಕ್ತನೂ, ಜಗತಃ–ಲೋಕಕ್ಕೆ, ಪ್ರಭುಂ–ಸ್ವಾಮಿಯೂ, ಅವ್ಯಯಂ–ನಾಶರಹಿತನೂ, ಪುಷ್ಕರಾಕ್ಷಂ–ವೇದಾಂತಗಳಲ್ಲಿ "ತಸ್ಯಯಥಾಕಪ್ಯಾಸಂ ಪುಂಡರೀಕಮೇವಮಕ್ಷಿಣೀ" ಎಂಬ ರೀತಿಯಿಂದ ಪ್ರತಿಪಾದಿಸಲ್ಪಟ್ಟ ಪುಂಡರೀಕದಂತೆ ಇರುವ ಕಣ್ಣುಗಳುಳ್ಳವನೂ ಆದ ಶ್ರೀವಾಸುದೇವನನ್ನು, ಯೇ–ಯಾರಾದರೆ, ಭಜಂತಿ–ಸ್ತೋತ್ರಕೀರ್ತನರೂಪವಾಗಿ ಭಜಿಸುವರೋ, ತೇ–ಅವರು, ಪರಾಭವಂ–ಸಂಸಾರದಿಂದುಂಟಾಗುವ ತಿರಸ್ಕಾರವನ್ನು, ನಯಾಂತಿ–ಹೊಂದಲಾರರು.

(ಶಂ॥ ಭಾ) ಈ ಅರ್ಥವನ್ನು ಶಪಥ ಪೂರ್ವಕವಾಗಿ ದೃಢಪಡಿಸಲು ದ್ವೇಷಿಸಿ ಇದನ್ನು ಕೀರ್ತನಮಾಡತಕ್ಕವರಿಗೆ ಪರಿಭವವಿಲ್ಲವೆಂದು ದ್ವಿರಾವೃತ್ತಿಯಾಗಿ ಹೇಳಿದರೆಂದರಿಯಬೇಕು.

ಅಸ್ಮಾಕ ಮತ್ರ ಚ ಪರತ್ರ ಚ ಸರ್ವದುಃಖ ಮು
ನ್ಮೂಲ್ಯ ಸಂಪದ ಮಶೇಷವಿಧಾಂ ವಿಧಾಯ । ಶ್ರೀರಂಗ
ರಾಜ ಮಹಿಷೀ ಸಹ ವೈಷ್ಣವಾನಾಂ ಸಂಗ ಸ್ಸುಖಂ
ಸಹಜಯೇನ ಸದಾ ಕ್ರಿಯಾಸ್ತಾಂ ॥

ಇತಿ ಶ್ರೀಪರಾಶರಭಟ್ಟಾರ್ಯ ಭಾಷಿತವಾದ ಶ್ರೀಭಗವದ್ಗುಣ ದರ್ಪಣವೆಂಬ
ಶ್ರೀಸಹಸ್ರನಾಮಭಾಷ್ಯಾರ್ಥಸಂಗ್ರಹವು

---